ಶ್ರೀ ಶ್ರೀಪಾದ ರಘುನಾಥ ಭಿಡೆ — ಎಪ್ಪತ್ತೇಳರ ಹರಯದ (ಜನನ : ನಾಗಪುರ, ಜನವರಿ ೧೬, 1919) ಇವರದು ಲವಲವಿಕೆಯ ವ್ಯಕ್ತಿತ್ವ. ನಲವತ್ತು ವರ್ಷ ಕಾಲ ವಿಜಾಪುರದಲ್ಲಿ ಮರಾಠಿ ಪ್ರಾಧ್ಯಾಪಕರಾಗಿ ಸೇವೆ. ಅಲ್ಲಿ ಇವರ ಮನೆ ಕನ್ನಡ-ಮರಾಠಿ ಸಾಹಿತ್ಯ-ಸಂಸ್ಕೃತಿಗಳ ಕೇಂದ್ರವೆನಿಸಿತ್ತು. ಉತ್ಕೃಷ್ಟ ಕನ್ನಡ ಸಾಹಿತ್ಯವನ್ನು ಸಾಹಿತ್ಯಾಭಿಮಾನಿಗಳಿಗೆ, ಜನಸಾಮಾನ್ಯರಿಗೆ ದೊರಕಿಸುವ ಸದುದ್ದೇಶದಿಂದ 'ಶ್ರೀರಂಗ ಪುಸ್ತಕ ಮಾಧ್ಯಮ'ವನ್ನು ನಡೆಸುವಲ್ಲಿ ಪತ್ನಿ ಶ್ರೀಮತಿ ಶಾಂತಾ ಅವರ ಆಸರೆ. ಮರಾಠಿ ಸಂಗೀತ ನಾಟಕಗಳನ್ನು ತರಿಸಿ, ಆಡಿಸಿ ಅವನ್ನು ಜನಪ್ರಿಯಗೊಳಿಸಿದ ಧೀಮಂತರು. ಪುಣೆಯ 'ಮರಾಠಿ-ಕನ್ನಡ ಸ್ನೇಹ ವರ್ಧನ ಕೇಂದ್ರ'ದ ಸಂಸ್ಥಾಪಕ ಸದಸ್ಯರಲ್ಲೊಬ್ಬರಾದ ಭಿಡೆಯವರು ಕರ್ನಾಟಕದ ಕಾಲೇಜು ಶಿಕ್ಷಣ ಇಲಾಖೆಯ ಸೇವೆಯಿಂದ ನಿವೃತ್ತರಾದಮೇಲೆ ಪುಣೆಯಲ್ಲಿ ನೆಲಸಿದ್ದಾರೆ.



ಸ್ವತಃ ಅನೇಕ ನಾಟಕಗಳನ್ನು ರಚಿಸಿರುವ ಭಿಡೆಯವರು ಮರಾಠಿ ಸಾಹಿತ್ಯಪ್ರಪಂಚದಲ್ಲಿ ನಾಮಾಂಕಿತರಾಗಿದ್ದಾರೆ. ಮರಾಠಿ ಏಕಾಂಕ ನಾಟಕಗಳ ಏಳು ಸಂಕಲನಗಳನ್ನು ಸಂಪಾದಿಸಿದ್ದಾರೆ. ಕನ್ನಡದ ಸುಪ್ರಸಿದ್ಧ ನಾಟಕಗಳಾದ ಗಿರೀಶ ಕಾರ್ನಾಡರ 'ಯಯಾತಿ' ಮತ್ತು ಕೈಲಾಸಂ ಅವರ 'ಕೀಚಕ' ಇವನ್ನೂ, 'ಕನ್ನಡ ರಂಗಭೂಮಿಯ ಇತಿಹಾಸ'ವನ್ನೂ ಮರಾಠಿಗೆ ಅನುವಾದಿಸಿದ್ದಾರೆ

'ಸೋನೋಪಂತ ದಾಂಡೇಕರ ಟ್ರಸ್ಟ್', 'ಇಚಲಕರಂಜೀ ಟ್ರಸ್ಟ್', 'ಮಹಾರಾಷ್ಟ್ರ ಗ್ರಂಥೋತ್ತೇಜಕ ಸಭಾ' ಮುಂತಾದ ಸಂಸ್ಥೆಗಳಿಂದ ಪ್ರಶಸ್ತಿಗಳನ್ನು ಪಡೆದಿರುವ ಭಿಡೆಯವರು ಅನೇಕ ವಿದ್ವತ್ ಗ್ರಂಥಗಳನ್ನು ರಚಿಸಿರುವ ಖ್ಯಾತ ಸಂಶೋಧಕರು. ರಾಮಾಯಣ—ಮಹಾಭಾರತಗಳು ಇವರ ವಿಶೇಷ ಆಸ್ಥೆ-ಅಧ್ಯಯನದ ವಿಷಯಗಳು. ಕನ್ನಡ, ಹಿಂದಿ, ತೆಲುಗು, ಇಂಗ್ಲಿಷ್ ಭಾಷೆಗಳಿಗೂ ಅನುವಾದವಾಗಿರುವ ಇವರ ಪ್ರಮುಖ ಕೃತಿಗಳು : 'ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ', 'ಮಹಾಭಾರತದ ಶಾಪಗಳು', 'ಮಹಾಭಾರತದಲ್ಲಿ ಕುಮಾರಸಂಭವ'. ಶ್ರೀಮತಿ ಸರಸ್ವತಿ ಗಜಾನನ ರಿಸಬೂಡ ಅವರು ಅನುವಾದಿಸಿರುವ ಭಿಡೆಯವರ 'ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ' ಕೃತಿಗೆ ಕೇಂದ್ರ ಸಾಹಿತ್ಯ ಅಕಾದೆಮಿಯ ಪ್ರಶಸ್ತಿ ಲಭಿಸಿದೆ

**ಮಹಾಭಾರತದ ಶಾಪಗಳು :** ಶಾಪಗಳು ಮತ್ತು ವರಗಳು ಮಹಾಭಾರತ ಮಹಾಕಾವ್ಯದ ಅವಿಭಾಜ್ಯ ಅಂಗವಾಗಿವೆ. ಮಹಾಭಾರತದ ಯಾವುದೇ ಪ್ರಮುಖ ಘಟನೆಯ ಹಿಂದೆಯೂ ಶಾಪ ಇಲ್ಲವೆ ವರವೊಂದರ ಅಭಿಯೋಗ ಇರುವುದನ್ನು ಗುರುತಿಸಿರುವ ಭಿಡೆಯವರ ಈ ಸಂಶೋಧನಾ ಕೃತಿಯ ಮೊದಲ ಸಂಪುಟದಲ್ಲಿ ಶಾಪ ಮೊದಲಾದವುಗಳಿಗೆ ಸಂಬಂಧಪಟ್ಟ ವಿಷಯಗಳ ವಿಚಾರಪೂರಿತ ಚರ್ಚೆಯನ್ನೊಳಗೊಂಡಿರುವ 'ಶಾಪಸಂಭ್ರಮ'ವೆಂಬ ಸವಿಸ್ತಾರ ಪ್ರಸ್ತಾವನೆ ಹಾಗೂ ೧೪೭ ಶಾಪಗಳ ಮನೋಜ್ಞ ನಿರೂಪಣೆ-ವಿಶ್ಲೇಷಣೆಗಳಿವೆ. ಇದೇ ಕೃತಿಯ ಎರಡನೆಯ ಸಂಪುಟ 'ಆಣೆ', 'ಪಣ', 'ಸತ್ಯಕ್ರಿಯೆ' ಭಾಗಗಳೊಂದಿಗೆ, ಎರಡೂ ಸಂಪುಟಗಳ ಎಲ್ಲ ಭಾಗಗಳ ವಿವೇಚನೆಯಲ್ಲಿ ಬರುವ ವ್ಯಕ್ತಿಗಳ ಹೆಸರುಗಳ ಬಗೆಗಿನ ಮಾಹಿತಿ ನೀಡುವ 'ವ್ಯಕ್ತಿವಿಶೇಷ' ಎಂಬ ಐದನೆಯ ಭಾಗ ಮಾತ್ರವಲ್ಲದೆ, ಇಡೀ ಗ್ರಂಥಕ್ಕೆ ಪೂರಕವಾದ ಮಾಹಿತಿಗಳನ್ನು ನೀಡುವ ಎಂಟು ಪರಿಶಿಷ್ಟಗಳಿಂದ ಕೂಡಿದೆ.

ಮಹಾಭಾರತದಲ್ಲಿನ 'ವರ'ಗಳನ್ನೇ ಕುರಿತಾದ ಇವರ ಸಂಶೋಧನಾಗ್ರಂಥದ ರಚನೆ ಭರದಿಂದ ಸಾಗಿದೆ.

ರಾಮಾಯಣ ಮತ್ತು ಮಹಾಭಾರತ ಮಹಾಕಾವ್ಯಗಳಲ್ಲಿನ ಶಾಪ ಮತ್ತು ವರಗಳನ್ನು ಕುರಿತ ಭಿಡೆಯವರ ಕೃತಿಗಳು ಕಾವ್ಯಾಸಕ್ತರಿಗೆ, ಸಾಹಿತ್ಯಾಭಿಮಾನಿಗಳಿಗೆ, ಸಂಶೋಧಕರಿಗೆ ವಿಶಿಷ್ಟ ಆಕರಸಾಮಗ್ರಿ ನೀಡಬಲ್ಲವೆಂಬುದರಲ್ಲಿ ಸಂದೇಹವಿಲ್ಲ

ರೂ. ೯೫

# ಶ್ರೀಪಾದ ರಘುನಾಥ ಭಿಡೆ
# ಅವರ ಕೃತಿಗಳು

ವಾಲ್ಮೀಕಿ ರಾಮಾಯಣ ಶಾಪ ಆಣಿ ವರ (ಮರಾಠಿ)
ವಾಲ್ಮೀಕಿ ರಾಮಾಯಣ ಶಾಪ ಮತ್ತು ವರ (ಕನ್ನಡ)
(ಅನುವಾದ ಸರಸ್ವತಿ ಗಜಾನನ ರಿಸಬೂಡ
—ಉತ್ತಮ ಅನುವಾದ ಕೃತಿಗಾಗಿ ಕೇಂದ್ರ ಸಾಹಿತ್ಯ ಅಕಾದೆಮಿ ಪ್ರಶಸ್ತಿ ೧೯೯೨)
ವಾಲ್ಮೀಕಿ ರಾಮಾಯಣ ಶಾಪ ಔರ್ ವರದಾನ್ (ಹಿಂದಿ)
ಮಹಾಭಾರತಾಚೀ ಶಾಪವಾಣೀ (ಮರಾಠಿ)
ಮಹಾಭಾರತದ ಶಾಪಗಳು (ಕನ್ನಡ)
(ಅನುವಾದ ವಿರೂಪಾಕ್ಷ ಕುಲಕರ್ಣಿ)
ಮಹಾಭಾರತಾತೀಲ ಕುಮಾರಸಂಭವ (ಮರಾಠಿ)
ಮಹಾಭಾರತಾತೀಲ ಅಲಕ್ಷಿತ ಕದಾ (ಮರಾಠಿ)
ಮಹಾಭಾರತಾತೀಲ ಕುಮಾರ ಕದಾ (ಮರಾಠಿ)
ವಾಲ್ಮೀಕಿ ರಾಮಾಯಣ ಶಾಪಾಲು ವರಾಲು (ತೆಲುಗು) (ಅಚ್ಚಿನಲ್ಲಿ)
ಮಹಾಭಾರತದಲ್ಲಿಯ ಕುಮಾರಸಂಭವ (ಕನ್ನಡ) (ಅಚ್ಚಿನಲ್ಲಿ)
*Kumarasambhava in Mahābhārata* (ಇಂಗ್ಲಿಷ್) (ಅಚ್ಚಿನಲ್ಲಿ)
ಮಹಾಭಾರತಾಚೀ ವರದಾನ (ಮರಾಠಿ) (ಅಚ್ಚಿನಲ್ಲಿ)

ಮಹಾಭಾರತದ

# ಶಾಪಗಳು

ಸಂಪುಟ : ಒಂದು

**ಶ್ರೀಪಾದ ರಘುನಾಥ ಭಿಡ್ಡೆ**

ಅನುವಾದ

**ವಿರೂಪಾಕ್ಷ ಕುಲಕರ್ಣಿ**

ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು ೫೭೦ ೦೦೧

*MAHĀBHĀRATADA SHĀPAGALU. Sampuṭa Ondu* [*Curses in Mahābhārata : Volume I*] by SHREEPAD RAGHUNATH BHIDE, M. A., Reader in Marathi (Retd.), Sangana Basaveshwara Arts College, Bijapur (Karnataka)—A/2, 'Shri Laxmi Chhaya', 52, Ideal Colony, Kothrud, Pune 411 029 (Maharashtra) Translated into Kannada from the Author's Marathi work entitled *Mahābhāratāchī Shāpavāṇī* by VIRUPAX KULKARNI, 1098/11-B, 'Shashi-Prabha', Model Colony, Pune 411 016 (Maharashtra) Published by GEETHA BOOK HOUSE, K. R. Circle, Mysore 570 001. First Published 1995.

ಪ್ರಥಮ ಮುದ್ರಣ · ೧೯೯೫


ಮುಖಚಿತ್ರ : ಚಂದ್ರನಾಥ



This Volume is published with the financial assistance of Tirumala Tirupati Devasthanams, under their Scheme of Aid to Publish Religious Books

ಮುದ್ರಕರು ಮೈಸೂರು ಪ್ರಿಂಟಿಂಗ್ ಪ್ರೆಸ್
1210, ಕಾಂತರಾಜ ಅರಸು ರಸ್ತೆ, ಕೃಷ್ಣಮೂರ್ತಿಪುರಂ ಮೈಸೂರು 570 004

# ಪರಿವಿಡಿ



## ಮಹಾಭಾರತದ ಶಾಪಗಳು : ಸಂಪುಟ ಒಂದು

# ಸ್ವಗತ

'ವಾಲ್ಮೀಕಿ ರಾಮಾಯಣ . ಶಾಪ ಮತ್ತು ವರ'—ಈ ಗ್ರಂಥವು ೧೯೮೭ರಲ್ಲಿ* ಪ್ರಕಟ ಗೊಂಡಿತು. ಮುಖ್ಯವಾದ ನಿಯತಕಾಲಿಕೆಗಳು ವಿಸ್ತೃತವಾದ ವಿಮರ್ಶೆಗಳನ್ನು ಪ್ರಕಟಿಸಿ ಈ ಗ್ರಂಥವನ್ನು ಕೊಂಡಾಡಿದವು. ದಿವಂಗತ ಸೋನೋಪಂತ ದಾಂಡೇಕರ ಧಾರ್ಮಿಕ ಗ್ರಂಥ ವಿಶ್ವಸ್ಥ ನಿಧಿ, ಪುಣೆ ; ದಿವಂಗತ ರಾ. ಬ. ಕರಂದೀಕರ ವಿಶ್ವಸ್ತ ನಿಧಿ, ಧಾರವಾಡ ; ಇಚಲಕರಂಜೀ ಎಜ್ಯುಕೇಶನ್ ಅಂಡ್ ಚಾರಿಟೇಬಲ್ ಟ್ರಸ್ಟ್, ಇಚಲಕರಂಜೀ ; ಹಾಗೂ ಮಹಾರಾಷ್ಟ್ರ ಗ್ರಂಥೋತ್ತೇಜಕ ಸಂಸ್ಥೆ, ಪುಣೆ—ಈ ಸಂಸ್ಥೆಗಳು ಪ್ರಶಸ್ತಿಗಳನ್ನು ನೀಡಿ ಈ ಗ್ರಂಥವನ್ನು ಗೌರವಿಸಿವೆ. ಬೆಂಗಳೂರಿನವರಾದ ಶ್ರೀಮತಿ ಸರಸ್ವತಿ ಗಜಾನನ ರಿಸಬೂಡ ಅವರು ಈ ಗ್ರಂಥವನ್ನು ಕನ್ನಡಕ್ಕೆ ಅನುವಾದಿಸಿದರು ಮೈಸೂರಿನ ಖ್ಯಾತ ಪ್ರಕಾಶನ ಸಂಸ್ಥೆ ಗೀತಾ ಬುಕ್ ಹೌಸ್ ಇದನ್ನು ೧೯೯೦ರಲ್ಲಿ ಪ್ರಕಟಿಸಿತು. ಹಿಂದಿಯ ಅನುವಾದದ ಕೆಲಸ ನಾಗಿದೆ ಈ ಗ್ರಂಥ ವಿದ್ವಜ್ಜನರ ಹಾಗೂ ಸಾಮಾನ್ಯ ಓದುಗರ ಆದರಾಭಿಮಾನಗಳಿಗೊಳಗಾಗಿರುವುದು. ಇದು ಒಂದು ಮಹತ್ವದ, ಆದರೂ ಅಲಕ್ಷ್ಯ ಕ್ಕೀಡಾಗಿದ್ದ ವಿಷಯದತ್ತ ಅಭ್ಯಾಸಿಗಳ ಗಮನವನ್ನು ಸೆಳೆವ ಮೊದಲ ಪ್ರಯತ್ನವಾಗಿದೆ —ಎಂದೇ ನಾನು ಭಾವಿಸುತ್ತೇನೆ ರಾಮಾಯಣ/ಮಹಾಭಾರತಾದಿ ಪ್ರಾಚೀನ ಗ್ರಂಥಗಳಲ್ಲಿ ಶಾಪ/ವರಗಳು ನಾಕಷ್ಟಿವೆ. ವೇದಗಳು, ಉಪನಿಷತ್ತುಗಳು, ಪುರಾಣಗಳು, ಭಾಗವತ ಮೊದಲಾದ ಗ್ರಂಥಗಳ ಅಭ್ಯಾಸದ ಹೊರತು ಶಾಪ/ವರಗಳ ವಿಚಾರ ಪರಿಪೂರ್ತಿಯನ್ನು ಹೊಂದಲಾರದು. ಶಾಪ/ವರಗಳನ್ನು ಕುರಿತು ಹಲವು ಬಗೆಯ ಗೊಂದಲಗಳಿವೆ. ಕೆಲವು ಶಾಪ/ವರಗಳ ಕಾರಣಗಳು ಕೀಳು, ನಗಣ್ಯವಾಗಿರಬಹುದು ; ಅವುಗಳ ಪರಿಣಾಮಗಳು ವಿಚಿತ್ರವಾದವುಗಳೂ, ಪವಾಡಗಳಂತೆಯೂ ಇರಬಹು ದಾದರೂ ಶಾಪ/ವರಗಳೆಂದರೆ ಪವಾಡಗಳಲ್ಲ. ಪ್ರಾಚೀನ ಗ್ರಂಥಗಳಲ್ಲಿ ಅವುಗಳ ಸ್ಥಾನ ವೈಶಿಷ್ಟ್ಯಪೂರ್ಣವಾದುದು. ಶಾಪ/ವರವು ಒಂದು ಪ್ರಭಾವಿಯಾದ ದಂಡಶಕ್ತಿ/ ಪ್ರೋತ್ಸಾಹಕ ಶಕ್ತಿಯಾಗಿದೆ. ಶಾಪ/ವರಗಳು ನ್ಯಾಯ-ಅನ್ಯಾಯಗಳಲ್ಲಿ ಸಮತೋಲನ ವನ್ನು ಕಾಯ್ದುಕೊಳ್ಳುವ ಬಲು ಬೆಲೆಯುಳ್ಳ ಕೆಲಸವನ್ನು ಮಾಡಿವೆ. ಮಹಾಕಾವ್ಯ ಗಳಲ್ಲದೆ ವೇದಗಳು, ಉಪನಿಷತ್ತುಗಳು, ಪುರಾಣಗಳು, ಇತ್ಯಾದಿ ಎಲ್ಲ ಗ್ರಂಥಗಳನ್ನೂ ಅವಲೋಕಿಸಿ ಶಾಪ/ವರಗಳನ್ನು ಅಭ್ಯಸಿಸುವುದು ನನ್ನ ಶಕ್ತಿಮೀರಿದ ಸಂಗತಿ ; ನನ್ನಿಂದ ನೀಗದ ಮಾತು. ಹೀಗಾಗಿ ಮೊದಲು ರಾಮಾಯಣವನ್ನಷ್ಟೇ ಅಭ್ಯಾಸಕ್ಕಾಗಿ ಎತ್ತಿಕೊಂಡೆ. ಆ ಗ್ರಂಥ ಓದುಗರಿಗೆ ಹಿಡಿಸಿದುದನ್ನು ಕಂಡು ಉತ್ತೇಜಿತನಾಗಿ ಮಹಾಭಾರತದತ್ತ ಹೊರಳಿದೆ.

ಮಹಾಭಾರತದ ಒಟ್ಟು ವಿಸ್ತಾರ, ಸಂಕೀರ್ಣತೆ, ಘಟನೆಗಳು, ಪ್ರಸಂಗಗಳು, ವ್ಯಕ್ತಿ ಗಳು—ಇವೆಲ್ಲವುಗಳ ಪ್ರಮಾಣ, ರಾಮಾಯಣದೊಂದಿಗೆ ಹೋಲಿಸಿದರೆ, ಬಲು

* ಈ ಪ್ರಕಟಣಾ ವರ್ಷ ಗ್ರಂಥದ ಮರಾಠಿ ಸಂಸ್ಕರಣಕ್ಕೆ ಸಂಬಂಧಿಸಿದುದು.

ದೊಡ್ಡದು. ಮಹಾಭಾರತ ನಾಲ್ಕುನೂರಕ್ಕಿಂತಲೂ ಹೆಚ್ಚು ಶಾಪ ಹಾಗೂ ವರಗಳನ್ನು ಒಳಗೊಂಡಿದೆ ಇವೆಲ್ಲವುಗಳನ್ನೂ ಒಂದೇ ಗ್ರಂಥದಲ್ಲಿ ಸಮಾವೇಶಗೊಳಿಸುವುದು ಅಸಾಧ್ಯವೆನ್ನಿಸಿತು. ಹೀಗಾಗಿ ವರಗಳನ್ನು ಬದಿಗೆ ಸರಿಸಿಟ್ಟು, ಶಾಪಗಳ ಮೇಲಷ್ಟೇ ಗಮನವನ್ನು ಕೇಂದ್ರೀಕರಿಸಿದೆ. ಗುರುತುಲ್ಯರಾದ ಡಾ. ಗ. ನ. ಸಾರೆ ಇವರು ಶಾಪಗಳ ಜೊತೆಗೇ ಶಪಥ, ಪ್ರತಿಜ್ಞೆ ಹಾಗೂ ಸತ್ಯಕ್ರಿಯೆಗಳನ್ನೂ ಕೂಡ ಒಟ್ಟಿಗೆ ಅಭ್ಯಸಿಸುವುದರ ಅಗತ್ಯವನ್ನು ಮನಗಾಣಿಸಿದರು. ನನ್ನ ಅಧ್ಯಯನ ಮುಂದುವರಿದಂತೆ ಶಾಪವನ್ನು ಕುರಿತ ಇನ್ನಷ್ಟು ಮಾಹಿತಿ ದೊರಕಿತು ವಾಲ್ಮೀಕಿರಾಮಾಯಣವನ್ನು ಕುರಿತಾದ ನನ್ನ ಓದಿನಲ್ಲಿಯ ಕುಂದುಕೊರತೆಗಳು ನನ್ನ ಗಮನಕ್ಕೆ ಬಂದವು. ಅವುಗಳನ್ನು ಈ 'ಮಹಾ ಭಾರತದ ಶಾಪಗಳು' ಕೃತಿಯಲ್ಲಿ ತುಂಬಿಕೊಳ್ಳಲು ಯತ್ನಿಸಿದ್ದೇನೆ.

ಮಹಾಭಾರತದಲ್ಲಿಯ ಶಾಪ, ಶಪಥಗಳು, ಪ್ರತಿಜ್ಞೆಗಳು, ಸತ್ಯಕ್ರಿಯೆ ಮೊದಲಾದ ವುಗಳನ್ನು ಕುರಿತು ಅಭ್ಯಸಿಸುವ ಒಂದು ಯತ್ನ ಇದು. ಈ ಗ್ರಂಥದ ಸ್ವರೂಪವು ಸಾಧಾರಣವಾಗಿ ಸಂಕಲನಾತ್ಮಕವಾಗಿದೆ. ಇದು ಮಹಾಭಾರತವನ್ನು ಕುರಿತಾದ ಪ್ರಬಂಧ ವಲ್ಲ. ಅಭ್ಯಾಸದ ವಿಷಯವು ಸೀಮಿತವಾದುದರಿಂದ ಇಡಿಯ ವಿವೇಚನೆ ಒಂದು ಚೌಕಟ್ಟಿಗೆ ಒಳಪಟ್ಟಿದ್ದು, ಇದಕ್ಕೆ ಸಂಬಂಧಿಸಿದಂತೆ ಕೆಲವು ಅಂಶಗಳನ್ನು ಈ ಕೆಳಗೆ ವಿಶದೀಕರಿಸಲಾಗಿದೆ.

೧. ಮಹಾಭಾರತದ ಅನೇಕ ಸಂಸ್ಕರಣಗಳು ಲಭ್ಯವಿವೆ. ಭಾಂಡಾರಕರ ಪ್ರಾಚ್ಯವಿದ್ಯಾ ಸಂಶೋಧನಾ ಸಂಸ್ಥೆಯು ಹಲವಾರು ವಿದ್ವಾಂಸರ ಪರಿಶ್ರಮದಿಂದ ಮಹಾಭಾರತದ ಶುದ್ಧ ಪಾಠವನ್ನು ಪ್ರಕಟಪಡಿಸಿದ್ದು, ಈ ಸಂಸ್ಕರಣ ಜಗತ್ಪ್ರಸಿದ್ಧವಾಗಿದೆ ಈ ಸಂಸ್ಕರಣವನ್ನೇ ಆಧಾರಭೂತವಾಗಿ ಇರಿಸಿಕೊಳ್ಳುವುದು ಯುಕ್ತವಾಗುತ್ತಿತ್ತು ಆದರೆ ಈ ಸಂಸ್ಕರಣ ಮಹಾರಾಷ್ಟ್ರದ ಚಿಕ್ಕಪುಟ್ಟ ಪಟ್ಟಣಗಳು ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಸಿಕ್ಕದು. ಈ ಸಂಗತಿಯನ್ನು ಗಮನದಲ್ಲಿರಿಸಿಕೊಂಡು ಎಲ್ಲರಿಗೂ ಸಹಜವಾಗಿ ದೊರೆವ ಗೋರಖ ಪುರದ ಗೀತಾ ಪ್ರೆಸ್ ಸಂಸ್ಕರಣವನ್ನೇ ಆಧಾರವಾಗಿ ಇಟ್ಟುಕೊಳ್ಳಲಾಗಿದೆ.

೨. ಮರಾಠಿಯಲ್ಲಿ ಮಹಾಭಾರತದ ಹಲವು ಅನುವಾದಗಳು ಪ್ರಕಟವಾಗಿವೆ. ಆದರೆ ಅವಾವುವನ್ನೂ ಈ ಗ್ರಂಥರಚನೆಗಾಗಿ ಬಳಸಿಕೊಳ್ಳಲಾಗಿಲ್ಲ.

೩. ಈ ಅಭ್ಯಾಸವು ಶಾಪ, ಶಪಥ, ಪ್ರತಿಜ್ಞೆ ಹಾಗೂ ಸತ್ಯಕ್ರಿಯೆಗಳಿಗೆ ಮಾತ್ರ ಸೀಮಿತವಿರುವುದರಿಂದ, ಈ ವಿಷಯಗಳಿಗೆ ಸಂಬಂಧಿಸಿರದ ಬೇರಾವ ಸಂಗತಿಗಳನ್ನೂ ಕುರಿತು ಇಲ್ಲಿ ಯೋಚಿಸಲಾಗಿಲ್ಲ

೪. ಮಹಾಭಾರತದಲ್ಲಿಯ ೧೪೭ ಶಾಪಗಳು, ೬೮ ಶಪಥಗಳು, ೮೫ ಪ್ರತಿಜ್ಞೆಗಳು ಹಾಗೂ ೨೦ ಸತ್ಯಕ್ರಿಯೆಗಳ ವಿವೇಚನೆಯನ್ನು ಮಾಡುವಾಗ ಮೊದಲ ಸಂದರ್ಭದಲ್ಲಿ, ಸಂಸ್ಕೃತ ಸಂಸ್ಕರಣ, ಮರಾಠಿಯ ಅನುವಾದ ಹಾಗೂ ಅವಶ್ಯವೆನಿಸಿದ ಬೇರೆ ಮಾಹಿತಿ, ಪುನರುಲ್ಲೇಖಗಳನ್ನು ವಿಸ್ತಾರವಾಗಿ ನೀಡಲು ಯತ್ನಿಸಲಾಗಿದೆ. ಎಷ್ಟೇ ಎಚ್ಚರ ವಹಿಸಿ ದ್ದರೂ ಯಾವುದಾದರೂ ಒಂದು ಶಾಪ, ಅದರ ಪುನರುಲ್ಲೇಖವನ್ನು ನೀಡುವುದು ಉಳಿದುಹೋಗಿರುವ ಸಾಧ್ಯತೆಯನ್ನು ತಳ್ಳಿಹಾಕಲಾಗದು. ವಿವೇಚನೆಯಲ್ಲಿ ಬಂದ ವ್ಯಕ್ತಿ ಗಳ ಹೆಸರುಗಳ ಬಗೆಗಿನ ಸಂಕ್ಷಿಪ್ತ ಮಾಹಿತಿಯನ್ನು 'ವ್ಯಕ್ತಿವಿಶೇಷ' ಎಂಬ ವಿಭಾಗದಲ್ಲಿ

ಕೊಡಲಾಗಿದೆ. ಸ್ಥಳಗಳ ಮಾಹಿತಿಯನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ. ದಿವಂಗತ ಸಿದ್ಧೇಶ್ವರ ಶಾಸ್ತ್ರಿ ಚಿತ್ರಾವ ಅವರ 'ಭಾರತವರ್ಷೀಯ ಪ್ರಾಚೀನ ಚರಿತ್ರಕೋಶ' ಎಂಬ ಮರಾಠಿ ಗ್ರಂಥ ಹಾಗೂ ಹಿಂದೀ ಭಾಷೆಯಲ್ಲಿ ಶ್ರೀ ರಾಮಕುಮಾರ ರಾಯ ಅವರಿಂದ ಸಂಪಾದಿಸಲ್ಪಟ್ಟ 'ಮಹಾಭಾರತ ಕೋಶ' ಹಾಗೂ ಗೀತಾ ಪ್ರೆಸ್ (ಗೋರಖಪುರ) ಪ್ರಕಾಶನ ಸಂಸ್ಥೆಯು ಪ್ರಕಟಿಸಿರುವ 'ಮಹಾಭಾರತ ಕೀ ನಾಮಾನುಕ್ರಮಣಿಕಾ' ಗ್ರಂಥಗಳ ಆಧಾರದಿಂದ ಈ ಮಾಹಿತಿಗಳನ್ನು ಕಲೆಹಾಕಲಾಗಿದೆ ಅಭ್ಯಾಸಕ್ಕಾಗಿ ನೆರವು ಪಡೆಯಲಾದ ಇನ್ನಿತರ ಗ್ರಂಥಗಳ ಪಟ್ಟಿಯನ್ನು ಪರಿಶಿಷ್ಟದಲ್ಲಿ ನೀಡಲಾಗಿದೆ. ಇವೆಲ್ಲ ಗ್ರಂಥಗಳು ಅಭ್ಯಾಸದಲ್ಲಿ ತುಂಬ ನೆರವು ನೀಡಿವೆ. ಈ ಗ್ರಂಥಗಳು, ಅವುಗಳ ಲೇಖಕರು, ಸಂಪಾದಕರು ಹಾಗೂ ಪ್ರಕಾಶಕರೆಲ್ಲರ ಋಣ ಎಂದಿಗೂ ತೀರಿಸಲಾಗದಂಥದು. ಈ ಗ್ರಂಥಗಳಲ್ಲಿಯ ಜ್ಞಾನ, ವಿದ್ವತ್ತು ಹಾಗೂ ಅಭ್ಯಾಸಗಳಿಂದಾಗಿ ನನಗಾದ ಲಾಭಕ್ಕಾಗಿ ನಾನು ಕೃತಜ್ಞ

೫. ಶಾಪ ಮೊದಲಾದವುಗಳಿಗೆ ಸಂಬಂಧಪಟ್ಟ ವಿಷಯಗಳ ವಿಸ್ತೃತವಾದ ಚರ್ಚೆಯನ್ನು 'ಶಾಪಸಂಭ್ರಮ'ವೆಂಬ ಮುನ್ನುಡಿಯಲ್ಲಿ ಮಾಡಲಾಗಿದ್ದು ಅದಕ್ಕೆ ಪೂರಕವಾದ ಮಾಹಿತಿಯನ್ನು ಪರಿಶಿಷ್ಟದಲ್ಲಿ ನೀಡಲಾಗಿದೆ.

೬. ಶಾಪಗಳನ್ನು ಕುರಿತಾದ ವಿವೇಚನೆಯಲ್ಲಿ ಯಾರ ಬಾಯಿಯಿಂದ ಶಾಪವು ಹೊರಬಂದಿತೋ ಅವರ ಹೆಸರಿನೆದುರು > ಎಂಬ ಚಿಹ್ನೆಯನ್ನು ಬಳಸಲಾಗಿದೆ. ಇದು ಗಣಿತಶಾಸ್ತ್ರದ ಚಿಹ್ನೆಯನ್ನು ಹೋಲುತ್ತದಾದರೂ ಆ ಅರ್ಥ ಇಲ್ಲಿಲ್ಲ.

ಶಾಪ ಮತ್ತು ವರ—ಸಂಕಲ್ಪನೆ ಹಾಗೂ ಸ್ವರೂಪ, ಯಾತು-ಕ್ರಿಯೆ, ಯಜ್ಞ-ಕರ್ಮ, ತಪಶ್ಚರ್ಯೆ, ಶರತ್ತಿನ ಶಾಪ, ಅನುಚ್ಚಾರಿತ ಶಾಪ, ಎದುರು ಶಾಪ, ಉಃಶಾಪ, ಶಪಥ, ಪ್ರತಿಜ್ಞೆ, ಸತ್ಯಕ್ರಿಯೆ ಮೊದಲಾದವುಗಳ ವಿವೇಚನೆಯಲ್ಲಿ 'ವಾಲ್ಮೀಕಿ ರಾಮಾಯಣ . ಶಾಪ ಮತ್ತು ವರ' ಗ್ರಂಥದ ಕೆಲವೊಂದು ಮಾಹಿತಿಯನ್ನು ಅಲ್ಲಿರುವಂತೆಯೇ ಎತ್ತಿಕೊಳ್ಳುವುದರೊಂದಿಗೆ, ಅವಶ್ಯವಿದ್ದೆಡೆಗಳಲ್ಲಿ ಹೆಚ್ಚಿನ ಮಾಹಿತಿಯನ್ನೂ ಸೇರಿಸಲಾಗಿದೆ.

ಶಾಪ ಹಾಗೂ ಋಣಗಳನ್ನು ಕುರಿತು ಬಹಳಷ್ಟು ತಪ್ಪು ತಿಳುವಳಿಕೆಗಳಿವೆ. ಕೆಲವು ಶಾಪಗಳು ವರಗಳಂತಿದ್ದು ಸಮಾಜಸಂಧಾರಣೆಗೆ ಉಪಯುಕ್ತವೂ ಕಲ್ಯಾಣಕರವೂ ಆಗಿರುವಂತೆಯೇ, ಕೆಲವು ಋಣಗಳು ತುಂಬ ಸಿರಿವಂತಿಕೆಯನ್ನು ಹೊಂದಿದ್ದು ಉಪಕಾರಿಯಾಗಿರುತ್ತವೆ. ತಾಯಿ-ತಂದೆ, ಗುರು, ಸನ್ಮಿತ್ರ ಹಾಗೂ ತಾಯನಾಡಿನ ಋಣವನ್ನು ಅದೆಂದಿಗಾದರೂ ತೀರಿಸಲು ಸಾಧ್ಯವೆ ? ಗ್ರಂಥಗಳ ಋಣವನ್ನು ತೀರಿಸಬೇಕೆಂದರೂ ಅದು ಹೇಗೆ ಸಾಧ್ಯ ? ಬಿಡುಗಡೆಯನ್ನು ಹೊಂದಲು ಸಾಧ್ಯವೇ ಆಗದಂತಹ ಕೆಲವು ಋಣಗಳಿರುತ್ತವೆ. ಅವುಗಳನ್ನು ತೀರಿಸಲು ಯತ್ನಿಸಲೇಕೂಡದು. ಋಣ ಪಡೆಯಲು ಪತ್ತು ಇರಬೇಕಾದುದೇನೋ ನಿಜವೇ. ನನ್ನಲ್ಲಿ ಅರ್ಹತೆಯಿಲ್ಲದೆಹೋದರೂ ಅದೃಷ್ಟದಿಂದಾಗಿ ಸಾಕಷ್ಟು ಪತ್ತು ಮಾತ್ರ ಇದೆಯೆಂದು ಕಾಣುತ್ತದೆ. ಹೀಗಾಗಿ ಕೇಳಿದ್ದಕ್ಕಿಂತ ಹೆಚ್ಚನ್ನೇ ಪಡೆದೆ ; ಸಿಗುತ್ತದೆಂದಾದಮೇಲೆ ಅದನ್ನು ಪಡೆಯುತ್ತಲೇಹೋದೆ. ಹೀಗಾಗಿ ಈಗದು ಒಂದು ಬೆಟ್ಟದಷ್ಟಾಗಿಬಿಟ್ಟಿದೆ.

ಮಿತ್ರರ ನೆರವು-ಸಹಕಾರಗಳೇ ನನ್ನ ಇಡುಗಂಟು. ನನ್ನ ಬಳಿ ನನ್ನದೆನ್ನುವುದೇನೂ

ಇಲ್ಲ. ಆದರೂ ಮಹಾಭಾರತಕ್ಕೆ ಕೈಹಾಕಿದ್ದು ಈ ಇಡುಗಂಟನ್ನು ನಂಬಿಯೇ. ಈ ಗ್ರಂಥದ ರಚನೆಯಲ್ಲಿ ನನಗೆ ನೆರವಾದ ಗ್ರಂಥಗಳು, ವ್ಯಕ್ತಿಗಳು ಹಾಗೂ ಸಂಸ್ಥೆಗಳ ಹೆಸರುಗಳನ್ನು ಪಟ್ಟಿಮಾಡುವುದು ಅಸಾಧ್ಯವೇ ಸರಿ. ಅದೆಷ್ಟೇ ಎಚ್ಚರ ವಹಿಸಿದರೂ ಆ ಪಟ್ಟಿ ಪೂರ್ತಿಗೊಳ್ಳುವ ಸಾಧ್ಯತೆಯಿಲ್ಲ. ಅಂದಬಳಿಕ ಸುಮ್ಮನೆ ಏಕೀ ಹೆಣಗಾಟ ? ಶ್ರೇಯನಾಮಾವಲಿ ಹಾಗೂ ಸಂದರ್ಭಗ್ರಂಥಗಳ ತಲೆಬರೆಹಗಳಲ್ಲಿ ಕೆಲವು ಹೆಸರು ಗಳನ್ನು ಸೇರ್ಪಡಿಸಬಹುದಾದರೂ ಅವೂ ಅಪೂರ್ಣವಾಗಿಯೇ ಉಳಿದುಬಿಡುತ್ತವೆ. ಹೆಸರುಗಳನ್ನು ಉಲ್ಲೇಖಿಸದಿದ್ದವರ ಋಣವೂ ಇದ್ದೇ ಇರುತ್ತದೆ ಈ ಸಂಗತಿಯನ್ನು ಗಮನದಲ್ಲಿರಿಸಿಕೊಂಡು ನಾನು ಕೇವಲ ಕೃತಜ್ಞತೆಗಳನ್ನು ಅರ್ಪಿಸಬಯಸುತ್ತೇನೆ.

'ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ'—ಈ ಗ್ರಂಥದಂತೆಯೇ 'ಮಹಾ ಭಾರತದ ಶಾಪಗಳು' ಎಂಬೀ ಗ್ರಂಥದ ಪ್ರೇರಣೆಯೂ ನನ್ನ ತರುಣಮಿತ್ರರೂ, ಮುದ್ದೇ ಬಿಹಾಳದ ಮಹಾವಿದ್ಯಾಲಯದ ಗ್ರಂಥಪಾಲರೂ ಆಗಿರುವ ಶ್ರೀ ಪಂಡಿತ ಕನಮಡಿ ಇವರದು. ಗುರುತುಲ್ಯರೂ, ಸನ್ಮಿತ್ರರೂ ಆಗಿರುವ ಡಾ. ಗ ನ. ಸಾರೆ ಇವರು ತಂದೆಯ ಮಮತೆಯಿಂದ ಅದನ್ನು ಬೆಳೆಯಿಸಿ ನನ್ನನ್ನು ಕೆಲಸಮಾಡಹಚ್ಚಿದರು. ಇಷ್ಟೇ ಅಲ್ಲದೆ 'ಶ್ರೀಮದ್ಭಾಗವತ'ವನ್ನು ಕೈಗೆತ್ತಿಕೊಳ್ಳುವಂತೆ ನನ್ನನ್ನು ಒತ್ತಾಯಿಸುತ್ತಿದ್ದಾರೆ. ಅವರ ಆತ್ಮೀಯತೆಯನ್ನು ಅರ್ಥಮಾಡಿಕೊಳ್ಳಬಲ್ಲೆನಾದರೂ ನನಗೆ ನನ್ನ ಇತಿಮಿತಿಗಳು ಚೆನ್ನಾಗಿ ಗೊತ್ತು. ನಾನು ಮಾಡಹೊರಟಿರುವ ಮಹಾಭಾರತದ ವರಗಳನ್ನು ಕುರಿತ ಕೆಲಸ ಕೂಡ ನನ್ನಿಂದ ಪೂರ್ಣವಾದೀತೆಂಬ ಭರವಸೆ ನನಗಿಲ್ಲ. ಇಂದಿನವರೆಗಾದ ಕೆಲಸದ ಶ್ರೇಯಸ್ಸೆಲ್ಲ ಡಾ. ಸಾರೆ ಅವರದೇ. ಅದೇ ರೀತಿ ತಿರುಪತಿಯ ಡಾ. ಆರ್. ಎನ್. ಅರಳಿಕಟ್ಟಿಯವರಿಗೂ ಈ ಶ್ರೇಯಸ್ಸು ಸಲ್ಲಬೇಕು.

ಕೈಬರೆಹದ ಕರಡು ಸಿದ್ಧವಾಗುತ್ತಿದ್ದಂತೆ, ಧಾರವಾಡದ ನನ್ನ ಸ್ನೇಹಿತರಾದ ಶ್ರೀ ವಿನಾಯಕರಾವ್ ಗೋಖಲೆಯವರು ಅದರ ಮೇಲೆ ಕಣ್ಣುಹಾಯಿಸದಿದ್ದರೆ ನನ್ನ ಮನಸ್ಸಿಗೆ ನೆಮ್ಮದಿ ಇರದು. ಶ್ರೀ ಗೋಖಲೆ ಒಬ್ಬ ರೇಡಿಯೊ ಇಂಜಿನಿಯರರು. ಅವರು ಮರಾಠಿ, ಕನ್ನಡ ಹಾಗೂ ಇಂಗ್ಲಿಷ್ ವಾಙ್ಮಯಗಳನ್ನು ಚೆನ್ನಾಗಿ ಅಭ್ಯಸಿಸಿ ದವರು. ಅವರ ವ್ಯಾಸಂಗ ಹಾಗೂ ಮುಲಾಜಿಲ್ಲದ ವಿಮರ್ಶೆಗಳು ನನಗೆ ಯಾವಾಗಲೂ ಪ್ರೇರಕ ಎನ್ನಿಸಿವೆ. ಹಲವು ವರ್ಷಗಳ ಈ ಪರಿಪಾಠವನ್ನು ಈ ಸಲವೂ ಕಾಪಾಡಿ ಕೊಳ್ಳಲು ಸಾಧ್ಯವಾದುದಕ್ಕಾಗಿ ತುಂಬ ಸಂತಸವೆನ್ನಿಸಿದೆ. ವಿಜಾಪುರದ ಬಾಪಟ ದಂಪತಿ ಗಳಿಗೂ ನಮಗೂ ತೀರಾ ಹತ್ತಿರದ ನಂಟು. ಅವರ ಮಗ ಶ್ರೀ ಪ್ರಸಾದರವರು ಅಚ್ಚಿನ ವ್ಯವಸಾಯವನ್ನು ಬಲು ಸಮರ್ಥವಾಗಿಯೂ, ಬಲು ಎಚ್ಚರದಿಂದಲೂ ಕಾಪಾಡಿ ಕೊಂಡು ಬಂದಿದ್ದಾರೆ. ಅವರು ಸೌ. ಕಲ್ಪನಾ ಧರ್ಮಾಧಿಕಾರಿಯವರ ಸಹಕಾರದಿಂದ ಅಚ್ಚಿನ ಕೆಲಸದ ಇಡೀ ಹೊಣೆಯನ್ನೆಲ್ಲ ಹೊತ್ತರು ; ಅಲ್ಲದೆ ಅದನ್ನು ಸಮರ್ಥ ವಾಗಿ ನಿರ್ವಹಿಸಿದರು ಕೂಡ. ಈ ಗ್ರಂಥದಲ್ಲಿ ತೀರ ಕಡಿಮೆ ಅಚ್ಚಿನ ತಪ್ಪುಗಳಿರಲು ಕಾರಣರೆಂದರೆ ಕಳೆದ ಅರವತ್ತು ವರ್ಷಗಳಿಂದ ಇದೇ ವ್ಯವಸಾಯದಲ್ಲಿ ಅಚ್ಚಿನ ಕರಡು ಗಳನ್ನು ತಿದ್ದುವ ಕೆಲಸಕ್ಕೆ ತಮ್ಮನ್ನು ಮುಡಿಪಾಗಿರಿಸಿಕೊಂಡಿರುವ ಅನುಭವತಪಸ್ವಿಗಳಾದ ಶ್ರೀ ಯಶವಂತರಾವ ಘಾಯಗುಂಡೇ ಇವರು. ಈ ಕೆಲಸಕ್ಕೆ ಡಾ. ಸೌ. ಸಂಗೀತಾ ಬಾಪಟ

ರಿಂದಲೂ ನೆರವು ದೊರೆತಿದೆ. ಭಾಂಡಾರಕರ ಪ್ರಾಚ್ಯವಿದ್ಯಾ ಸಂಶೋಧನಾ ಸಂಸ್ಥೆಯ ಡಾ. ಮ. ಅ. ಮೆಹಂದಳೆ ಹಾಗೂ ಗ್ರಂಥಪಾಲರಾದ ಶ್ರೀ ಪಾ. ಲ. ಮಂಜೂಳ ಹಾಗೂ ಆಬಾಸಾಹೇಬ ಗರವಾರೆ ಮಹಾವಿದ್ಯಾಲಯದ ಗ್ರಂಥಪಾಲ ಶ್ರೀ ಅನಂತ ಜೋಶಿ ಇವರ ಬೆಲೆಯುಳ್ಳ ಮಾರ್ಗದರ್ಶನ ಲಭಿಸಿದೆ. ಚೇತೋಹಾರಿಯಾದ ಮುಖಚಿತ್ರವನ್ನು ಸಿದ್ಧಪಡಿಸುವಲ್ಲಿ ಸಿದ್ಧಹಸ್ತರೆಂದು ಹೆಸರಾದ ಚಿತ್ರಕಾರ ಶ್ರೀ ಅನಂತ ಸಾಲಕರ ಇವರು ಎಂದಿನಂತೆ ಆಕರ್ಷಕವಾದ ಮುಖಪುಟವನ್ನು ತಯಾರಿಸಿಕೊಟ್ಟಿದ್ದಾರೆ. ಮಿತ್ರವರ್ಯ ರಾದ ಶ್ರೀ ಅನಂತರಾವ ಕುಲಕರ್ಣಿಯುವರಿಗೂ ನನಗೂ ಕಳೆದ ನಾಲ್ಕು ದಶಕಗಳಿಗಿಂತಲೂ ಹೆಚ್ಚು ಕಾಲದ ಸ್ನೇಹ. ಅವರ ಇಬ್ಬರು ಮಕ್ಕಳಾದ ಶ್ರೀ ಅನಿರುದ್ಧ ಹಾಗೂ ಶ್ರೀ ರತ್ನಾಕರ ಇವರು ತಮ್ಮ ತಂದೆಯಿಂದ ಪಡೆದ ಈ ಸ್ನೇಹದ ಬಳುವಳಿಯುನ್ನು ಕಾಪಾಡಿ ಕೊಂಡುದಷ್ಟೇ ಅಲ್ಲದೆ ಬೆಳೆಯಿಸಿದರು ಕೂಡ. ಕಾಂಟಿನೆಂಟಲ್ ಪ್ರಕಾಶನ ಸಂಸ್ಥೆಗಾಗಿ ಈ ಗ್ರಂಥವನ್ನು ಅವರು ಸ್ವೀಕರಿಸಿದರು. ಕಾಂಟಿನೆಂಟಲ್ ಪ್ರಕಾಶನ ಸಂಸ್ಥೆಯಿಂದ ಈ ಕೃತಿ ಪ್ರಕಾಶಿತವಾಗುತ್ತಿರುವುದೊಂದು ಗೌರವದ ಚಿಹ್ನೆಯೆಂದು ಭಾವಿಸುತ್ತೇನೆ.

ಇವರೆಲ್ಲರ ಋಣ ವೃದ್ಧಿಗತವಾಗಲೆಂದು ಹಾರೈಸುತ್ತೇನೆ.

**ಶ್ರೀಪಾದ ರಘುನಾಥ ಭಿಡೆ**

# ಅನುವಾದಕನ ಅರಿಕೆ

ಶ್ರೀಯುತ ಶ್ರೀಪಾದ ರಘುನಾಥ ಭಿಡೆಯವರು ತಮ್ಮ ಈ ಇಳಿವಯಸ್ಸಿನಲ್ಲೂ ಒಳ್ಳೆಯ ಪರಿಶ್ರಮದಿಂದ ಮಹಾಭಾರತದ ವರ ಹಾಗೂ ಶಾಪಗಳನ್ನು ಕುರಿತು ಅಭ್ಯಾಸ ಮಾಡಿದ್ದಾರೆ. ಇದರ ಫಲವಾಗಿಯೇ 'ಮಹಾಭಾರತದ ಶಾಪಗಳು' ಗ್ರಂಥ ಸಿದ್ಧಗೊಂಡುದು. ವರಗಳನ್ನು ಕುರಿತಾದ ಗ್ರಂಥ ಸಿದ್ಧಗೊಳ್ಳಬೇಕಿದೆ, ಅದು ಆದಷ್ಟು ಬೇಗ ಓದುಗರ ಕೈಸೇರುವಂತಾಗಲೆಂದು ಹಾರೈಸಬಹುದು.

'ಮಹಾಭಾರತದ ಶಾಪಗಳು' ಕೃತಿಯನ್ನು ಮರಾಠಿ ಓದುಗರು ಒಳ್ಳೆಯ ರೀತಿಯಲ್ಲಿ ಬರಮಾಡಿಕೊಂಡಿದ್ದು, ಅದು ಈಗಾಗಲೇ ಭಾರತದ ಕೆಲವು ಅನ್ಯಭಾಷೆಗಳಿಗೆ ಅನುವಾದಗೊಂಡಿದೆ. ಸಂಸ್ಕೃತದ ಪ್ರಭಾವ ಕಡಿಮೆಯಾಗುತ್ತಿರುವ ಇಂದಿನ ದಿನಗಳಲ್ಲಿ ಈ ಗ್ರಂಥ ಪಂಡಿತರಿಗೂ, ಪಾಮರರಿಗೂ ಬೇಕುಬೇಕೆನ್ನಿಸುವಂತಿದೆ. ಪಂಡಿತರಿಗೆ ಇದೊಂದು ಆಕರ ಗ್ರಂಥ ಎನ್ನಿಸಬಹುದಾದರೆ ಸಾಮಾನ್ಯರಿಗೆ ಇದೊಂದು ಒಳ್ಳೆಯ ಕಥೆಗಳ ಸಂಕಲನವಾಗಿ ಕಂಡರೆ ಆಶ್ಚರ್ಯವಿಲ್ಲ. ಮಹಾಭಾರತದ ಒಟ್ಟು ಸಂರಚನೆಯ ಸಂಕೀರ್ಣತೆಯಲ್ಲಿ ವರ, ಶಾಪಗಳ ಪ್ರಾಮುಖ್ಯತೆ ಗಮನಿಸತಕ್ಕದ್ದಾಗಿದೆ.

ಈ ಕೃತಿಯನ್ನು ಕುರಿತು ಹೆಸರಾಂತ ಇತಿಹಾಸಕಾರರಾದ ಪ್ರೊ. ಮ ಶ್ರೀ. ಮಾಟೆಯವರು, ''ಶ್ರೀ ಭಿಡೆಯವರು ಮಹಾಭಾರತದ ಕಡಲಿನಿಂದ ಬೊಗಸೆ ತುಂಬ ಮುತ್ತುಗಳನ್ನು ಆಯ್ದು ತೆಗೆದಿದ್ದಾರೆ... ಇದು ಎಲ್ಲರಿಗೂ ತುಂಬ ಉಪಯುಕ್ತವಾದ ಗ್ರಂಥ ಎನ್ನಿಸಿದೆ'' ಎಂದಿದ್ದಾರೆ.

ಪ್ರಸಕ್ತ ಸಾಹಿತ್ಯ ಸಮ್ಮೇಳನಾಧ್ಯಕ್ಷರು ಹಾಗೂ ಖ್ಯಾತ ವಿಮರ್ಶಕರಾದ ಪ್ರೊ. ರಾಮ ಶೇವಾಳಕರರು ಈ ಗ್ರಂಥವನ್ನು ಕುರಿತು, ''ಪ್ರಾಚೀನ ಸಂಚಿತಗಳ ಹಿಂದಿರುವ ಹಾಗೂ ನಂಬಲು ಕಷ್ಟದ್ದಾಗಿ ತೋರುವ ಅದ್ಭುತದ ಅನ್ವಯಾರ್ಥವನ್ನು ಸಂಶೋಧನೆ, ವಿಶ್ಲೇಷಣೆ ಹಾಗೂ ಶಾಸ್ತ್ರಮೂಲತೆಗಳ ದೃಷ್ಟಿಯಿಂದ ಕಂಡುಕೊಳ್ಳಬಯಸುವವರಿಗೆ ಈ ಕೃತಿಯಿಂದಾಗಿ ತುಂಬ ನೆರವು ದೊರೆಕಲಿದೆ'' ಎಂದಿದ್ದಾರೆ.

ಶ್ರೀಯುತ ಭಿಡೆಯವರು ತುಂಬ ವಿಶ್ವಾಸದಿಂದ ಕನ್ನಡಾನುವಾದದ ಕೆಲಸವನ್ನು ನನಗೆ ಒಪ್ಪಿಸಿದರು. ಅದಕ್ಕಾಗಿ ನಾನು ಅವರಿಗೆ ಋಣಿಯಾಗಿದ್ದೇನೆ. ಅವರು ನನ್ನ ಮೇಲಿರಿಸಿದ ನಂಬುಗೆಯನ್ನು ನನ್ನ ಕೈಲಾದಮಟ್ಟಿಗೆ ಸಾರ್ಥಕಗೊಳಿಸಲು ಪ್ರಯತ್ನಿಸಿದ್ದೇನೆ. ಶ್ರೀಯುತರ ಬರವಣಿಗೆಯ ಶೈಲಿ ಸಂಸ್ಕೃತನಿಷ್ಠವಾದ ಭಾಷೆ ಹಾಗೂ ಸಂಯುಕ್ತ ವಾಕ್ಯರಚನೆಗಳನ್ನು ಒಳಗೊಂಡಿರುವಂಥದು. ಅನುವಾದದಲ್ಲಿ ಮಾತ್ರ ಕನ್ನಡದ ನುಡಿಗಟ್ಟುಗಳಿಗೂ, ಕಿರಿದಾದ ವಾಕ್ಯರಚನೆಗಳಿಗೂ ಆದಷ್ಟುಮಟ್ಟಿಗೆ ಒತ್ತುಕೊಡಲಾಗಿದೆ. ಅದೇ ಕಾಲಕ್ಕೆ ಮೂಲದ ಆಶಯಕ್ಕೆ ಎಲ್ಲೂ ಪೆಟ್ಟು ಬೀಳದಂತೆ ಎಚ್ಚರ ವಹಿಸಲಾಗಿದೆ.

ಈ ಅನುವಾದದ ಸಿದ್ಧತೆಯ ಸಂದರ್ಭದಲ್ಲಿ ಸಕ್ರಿಯವಾದ ನೆರವನ್ನು ನೀಡಿ ಉಪಕರಿಸಿದ ಸಂಸ್ಥೆಗಳನ್ನೂ, ಹಿರಿಯರನ್ನೂ ನೆನೆಯಲೇಬೇಕಿದೆ.

ಕನ್ನಡದ ಹಸ್ತಪ್ರತಿಯನ್ನೋದಿ ಅದು ಪ್ರಕಟಣೆಗೆ ಯೋಗ್ಯವಾದುದೆಂದು ಹೇಳಿ ಹರಸಿದ ಹಿರಿಯರಾದ ಪ್ರಾಧ್ಯಾಪಕ ಡಾ. ಹಾ. ಮಾ. ನಾಯಕರು ಹಾಗೂ ಡಾ. ಎಸ್. ಎಲ್. ಭೈರಪ್ಪನವರಿಗೆ, ಆರ್ಥಿಕ ನೆರವು ನೀಡಿದ ತಿರುಮಲ–ತಿರುಪತಿ ದೇವಸ್ಥಾನ ಟ್ರಸ್ಟಿನ ಪದಾಧಿಕಾರಿಗಳಿಗೆ, ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಓದಿ ಕರಡಚ್ಚುಗಳನ್ನು ತಿದ್ದಿ ಕೊಟ್ಟು ಸಹಕರಿಸಿದ ಶ್ರೀ ರಂಗರಾವ್ ರೋಹಿಡೇಕರರಿಗೆ, ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಣ ಮಾಡಿಕೊಟ್ಟಿರುವ ಮೈಸೂರು ಪ್ರಿಂಟಿಂಗ್ ಪ್ರೆಸ್‌ನ ಶ್ರೀ ಜಿ. ಎಚ್. ಕೃಷ್ಣಮೂರ್ತಿ ಮತ್ತು ಅವರ ಸಿಬ್ಬಂದಿವರ್ಗದವರಿಗೆ, ಮುಖಚಿತ್ರ-ಕಲಾವಿದ ಶ್ರೀ ಚಂದ್ರನಾಥ ಅವರಿಗೆ, ಹಾಗೂ ಗ್ರಂಥ-ಪ್ರಕಾಶನದ ಹೊಣೆಯನ್ನು ಹೊತ್ತು ಎಂದಿನ ವಿಶ್ವಾಸ, ಅಚ್ಚುಕಟ್ಟುಗಳಿಂದ ಅದನ್ನು ನಿರ್ವಹಿಸಿರುವ ಗೀತಾ ಬುಕ್ ಹೌಸ್ ಪ್ರಕಾಶನ ಸಂಸ್ಥೆಯ ಶ್ರೀ ಎಂ. ನತ್ಯನಾರಾಯಣರಾವ್ ನೋದರರಿಗೆ, ಲೇಖಕರಾದ ಶ್ರೀ ಭಿಡೆಯವರ ಪರವಾಗಿಯೂ, ಅನುವಾದಕನಾದ ನನ್ನ ಪರವಾಗಿಯೂ ಹೃತ್ಪೂರ್ವಕ ಕೃತಜ್ಞತೆಗಳು.

**ವಿರೂಪಾಕ್ಷ ಕುಲಕರ್ಣಿ**

ಪುಣೆ 411 016
ಏಪ್ರಿಲ್ 9, 1995

# ಮರಾಠಿ-ಕನ್ನಡ ಸ್ನೇಹವರ್ಧನ ಕೇಂದ್ರದ ಪರವಾಗಿ ಪತಿಯಿಂದ

ಕನ್ನಡ-ಮರಾಠಿ ಜನರ ನಡುವೆ ಸಾಹಿತ್ಯ-ಕಲೆಗಳ ಮೂಲಕ ಬಾಂಧವ್ಯವನ್ನು ವರ್ಧಿಸುವ ಉದ್ದೇಶದಿಂದ ಮರಾಠಿ-ಕನ್ನಡ ಸ್ನೇಹವರ್ಧನ ಕೇಂದ್ರವು ೧೯೮೮ರಲ್ಲಿ ಅಸ್ತಿತ್ವಕ್ಕೆ ಬಂದಿತು. ಅದರನ್ವಯ ಕೇಂದ್ರವು ಹಲವು ವಿಧಾಯಕ ಯೋಜನೆಗಳನ್ನು ಹಮ್ಮಿಕೊಂಡಿದ್ದು ಕನ್ನಡ-ಮರಾಠಿ ಸಂಯುಕ್ತ ವಿಷಯಗಳ ಅಧ್ಯಯನಕ್ಕೆ ಅವಕಾಶವನ್ನು ಒದಗಿಸುವುದರ ಜೊತೆಗೆ ಗ್ರಂಥ-ಪ್ರಕಟನೆಗೂ ಅಷ್ಟೇ ಪ್ರಾಧಾನ್ಯ ನೀಡಿದೆ. ಈ ದಿಶೆಯಲ್ಲಿ ಕೇಂದ್ರವು ಸ್ವತಃ ಹಾಗೂ ಇತರ ಸಂಸ್ಥೆಗಳ ಸಹಕಾರದಿಂದ ಪ್ರಕಟಿಸಿದ ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ ಅವರ ಸಂಶೋಧನ ಗ್ರಂಥ 'ಕಾಖಂಡಕಿ ಶ್ರೀ ಮಹಾಪತಿರಾಯರು', ಶ್ರೀ ವಿರೂಪಾಕ್ಷ ಕುಲಕರ್ಣಿಯವರಿಂದ ಸಂಪಾದಿತ, ಅನುವಾದಿತ 'ಕಾರಂತರ ಕಾದಂಬರಿಗಳು— ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ', ಶ್ರೀ ಗೌರೀಶ ಕಾಯ್ಕಿಣಿಯವರು ಅನುವಾದಿಸಿದ ಶ್ರೀಮತಿ ದುರ್ಗಾ ಭಾಗವತರ 'ವ್ಯಾಸಪರ್ವ', ಶ್ರೀಮತಿ ಸರಸ್ವತಿ ರಿಸಬೂಡ ಅವರು ಅನುವಾದಿಸಿದ ಶ್ರೀ ಗ. ಪ್ರ. ಪ್ರಧಾನರ 'ಸ್ವಾತಂತ್ರ್ಯ ಸಂಗ್ರಾಮದ ಮಹಾಭಾರತ' ಮುಂತಾದವುಗಳನ್ನು ಉಲ್ಲೇಖಿಸಬಹುದು.

ಗ್ರಂಥ-ಪ್ರಕಟನೆಯ ಜೊತೆಗೆ ೧೯೯೦ರಲ್ಲಿ ಪುಣೆಯಲ್ಲಿ ಮೊಟ್ಟಮೊದಲು ಜರುಗಿದ ಮರಾಠಿ-ಕನ್ನಡ ಚಲಚ್ಚಿತ್ರ ಪಟಗಳ ಪ್ರದರ್ಶನ ಮತ್ತು ವಿಚಾರ ಸಂಕಿರಣ, ಪುಣೆಯಲ್ಲಿ ಕನ್ನಡ ವರ್ಗಗಳ ಆಯೋಜನೆ, ಬೆಂಗಳೂರಿನಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯೊಂದಿಗೆ ಹಮ್ಮಿಕೊಂಡ ಮರಾಠಿ ಜ್ಞಾನಪೀಠ ಪ್ರಶಸ್ತಿ ವಿಜೇತರ ಕೃತಿಗಳನ್ನು ಕುರಿತ ವಿಚಾರ ಗೋಷ್ಠಿ, ಹೆಗ್ಗೋಡಿನ ನೀನಾಸಮ್ ಸಂಸ್ಥೆಯ ಸಹಕಾರದಿಂದ ಪುಣೆಯಲ್ಲಿ ಆಯೋಜಿಸಿದ 'ಕನ್ನಡ ನಾಟ್ಯ ಮಹೋತ್ಸವ' ಮುಂತಾದವು ಕೇಂದ್ರದ ಹಲವು ಮಹತ್ವದ ಉಪಕ್ರಮಗಳಾಗಿವೆ.

ನಮ್ಮ ಕೇಂದ್ರದ ಅಧ್ಯಕ್ಷರಾದ ಡಾ. ಅ. ರಾ. ತೋರೋ ಅವರು ೧೯೯೩ರಲ್ಲಿ ಸಾಂಗಲಿ ಆಕಾಶವಾಣಿ ಕೇಂದ್ರದಿಂದ ಆರಂಭಿಸಿದ ಕನ್ನಡ ಪಾಠಗಳ ಕಲಿಕೆ ತುಂಬ ಜನಪ್ರಿಯ ವಾಗುತ್ತಿದ್ದು ಅದು ಈಗಾಗಲೇ ಪುಣೆ, ಔರಂಗಾಬಾದ್, ನಾಗಪುರ ಕೇಂದ್ರಗಳಲ್ಲೂ ಬಿತ್ತರಿಸಲ್ಪಡುತ್ತಿರುವುದು ಹೆಮ್ಮೆಯ ಸಂಗತಿ.

ಮರಾಠಿಗರು ಮತ್ತು ಕನ್ನಡಿಗರನ್ನು ಒಟ್ಟುಗೂಡಿಸುವಲ್ಲಿ ಕೈಗೊಂಡ ಉಪಕ್ರಮಗಳನ್ನು ಮೆಚ್ಚಿಕೊಂಡು ಮುಂಬಯಿಯ ಕರ್ನಾಟಕ ಸಂಘವು ಕೇಂದ್ರಕ್ಕೆ ೧೯೯೧ರಲ್ಲಿ ವರದರಾಜ ಆದ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಡಾ. ಉಮಾ ಕುಲಕರ್ಣಿಯವರ ಅನುವಾದ ಕಾರ್ಯಕ್ಕೆ ಕೇಂದ್ರ ಸಾಹಿತ್ಯ ಅಕಾದೆಮಿ ಪ್ರಶಸ್ತಿ, ಮಹಾರಾಷ್ಟ್ರ ಗೌರವ ಪ್ರಶಸ್ತಿ, ವರದರಾಜ ಆದ್ಯ ಪ್ರಶಸ್ತಿಗಳು ದೊರಕಿದ್ದರೆ, ಶ್ರೀ ಶ್ರೀಪಾದ ರಘುನಾಥ ಭಿಡೆಯವರ ಮೂಲ ಮರಾಠಿ ಗ್ರಂಥ 'ವಾಲ್ಮೀಕಿ ರಾಮಾಯಣ: ಶಾಪ ಆಣಿ ವರ' ಇದನ್ನು

ಕನ್ನಡಕ್ಕೆ ಅನುವಾದಿಸಿದ ಶ್ರೀಮತಿ ಸರಸ್ವತಿ ರಿಸಬೂಡ ಅವರಿಗೆ ೧೯೯೨ರಲ್ಲಿ ಕೇಂದ್ರ ಸಾಹಿತ್ಯ ಅಕಾದೆಮಿಯು ಅತ್ಯುತ್ತಮ ಅನುವಾದ-ಪ್ರಶಸ್ತಿ ಲಭಿಸಿದೆ.

ನಮ್ಮ ಕೇಂದ್ರದ ವಿಶ್ವಸ್ಥರಲ್ಲೊಬ್ಬರಾದ ಶ್ರೀ ಶ್ರೀಪಾದ ರಘುನಾಥ ಭಿಡೆ ಅವರ 'ಮಹಾಭಾರತಾಚೀ ಶಾಪವಾಣೀ' ಗ್ರಂಥವನ್ನು ನಮ್ಮ ಕೇಂದ್ರದ ವಿಶ್ವಸ್ಥರೇ ಆದ ಶ್ರೀ ವಿರೂಪಾಕ್ಷ ಎಲ್. ಕುಲಕರ್ಣಿ ಅವರು ಕನ್ನಡಕ್ಕೆ ಅನುವಾದಿಸಿದ್ದು, ಮೈಸೂರಿನ ಪ್ರಸಿದ್ಧ ಗೀತಾ ಬುಕ್ ಹೌಸ್ ಪ್ರಕಾಶನ ಸಂಸ್ಥೆ ಇದನ್ನು ಪ್ರಕಾಶನ ಮಾಡುತ್ತಿದೆ; ಈ ಸಹಕಾರಕ್ಕಾಗಿ ಕೇಂದ್ರ ಅವರಿಗೆ ಅತ್ಯಂತ ಋಣಿಯಾಗಿದೆ.

ಮರಾಠಿ-ಕನ್ನಡ ಸ್ನೇಹವರ್ಧನ ಕೇಂದ್ರ
೬೦೪, ಕೆ. ಪಿ. ಟವರ್. ೧ ಫಾತಿಮಾ ನಗರ
ಸೋಲಾಪೂರ ರಸ್ತೆ. ಪುಣೆ ೪೧೧ ೦೧೩

**ಡಾ. ಅ. ರಾ. ತೋರೋ (ಅಧ್ಯಕ್ಷ)**
**ಕೃ. ಶಿ. ಹೆಗಡೆ (ಪ್ರಧಾನ ಕಾರ್ಯದರ್ಶಿ)**

# ಅರ್ಪಣೆ

**(ಮಹಾಭಾರತದ ಒಂದೇ ಒಂದು ಯಾಚಿತ ಶಾಪದ ಹಿನ್ನೆಲೆಯಲ್ಲಿ)**

ಪುತ್ರಹಂತಾ ನೃಶಂಸೋಽಹಂ ತವ ದೇವಿ ಯುಧಿಷ್ಠಿರಃ ।
ಶಾಪಾರ್ಹಃ ಪೃಥಿವೀನಾಶೇ ಹೇತುಭೂತಃ ಶಪಸ್ವ ಮಾಮ್ ॥

—ಸ್ತ್ರೀ, ೧೫/೨೬

ನಿನ್ನ ಮಕ್ಕಳ ವಧೆ ಹಾಗೂ ಪೃಥ್ವಿಯ ಮೇಲಿನ ಪ್ರಚಂಡ ಸಂಹಾರಕ್ಕೆ ನಾನೇ ಸಂಪೂರ್ಣನಾಗಿ ಹೊಣೆಗಾರನಾದುದರಿಂದ ಶಾಪವನ್ನು ಹೊಂದಲು ತಕ್ಕವನೇ ಆಗಿರುವೆನು. ಹೀಗಾಗಿ, ನೀನು ನನಗೆ ಶಾಪವನ್ನೀಯು.

—ಎಂದು ಮಕ್ಕಳ ಸಾವಿನಿಂದ ಶೋಕಾರ್ತಳಾದ ಗಾಂಧಾರಿಯ ಬಳಿ ಶಾಪಕ್ಕಾಗಿ ಕೇಳುವಂತಹ

**ದೊಡ್ಡ ಮನಸ್ಸಿನ ಧರ್ಮರಾಜನಾದ**

## ಯುಧಿಷ್ಠಿರನಿಗೆ

# ಶಾಪಸಂಭ್ರಮ

## ಮಹಾಭಾರತದ ಹಿರಿಮೆ

ವೇದಗಳು, ಉಪನಿಷತ್ತುಗಳು, ರಾಮಾಯಣ, ಮಹಾಭಾರತ, ಭಗವದ್ಗೀತೆ, ಭಾಗವತ ಹಾಗೂ ಪುರಾಣಗಳು ಮೊದಲಾದ ಹೊತ್ತಿಗೆಗಳು ಭಾರತೀಯ ಸಾಂಸ್ಕೃತಿಕ ಜೀವನದ ವಿಶಿಷ್ಟವಾದ ಇಡುಗಂಟುಗಳೆನ್ನಿಸಿವೆ. ಇವುಗಳ ಸವಿ ಅದೆಷ್ಟು ಹೆಚ್ಚಿನದೆಂದರೆ ಶತಮಾನ ಗಳೇ ಉರುಳಿದರೂ ಇವುಗಳನ್ನು ಕುರಿತಾದ ನೆಳೆತವು ಕಿಂಚಿತ್ತೂ ಇಳಿಮುಖವಾಗಿಲ್ಲ. ಇವುಗಳಲ್ಲಿ ಕಾಣಸಿಗುವ ಮಾನವನ ಬಾಳಿನ ವಿಶಾಲವಾದ ದರ್ಶನ, ಅವನು ಹುಟ್ಟು ಹಾಕಿದ ಉಚ್ಚಮಟ್ಟದ ಆದರ್ಶಗಳು, ನಿರೂಪಿಸಿದ ಅವಿನಾಶಿಯಾದ ದಾರ್ಶನಿಕತೆ, ಹಾಗೂ ಅವನು ಕಾಯ್ದುಕೊಂಡುಬಂದಿರುವ ಶಾಶ್ವತವಾದ ಮೌಲ್ಯಗಳೆಲ್ಲ ಅನನ್ಯ ಸಾಧಾರಣವಾದವುಗಳೇ ಸರಿ. ಇವೆಲ್ಲ ಹೊತ್ತಿಗೆಗಳ ಅಲೌಕಿಕತೆಯು ಅಡಕಗೊಂಡಿರು ವುದು ಅವುಗಳ ಲೌಕಿಕ ಸ್ವರೂಪದಲ್ಲಿ. ಇವುಗಳಲ್ಲಿಯ ಘಟನೆಗಳು, ಸನ್ನಿವೇಶಗಳು, ವ್ಯಕ್ತಿಗಳು, ಅವರ ಮನೋಧರ್ಮಗಳು, ಗುಣಾವಗುಣಗಳು, ಸೋಲುಗೆಲವುಗಳೆಲ್ಲ ಮಾನವನನ್ನು ಕುರಿತಾದವುಗಳೇ ಆದುದರಿಂದ ಇವುಗಳಲ್ಲಿ ನಾವು ಕಂಡುಕೊಳ್ಳುವುದು ನಮ್ಮ ಪಡಿನೆಳಲನ್ನೇ. ಸಾಹಿತ್ಯಕೃತಿಗಳೆಂದು ಕೂಡ ಇವುಗಳ ಹೆಗ್ಗಳಿಕೆ ಅಷ್ಟಿಷ್ಟಲ್ಲ. ಮಾನವನು ಈ ಹೊತ್ತಿಗೆಗಳನ್ನು ಮಾನವನಿಗೆಂದೇ ಬರೆದನಾದುದರಿಂದ ಇವು ಇಡಿಯಾಗಿ ಮಾನವೀಯವಾದವುಗಳು. ಬಲು ಹಿಂದಿನಿಂದಲೇ ಇವುಗಳ ಪರಿಶೀಲನೆ, ಪ್ರಚಾರ ಹಾಗೂ ಪ್ರಸಾರಗಳು ಸಾಗುತ್ತಬಂದಿವೆ. ಇವು ವಿದ್ವಾಂಸರ ಬುದ್ಧಿಮತ್ತೆಗೆ ಕರೆ ನೀಡಿರುವಂತೆಯೋ ಅವರಿಗೆ ಸವಾಲಾಗಿಯೂ ನಿಂತಿವೆ. ಹೀಗಾಗಿ, ಹಲವು ಬಗೆಗಳಲ್ಲಿ ಈ ಹೊತ್ತಿಗೆಗಳ ಅಧ್ಯಯನ ಸಾಗಿದೆ. ಇದರಿಂದಾಗಿ ಇವುಗಳ ಅಂದಚೆಂದದ ಹಲವು ಬದಿಗಳ ದರ್ಶನ ನಮಗಾಗುತ್ತಲಿದೆ. ರತ್ನಾಕರರಂತೆ ಐಸಿರಿಯಿಂದ ತುಂಬಿದವುಗಳೂ, ಅಪ್ಸರೆಯರಂತೆ ಚೆಲುವಿನಿಂದ ಕೂಡಿದವುಗಳೂ, ಚಿರತಾರುಣ್ಯವನ್ನು ಹೊಂದಿದವುಗಳೂ ಆದ ಇವುಗಳಿಗೆ ರಸಿಕನು ಮಾರುಹೋಗದಿದ್ದರೆ ಅಚ್ಚರಿ. ಹಲವು ಜನ ಪ್ರತಿಭಾವಂತರು ಇವುಗಳಿಂದಾಗಿ ಬರವಣಿಗೆಯತ್ತ ಹೊರಳಿದುದೂ ಉಂಟು. ಹೀಗಾಗಿ, ಈ ಹೊತ್ತಿಗೆಗಳ ಹಿರಿಮೆಯನ್ನು ಅದೆಷ್ಟು ಬಣ್ಣಿಸಿದರೂ ಸಾಲದು.

ಮಹಾಭಾರತವೆಂದರೆ ನಮ್ಮೆಲ್ಲರನ್ನು ಬೆರಗುಗೊಳಿಸುವ ಒಂದು ಮಹಾಕಾವ್ಯ. ಸಾವಿರ-ಸಾವಿರಗಳಿಂದೊಡಗೂಡಿದ ಅದರ ಸಂಹಿತೆಯು ವಿಶ್ವಸಾಹಿತ್ಯದ ಉಚ್ಚಾಂಕ ವೆನ್ನಿಸಿದೆ. ವಿಶ್ವದ ಯಾವುದೇ ನುಡಿಯ ಯಾವುದೇ ಹೊತ್ತಿಗೆಯನ್ನು ಸರಿಸಾಟಿಯಿಲ್ಲದ ಇದರ ಹರಹು ಹಾಗೂ ಇದರ ಘನ ಆಶಯದೊಂದಿಗೆ ಹೋಲಿಸಲಾಗದು. ಇದರ ಜನಪ್ರಿಯತೆ ಹಿಮಾಲಯದಷ್ಟು ಎತ್ತರ, ಮಹಾಸಾಗರಗಳಷ್ಟು ಆಳ. ಮಹಾಭಾರತ ವಂತೂ ಪ್ರಪಂಚದ ಐವತ್ತಕ್ಕೂ ಹೆಚ್ಚಿನ ನುಡಿಗಳಿಗೆ ಅನುವಾದಗೊಂಡಿದೆ. ಜಯ,

ಭಾರತ ಹಾಗೂ ಮಹಾಭಾರತಗಳು ಇದರ ವಿಕಸನಗೊಂಡ ರೂಪುಗಳು. ಇದರ ಸ್ವರೂಪ ಅದೆಷ್ಟು ಬೃಹದಾಕಾರದ್ದು, ಇದರ ಹರಹು ಅದೆಷ್ಟು ವಿಶಾಲವಾದದ್ದು ಎಂದರೆ ಇದರಲ್ಲಿ ಏನಿದೆ, ಏನಿಲ್ಲ ಎಂಬುದನ್ನು ನಿಖರವಾಗಿ ಹೇಳುವುದೂ ಕಷ್ಟದ್ದು. ಮಹಾಭಾರತದ ಹಿರಿಮೆಯನ್ನು ಕುರಿತು ಹಲವರು ಹಲವು ಬಗೆಗಳಲ್ಲಿ ಕೊಂಡಾಡಿರುವರು. ಮಹಾಭಾರತದಲ್ಲೂ ಅದರ ಮಹಾತ್ಮೆಯನ್ನು ಬಣ್ಣಿಸಲಾಗಿದೆ. ಒಂದು ಬಾರಿ ದೇವತೆಗಳೆಲ್ಲ ಒಂದೆಡೆಯಲ್ಲಿ ಕಲೆತರಂತೆ. ಅವರು ತಕ್ಕಡಿಯ ಒಂದು ತಟ್ಟೆಯಲ್ಲಿ 'ಭಾರತ'ವನ್ನಿಟ್ಟರು. ಇನ್ನೊಂದರಲ್ಲಿ ಉಪನಿಷತ್ತುಗಳಲ್ಲದೆ ನಾಲ್ಕೂ ವೇದಗಳನ್ನು ಇಟ್ಟು ತೂಗಿ ನೋಡಿದರು. ಆಗ ಅವರಿಗೆ 'ಭಾರತ'ದ ಒಲೆ ಹೆಚ್ಚಿನ ತೂಕದ್ದಾಗಿ ಕಂಡು ಬಂದಿತು. ಅಂದಿನಿಂದ 'ಭಾರತ'ವು 'ಮಹಾಭಾರತ' ಎನ್ನಿಸಿತಂತೆ. 'ಭಾರತ'ದ ಶ್ಲೋಕಗಳ ಸಂಖ್ಯೆ ಹಾಗೂ ಅರ್ಥವಂತಿಕೆಯ ಘನತೆಗಳು ವೇದಗಳವುಗಳಿಗಿಂತಲೂ ಮಿಗಿಲಾದವುಗಳು ಇದರ ಘನತೆ, ಗಾಂಭೀರ್ಯ ಹಾಗೂ ಪ್ರಾಮುಖ್ಯತೆಗಳಿಂದಾಗಿಯೂ ಈ 'ಭಾರತ' 'ಮಹಾಭಾರತ'ವೆಂಬ ಹೆಸರನ್ನು ಪಡೆಯಿತು.[1]

ಮಹಾಭಾರತದ ಆದಿಪರ್ವದ ೬೨ನೆಯ ಅಧ್ಯಾಯದಲ್ಲಿ, ವೈಶಂಪಾಯನನು ವ್ಯಾಸರು ಬರೆದಿರುವ ಮಹಾಭಾರತದ ಹಿರಿಮೆಯನ್ನು ಕುರಿತು ಜನಮೇಜಯ ಮಹರ್ಷಿಗೆ ವಿವರವಾಗಿ ಹೇಳಿದ್ದಾನೆ. 'ಮಹಾಭಾರತ' ಎಂದರೆ 'ಜಯ'ವೆಂಬ ಚರಿತ್ರೆ—ಎಂದಿದ್ದಾನೆ. ಅದು ವೇದಗಳ ಹಾಗೆಯೇ ರಮಣೀಯವೂ, ಶ್ರವಣೀಯವೂ ಅಹುದು. ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷಗಳೆಂಬ ನಾಲ್ಕೂ ಪುರುಷಾರ್ಥಗಳ ದರ್ಶನ ಇದರಲ್ಲಿ ಲಭ್ಯ.[2] ಇದೊಂದು ಪವಿತ್ರವಾದ ಧರ್ಮಗ್ರಂಥವಾಗಿರುವಂತೆಯೇ ಒಂದು ಉತ್ತಮವಾದ ಯುದ್ಧಶಾಸ್ತ್ರದ ಗ್ರಂಥವೂ ಆಗಿದೆ. ಇದರಲ್ಲಿ ಮೋಕ್ಷಪ್ರಾಪ್ತಿಯ ಮಾರ್ಗವನ್ನು ಬಣ್ಣಿಸಲಾಗಿದೆ. ಮಹಾಭಾರತದಲ್ಲಿ ಹಲವಾರು ಶಾಸ್ತ್ರಗಳು ಕೈಯಲ್ಲಿ ಕೈ ಹಾಕಿಕೊಂಡು ನಿಂತಿವೆ. ಇದರಲ್ಲಿ ಏನೆಲ್ಲವೂ ಇದೆ. ಇಲ್ಲಿಲ್ಲದುದು ಎಲ್ಲಿಯೂ ಇಲ್ಲ. ಮಹಾಭಾರತ ಒಂದು ಜ್ಞಾನಕೋಶ.

ಮಹಾಭಾರತದ ಹಲವು ಜನ ದೊಡ್ಡ ವ್ಯಕ್ತಿಗಳು. ಅಂದಮಾತ್ರಕ್ಕೆ ತಪ್ಪುಮಾಡದವರು ಎಂದಲ್ಲ. ಅವರೂ ಸಾಮಾನ್ಯರಂತೆಯೇ ಸ್ಖಲನಶೀಲರು, ಷಡ್ರಿಪುಗಳ ಹಿಡಿತದಲ್ಲಿರುವವರು, ಸಂಯಮದ ಕೊರತೆಯಿರುವವರು. ಪಾತಿವ್ರತ್ಯ–ಹಾದರ, ವ್ರತಸ್ಥತೆ–

---

1. ಪುರಾ ಕಿಲ ಸುರೈಃ ಸರ್ವೈಃ ಸಮೇತ್ಯ ತುಲಯಾ ಧೃತಮ್ ।
ಚತುರ್ಭ್ಯಃ ಸರಹಸ್ಯೇಭ್ಯೋ ವೇದೇಭ್ಯೋ ಹ್ಯಧಿಕಂ ಯದಾ ॥
ತದಾ ಪ್ರಭೃತಿ ಲೋಕೇಽಸ್ಮಿನ್ ಮಹಾಭಾರತಮುಚ್ಯತೇ ।
ಮಹತ್ವೇ ಚ ಗುರುತ್ವೇ ಚ ಧ್ರಿಯಮಾಣಂ ಯತೋಽಧಿಕಮ್ ।
ಮಹತ್ವಾದ್ ಭಾರವತ್ವಾಚ್ಚ ಮಹಾಭಾರತಮುಚ್ಯತೇ ॥

—ಆದಿ, ೧/೨೭೨-೨೭೪

ತಂತ್ರವಾರ್ತಿಕಕಾರನಾದ ಕುಮಾರಿಲಭಟ್ಟನು 'ಭಾರವತ್ವಾಚ್ಚ'ದ ಬದಲು 'ಭಾರತತ್ವಾತ್' ಎಂದಿದ್ದು ಅದು ಹೆಚ್ಚು ಸರಿಯಾದದ್ದು.

2. ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।
ಯದಿಹಾಽಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್ ॥ —ಆದಿ, ೬೨/೫೩

ಸ್ವೈರಾಚಾರ, ತುದಿ ಮುಟ್ಟಿದ ಉತ್ಕಟವಾದ ಬ್ರಹ್ಮಚರ್ಯ, ಕೆರಳಿದ ಪಶುವಿನಂತಹ ಕಾಮವಾಸನೆ, ಅಚಲನೀಯವಾದ ತ್ಯಾಗ, ಬಲು ಸಂಕುಚಿತವಾದ ಸ್ವಾರ್ಥ ಎಂಬಿವೇ ಮಾನವನಲ್ಲಿರುವ ವೈರುಧ್ಯಗಳು ಮಹಾಭಾರತದಲ್ಲೂ ಅಲ್ಲಲ್ಲಿ ಕಂಡುಬರುತ್ತವೆ. ತನ್ನ ಗಂಡ ಕುರುಡನೆಂಬ ಕಾರಣಕ್ಕಾಗಿ ತನ್ನ ಕಣ್ಣುಗಳಿಗೂ ಬಟ್ಟೆಯನ್ನು ಕಟ್ಟಿಕೊಂಡು ಬಾಳಿಡೀ ಕುರುಡುತನವನ್ನು ಕೃತಕವಾಗಿ ತಂದುಕೊಳ್ಳುವ ಗಾಂಧಾರಿ, ನೆಲೆಯನ್ನು ಕಳೆದುಕೊಂಡಿರುವ ತನ್ನ ಗಂಡನನ್ನು ಕಂಡುಹಿಡಿಯಲೆಂದು 'ಅಲಿಕ ಸ್ವಯಂವರ'ವನ್ನು ಹೂಡುವ ದಮಯಂತಿ, ತನ್ನನ್ನು ಮದುವೆಯಾಗಲಿರುವವನು ಅಲ್ಪಾಯುಷಿ ಎಂಬುದು ತಿಳಿದಿದ್ದರೂ ತಾನೊಲಿದ ಅವನ ಕೊರಳಿಗೇನೆ ವರಮಾಲೆಯನ್ನು ಹಾಕುವ ಗಟ್ಟಿ ಮನಸ್ಸಿನ ಸಾವಿತ್ರಿಯರಂತಹರಿರುವ ಇದೇ ಹೊತ್ತಿಗೆಯಲ್ಲಿ ತಾಳಲಾಗದ ತಮ್ಮ ಕಾಮ ಪಿಪಾಸೆಯನ್ನು ತಣಿಸಲೆಂದು ತೊಳಲಾಡುವ ಉಲೂಪಿ, ಹಿಡಿಂಬೆ, ಊರ್ವಶಿಯಂಥವರೂ ಇರುವರು. ಶುಕ್ರನಂತಹ ಉಗ್ರವೈರಾಗಿ, ಭೀಷ್ಮನಂತಹ ನೈಷ್ಠಿಕ ಬ್ರಹ್ಮಚಾರಿ, ಇಂದ್ರ, ಶಂತನು, ಯಯಾತಿಯಂತಹ ವಿಷಯಲಂಪಟರು, ಹೆಣ್ಣು ದ್ರೌಪದಿಯ ಅಪಮಾನದ ಸೇಡನ್ನು ತೀರಿಸಿಕೊಳ್ಳಲೆಂದು ಸೆಡ್ಡುಹೊಡೆದು ಪಂಥಾಹ್ವಾನವನ್ನೆಸೆವ ಭೀಮ, ಅರ್ಜುನ, ಕೃಷ್ಣ, ಬಸಿರಾದ ತನ್ನ ಅತ್ತಿಗೆಯ ಮೇಲೆಯೇ ಅತ್ಯಾಚಾರವನ್ನೆಸಗುವ ದೇವಗುರು ಬೃಹಸ್ಪತಿ, ಗಂಡುಮಕ್ಕಳು ಹುಟ್ಟಲೆಂದು ನಿಯೋಗವನ್ನು ಕೈಕೊಂಡ ಕುಂತಿ, ಮಾದ್ರಿ, ಅಂಬಿಕೆ, ಅಂಬಾಲಿಕೆ, ತನ್ನ ಮಕ್ಕಳನ್ನೇ ಬಲಿಕೊಡಲು ಹಾತೊರೆದ ವಿಶ್ವಾಮಿತ್ರ, ವಂಶವೃದ್ಧಿಗಾಗಿ ತನ್ನ ಮಡದಿಯನ್ನೇ ವಸಿಷ್ಠರ ಬಳಿಗೆ ಕಳಿಸಿದ ಸೌದಾಸ ರಾಜ, ತನ್ನ ಮಡದಿಯ ರುಂಡವನ್ನೇ ಕಡಿದು ಚೆಲ್ಲಲು ಅಪ್ಪಣೆಮಾಡುವ ಜಮದಗ್ನಿ —ಎಂಬಿತ್ಯಾದಿ ಹಲವು ಮಾದರಿಗಳ ಪಾತ್ರಗಳು ಮಹಾಭಾರತದಲ್ಲಿವೆ. ಗಂಡಿನ ಬಹುಪತ್ನಿತ್ವಕ್ಕೆ ಸವಾಲೊಡ್ಡುವ ದ್ರೌಪದಿ, ಮದುಮಗಳಿಗೆ ತನ್ನ ಅರ್ಧ ಆಯುಸ್ಸನ್ನರ್ಪಿಸುವ ರುರು, ಹೆಣ್ಣಿನ ಸೋಂಕು ಬೇಡವೆಂದು ವನವಾಸಕ್ಕೆ ತೆರಳುವ ಋಷಿಗಳು, ವಸ್ತ್ರಾಪಹರಣದಿಂದ ಸಂತಸಪಡುವ ಕರ್ಣ, ದುಶ್ಶಾಸನ, ದಾಸಿಗಾಗಿ ಬಾಯಿಬಿಡುವ ಕೀಚಕ, ತುಂಬುಸಭೆಯಲ್ಲಿ ಹೆಣ್ಣಿಗೆ ತನ್ನ ತೊಡೆಯನ್ನು ತೋರಿಸುವ ದುರ್ಯೋಧನ, ಗಂಗೆಯ ಬೆತ್ತಲೆಮೈಯನ್ನು ನುಂಗಲು ಹವಣಿಸಿದ ಮಹಾಭಿಷನಲ್ಲದೆ ಜಯದ್ರಥ, ಧೃತರಾಷ್ಟ್ರ, ಸಂಜಯ, ದ್ರೋಣ, ವಿದುರ ಎಂದೆಲ್ಲ ಎಷ್ಟೆಂದು ಹೆಸರುಗಳನ್ನು ಹೇಳುವುದು ?

ಮಹಾಭಾರತ ಒಂದು 'ಧರ್ಮಗ್ರಂಥ'ವೆಂದು ಪರಿಗಣಿಸಲ್ಪಟ್ಟಿದೆ. ಹೀಗಾಗಿ ಅದಕ್ಕೊಂದು ದಿವ್ಯವೂ ದೈವಿಕವೂ ಆದ ವಲಯ ಪ್ರಾಪ್ತವಾಗುವುದು ಸ್ವಾಭಾವಿಕ. ಅದು ಮಾನವನ ಬಾಳಿನ ಯಥಾರ್ಥತೆಯ ದರ್ಶನವನ್ನು ಮಾಡಿಸುತ್ತಿರುವಾಗಲೇ ಪವಾಡಗಳು ಹಾಗೂ ಅದ್ಭುತತೆಗಳೂ ಅದನ್ನು ಹೊಕ್ಕಿವೆ. ಈ ಹೊತ್ತಿಗೆಯ ವೈಶಾಲ್ಯದಿಂದಾಗಿ ಅದರಲ್ಲಿ ಅವ್ಯವಸ್ಥೆ, ಪುನರಾವೃತ್ತಿ, ಬೇಸರ ಬರಿಸುವ ರಗಳೆಯತನಗಳಿಗೂ ಇಂಬು ದೊರೆಯಿತು. ಈ ಹೊತ್ತಿಗೆಯನ್ನು ಬರೆದವನು ಒಬ್ಬನೋ, ಹಲವರೋ, ಕಾಲಕಾಲಕ್ಕೆ ಇದರಲ್ಲಾದ ಸೇರ್ಪಡೆಗಳು, ಇದರ ಮೂಲದ ಶುದ್ಧಸ್ವರೂಪ ಮೊದಲಾದವುಗಳೆಲ್ಲ ಸಂಶೋಧನೆಗೆ ಸಂಬಂಧಿಸಿದ ಸಂಗತಿಗಳು. ಭಂಡಾರಕರ ಪ್ರಾಚ್ಯವಿದ್ಯಾ ಸಂಶೋಧನ

ಸಂಸ್ಥೆಯು ವಿದ್ವಾಂಸರ ಹಲವು ವರ್ಷಗಳ ದುಡಿಮೆಯಿಂದ ತಯಾರಾದ ಮಹಾಭಾರತದ ಅಧಿಕೃತವಾದ ಸಂಹಿತೆಯನ್ನು ಪ್ರಕಟಿಸಿ ಮಾದರಿ ಸಂಶೋಧನೆಯಲ್ಲಿ ಒಂದು ಒಳ್ಳೆಯ ಸೇರ್ಪಡೆಯನ್ನು ಕೈಕೊಂಡಿದೆ. ಈಗೀಗ ಮಹಾಭಾರತವನ್ನು ಕುರಿತು ಚಿಕಿತ್ಸಾಪೂರ್ಣವಾದ ಅಭ್ಯಾಸ ಸಾಗಿದ್ದು ಅದರಿಂದಾಗಿ ಹಲವು ಹೊಸ ಹೊಸ ಹೊತ್ತಿಗೆಗಳು ಹೊರ ಬರುತ್ತಲಿವೆ. ಇವುಗಳಿಂದಾಗಿ ಮಹಾಭಾರತದ ಅಧ್ಯಯನಕ್ಕೆ ಹೊಸದೊಂದು ದಿಕ್ಕು ದೊರೆತಂತಾಗಿದೆ.

ಸದ್ಯಕ್ಕೆ ಮಹಾಭಾರತದ ಮಂಥನ ಸಾಗಿರುವುದರಿಂದ ಅದರಲ್ಲಿಯ ಶಾಪ ಹಾಗೂ ವರಗಳನ್ನು ಕುರಿತು ಕೂಡ ಅಧ್ಯಯನ ನಡೆಯಬೇಕಿದೆ. ಪ್ರಾಚೀನವಾದ ಹೊತ್ತಿಗೆಗಳಲ್ಲಿ ಶಾಪ/ವರಗಳು ವಿಪುಲವಾಗಿವೆ ರಾಮಾಯಣದಲ್ಲಿ ಒಟ್ಟು ೬೧ ಶಾಪಗಳು, ೮೪ ವರ ಗಳಿದ್ದು ಮಹಾಭಾರತದಲ್ಲಿ ಸುಮಾರು ೧೫೦ ಶಾಪಗಳು ಹಾಗೂ ೨೫೦ಕ್ಕೂ ಮಿಕ್ಕಿದ ವರಗಳಿವೆ. ಇವೆರಡೂ ಸಂಗತಿಗಳು ಭಾಗವತ ಹಾಗೂ ಪುರಾಣಗಳಲ್ಲಿ ಸಾಕಷ್ಟಿವೆ. ಇವಲ್ಲದೆ ಆಣೆ, ಪಣ, ಸತ್ಯಕ್ರಿಯೆ, ಹರಕೆ, ಆಕಾಶವಾಣಿ, ಪುಷ್ಪವೃಷ್ಟಿ, ಉತ್ಪಾತ, ಶಕುನ–ಅಪಶಕುನ ಮೊದಲಾದ ಸಂಗತಿಗಳು ತುಂಬ ಇವೆ. ವ್ಯಾಸ, ವಾಲ್ಮೀಕಿಯಂತಹ ಶ್ರೇಷ್ಠ ಗ್ರಂಥಕರ್ತರಿಗೆ ಎಷ್ಟೆಲ್ಲ ಶಾಪ–ವರಗಳನ್ನು ಬಳಸುವ ಅಗತ್ಯ ಕಂಡುಬಂದಿತೆಂಬ ಲ್ಲಿಯೇ ಅವುಗಳ ಅಗತ್ಯ ಮನದಟ್ಟಾಗದಿರದು. ಶಾಪ/ವರಗಳ ಪರಿಕಲ್ಪನೆ ಹುಟ್ಟಿದುದು ಹೇಗೆ ? ಅವುಗಳ ಉದ್ದೇಶವೇನು ? ಅವುಗಳನ್ನು ಬಳಸುವ ಅಧಿಕಾರ ಯಾರಿಗೆ, ಯಾವಾಗ, ಹೇಗೆ ದೊರೆಯುವುದು ? ಈ ಅಧಿಕಾರ ತಾಳುವುದು ಅದೆಷ್ಟು ಕಾಲ ? ಸಾಹಿತ್ಯದ ಹುಟ್ಟಿನಲ್ಲಿ ಈ ಶಾಪ/ವರಗಳ ಸ್ಥಾನಮಾನಗಳೇನು ? ಶಾಪ/ವರಗಳೆಂದರೆ ಇಂಥ ಹೊತ್ತಿಗೆಗಳ ಸಿಂಗಾರಕ್ಕಾಗಿರುವ ವಸ್ತು ಒಡವೆಗಳು ಮಾತ್ರವೇ, ಇಲ್ಲವೆ ಅವುಗಳ ಅವಿಭಾಜ್ಯವಾದ ಅಂಗಗಳೆನ್ನಿಸಿವೆಯೋ ? ಶಾಪ/ವರಗಳನ್ನು ನೀಡಲು ಕಾರಣಗಳೇನು, ಅವುಗಳ ಪರಿಣಾಮಗಳೇನು? ಮಹಾಭಾರತವನ್ನು ಓದುವಾಗ ಶಾಪ/ವರಗಳ ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನದಲ್ಲಿಯ ಸ್ಥಾನ, ಅಗತ್ಯ ಹಾಗೂ ಉಪಯುಕ್ತತೆ ಗಳನ್ನು ಕುರಿತಾದ ಹಲವು ಪ್ರಶ್ನೆಗಳು ಮನದಲ್ಲಿ ಮೂಡಿನಿಲ್ಲುತ್ತವೆ. ಅವುಗಳಿಗೆ ಉತ್ತರ ಗಳನ್ನು ಕಂಡುಕೊಳ್ಳುವ ಮೊದಲು ಈ ಪ್ರಶ್ನೆಗಳ ಸ್ವರೂಪಗಳನ್ನು ಅರ್ಥಮಾಡಿ ಕೊಳ್ಳುವುದು ಅಗತ್ಯದ್ದು.

ಮಾನವನ ಸಾಮರ್ಥ್ಯ ಮಿತಿಗೊಳಪಟ್ಟಿದ್ದು ಅವನ ಆಕಾಂಕ್ಷೆ, ಬಯಕೆಗಳು ಮಾತ್ರ ಅಂಕೆಯನ್ನರಿಯದವುಗಳು. ಹಲವು ಸಲವಂತೂ ಮಾನವನ ಸಾಮರ್ಥ್ಯ ಹಾಗೂ ಅವನ ಯತ್ನಗಳು ಆತನ ಪ್ರಾಥಮಿಕ ಬೇಡಿಕೆಗಳನ್ನು ಕೂಡ ಪೂರೈಸದಂಥವುಗಳು. ಹೀಗಾಗಿ ಅವನು ತನ್ನ ಸಾಮರ್ಥ್ಯಕ್ಕಿಂತ ಹೆಚ್ಚು ಪ್ರಭಾವಿಯೂ, ತಪ್ಪದೆ ಗೆಲವನ್ನು ದೊರಕಿಸಿ ಕೊಡುವಂಥದೂ ಆದ ಸಾಮರ್ಥ್ಯವನ್ನು ಹುಡುಕಹತ್ತುತ್ತಾನೆ. ಪ್ರಾಚೀನ ಕಾಲದಲ್ಲಿ ಆಹಾರ, ಉಡುಗೆತೊಡುಗೆ, ಆಸರೆ ಹಾಗೂ ವಂಶದ ಬೆಳವಣಿಗೆಯಂತಹ ಸೀಮಿತವಾದ ಅಗತ್ಯಗಳು ಮಾತ್ರ ಇರುತ್ತಿದ್ದವು. ಮಾನವನ ಬಳಿಯಿದ್ದ ಸಾಧನಗಳು ಈ ಅಗತ್ಯಗಳನ್ನು ಪೂರೈಸಲು ಸಾಲವು ಎನ್ನಿಸಿದ್ದರಿಂದ ಇನ್ನಷ್ಟು ಪ್ರಭಾವಿಯಾದ, ಸಾಮರ್ಥ್ಯಶಾಲಿ ಯಾದ ಉಪಾಯಗಳನ್ನು ಕಂಡುಕೊಳ್ಳಲು ಮೊದಲಾಯಿತು. ವಸ್ತುಗಳಲ್ಲೆಲ್ಲ ಒಂದು

ಬಗೆಯ ಸುಪ್ತವಾದ ಸಾಮರ್ಥ್ಯವಿದೆ. ಅದನ್ನು ಎಚ್ಚರಿಸಿದರೆ ತಮ್ಮ ಬಯಕೆಯನ್ನು ಈಡೇರಿಸಲು ಸಾಧ್ಯ ಎಂಬ ನಂಬಿಕೆ ಬಲಿಯತೊಡಗಿತು. ಇಂಥ ಸುಪ್ತಶಕ್ತಿಯನ್ನು ಎಚ್ಚರಿಸುವ ಸಾಧನಗಳನ್ನು, ಮಾರ್ಗಗಳನ್ನು ಕೈವಶಮಾಡಿಕೊಳ್ಳಬೇಕೆಂಬ ಹವಣಿಕೆ ಹೆಚ್ಚಾಯಿತು. ಮಂತ್ರ–ತಂತ್ರಗಳ ನೆರವಿನಿಂದ ದೈವೀಸಾಮರ್ಥ್ಯವನ್ನು ಆವಾಹನೆ ಮಾಡಿದರೆ ತಮ್ಮ ಬಯಕೆಯನ್ನು ಈಡೇರಿಸಿಕೊಳ್ಳಬಹುದು ಎಂಬ ನಂಬಿಕೆ ಬಲವತ್ತರ ವಾಯಿತು. ಸಾಧನಗಳ ಬಳಕೆ ಹಾಗೂ ಬಯಕೆಗಳ ಈಡೇರುವಿಕೆಯ ನಡುವಣ ಕಾರ್ಯ-ಕಾರಣಭಾವವು ಅರಿವಿನಾಚೆಯದಾದಕಾರಣ ಇಂಥ ಯತ್ನಗಳ ಸುತ್ತ ನಿಗೂಢತೆ, ಅದ್ಭುತತೆ, ಪವಾಡ ಹಾಗೂ ಅತೀಂದ್ರಿಯಸಾಮರ್ಥ್ಯ ಮೊದಲಾದವುಗಳ ವಲಯಗಳು ಸುತ್ತಿಕೊಳ್ಳತೊಡಗಿದವು. ಇದೆಲ್ಲ ಹೆಣಗಾಟ ಕೇವಲ ಭೌತಿಕವಾದ ಸುಖಸಂವರ್ಧನೆಗಾಗಿ ಮಾತ್ರ. ವಿಜ್ಞಾನಿಗಳ ಹೆಣಗಾಟವೂ ಇವುಗಳಿಗಾಗಿಯೇ ಸಾಗಿರುವಂಥದು. ಆದರೆ ಇವೆರಡರಲ್ಲೂ ತುಂಬ ವ್ಯತ್ಯಾಸವಿದೆ. ವಿಜ್ಞಾನಿಗಳು ಯತ್ನಿಸುವುದು ಕಾರ್ಯಕಾರಣಗಳ ನಡುವಣ ನಂಟನ್ನು ಅರ್ಥಮಾಡಿಕೊಳ್ಳಲು. ಬೇಕಿದ್ದ ಕಾರಣಗಳು ಅಗತ್ಯವಿದ್ದ ಪ್ರಮಾಣ ದಲ್ಲಿದ್ದರೆ ಅವುಗಳನ್ನು ಸರಿಯಾಗಿ ಅರಿತು ಬಯಸಿದ ಫಲಿತಾಂಶಗಳನ್ನು ಹೊಂದಲು ಸಾಧ್ಯವೆಂದು ಅವರು ಗಟ್ಟಿಯಾಗಿ ನಂಬಿದವರು. ವಿಜ್ಞಾನಿಗಳು ಕಂಡುಹಿಡಿದಿರುವ ಹಲವಾರು ಸಂಗತಿಗಳು ಸಾಮಾನ್ಯರನ್ನು ಒಂದು ಪವಾಡದಂತೆ ನಿಬ್ಬೆರಗುಗೊಳಿಸದಿರ ಲಾರವು. ಮಾನವ ಒಂದು ಗೋಡೆಯಾಚೆಗಿನ ಒಂದು ನೋಟವನ್ನು ಕಾಣಲಾರ, ಉಲಿ ವನ್ನು ಕೇಳಲಾರ. ವಿಜ್ಞಾನಿಯಾದವನು ಮಾತ್ರ ಏಳು ಕಡಲುಗಳಾಚೆಯ ನೋಟವನ್ನೂ ಅರೆಕ್ಷಣದಲ್ಲಿ ತೋರಬಲ್ಲ, ಅಲ್ಲಿಯ ಉಲಿವನ್ನಿಲ್ಲಿ ಕೇಳಿಸಬಲ್ಲನೆಂಬುದು ಅದೆಷ್ಟು ಅದ್ಭುತ ವಾದ ಘಟನೆಯಲ್ಲವೆ! ವಿಜ್ಞಾನಿಗಳು ಅದೆಂತಹ ಪ್ರಚಂಡವಾದ ಸಾಮರ್ಥ್ಯವನ್ನು ನಿರ್ಮಿಸಲಿಲ್ಲವೆ! ತಮ್ಮ ಯತ್ನಗಳಿಗೆ ಯಶ ದೊರೆತಾಗ ವಿಜ್ಞಾನಿಗಳಿಗೆ ಸಂತೋಷ ವಾಗಬಹುದಾದರೂ ಸೋಜಿಗವಾಗಲಾರದು. ಅವರು ಕಾರ್ಯಕಾರಣಭಾವಗಳನ್ನು ಅರಿತವರು. ಸಾಮಾನ್ಯನಲ್ಲಿ ಇಂಥ ಅರಿವಿಲ್ಲದ ಕಾರಣ ಆತನಿಗಿದು ಒಂದು ಪವಾಡವಾಗಿ ಕಂಡೀತು.

ಪ್ರಾಚೀನ ಕಾಲದಲ್ಲಿ ಬಯಕೆಯ ಗುರಿ ಹಾಗೂ ಅದನ್ನು ತಲುಪುವ ಸಾಧನಗಳ ನಡುವಣ ನಂಟು, ಕಾರ್ಯಕಾರಣಭಾವವು ಅರ್ಥವಾಗದ್ದರಿಂದ ಜನ ತಮಗೆ ದೊರೆತ ಯಶಸ್ಸನ್ನೇ 'ಪವಾಡ' ಎಂದುಕೊಂಡರು. ಮಾನವನ ಸಾಮರ್ಥ್ಯದಿಂದ ಕೈಗೂಡದ ಸಂಗತಿಗಳು ತಮ್ಮಳವಿಗೆ ಬರತೊಡಗುತ್ತಲೇ ಉಂಟಾದ ಇಂಥ ಪವಾಡಗಳ ಹಿಂದೆ ಅದಾವುದೋ ದಿವ್ಯ, ದೈವೀ ಹಾಗೂ ಬೃಹತ್ ಸಾಮರ್ಥ್ಯ ಇದೆಯೆಂಬ ನಂಬಿಕೆ ನೆಲೆಸಿತು. ಇಂಥ ಸಾಮರ್ಥ್ಯವನ್ನು ಪಡೆಯಲೆಂದು ಸಾಗಿದ ಯತ್ನಗಳೆಂದರೆ ಯಾತು, ಯಜ್ಞ, ದಾನ, ತಪಸ್ಸು ಮೊದಲಾದ ಪರಿಕಲ್ಪನೆಗಳು. ಶಾಪ/ವರಗಳ ಪರಿಕಲ್ಪನೆ ಮೂಡಿಬಂದುದು ಯಾತು-ವಿದ್ಯೆಯಿಂದಾಗಿ. ಹೀಗಾಗಿ ಮೊದಲು ಯಾತು-ಕ್ರಿಯೆಯನ್ನು ಅರಿತುಕೊಳ್ಳಬೇಕಿದೆ.

# ಯಾತು-ಕ್ರಿಯೆ

ಯಾತು ಎಂದರೆ ಜಾದು, ಇಂದ್ರಜಾಲ. ವಸ್ತುಗಳು ಒಳಗೊಂಡಿರುವ ಸಾಮರ್ಥ್ಯ ವನ್ನು ಯಾತು-ಶಕ್ತಿ ಎಂದೆನ್ನುತ್ತಾರೆ. ಅದನ್ನು ಅರಿತುಕೊಳ್ಳುವುದೇ ಯಾತು-ವಿದ್ಯೆ. ಅದನ್ನರಿತವನು ಯಾತುಧಾನ. ರಾಕ್ಷಸರು ಈ ವಿದ್ಯೆಯನ್ನು ಬಲ್ಲವರಾದಕಾರಣ ಅವರನ್ನು ಯಾತುಧಾನರೆಂದು ಕರೆಯಲಾಗುತ್ತದೆ. ತಮ್ಮ ಈ ಸಾಮರ್ಥ್ಯದಿಂದಾಗಿ ಅವರು ಮನಬಂದಂತೆ ಬಗೆಬಗೆಯ ಆಕಾರಗಳನ್ನು ಹೊಂದಬಲ್ಲವರಾಗಿದ್ದರು. ಈ ವಿಶ್ವದ ಪ್ರತಿಯೊಂದು ವಸ್ತುವಿನಲ್ಲಿ ಒಂದು ಬಗೆಯ ಸುಪ್ತಸಾಮರ್ಥ್ಯವಿದ್ದು ಮಂತ್ರ ಗಳನ್ನು ಸರಿಯಾಗಿ ಉಚ್ಚರಿಸಿ ಅದನ್ನು ಎಚ್ಚೆತ್ತುಕೊಳ್ಳುವಂತೆ ಮಾಡಬಹುದಂಬುದಲ್ಲದ ಅದರ ಮೂಲಕ ತಮ್ಮ ಬಯಕೆಗಳನ್ನು ಈಡೇರಿಸಲು ಸಾಧ್ಯ ಎಂಬುದು ಯಾತು-ಕ್ರಿಯೆಯ ಲೆಕ್ಕಾಚಾರ. ಯಾತುವು ಆದಿಮಾನವನ ಬಾಳಿಗೆ ಮೂಲಾಧಾರವೆನ್ನಿಸಿತ್ತು. ನಿಗೂಢವೂ, ಅನಾಕಲನೀಯವೂ ಆದ ಸಾಮರ್ಥ್ಯವನ್ನವನು ಇಡಿಯಾಗಿ ನಂಬಿದ್ದನು. ಈಶ್ವರನ ಕಲ್ಪನೆ ಅವನ ತಲೆಯನ್ನು ಹೊಕ್ಕಿದ ಕಾರಣ ಭಕ್ತಿಯ ಮೂಲಕ ಅವನನ್ನು ಒಲಿಸಿಕೊಳ್ಳುವ ಪ್ರಶ್ನೆಯೇ ಇರಲಿಲ್ಲ. ಈಶ್ವರ, ಪೂಜೆ, ಬಗೆಬಗೆಯ ಉಪಾಸನಾ ಸಂಪ್ರದಾಯಗಳು, ಯಜ್ಞಗಳು ಮೊದಲಾದ ಪರಿಕಲ್ಪನೆಗಳೆಲ್ಲ ಮೂಡಿದುದು ಸಂಸ್ಕೃತಿಯ ವಿಕಾಸದ ತರುವಾಯದಲ್ಲಿ.

ಮಂತ್ರಗಳನ್ನು ವಿಧಿವತ್ತಾಗಿ ಉಚ್ಚರಿಸಿದರೆ ಇಚ್ಛಾಶಕ್ತಿ ಹೆಚ್ಚೆಯೇ ಹೆಚ್ಚುತ್ತದೆ. ಹೀಗಾಗುವಲ್ಲಿ ಯಾರ ಇಚ್ಛೆ, ಕೃಪೆ ಇಲ್ಲವ ಅವಕೃಪೆಯ ಪ್ರಶ್ನೆಯೇ ಹುಟ್ಟಿಕೊಳ್ಳದು. ಹೀಗೆಂದಬಳಿಕ ಯಾತುವಿನ ಪರಿಕಲ್ಪನೆಯಲ್ಲಿ ಈಶ್ವರನ ಪ್ರಸನ್ನತೆಗಾಗಲಿ, ಕೋಪತಾಪ ಗಳಿಗಾಗಲಿ ಸ್ಥಾನವಿಲ್ಲ, ನೈತಿಕತೆಗೂ ಅವಕಾಶವಿಲ್ಲ. **What is ritually correct is ethically right.**

ಯಾತು-ಕ್ರಿಯೆಯು ಧರ್ಮಪರಿಕಲ್ಪನೆಯ ಪ್ರಾಥಮಿಕವಾದ ಅವಸ್ಥೆಯೆನ್ನಿಸಿದೆ. ಫ್ರೇಜರ್‌ನ ಅಭಿಪ್ರಾಯದಲ್ಲಿ ಇದು ವಿಜ್ಞಾನದ ಮೊದಲ ಹಂತವೂ ಅಹುದು. ಇವೆರಡೂ ಸಮನಾಗಿ ನಂಬಿದುದು ಈ ಸಾಮರ್ಥ್ಯವನ್ನು. ವ್ಯತ್ಯಾಸವಿರುವುದು ಇವುಗಳ ಸಾಧನೆಗಳಲ್ಲಿ. ವಿಜ್ಞಾನಿಯ ಒತ್ತು ಇರುವುದು ಅನುಭವ, ಪ್ರಯೋಗಗಳ ಮೇಲೆ. ಯಾತು-ಕ್ರಿಯೆಯ ಒತ್ತು ಮಾತ್ರ ಮಂತ್ರ-ತಂತ್ರಗಳ ಮೇಲೆ. ವಿಜ್ಞಾನಿಯು ಬುದ್ಧಿ ಮತ್ತೆಯನ್ನು ಊರುಗೋಲನ್ನಾಗಿ ಬಳಸುತ್ತಾನೆ. ಆದರೆ ಯಾತು-ಕ್ರಿಯೆಗೆ ನೀರೆರೆವ ಸಂಗತಿಗಳೆಂದರೆ ನಿಗೂಢತೆ, ಮಂಕುಬುದ್ಧಿ, ಕುರುಡುನಂಬಿಕೆಗಳು. ಫ್ರೇಜರ್ ಇವರೆಡ ರಲ್ಲಿಯ ವ್ಯತ್ಯಾಸವನ್ನು ಬಲುಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾನೆ. **Legitimately applied, they yield science, illegitimately applied they yield magic, the bastard sister of science.** ವಿಶಿಷ್ಟವಾದ ಮಂತ್ರಗಳು ಹಾಗೂ ಅವುಗಳ ವಿಶಿಷ್ಟವಾದ ವಿಧಿಗಳೆಂದರೇನೆ ತಂತ್ರಗಳು. ಇಂತಹ ಯಾತುಗಳನ್ನೊಳಗೊಂಡ ಕ್ರಿಯೆಗಳ ಮೂಲಕವೇ ಪ್ರಾಥಮಿಕ ಅವಸ್ಥೆಯ ಮಾನವನು ತನ್ನ ಬಯಕೆಗಳನ್ನು ಈಡೇರಿಸಿಕೊಳ್ಳುತ್ತಿದ್ದನು. ತಂತ್ರವಿದ್ಯೆಯಲ್ಲಿ ಶಿವ-ಶಕ್ತಿ, ಪ್ರಕೃತಿ-ಪುರುಷರ ಕೂಟ

ಗಳಿಗೆ ಪ್ರಾಮುಖ್ಯತೆ ಒದಗುತ್ತದೆ. ಇವುಗಳಿಂದಾಗಿಯೇ ಶಿವಪೂಜೆ, ಲಿಂಗಪೂಜೆ, ಶಕ್ತಿ ಪೂಜೆ, ಪಶುಬಲಿ, ನರಬಲಿಗಳ ಪರಿಕಲ್ಪನೆಗಳು ಜನ್ಮ ತಳೆದುಬಂದವು. ಶಕ್ತಿಪೂಜೆಯಲ್ಲಿ ವಾಮಾಚರಣೆ, ಸ್ವೈರಾಚರಣೆ ನೇರಿಕೊಂಡುದರಿಂದಾಗಿ ಹಲವು ಸಂಪ್ರದಾಯಗಳಲ್ಲಿ ಅನಿಷ್ಟವಾದ ನಡೆವಳಿಕೆಗಳು ರೂಢಿಯಲ್ಲಿ ಬಂದವು.

## ಯಜ್ಞ-ಕರ್ಮ

ಭಾರತದ ಆರ್ಯೇತರ ಪಂಗಡಗಳು ತಮ್ಮ ಪ್ರಾಥಮಿಕ ಅಗತ್ಯಗಳು ಹಾಗೂ ಬಯಕೆಗಳನ್ನು 'ತಂತ್ರ'ವಿದ್ಯೆಯಿಂದ ಈಡೇರಿಸಿಕೊಳ್ಳುತ್ತಿದ್ದವು. ಇದೇ ರೀತಿಯಾಗಿ ವೈದಿಕ ಆರ್ಯರು ಇವುಗಳನ್ನು ಈಡೇರಿಸಿಕೊಳ್ಳುವ ಸಾಧನೆಗಳಿಗೆ 'ಯಜ್ಞ'ವೆಂಬ ಹೆಸರು. ಯಜ್ಞದ ಪರಿಕಲ್ಪನೆಯು ಹುಟ್ಟಿಬಂದುದು ಕೂಡ ಯಾತುವಿನಿಂದಲೇ. ಮಾನವವಂಶವಿಜ್ಞಾನಿ ಆ್ಯಂಡ್ರೂ ಲ್ಯಾಂಗ್ ಯಜ್ಞದ ಬಗೆಗೆ ಹೀಗೆನ್ನುತ್ತಾನೆ :

'ಒಟ್ಟಿನಲ್ಲಿ, ಋಷಿಗಳ ಧರ್ಮದ ಸ್ವರೂಪ ವ್ಯಾವಹಾರಿಕವಾದುದು, ಯಾತುವನ್ನೊಳಗೊಂಡುದೆನ್ನಬಹುದು. ಕಾಲಕ್ಕನುಗುಣವಾಗಿ ವರ-ಹರಕೆ, ಮಳೆ, ಸೂರ್ಯಪ್ರಕಾಶ, ದೀರ್ಘಾಯುಸ್ಸು, ಸಾಮರ್ಥ್ಯ ಹಾಗೂ ದನಕರುಗಳ ಹಿಂದಿನ ಸಂಪತ್ತು ಮೊದಲಾದವುಗಳನ್ನು ಪಡೆಯಬೇಕೆಂಬ ನೈಸರ್ಗಿಕವಾದ ಬಯಕೆ ಅವರದಾಗಿತ್ತು. ತಮ್ಮ ತುಂಬು ವೇಳೆ ಹಾಗೂ ವಿಚಾರಶಕ್ತಿಯನ್ನು ಯಜ್ಞವಿಧಿಗಳಿಗಾಗಿ ವೆಚ್ಚಮಾಡುತ್ತಿದ್ದರು. ಇವುಗಳ ಗುರಿ ಮಾತ್ರ ತಮಗೆ ಒಳ್ಳೆಯ ಸಂಗತಿಗಳು ದಕ್ಕಲೆಂಬುದೇ ಆಗಿರುತ್ತಿತ್ತು. ಯಜ್ಞ ಹಾಗೂ ಯಜ್ಞಕರ್ತರು ದೇವ—ಮಾನವರ ನಡುವಣ ಮಧ್ಯಸ್ಥರೆನ್ನಿಸಿದರು. ಶ್ರದ್ಧೆ, ಔದಾರ್ಯ, ಪ್ರಾರ್ಥನೆ, ಸಾಮರ್ಥ್ಯ ಹಾಗೂ ಉತ್ಕಟವಾದ ಬಯಕೆಗಳು ಮಾನವನ ಜಮೆಯ ಬದಿಯೆನ್ನಿಸಿವೆ. ದೇವನು ಯಜ್ಞಕರ್ತನ ಆಸೆಯನ್ನು ಈಡೇರಿಸುವಂತೆ ಮಾಡುವುದೇ ಯಜ್ಞದ ಸಮರ್ಥನಾಧನ ಎನ್ನಿಸಿದೆ.[3]

ಯಜ್ಞ ಪದವು ಬಂದುದು ಯಜ್ ಧಾತುವಿನಿಂದ. ಯಜ್ ಎಂದರೆ ದೇವರ ಪೂಜೆ, ಜೊತೆಯಾಗಿರುವುದು ಹಾಗೂ ದಾನ ಎಂದರ್ಥ. ತಮಗಿಂತಲೂ ಹಿರಿಯನಾದವನನ್ನು ದೇವನೆಂದು ಬಗೆದು ಪೂಜೆಗೈಯುವುದು, ಮಮತೆಯಿಂದ ತನ್ನ ಸಂಗಡಿಗರನ್ನು ಕಲೆ ಹಾಕುವುದು, ಒಕ್ಕಟ್ಟನ್ನುಂಟುಮಾಡುವುದು, ಅಲ್ಲದೆ ತನಗಿಂತ ಕಿರಿಯರಾದವರಿಗೆ ಏನನ್ನಾದರೂ ನೀಡಬೇಕೆನ್ನುವುದೇ ಯಜ್ಞ ಪದದಿಂದ ವ್ಯಕ್ತಗೊಳ್ಳುವ ಅರ್ಥವಂತಿಕೆ, ಆಶಯ. ಯಜ್ಞ-ಕರ್ಮವು ಸನ್ಮಾನ, ಸಂಘಟನೆ ಹಾಗೂ ದಾನಗಳ ಈ ಮೂರು ಸಿದ್ಧಾಂತಗಳಿಂದ ಕೂಡಿದುದು. ವ್ಯಕ್ತಿಯು ತನ್ನ ಕರ್ತವ್ಯದ ಜೊತೆಗೆ ಸಮಾಜವನ್ನು

---

**3. 'On the whole the religion of the Rishis is practical; it might also be said, is magical. They desire temporal blessings, rain, sunshine, long life, power, wealth in flocks and herds. The whole purpose of the sacrifices, which occupy so much of their time and thought is to obtain good things. The sacrifice and the sacrificer came between gods and men. On the man's side is faith, munificence, a compelling force of prayer and intenseness of will; the sacrifice invigorates the gods to do the will of the sacrificer.'**

—ವೈದಿಕಯಜ್ಞ, ತಂತ್ರಸಾಧನಾ, ಭಕ್ತಿಯೋಗ, ಪು. ೫೨

ಕುರಿತ ಕರ್ತವ್ಯದ ಬಗೆಗೂ ಎಚ್ಚರ ತಾಳಬೇಕೆಂಬುದೇ ಯಜ್ಞದ ಪರಿಕಲ್ಪನೆಯಲ್ಲಿ ಧ್ವನಿತಗೊಳ್ಳುತ್ತದೆ.[4] ಯಜ್ಞ ತ್ಯಾಗಕ್ಕೆ ಒತ್ತುನೀಡುವ ಒಂದು ಕೃತಿ. ಮೊದಲಿಗೆ ಅದು ಅಸುರರ ಬಳಿಯಿತ್ತು. ಆಮೇಲೆ ದೇವತೆಗಳಲ್ಲಿಗೆ ಬಂದಿತು. ಮುಂದೆ, ಋಷಿಗಳು ಅಂದರೆ ಮಾನವರು ಅದನ್ನು ಪಡೆದುಕೊಂಡರು. ಈ ಸಂಗತಿಯ ಬಗೆಗೆ ಮಾತ್ರ ಒಮ್ಮತವಿಲ್ಲ. ಯಾಚ್ ಧಾತುವಿನಿಂದಲೂ ಯಜ್ಞದ ವ್ಯುತ್ಪತ್ತಿಯನ್ನು ಹೇಳಲಾಗುತ್ತದೆ. ಯಜ್ಞದಲ್ಲಿ ಯಾಚನೆ ಇರುವುದೇ ಇದಕ್ಕೆ ಕಾರಣ.

ಬೆಂಕಿಯ ಸಾಮರ್ಥ್ಯವನ್ನು ಕಂಡುಹಿಡಿಯುತ್ತಲೇ ಮಾನವನ ಬಾಳಿನಲ್ಲಿ ಬಲುದೊಡ್ಡ ಕ್ರಾಂತಿಯಾಯಿತು. ಹೀಗಾಗಿ ಬೆಂಕಿಯು ದೇವತ್ವವನ್ನು ಪಡೆದು ಅಗ್ನಿದೇವನೆನ್ನಿಸಿತು. ಅವನನ್ನು ಪ್ರಸನ್ನಗೊಳಿಸಲೆಂದೇ ಹಲವು ಬಗೆಯ ಉಪಾಸನೆಗಳು ಆರಂಭಗೊಂಡವು. ಅವನು ಪ್ರಸನ್ನನಾದರೆ ತಮ್ಮ ಬಯಕೆಗಳೆಲ್ಲ ಈಡೇರುವವೆಂಬ ನಂಬಿಕೆಯೊಂದಿಗೆಯೇ ಅವನ ಕೋಪದಿಂದಾಗಿ ತಾವು ಅನಿಷ್ಟಗಳಿಗೆ ಒಳಗಾಗುವೆವೆಂಬ ಹೆದರಿಕೆ ಹುಟ್ಟಿಕೊಂಡಿತು. ಹೀಗಾಗಿ ತಮ್ಮ ಇಷ್ಟದೇವತೆಯಾದ ಅಗ್ನಿಯನ್ನು ಸಂತುಷ್ಟಗೊಳಿಸಲೆಂದು ಜನ ಹುಟ್ಟು ಹಾಕಿದ ಹೊಸ ವಿಧಾನವೇ ಯಜ್ಞ.

ಬೆಂಕಿಗೆ ಆಹುತಿಯನ್ನು ನೀಡುತ್ತಲೇ ಅದು ಆ ಆಹುತಿಯನ್ನು ಕೊಂಡೊಯ್ದು ಇಷ್ಟದೇವತೆಗೆ ತಲುಪಿಸುವನು. ಹೀಗಾಗಿ ತಮ್ಮ ಮನದ ಆಸೆಗಳು ಈಡೇರುವವೆಂಬ ನಂಬಿಕೆ ಬೇರೂರಲಾರಂಭಿಸಿತು. ಇಲ್ಲಿ ಬರಿ ಕೊಡು-ಕೊಳ್ಳುವ ಕ್ರಿಯೆಯಷ್ಟೇ ಇರದೆ ಯಾವಾತ್ಮಕವಾದ ಕ್ರಿಯೆಯ ಮೂಲಕ ಆ ದೇವತೆಯ ಸಾಮರ್ಥ್ಯವನ್ನು ಹೆಚ್ಚಿಸುವ ಒಂದು ಬದಿಯೂ ಇತ್ತು. ಭಗವದ್ಗೀತೆಯಲ್ಲೂ ಇಂಥ ಕೊಡು-ಕೊಳ್ಳುವ ವಿಚಾರ ಬಂದಿದೆ. 'ಯಜ್ಞದ ಮೂಲಕ ದೇವತೆಗಳನ್ನು ಸಂತೋಷಗೊಳಿಸಿರಿ. ಅಂದರೆ ಅವರು ನಿಮಗೆ ಐಸಿರಿಯನ್ನು ಒದಗಿಸುವರು. ಈ ಬಗೆಯಾಗಿ ಒಬ್ಬರನ್ನೊಬ್ಬರು ಅಭಿವೃದ್ಧಿಗೊಳಿಸುತ್ತ ಶ್ರೇಷ್ಠಮಟ್ಟದ ಕಲ್ಯಾಣವನ್ನು ಸಾಧಿಸಿರಿ'[5] ಈ ಶ್ಲೋಕದ 'ಭಾವಯತ' ಪದದ ಅರ್ಥ ಶಕ್ತಿವಂತನನ್ನಾಗಿ ಮಾಡು ಎಂದಾಗಿದೆ. ಋಗ್ವೇದದ ತುಂಬೆಲ್ಲ ಕಾಣುವ ಕೊಡು-ಕೊಳ್ಳುವಿಕೆಯ ಭಾವನೆಯ ಹಿಂದೆ ಭಾವಿತರನ್ನಾಗಿ ಮಾಡುವ ಕಲ್ಪನೆ ಇದ್ದೇಯಿದೆ. ದೇವತೆಗೆ ಆಹುತಿಯನ್ನು ನೀಡಿ ಅವಳನ್ನು ಸಂತೋಷಗೊಳಿಸಿದರೆ ತಮ್ಮ ಮನದಾಸೆ ಕೈಗೂಡಿಯೇ ತೀರುವುದೆಂಬ ಕೆಚ್ಚು ಇದೆ.

ಭಗವದ್ಗೀತೆಯು ಕರ್ತವ್ಯಬುದ್ಧಿಯಿಂದ ಪ್ರೇರಿತರಾಗಿ ಫಲದ ಆಸೆ ತಳೆಯದೆ ಕೈಕೊಂಡ ಕರ್ಮವನ್ನೇ ಯಜ್ಞವೆಂದೆನ್ನುತ್ತದೆ. ಯಜ್ಞವೆಂದರೆ ಪೂಜ್ಯವ್ಯಕ್ತಿಯ ಸಲವಾಗಿ ಕೈಕೊಳ್ಳಲಾಗುವ ತ್ಯಾಗ. ಧರ್ಮಕಲ್ಪನೆಯೂ ಕೂಡ ಯಜ್ಞಕ್ಕೆ ಸಂಬಂಧಿಸಿದೆ. ಯಜ್ಞದಲ್ಲಿ ಪರಮೇಶ್ವರನ ಅಸ್ತಿತ್ವ ಅಗತ್ಯದ್ದು. ಈ ನಿಸರ್ಗಚಕ್ರ ಉರುಳುತ್ತಿರುವುದು ಅವನ ಕೃಪೆಯಿಂದಾಗಿಯೇ. 'ಆಹಾರದಿಂದಾಗಿ ಪ್ರಾಣಿಗಳು ಜನ್ಮತಳೆಯುವವು, ಮಳೆ

---

4. ಭಾರತೀಯ ಸಂಸ್ಕೃತಿ ಕೋಶ, ಖಂಡ ೭, ಪು. ೫೯೯

5. ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ —ಭಗವದ್ಗೀತೆ, ೩/೧೧

ಯಿಂದಾಗಿ ಆಹಾರದ ಹುಟ್ಟು, ಯಜ್ಞದಿಂದ ಮಳೆ, ಹಾಗೂ ಕರ್ಮದಿಂದಾಗಿಯೇ ಯಜ್ಞ. ಕರ್ಮದ ಹುಟ್ಟು ಬ್ರಹ್ಮನಿಂದ ಅಂದರೆ ಪ್ರಕೃತಿಯಿಂದ (ಎಂಬ ಈ ಅರಿವು), ಹಾಗೂ ಬ್ರಹ್ಮನ ಹುಟ್ಟು ಅಕ್ಷರದಿಂದ ಅಂದರೆ ಪರಮಾತ್ಮನಿಂದ. ಹೀಗಾಗಿ ಸರ್ವವ್ಯಾಪಿಯಾದ ಈ ಬ್ರಹ್ಮ ಯಾವಾಗಲೂ ಯಜ್ಞದಲ್ಲಿ ಅಧಿಷ್ಠಿತನು.[6] ಅಂದರೆ, ಚಿತ್ತಶುದ್ಧಿಗಾಗಿ ಯಜ್ಞವನ್ನು ಅಂದರೇನೆ ಸರಿಯಾದ ಕರ್ಮವನ್ನು ಕೈಕೊಳ್ಳತಕ್ಕದ್ದೆಂದು ವೇದದ ಪ್ರತಿಪಾದನೆಯಾಗಿದೆ. ಯಜ್ಞವು ವಿಶ್ವನಿರ್ಮಾಣದ ಮೊದಲ ಕರ್ಮವೆನ್ನಿಸಿದೆ. ಇದರ ಮೂಲಕ ಸಮಾಜದ ಪರಿಪೋಷಣೆ ಸಾಗುತ್ತದೆ.

ಸಿರಿಸಂಪತ್ತನ್ನು ಗಳಿಸಲೆಂದು ವ್ಯಕ್ತಿಗತವಾದ ಯಜ್ಞಗಳು ಜರುಗುತ್ತಿದ್ದವು. ಅದೇ ರೀತಿಯಾಗಿ ಸಮಾಜದ ಕಲ್ಯಾಣವನ್ನು ಬಯಸಿ ಕೂಡ ಅವುಗಳನ್ನು ಹೂಡಲಾಗುತ್ತಿತ್ತು. ಇಂಥ ಯಜ್ಞಗಳಿಂದಾಗಿ ಒಬ್ಬನ ಬದಲು ಹಲವರಿಗೆ ಲಾಭ ದಕ್ಕುತ್ತಿತ್ತು. ಪರಿವಾರ, ಸಮಾಜ, ದೇಶ, ರಾಜ್ಯ ಹಾಗೂ ವಿಶ್ವದ ಕಲ್ಯಾಣಕ್ಕಾಗಿಯೂ ಯಜ್ಞಗಳನ್ನು ಕೈಕೊಳ್ಳಲಾಗುತ್ತಿತ್ತು. ಮಳೆ, ರೋಗನಿವಾರಣೆ, ಹಗೆಗಳ ದಾಳಿಗಳಿಂದ ರಕ್ಷಣೆ, ಸಮಾಜವನ್ನು ಹಾಳಾಗದಂತೆ ಕಾಪಾಡುವುದು, ಅರಸನ ಅಭ್ಯುದಯ, ರಾಜ್ಯಕ್ಕೆ ಹಾನಿ ತಟ್ಟದಿರಲೆಂದು ಕೂಡ ಯಜ್ಞಗಳನ್ನು ನೆರವೇರಿಸಲಾಗುತ್ತಿತ್ತು.

ಭಗವದ್ಗೀತೆಯ ಹದಿನೇಳನೆಯ ಅಧ್ಯಾಯದಲ್ಲಿ ಯಜ್ಞದ ಮೂರು ಲಕ್ಷಣಗಳ ಬಗೆಗೆ ಹೇಳಲಾಗಿದೆ. ಫಲದಾಸೆಯನ್ನು ತಾಳದೆ ಶಾಂತವಾದ ಮನದಿಂದಲೂ, ಕರ್ತವ್ಯಬುದ್ಧಿಯಿಂದಲೂ ಶಾಸ್ತ್ರವಿಧಿಗಳನ್ನನುಸರಿಸಿ ಕೈಕೊಳ್ಳಲಾದ ಯಜ್ಞವು ಸಾತ್ವಿಕವಾದುದು. ಫಲಾಪೇಕ್ಷೆಯನ್ನು ಇರಿಸಿಕೊಂಡು ಡಾಂಭಿಕತೆಯಿಂದ ಹೂಡಿದ ಯಜ್ಞ ರಾಜಸವೆನ್ನಿಸಿದೆ. ಶಾಸ್ತ್ರವಿಧಿಗಳನ್ನು ಮೀರಿ, ಅನ್ನದಾನವಿಲ್ಲದೆಯೆ, ಮಂತ್ರಗಳು ಹಾಗೂ ದಕ್ಷಿಣೆಗಳಿಲ್ಲದೆಯೆ ಎಸಗಲಾದ ಶ್ರದ್ಧಾಹೀನವಾದ ಯಜ್ಞವು ತಾಮಸವಾದುದು.[7]

ಡಾ॥ ಸ. ರಾ. ಗಾಡಗೀಳರು ಯಜ್ಞವನ್ನು ಕುರಿತು ಹೀಗನ್ನುತ್ತಾರೆ : 'ವಿಶಿಷ್ಟವಾದ ಮಂತ್ರಗಳು ಹಾಗೂ ಯಥಾಸಾಂಗವಾದ ಕರ್ಮಗಳ ತಂತ್ರಶುದ್ಧವಾದ ಪ್ರಯೋಗಗಳ ಮೂಲಕ ನಿಸರ್ಗದಲ್ಲಿಯ ಶಕ್ತಿಗಳನ್ನು ಹಿಡಿತಕ್ಕೆ ತಂದುಕೊಳ್ಳಲು ಸಾಧ್ಯ ಎಂದೆನ್ನುವ ಯಾತುವಿನ ಪರಿಕಲ್ಪನೆಯ ಅಡಿಗಲ್ಲ ಮೇಲೆಯೇ ಯಜ್ಞವಿಧಿಯನ್ನು ತಯಾರಿಸಲಾಗಿದೆ. ಆಸೆಯ ಈಡೇರಿಕೆಗಾಗಿ ದಯಾಘನನೂ ವ್ಯಕ್ತಿರೂಪಿಯೂ ಆದ ಪರಮೇಶ್ವರನ

---

6. ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥
ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।
ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥ —ಭಗವದ್ಗೀತೆ, ೩/೧೪-೧೫

7. ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।
ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥
ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥
ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ —ಭಗವದ್ಗೀತೆ, ೧೭/೧೧-೧೩

ಶಕ್ತಿಯ **(personal agent)** ಅಗತ್ಯ ಯಾತು-ಕ್ರಿಯೆಯಲ್ಲಿಲ್ಲ. ಯಜ್ಞಕ್ಕೂ ಅದರ ಅಗತ್ಯವಿಲ್ಲ. ಮಂತ್ರಗಳಿಂದ ಕೂಡಿದ ಯಜ್ಞದ ವಿಧಿಗಳಲ್ಲಿ ಸ್ವಯಂಭೂ ಎನ್ನಿಸಿದ ಸಾಮರ್ಥ್ಯ ಇರುತ್ತದೆ. ಯಾಚಕನ ಮನದಿಚ್ಛೆಯನ್ನು ಈಡೇರಿಸುವ ಇಲ್ಲವೆ ಈಡೇರಿಸ ದಿರುವ ಸಂಗತಿ ದೇವತೆಯ ಕೈಯಲ್ಲಿಲ್ಲ. ಕಾರ್ಯಾಚರಣೆ ಚಾಚೂ ತಪ್ಪದೆ ಸಾಗಿದರೆ ಫಲಪ್ರಾಪ್ತಿಯಾಗಲೇಬೇಕು. ಇಲ್ಲಿ, ತಪ್ಪದಂತೆ ಉಚ್ಚರಿಸಲಾಗುವ ಮಂತ್ರಗಳು ಹಾಗೂ ವಿಧಿಯುಕ್ತವಾದ ಕಾರ್ಯಾಚರಣೆಗಳು ಮುಖ್ಯ. ಇವುಗಳಲ್ಲಿ ಎಳ್ಳಷ್ಟೂ ಕುಂದು ಇರಕೂಡದು. ಯಜ್ಞ ಸಾಗಿದಾಗ ಅದರ ಕರ್ಮಾಚರಣೆಯಲ್ಲಿ ಲೋಪದೋಷಗಳು ಉಂಟಾಗದಂತೆ ಎಚ್ಚರವಹಿಸಲು ಬ್ರಹ್ಮನೆಂಬ ಒಬ್ಬ ಋತ್ವಿಜನಿರುತ್ತಾನೆ. ಈತನು ಮೃತ್ಯುವಿನ ದಿಕ್ಕಾದ ದಕ್ಷಿಣ ದಿಸೆಯನ್ನು ಕಾಯಲೆಂದು ಯಜ್ಞವೇದಿಯ ದಕ್ಷಿಣಕ್ಕೆ ಕುಳಿತಿರುತ್ತಾನೆ. ಯಜ್ಞಕರ್ಮವು ವಿಧಿವತ್ತಾಗಿ ಸಾಗಿದೆಯೋ ಹೇಗೆಂಬುದನ್ನು ಗಮನಿಸು ವುದಷ್ಟೇ ಈತನ ಕೆಲಸ. ಯಜ್ಞಕರ್ಮದಲ್ಲಿ ಕುಂದುಂಟಾದರೆ ಯಜ್ಞಕರ್ತನಿಗೆ ಫಲ ದೊರೆಯುವ ಬದಲು ಆತ ಸಾವಿಗೀಡಾಗುವ ಹೆದರಿಕೆ ಇರುತ್ತದೆ. 'ನಾನು ಹೇಗೆ ಹಾಡಿದರೂ ನಿನ್ನವನೇ' ಎಂದೆನ್ನುವ ಭಕ್ತಿವಿಚಾರಕ್ಕೆ ಇಲ್ಲಿ ಆಸ್ಪದವಿಲ್ಲ. ಏಕೆಂದರೆ ಇಲ್ಲಿ 'ಫಲವನ್ನೀಯುವ ಕೆಲಸ ದೇವತೆಗಳದಲ್ಲವೇ ಅಲ್ಲ. ಅವರಿರುವುದು ಹೆಸರಿಗೆ ಮಾತ್ರ.' ತಮ್ಮ ಈ ಹೇಳಿಕೆಯ ಪುಷ್ಟಿಗಾಗಿ ಅವರು ಡಾ॥ ರಾ. ನಾ. ದಾಂಡೇಕರರ ಅಭಿಪ್ರಾಯ ವನ್ನು ಮುಂದೊಡ್ಡಿದ್ದಾರೆ.[8] ದೇವತೆಗಳಿಗೆ ಯಜ್ಞಗಳಿಂದಾಗಿಯೇ ದೇವತ್ವ ಬಂದಿದೆ ಯೆಂಬ ಕಲ್ಪನೆ ಎಲ್ಲೆಡೆಗಳಲ್ಲೂ ಇರುವಂತಿದೆ.

ತರ್ಕತೀರ್ಥ ಲಕ್ಷ್ಮಣಶಾಸ್ತ್ರಿ ಜೋಶಿಯವರು ಡಾ॥ ಗಾಡಗೀಳರ ಈ ಅಭಿಪ್ರಾಯವನ್ನು ಒಪ್ಪರು.[9] ಅವರು ಹೀಗನ್ನುತ್ತಾರೆ: 'ಭಕ್ತಿಯು ಪ್ರೇಮಭಾವನೆಯ ಒಂದು ವಿಶಿಷ್ಟ ವಾದ ಬಗೆ. ಇದನ್ನೇ ನಿಷ್ಠೆ ಎಂದೂ ಅನ್ನುತ್ತಾರೆ...ಯಜ್ಞವಿಧಿಯಲ್ಲಿ ಮತ್ತೆಮತ್ತೆ ವ್ಯಕ್ತಗೊಳ್ಳುವುದು ಇದೇ ನಿಷ್ಠೆ...ಮಾನವಶಾಸ್ತ್ರದ ಹೇಳಿಕೆಯಂತೆ ಯಜ್ಞವಿಧಿ ಎಂದರೆ ಬರಿ ಯಾತು-ವಿಧಿ ಎನ್ನಿಸದು. ಹೀಗನ್ನಲು ಕಾರಣವೆಂದರೆ ಅಲೌಕಿಕವಾದ ಶಕ್ತಿಯನ್ನು ಇಡಿಯಾಗಿ ತನ್ನ ಕೈವಶಮಾಡಿಕೊಳ್ಳುವ ಪ್ರಕ್ರಿಯೆ ಯಾತು-ಕ್ರಿಯೆಯಲ್ಲಿ ಇದ್ದು ವೈದಿಕ ಯಜ್ಞವಿಧಿಯಲ್ಲಿ ಹಾಗಿಲ್ಲ. ದೇವತೆಗಳಿಗೆ ಶರಣುಹೋಗುವ ಭಾವನೆ ಯಜ್ಞ ದಲ್ಲಿ ಮುಖ್ಯವೆನ್ನಿಸಿದೆ. ಯಜ್ಞದಿಂದ ದೇವತೆಗಳು ವಶರಾಗಲು ಅದು ಅರ್ಪಣವಿಧಿ ಎನ್ನಿಸಿರುವುದೇ ಕಾರಣ. ಯಜ್ಞದಲ್ಲಿ ಯಾತು-ಕ್ರಿಯೆಯೂ ಸೇರ್ಪಡೆಯಾಗಿತ್ತು ಎಂಬ ಮಾತಿಗೆ ಎರಡಿಲ್ಲ. ಅಂದಮಾತ್ರಕ್ಕೆ ವೈದಿಕಯಜ್ಞ ಎಂದರೆ ಬರಿ ಯಾತು-ಕ್ರಿಯೆ ಅಲ್ಲ ...ಕೊಂಚವೂ ಯಾತುವಿಲ್ಲದ ಒಂದೂ ಧರ್ಮ ಈ ವಿಶ್ವದಲ್ಲಿಲ್ಲ ಪವಾಡಗಳು ನಡೆ ಯುವುದು ಅದರಿಂದಾಗಿಯೇ. ಹೀಗಾಗಿ, ಧರ್ಮವೇ ಪವಾಡಗಳನ್ನು ಹುಟ್ಟುಹಾಕು ತ್ತದೆಂದು ಎಲ್ಲರೂ ನಂಬುತ್ತಾರೆ. ಮಾನವೀಯ ಬಯಕೆಯ ಸರ್ವಶಕ್ತಿಮತ್ತೆಯೇ

---

8. **Sacrifice is regarded as possessing a mystical potence superior even to gods who, it is sometimes stated attained to their rank by means of sacrifice.**
—ವೈದಿಕಯಜ್ಞ, ತಂತ್ರಸಾಧನಾ, ಭಕ್ತಿಯೋಗ, ಪು ೪೭

9. ವೈದಿಕಯಜ್ಞ, ತಂತ್ರಸಾಧನಾ, ಭಕ್ತಿಯೋಗ—ಮುನ್ನುಡಿ, ಪು. ೧೫

**(omnipotence of will)** ಇಂದ್ರಜಾಲದ ಸಿದ್ಧಾಂತವೆನ್ನಿಸಿದ್ದು ಇದರ ಉನ್ನತವಾದ ರೂಪು ಎಂದರೆ ವ್ಯಕ್ತಿರೂಪನಾದ ಪರಮೇಶ್ವರನ ಪರಿಕಲ್ಪನೆ...' ಭಕ್ತಿಪ್ರಧಾನವಾದ ಧರ್ಮ ಎಂದರೆ ಯಾತುವಿನ ವಿಕಸನಗೊಂಡ ಸ್ವರೂಪ.

## ದಾನ

ದಾನದ ಸ್ವರೂಪ, ಹಿರಿಮೆ, ಫಲ ಮೊದಲಾದವುಗಳನ್ನು ಕುರಿತು ಅನುಶಾಸನ ಪರ್ವದ ೫೭ರಿಂದ ೮೦ನೆಯ ಅಧ್ಯಾಯಗಳಲ್ಲಿ ವಿಸ್ತಾರಪೂರ್ವಕವಾಗಿ ಬಣ್ಣಿಸಲಾಗಿದೆ. ದಾನ ಒಂದು ಬಗೆಯ ಯಜ್ಞ ಎನ್ನಿಸಿದೆ. ಯಜ್ಞಕರ್ಮವು ದಾನವನ್ನು ಒಳಗೊಂಡಿರುತ್ತದೆ. ದಾನವನ್ನು ನೀಡುವ ಅಧಿಕಾರ ಕ್ಷತ್ರಿಯರಿಗಿದ್ದರೂ ಅದನ್ನೇ ತಡೆಯುವ ಅಧಿಕಾರ ಮಾತ್ರವಿಲ್ಲ. ಇಕ್ಷ್ವಾಕುರಾಜನ ಕೋರಿಕೆಯ ಮೇರೆಗೆ ಕೌಶಿಕ ಬ್ರಾಹ್ಮಣನು ತನ್ನ ಜಪದ ಫಲವನ್ನು ಕೊಡಮಾಡಿದಾಗ ಇದೇ ಕಾರಣಕ್ಕಾಗಿಯೇ ಇಕ್ಷ್ವಾಕನು ಅದನ್ನು ಪಡೆಯಲು ಒಪ್ಪಿಕೊಳ್ಳಲಿಲ್ಲ (ಶಾಪ, ಕ್ರ. ೧೦೬). ನೆಲ, ಹಸು ಹಾಗೂ ಹೊನ್ನಿನ ದಾನ ಬಲು ಪವಿತ್ರವಾದುದೆಂದೂ, ಶ್ರೇಷ್ಠವಾದುದೆಂದೂ ತಿಳಿಯಲ್ಪಡುತ್ತದೆ. ಇವುಗಳಲ್ಲೂ ನೆಲದ ದಾನ ಎಲ್ಲಕ್ಕೂ ಶ್ರೇಷ್ಠವಾದುದು.[10] ಗೋವುಗಳು, ಎತ್ತುಗಳು, ಬಗೆಬಗೆಯ ಪದಾರ್ಥಗಳು, ಬಟ್ಟೆಗಳು, ಕೊಡೆಗಳು ಹಾಗೂ ಮೆಟ್ಟುಗಳನ್ನು ದಾನವಾಗಿ ಕೊಡೆಂದು ಭೀಷ್ಮನು ಯುಧಿಷ್ಠಿರನಿಗೆ ಹೇಳಿದ್ದಾನೆ. ತಮಗೆ ಪ್ರಿಯವಾದ ಸಂಗತಿಗಳನ್ನು ದಾನವಾಗಿ ಕೊಡಬೇಕು. ದಾನದಲ್ಲಿ ಕೇಳಿದ (ಯಾಚಿತ) ಹಾಗೂ ಕೇಳದ (ಅಯಾಚಿತ) ಎಂಬೆರಡು ಬಗೆಗಳು. ಕೇಳದೆ ಬಂದ ದಾನವು ಕೇಳಿ ಬಂದುದಕ್ಕಿಂತಲೂ ಶ್ರೇಷ್ಠವಾದುದು. ಇಲ್ಲಿ ಪಡೆವವನಿಗೆ ಅದು ದಯೆಯಿಂದಾಗಿ ಬಂದುದು. ಕೇಳದವನಿಗ ಸ್ವಯಂಸ್ಫೂರ್ತಿಯಿಂದಲೇ ಇಕ್ಕಲಾಗುವ ದಾನವು ಧರ್ಮವನ್ನಿಸುತ್ತದೆ.

ಮರುವುಪಕಾರವನ್ನು ನಿರೀಕ್ಷಿಸದೆಯೇ ಸತ್ಪಾತ್ರರೆನ್ನಿಸಿದವರಿಗೆ ಸರಿಯಾದ ಎಡೆಯಲ್ಲಿ, ಸರಿಯಾದ ಹೊತ್ತಿಗೆ ದಾನವನ್ನೀಯುವುದು ತಮ್ಮ ಕರ್ತವ್ಯವೆಂದು ಬಗೆದು ನೀಡಲಾಗುವ ದಾನವು ಸಾತ್ವಿಕವಾದುದು. ಫಲದಾಸೆಯಿಂದಲೂ, ಬಲು ಕಷ್ಟದಿಂದಲೂ ಮರುವುಪಕಾರವನ್ನು ಬಯಸಿಯೂ ನೀಡಲಾದ ದಾನವು ರಾಜಸವು. ದಾನವನ್ನು ಪಡೆಯುವವನನ್ನು ಅವಮಾನಕ್ಕೀಡುಮಾಡಿ, ಅವನನ್ನು ನಿಂದಿಸಿ ನೀಡಲಾಗುವ ದಾನ. ಇಲ್ಲವೆ ಕುಪಾತ್ರನಿಗೆ ಸರಿಯಲ್ಲದ ಎಡೆಯಲ್ಲಿ, ಸರಿಯಲ್ಲದ ಹೊತ್ತಿಗೆ ನೀಡಲಾಗುವ ದಾನವು ತಾಮಸಿಕವು. ಭಗವದ್ಗೀತೆ ಈ ಮೂರು ಬಗಯ ದಾನಗಳನ್ನು ಕುರಿತು ಹೇಳಿದೆ.[11]

---

10 ನ ಭೂಮಿದಾನಾದಸ್ತೀಹ ಪರಂ ಕಿಂಚಿದ್ । —ಅನುಶಾಸನ, ೬೨/೪

11. ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।
ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥ ೨೦
ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।
ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ॥ ೨೧
ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।
ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥ ಭಗವದ್ಗೀತೆ, ೧೭/೨೨

## ತಪಸ್ಸು

ಇದು ಭಾರತೀಯ ಸಂಸ್ಕೃತಿಯ ಒಂದು ಮುಖ್ಯವಾದ ಅಂಗವೆನ್ನಿಸಿದೆ. 'ಕಾಯುವುದು, ಕಾಯಿಸುವುದೆಂದರೇನೇ ತಪಸ್ಸು' ಎಂಬುದಾಗಿ ಕಲ್ಪದ್ರುಮದಲ್ಲಿ ಬಲುಹಗುರಾದ ವ್ಯಾಖ್ಯೆಯನ್ನು ನೀಡಲಾಗಿದೆ.[12] ಸರ್ವಲಕ್ಷಣಸಂಗ್ರಹಕಾರನು ಹಸಿವು-ಬಾಯಾರಿಕೆ, ಚಳಿ-ಬಿಸಿಲು ಮೊದಲಾದ ದ್ವಂದ್ವಗಳನ್ನು ಸಹಿಸುವುದೆಂದರೇನೆ ತಪಸ್ಸು ಎಂದು ಅದರ ಲಕ್ಷಣಗಳನ್ನು ನೀಡಿದ್ದಾನೆ.[13] ತಪಾಗ್ನಿಯಿಂದ ಮಾನವನ ಬಾಳನ್ನು ಕಾಯಿಸಲಾಗಿ ಅದು ನಿರ್ಮಲವೂ, ನಿಷ್ಕಲಂಕವೂ ಆಗುತ್ತದೆ. ಪ್ರತಿಷ್ಠಿತವೆನ್ನಿಸಿದುದೆಲ್ಲವೂ ತಪಸ್ಸಿನಲ್ಲಿಯೇ ಒಂದುಗೂಡಿರುವ ಕಾರಣ ತಪಸ್ಸನ್ನೇ ಶ್ರೇಷ್ಠವಾದುದೆಂದು ಬರೆಯಲಾಗಿದೆ.[14] ಋತ, ಸತ್ಯ, ಶ್ರುತ, ಶಾಂತ, ದಮ, ಶಮ, ದಾನ, ಯಜ್ಞಗಳೆಲ್ಲವೂ ತಪಸ್ಸುಗಳಾಗಿವೆ. ಬ್ರಹ್ಮನ ಉಪಾಸನೆಯೂ ಒಂದು ತಪಸ್ಸು ಎನ್ನಿಸಿದೆಯೆಂದು ಮಹಾನಾರಾಯಣೀಯ ಉಪನಿಷತ್ತಿನಲ್ಲಿ ಬಣ್ಣಿಸಲಾಗಿದೆ.[15] ಉಪನಿಷತ್ಕಾರರ ಅಭಿಪ್ರಾಯದ ಮೇರೆಗೆ ವಾನಪ್ರಸ್ಥಾಶ್ರಮದ ಒಂದು ಅವಿಭಾಜ್ಯವಾದ ಅಂಗವೆಂದರೆ ತಪಸ್ಸು. ಶಾಂತರೂ, ವಿದ್ವಾಂಸರೂ ಆದ ಗಂಡಸರು ವನದಲ್ಲಿ ವಾಸಿಸುತ್ತ, ಬಿಕ್ಕೆ ಬೇಡಿ ಹೊಟ್ಟೆಹೊರೆಯುತ್ತ, ಶ್ರದ್ಧೆಯಿಂದ ತಪಸ್ಸನ್ನಾಚರಿಸಲಾಗಿ ಪಾಪಗಳನ್ನು ಕಳೆದುಕೊಂಡು ಸೂರ್ಯದ್ವಾರದ ಮೂಲಕ ಅಮರ್ತ್ಯನೂ, ಅವ್ಯಯನೂ ಆದ ಪುರುಷನನ್ನು ತಲುಪುತ್ತಾನೆ.[16] ಮನಸ್ಸು ಹಾಗೂ ಇಂದ್ರಿಯಗಳ ಏಕಾಗ್ರತೆಯೇ ತಪಸ್ಸೆನ್ನಿಸಿದ್ದು ಅದು ಎಲ್ಲ ಧರ್ಮಗಳಿಗಿಂತಲೂ ಶ್ರೇಷ್ಠವಾದ ಧರ್ಮವೆನ್ನಿಸಿದೆ ಎಂಬ ಸ್ಮೃತಿವಚನ ಇದೆ.[17]

ದುಸ್ತರ, ದುಷ್ಪ್ರಾಪ್ಯ, ದುರ್ಗಮ ಹಾಗೂ ದುಸ್ತರವಾದುದೆಲ್ಲವೂ ತಪಸ್ಸಿನಿಂದ ಸಾಧ್ಯವಾದುದು. ತಪಸ್ಸಿನಿಂದ ಜ್ಞಾನ ಬೆಳೆಯುತ್ತದೆ, ಚಿಂತನೆಯು ಗಟ್ಟಿಗೊಳ್ಳುತ್ತದೆ. ಮಾನವನ ಸಾಮರ್ಥ್ಯಕ್ಕೆ ಅಸಾಧ್ಯವೆನ್ನಿಸಿದುದೆಲ್ಲವೂ ತಪಸ್ಸಿನಿಂದ ಸಾಧ್ಯವೆನ್ನಿಸಿದೆ. ಮಾನವರ ಹಾಗೆಯೇ ದೇವತೆಗಳೂ ಕೂಡ ತಪಸ್ಸನ್ನಾಚರಿಸಿದ್ದಾರೆ. ಇಲ್ಲಿ ಹೆಣ್ಣು ಗಂಡುಗಳು ಸರಿಸಮಾನರು. ದೇಹದ ಹಿಂಸೆ ತಪಸ್ಸಿನ ಒಂದು ಬದಿಯಾಗಿದ್ದರೂ ಮನಸ್ಸಿನ ಏಕಾಗ್ರತೆ ಹೆಚ್ಚು ಮುಖ್ಯ. ದೇಹದಂಡನೆ ಒಂದು ಸಾಧನ ಮಾತ್ರ, ಸಾಧ್ಯವಲ್ಲ. ಆದ್ದರಿಂದ ಮೂಗಿನ ಹೊರಳೆಗಳನ್ನು ಬಿಗಿ ಹಿಡಿದು ಉಸಿರಾಡದಂತೆ ಮಾಡಿ

---

12 ತಪತಿ ತಾಪಯತಿ ವಾ ।

13 ಕ್ಷುತ್ಪಿಪಾಸಾ ಶೀತೋಷ್ಣಾದಿದ್ವಂದ್ವಸಹನಮ್ ।

14. ತಪಸಿ ಸರ್ವ ಪ್ರತಿಷ್ಠಿತಂ ತಸ್ಮಾತ್ ತಪಃ ಪರಮಂ ವದಂತಿ ।

15 ಋತಂ ತಪಃ ಸತ್ಯಂ ತಪಃ ಶ್ರುತಂ ತಪಃ ಶಾಂತಂ ತಪೋ ದಮಸ್ತಪಃ ।
ಶಮಸ್ತಪೋ ದಾನಂ ತಪೋ ಯಜ್ಞಂ ತಪೋ ಭುರ್ಭುವಸ್ಸುವಬ್ರ್ರಹ್ಮೈತದುಪಾಸ್ಸ್ಯೈ ತತ್ತಪಃ ॥

16. ತಪಃ ಶ್ರದ್ಧೇ ಯೇ ಹ್ಯುಪವಸಂತ್ಯರಣ್ಯೇ ಶಾಂತಾ ವಿದ್ವಾಂಸೋ ಭೈಕ್ಷ್ಯಚರ್ಯಾಂ ಚರಂತಃ।
ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ॥
—ಭಾರತೀಯ ಸಂಸ್ಕೃತಿ ಕೋಶ, ಖಂಡ ೪, ಪು ೩೫-೩೭

17. ಮನಶ್ಚೇಂದ್ರಿಯಾಣಾಂ ಚೈಕಾಗ್ರ್ಯಂ ಪರಮಂ ತಪಃ ।
ತಜ್ಜ್ಯಾಯಃ ಸರ್ವಧರ್ಮೇಭ್ಯಃ ಸ ಧರ್ಮಃ ಪರ ಉಚ್ಯತೇ ॥ —ಸ್ಮೃತಿ

ಕೊಳ್ಳುವುದಾಗಲಿ, ಜಪಮಾಲೆಯನ್ನು ಹಿಡಿದು ಜಪವನ್ನು ಮಾಡುವುದಾಗಲಿ ಇಲ್ಲವೆ ತಾಳಗಳನ್ನು ಕುಟ್ಟಿ ಕುಟ್ಟಿ ಭಜನೆಯನ್ನು ಮಾಡುವುದೆಂದರೆ ತಪಸ್ಸಲ್ಲ. ದೇಹದಂಡನೆಯ ಕಾಲಾವಧಿ ಹಾಗೂ ತೀವ್ರತೆ ಹೆಚ್ಚಿಗೆ ಇದ್ದಷ್ಟುಮಟ್ಟಿಗೆ ಹೆಚ್ಚಿನ ಏಕಾಗ್ರತೆ ಉಂಟಾಗಲು ಸಾಧ್ಯ. ತಪಸ್ಸು ಹಲವು ಬಗೆಯದು. ಒಂದೇ ಕಾಲಿನ ಮೇಲೆ ನಿಂತುಕೊಳ್ಳುವುದು, ಎರಡೂ ತೋಳುಗಳನ್ನೆತ್ತಿ ನಿಲ್ಲುವುದು, ಬೆಂಕಿಯ ಮೇಲೆ ನಡೆಯುವುದು, ಚಳಿಗಾಲದಲ್ಲಿ ಒದ್ದೆಯಾದ ಬಟ್ಟೆಗಳನ್ನು ತೊಡುವುದು, ಮಳೆಗಾಲದ ಮಳೆಯಲ್ಲಿ ಬರಿಮೈಯಿಂದ ನಿಲ್ಲುವುದು, ಬೇಸಿಗೆಯಲ್ಲಿ ಪಂಚಾಗ್ನಿಯಿಂದ ಸಾಧನೆಗೈಯುವುದು, ನೀರಲ್ಲಿ ನಿಲ್ಲುವುದು, ಕಟ್ಟುನಿಟ್ಟಾದ ಉಪವಾಸ, ಹವೆಯನ್ನು ಸೇವಿಸಿ ಇಲ್ಲವೆ ಉಂಛವೃತ್ತಿಯಿಂದ (ಹೊಲ ದಲ್ಲಿ ಹಕ್ಕಿಗಳು ಕಾಳುಗಳನ್ನು ಹೆಕ್ಕಿ ತಿಂದು ತಮ್ಮ ಹೊಟ್ಟೆ ಹೊರೆದುಕೊಳ್ಳುವಂತೆ) ವಾಸಿಸುವುದು—ಎಂಬ ಹಠಯೋಗದ ಹಲವು ಬಗೆಗಳಿವೆ.

ಮಹಾಭಾರತದ ತುಂಬೆಲ್ಲ .ತಪಸ್ಸಿನ ಮಹಿಮೆಯನ್ನು ಬಣ್ಣಿಸಿದಂತಿದೆ. ಅಹಿಂಸೆ, ಸತ್ಯವಚನ, ಅನೃಶಂಸೆ, ಇಂದ್ರಿಯಗಳ ಮೇಲಣ ಗೆಲವು ಹಾಗೂ ಹೀನಕೃತ್ಯಗಳನ್ನು ಕುರಿತಾಗಿ ಹೇಸಿಗೆ ತಳೆಯುವುದೆಂದರೇನೆ ತಪಸ್ಸು. ಬರಿ ದೇಹದಂಡನೆ ಎಂದರೆ ತಪಸ್ಸಲ್ಲ ವೆಂದು ಸ್ಥಿರವಾದ ಚಿತ್ತವೃತ್ತಿಯ ಬುದ್ಧಿವಂತನ ಅಭಿಪ್ರಾಯವಾಗಿರುವುದನ್ನು ಭೀಷ್ಮ ಯುಧಿಷ್ಠಿರನಿಗೆ ಹೇಳಿದ್ದಾನೆ.[18] ತಪಸ್ಸಿನಂತಹ ಸಾಧನ ಇನ್ನೊಂದಿಲ್ಲ. ಮಾನವ ಶ್ರೇಷ್ಠತೆ ಯನ್ನು ಹೊಂದುವುದು ತಪಸ್ಸಿಂದಾಗಿಯೇ. ತಪಸ್ಸಿನಿಂದ ಕೈಗೂಡದ ಅದಾವ ಸಂಗತಿಯೂ ಇಲ್ಲವೆಂದು ವ್ಯಾಸರ ಹೇಳಿಕೆಯಿದೆ.[19]

ಶಾಂತಿ/೧೬೧ರಲ್ಲಿ ಭೀಷ್ಮನು ಯುಧಿಷ್ಠಿರನಿಗೆ ತಪಸ್ಸಿನ ಮಹತ್ವವನ್ನು ಕುರಿತು ವಿಸ್ತಾರ ದಿಂದ ಹೇಳಿದ್ದಾನೆ. ತಪಸ್ಸಿಲ್ಲದೆ ಕರ್ಮಫಲವಿಲ್ಲ. ಋಷಿಗಳಿಗೆ ವೇದಗಳು ದೊರೆತುದು ತಪಸ್ಸಿನಿಂದಾಗಿಯೇ. ಪ್ರಜಾಪತಿಯು ಕೂಡ ನಿರ್ಮಾಣಕ್ಕಾಗಿ ತಪಸ್ಸನ್ನಾಚರಿಸ ಬೇಕಾಯಿತು. ಆಹಾರ, ಹಣ್ಣುಹಂಪಲುಗಳು, ಕಂದಮೂಲಗಳು ಹುಟ್ಟಿದುದು ತಪಸ್ಸಿನ ಮೂಲಕವೇ. ತಪಸ್ಸಿನಿಂದಾಗಿಯೇ ಸಿದ್ಧಪುರುಷನಿಗೆ ತ್ರೈಲೋಕ್ಯದ ದರ್ಶನ ಲಭ್ಯ ವಾದುದು. ಸೆರೆಗುಡುಕರು, ಕಳ್ಳಕಾಕರು, ಭ್ರೂಣಹತ್ಯೆಯನ್ನು ಕೈಗೊಂಡವರು ಮತ್ತು ಗುರುಪತ್ನಿಯನ್ನು ಕೂಡಿಕೊಂಡವರು ಪಾಪಗಳಿಂದ ಬಿಡುಗಡೆಹೊಂದುವುದು ತಪಸ್ಸಿನ ಮೂಲಕವೇ ಸಾಧ್ಯ. ಆರೋಗ್ಯವನ್ನೀಯಬಲ್ಲ ವನಸ್ಪತಿಗಳು ಗುಣಕಾರಿಗಳೆನ್ನಿಸುವುದು ತಪಸ್ಸಿನ ಫಲ. ಸನ್ಯಾಸ ಒಂದು ಶ್ರೇಷ್ಠಮಟ್ಟದ ತಪಸ್ಸು. ಸಿದ್ಧಿಗಳು ಪ್ರಾಪ್ತವಾಗುವುದು ತಪಸ್ಸಿನಿಂದಾಗಿಯೇ. ದೇವತೆಗಳಿಗೆ ದೇವತ್ವ ಲಭಿಸುವುದೂ ಇದರಿಂದಾಗಿ. ಹಾಗೆಂದೇ ದೇವತೆಗಳಿಂದ ಹಿಡಿದು ಋಷಿಗಳು, ಮಾನವರು, ದಾನವರು, ಪಿತೃಗಳು, ಪಶುಪಕ್ಷಿಗಳ ಲ್ಲದೆ ಇಡಿಯ ಚರಾಚರಸೃಷ್ಟಿಯೇ ತಪಸ್ಸನ್ನು ಕುರಿತು ತತ್ಪರತೆಯನ್ನು ತೋರುತ್ತದೆ ಭಗವದ್ಗೀತೆಯ ಹದಿನೇಳನೆಯ ಅಧ್ಯಾಯದಲ್ಲಿ ಮೂರು ಬಗೆಯ ತಪಸ್ಸನ್ನು ಕುರಿತು

18. ಅಹಿಂಸಾ ಸತ್ಯವಚನಮಾನೃಶಂಸ್ಯಂ ದಮೋ ಘೃಣಾ ।
ಏತತ್ ತಪೋ ವಿದುರ್ಧೀರಾ ನ ಶರೀರಸ್ಯ ಶೋಷಣಮ್ ॥ —ಶಾಂತಿ, ೭೧/೧೮

19 ತಪಸೋ ಹಿ ಪರಂ ನಾಸ್ತಿ ತಪಸಾ ವಿಂದತೇ ಮಹತ್ ।
ನಾಸಾಧ್ಯಂ ತಪಸಃ ಕಿಂಚಿದಿತಿ...'॥ —ವನ, ೨೫೯/೧೬-೧೭

ಹೇಳಲಾಗಿದೆ. ಅವೆಂದರೆ, ಕಾಯಿಕ, ವಾಚಿಕ ಹಾಗೂ ಮಾನಸಿಕ ಎಂಬವುಗಳು. ದೇವತೆಗಳು, ದ್ವಿಜರು, ಗುರುಗಳು ಹಾಗೂ ಜ್ಞಾನಿಗಳನ್ನು ಪೂಜಿಸುವುದು ; ಶುದ್ಧತೆ, ಸರಳತೆ, ಬ್ರಹ್ಮಚರ್ಯೆ ಹಾಗೂ ಅಹಿಂಸೆಯ ನಡತೆಗಳು ಕಾಯಿಕ ತಪಸ್ಸೆನ್ನಿಸಿವೆ. ಇನ್ನೊಬ್ಬನನ್ನು ಪೀಡಿಸದಿರುವುದು ; ಸತ್ಯ, ಪ್ರಿಯ, ಹಿತವಾದ ಮಾತುಗಳನ್ನಾಡುವುದು ಹಾಗೂ ಸ್ವಾಧ್ಯಾಯವನ್ನು ಕೈಕೊಳ್ಳುವುದು ವಾಚಿಕ ತಪಸ್ಸೆನ್ನಿಸಿದೆ. ಪ್ರಸನ್ನವಾದ ಚಿತ್ತವೃತ್ತಿ, ಸೌಮ್ಯತೆ, ಮೌನ, ಆತ್ಮಸಂಯಮ, ವಿಕಾರರಹಿತವಾದ ತಿಳಿಯಾದ ಮನವೇ ಮಾನಸಿಕ ತಪಸ್ಸೆನ್ನಿಸಿದೆ. ಹಾಗೆಯೇ ಫಲದಾಸೆಯಿಲ್ಲದೆ ಸತ್ವಶುದ್ಧಿಯಿಂದಲೂ, ಆಸ್ತಿಕ್ಯಬುದ್ಧಿಯಿಂದಲೂ ಆಚರಿಸಲಾಗುವ ತಪಸ್ಸು ಸಾತ್ತ್ವಿಕ ತಪಸ್ಸೆನ್ನಿಸಿದೆ. ಸತ್ಕಾರ, ಮಾನ-ಸನ್ಮಾನ, ಪೂಜಾವಿಧಿ ಮೊದಲಾದವುಗಳ ಮೂಲಕ ಕೈಕೊಳ್ಳಲಾಗುವ ತಪಸ್ಸು ರಾಜಸವಾದುದು. ಬುದ್ಧಿಗೇಡಿಯಾದ ಹಟಕ್ಕಾಗಿ, ತನ್ನನ್ನೇ ಪೀಡೆಗೀಡುಮಾಡಲೆಂದು ಇಲ್ಲವೇ ಬೇರೊಬ್ಬನ ನಾಶಕ್ಕೆಂದು ಎಸಗಲಾಗುವ ತಪಸ್ಸು ತಾಮಸವಾದುದು.[20] ಅಭಿಚಾರದಿಂದ ಕೂಡಿದ ಶಾಪವನ್ನೀಯುವ ಸಾಮರ್ಥ್ಯ ಪ್ರಾಪ್ತವಾಗುವುದು ತಾಮಸಿಕ ತಪಶ್ಚರಣೆಯಿಂದಾಗಿ.

ತಪಾಚರಣೆಯ ಅಧಿಕಾರ ಯಾರಿಗುಂಟು, ಯಾರಿಗಿಲ್ಲ—ಎಂಬುದನ್ನು ಕುರಿತು ತುಂಬ ಮತಭಿನ್ನತೆಯಿರುವಂತಿದೆ. ತಪಸ್ಸಿನ ಬಾಗಿಲು ಎಲ್ಲರಿಗಾಗಿಯೂ ತೆರೆದಿರುವಂಥವೇ. ಜಿತೇಂದ್ರಿಯರು ಹಾಗೂ ಮನೋನಿಗ್ರಹಸಂಪನ್ನರಾದ ಶೂದ್ರರು, ಕೆಳವರ್ಣಗಳವರಿಗೆ ಕೂಡ ಅದು ನಿಷಿದ್ಧವಲ್ಲವೆಂದು ಪರಾಶರನು ಜನಕನಿಗೆ ಖಡಾಖಂಡಿತವಾಗಿ ಹೇಳಿದ್ದಾನೆ.[21] ಯಾವ ಯಾವ ಯುಗಗಳಲ್ಲಿ ಯಾರುಯಾರಿಗೆ ತಪಸ್ಸಿನ ಅಧಿಕಾರ ಪ್ರಾಪ್ತವಾಯಿತೆಂಬುದನ್ನು ಕುರಿತು ಶ್ರೀರಾಮನ ಸಭೆಯಲ್ಲಿ ನಾರದನು ಅಷ್ಟಋಷಿಗಳ ಮುಂದೆ ಅರುಹಿದ್ದಾನೆ. ಸತ್ಯಯುಗದಲ್ಲಿ ಬ್ರಾಹ್ಮಣರಷ್ಟೇ ತಪಸ್ಸನ್ನು ಆಚರಿಸುತ್ತಿದ್ದರು. ತ್ರೇತಾಯುಗದಲ್ಲಿ ಬ್ರಾಹ್ಮಣರಲ್ಲದೆ ಕ್ಷತ್ರಿಯರೂ ತಪಾಚರಣೆಯನ್ನು ಕೈಕೊಳ್ಳತೊಡಗಿದರು. ದ್ವಾಪರಯುಗದಲ್ಲಿ ತಪಸ್ಸು ವೈಶ್ಯರನ್ನೊಳಗೊಂಡು ಮೂರು ವರ್ಣಗಳಿಗೆ ತೆರೆದುಕೊಂಡಿತು. ಶೂದ್ರರಿಗೆ ಮಾತ್ರ ಈ ಮೂರು ಯುಗಗಳಲ್ಲೂ ಈ ಅಧಿಕಾರ ದೊರಕಿರಲಿಲ್ಲ. ಇಷ್ಟೇ ಅಲ್ಲದೆ, ಶೂದ್ರನು ತಪಸ್ಸನ್ನು ಕೈಕೊಳ್ಳುವುದು ಅಧರ್ಮವೆಂದು ಬಗೆಯಲಾಗುತ್ತಿತ್ತು.[22] ತನಗೆ ಅಧಿಕಾರ ಇಲ್ಲದಿದ್ದರೂ ಶಂಬೂಕನು ತಪಸ್ಸನ್ನು

20. ದೇವದ್ವಿಜಗುರುಪ್ರಾಜ್ಞಪೂಜನ್ಮೈಃ ಶೌಚಮಾರ್ಜವಮ್ ।
ಬ್ರಹ್ಮಚರ್ಯಮಹಿಂಸಾ ಚ ಶರೀರಂ ತಪ ಉಚ್ಯತೇ ॥
ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥
ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ —ಭಗವದ್ಗೀತೆ, ೧೭/೧೪-೧೬

21. ತಪಃ ಸರ್ವಗತಂ ತಾತ ಹೀನಸ್ಯಾಪಿ ವಿಧೀಯತೇ ।
ಜಿತೇಂದ್ರಿಯಸ್ಯ ದಾಂತಸ್ಯ ಸ್ವರ್ಗಮಾರ್ಗಪ್ರವರ್ತಕಮ್ ॥ —ಶಾಂತಿ, ೨೯೫/೧೪

22. ಅಧರ್ಮಃ ಪರಮೋ ರಾಜನ್ ದ್ವಾಪರೇ ಶೂದ್ರಜನ್ಮನಃ ।
—ವಾಲ್ಮೀಕಿ ರಾಮಾಯಣ, ಉತ್ತರಕಾಂಡ, ೭೪/೨೮

## ಶಾಪಗಳು : ಪರಿಕಲ್ಪನೆ ಹಾಗೂ ಸ್ವರೂಪ

ಶಾಪ/ವರಗಳನ್ನು ಕುರಿತಾದ ಪರಿಕಲ್ಪನೆಯ ಮೂಲವು ಯಾತು-ಕ್ರಿಯೆಯಲ್ಲಿದ್ದು ತಪಸ್ಸಿನಿಂದ ಅದನ್ನೀಯುವ ಸಾಮರ್ಥ್ಯವು ಪ್ರಾಪ್ತವಾಗುವುದು. ಯಜ್ಞಕರ್ಮದಿಂದ ಇಂಥ ಸಾಮರ್ಥ್ಯ ದೊರಕಬಹುದಾದರೂ ಅದರ ಪ್ರಮಾಣ ತೀರ ಕಡಿಮೆ ಯಾವೊಬ್ಬನು ಒಂದು ಅಪಕೃತ್ಯವನ್ನಾಗಲಿ, ಅಪರಾಧವನ್ನಾಗಲಿ ಎಸಗಿದಾಗ ಇಲ್ಲವೆ ಸುಮ್ಮನೆ ಒಬ್ಬರನ್ನು ಪೀಡಿಸಿದಾಗ ಅಂಥವನನ್ನು ಶಿಕ್ಷಿಸಲೆಂದು ಆಡಲಾದ ಮಾತೆಂದರೆ ಶಾಪ. ಇದು ತೀರ ಸರಳವೂ, ಹಗುರಾದುದೂ ಆದ ವ್ಯಾಖ್ಯೆ ಎನ್ನಿಸೀತು. 'ಒಬ್ಬನ ಒಳಿತಿಗಾಗಿ ಇಲ್ಲವೆ ಕೇಡಿಗಾಗಿ ಮಾತಿನ ಮೂಲಕ ಪ್ರಕಟಗೊಳ್ಳುವ ಬಯಕೆಯೇ ವರ/ಶಾಪ ಎನ್ನಿಸಿದೆ.'[24] ಶಾಪವನ್ನೀಯುವ ಈ ಪ್ರಕ್ರಿಯೆಯಲ್ಲಿ ಮುಖ್ಯವಾಗಿ ಇರುವ ಘಟಕಗಳು ಮೂರು–ಪ್ರಬಲವಾದ ಇಚ್ಛಾಶಕ್ತಿ, ಅದರ ಅಭಿವ್ಯಕ್ತಿ ಹಾಗೂ ಸಾಮರ್ಥ್ಯ, ಅಧಿಕಾರ. ಇವುಗಳಲ್ಲಿಯ ಒಂದಾದರೂ ಘಟಕದ ಅಭಾವವಿದ್ದರೆ ಈ ಪ್ರಕ್ರಿಯೆ ಪೂರ್ತಿಗೊಳ್ಳದು. ಇಚ್ಛಾಶಕ್ತಿಯು ಸಾಮಾನ್ಯವಾಗಿ ಶಬ್ದೋಚ್ಚಾರಗಳಿಂದಲೇ ಅಭಿವ್ಯಕ್ತವಾಗುವುದಾದರೂ ಬೇರೆ ಬಗೆಗಳೂ ಉಂಟೆಂಬುದನ್ನು ಕೆಲವು ಉದಾಹರಣೆಗಳಿಂದ ಕಂಡುಕೊಳ್ಳಲು ಸಾಧ್ಯ. ಪುಲಸ್ತ್ಯನ ಬರಿ ಕಣ್ಣುನೋಟದಿಂದಲೂ ಕೂಡ ತೃಣಬಿಂದುಕನ್ಯೆಗೆ ಶಾಪ ತಟ್ಟಿದ ಉದಾಹರಣೆ ವಾಲ್ಮೀಕಿರಾಮಾಯಣದಲ್ಲಿದೆ. ಕೌಶಿಕನ ಕ್ರೋಧಯುಕ್ತವಾದ ಕಣ್ನೋಟದಿಂದಾಗಿ ನೀರುಗೋಳಿಯು ಸಾವನ್ನಪ್ಪಿದ ದಾಖಲೆ ಮಹಾಭಾರತದಲ್ಲಿದೆ. ಬರಿ ಪ್ರಬಲವಾದ ಇಚ್ಛಾಶಕ್ತಿಯೆಂದರೆ ಶಾಪವಲ್ಲ. ಅದರ ಅಭಿವ್ಯಕ್ತಿಯೂ ಅಷ್ಟೇ ಮುಖ್ಯ. ಶಾಪವನ್ನೀಯುವುದರಿಂದಾಗಿ ತಪಸ್ಸು ಖರ್ಚಾಗುತ್ತದೆ, ಪುಣ್ಯ ಕ್ಷಯಹೊಂದುತ್ತದೆ ಎಂದು ನಂಬಲಾಗಿದೆ. ಹೀಗಾಗಿ, ಹಲವು ಸನ್ನಿವೇಶಗಳಲ್ಲಿ ಶಾಪವನ್ನೀವ ಬಯಕೆ ವ್ಯಕ್ತಗೊಳ್ಳದು. ಇದರಿಂದಾಗಿ ಶಾಪಗಳಲ್ಲಿ ಉಚ್ಚಾರಿತ ಶಾಪ ಹಾಗೂ ಅನುಚ್ಚಾರಿತ ಶಾಪ, ಎಂಬ ಎರಡು ಬಗೆಗಳಿವೆ. ಮಹಾಭಾರತದಲ್ಲಿ ಹಲವಾರು ಅನುಚ್ಚಾರಿತ ಶಾಪಗಳಿವೆ. ಪ್ರಬಲವಾದ ಇಚ್ಛಾಶಕ್ತಿ ಹಾಗೂ ಅದರ ಅಭಿವ್ಯಕ್ತಿಯಿಂದಲೇ ಅದು ಶಾಪ/ವರ ಎನ್ನಿಸಲಾರದು. ಇವುಗಳ ಜೊತೆಗೆ ಶಾಪ/ವರವನ್ನು ನೀಡಲು ಬೇಕಿದ್ದ ಸಾಮರ್ಥ್ಯ ಹಾಗೂ ಅಧಿಕಾರಗಳು ಅಗತ್ಯದವು 'ಕಾಗೆಯ ಶಾಪದಿಂದ ಗೋವು ಸಾಯದು' ಎಂಬ ನಾಣ್ಣುಡಿಯಿದೆ. ಹೀಗೆಂದರ, ಶಾಪ/ವರವನ್ನೀವ ಅಧಿಕಾರ ಕಾಗೆಯ ಬಳಿ ಇಲ್ಲವೆಂದರ್ಥ. ಅಧಿಕಾರವನ್ನು ಹೊಂದಿರದ ವ್ಯಕ್ತಿಯು ವ್ಯಕ್ತಪಡಿಸಿದ ಬಯಕೆಗಳು ಅದೆಷ್ಟೇ ಪ್ರಬಲವಾಗಿದ್ದರೂ ಹೆಚ್ಚೆಂದರೆ ತಳಮಳ, ಹರಕೆಗಳೆನ್ನಿಸಬಹುದು. ಒಬ್ಬನು, 'ಮೈಯಲ್ಲಿ ಹುಳಗಳಾಗಿ ಸಾಯುವಿ' ಎಂದು ಇನ್ನೊಬ್ಬನನ್ನು ಹಳಿದಾಗ ಅದರಿಂದಾಗುವ ಪರಿಣಾಮ ಸೊನ್ನೆ. ಹೆಚ್ಚೆಂದರೆ ಹಳಿವವನು ತನ್ನ ಕೋಪವನ್ನು ಹೊರಹಾಕಿದನೆನ್ನಬೇಕಷ್ಟೆ. ಆದರೆ ಭೃಗುವು ದಂಶ (ಅಲರ್ಕ) ರಾಕ್ಷಸನನ್ನು ಉದ್ದೇಶಿಸಿ, 'ಎಲೈ ನೀಚನೇ, ನೀನು ನರಕಕ್ಕೆ ಹೋಗಲಿರುವಿ. ಅಲ್ಲಿ ಮೂತ್ರ, ಕಫಗಳನ್ನು ಸೇವಿಸಬೇಕಾದೀತು' ಎಂದು

---

24. **A curse or blessing is a wish expressed in words that evil or good may befall a certain person.**

—***Encyclopaedia of Religion and Ethics*, Vol. IV, p. 367.**

ನುಡಿದ ಮಾತು ಒಂದು ಶಾಪವಾಣಿ ಎನ್ನಿಸಲು ಕಾರಣವೇನೆಂದರೆ ಶಾಪವನ್ನೀವ ಸಾಮರ್ಥ್ಯ ಅವನ ಬಳಿಯಿದ್ದುದೇ ಆಗಿದೆ.[25] ಶೃಂಗಿಯ ಶಾಪದಿಂದಾಗಿ ಸಾವು ಪರೀಕ್ಷಿತನನ್ನು ಏಳು ದಿನಗಳಲ್ಲಿಯೇ ಬಂದು ಮುತ್ತಿಕೊಂಡಿತು. ಕೃಷ್ಣನನ್ನು ಕುರಿತಾದ ಗಾಂಧಾರಿಯ ಉದ್ಗಾರವು ಮೂವತ್ತಾರು ವರ್ಷಗಳ ತರುವಾಯದಲ್ಲಿ ನಿಜವಾಯಿತು.

ಶಾಪ/ವರಗಳು ಎಂದೆಂದಿಗೂ ಸುಳ್ಳಾಗಲಾರವು. ಸುಳ್ಳಾದರೆ ಅವು ಶಾಪ/ವರಗಳೇ ಅಲ್ಲವಲ್ಲ! ಇಷ್ಟಾಗಿಯೂ ಮಹಾಭಾರತದಲ್ಲಿ ಪೂರ್ತಿಯಾಗಿ ಇಲ್ಲವೆ ಅರೆಬರೆಯಾಗಿ ವಿಫಲಗೊಂಡ ಮೂರು ಶಾಪಗಳೂ ಇವೆ. ಅವುಗಳನ್ನು ಅಪವಾದಗಳೆನ್ನದೆ ವಿಧಿಯಿಲ್ಲ. ಗಂಗೆಯು ಅಂಬೆಗಿತ್ತ ಶಾಪ ಅವಳ ಅರ್ಧದೇಹದ ಬಗ್ಗೆ ಪರಿಣಾಮವನ್ನುಂಟುಮಾಡಲಿಲ್ಲ.[26] ಅದೇ ರೀತಿ, ಧನುಷಾಕ್ಷ ಹಾಗೂ ಋಷಿಗಳು ಮೇಧಾವಿ ಹಾಗೂ ಸುಂದೋಪಸುಂದರಿಗೆ ಇತ್ತ ಶಾಪಗಳು ಫಲಕಾರಿಯಾಗಲಿಲ್ಲ. ಶಾಪಗಳ ಪರಿಣಾಮಗಳನ್ನು ತಪ್ಪಿಸಲಾಗದು. ಅವುಗಳನ್ನು ಮಾರ್ಪಡಿಸಲಾಗದು ಶಾಪವನ್ನಿತ್ತವನೂ ಅದನ್ನು ಹಿಂತೆಗೆದುಕೊಳ್ಳಲಾರ. ನಾರದರು ಹಾಗೂ ಪರ್ವತಋಷಿಗಳು ಪರಸ್ಪರರಿಗಿತ್ತ ಶಾಪಗಳನ್ನು ಪರಿಹರಿಸಿಕೊಳ್ಳಲು ಯತ್ನಿಸಿದ್ದಿದೆ. 'ನೀನು ಇತ್ತ ಶಾಪ ನನ್ನನ್ನು ಪೀಡಿಸದ ಹಾಗೆ ಮಾಡು' ಎಂದು ಉತ್ತಂಕನು ಪೌಷ್ಯರಾಜನನ್ನು ಕೋರಿದ್ದಾನೆ.[27] ಪೌಷ್ಯ ಅದನ್ನು ನಿರಾಕರಿಸುವ ಕಾರಣವೇ ಬೇರೆ. ಉಶ್ಶಾಪದಿಂದಾಗಿ ಶಾಪದ ತೀವ್ರತೆ ಹಾಗೂ ಅವಧಿ ಕಡಿಮೆಯಾಗಲು ಸಾಧ್ಯ. ಇದನ್ನು ಕುರಿತು ಬೇರೆಡೆಯಲ್ಲಿ ವಿವೇಚಿಸಲಾಗಿದೆ.

ಶಾಪ/ವರಗಳು ಒಂದೇ ನಾಣ್ಯದ ಎರಡು ಬದಿಗಳೆನ್ನಿಸಿದ್ದರೂ ಅವು ಸಮಾನವಾದವುಗಳಲ್ಲ. ಶಾಪ/ವರಗಳನ್ನು ಈಯುವ ಪ್ರಕ್ರಿಯೆಯಲ್ಲಿ ಬಲುತೀವ್ರವಾದ ಭಾವನೋದ್ರೇಕ ಅಡಕವಾಗಿದ್ದು ಅವುಗಳ ಸ್ವರೂಪ, ವೇಗ, ಅಭಿವ್ಯಕ್ತಿ ಹಾಗೂ ಪರಿಣಾಮಗಳಲ್ಲಿ ತುಂಬ ವ್ಯತ್ಯಾಸವಿದೆ. ಶಾಪದ ಹುಟ್ಟು ಕ್ರೋ ಧಾತುವಿನಿಂದಾಗಿದ್ದು ವರಕ್ಕೆ ಪ್ರೇರಣೆ ಪ್ರಸನ್ನತೆಯದು ಶಾಪದ ಮೂಲದಲ್ಲಿ ದುಷ್ಟತೆಯಿದ್ದು ವರದ ಮೂಲದಲ್ಲಿ ತುಷ್ಟತೆಯಿದೆ. ಶಾಪವನ್ನೀಯುವಾಗ ಮನಸ್ಸು ಅದೆಷ್ಟು ಪ್ರಕ್ಷುಬ್ಧಗೊಂಡಿರುವುದೆಂದರೆ ಅದಕ್ಕೆ ಕಡಿವಾಣ ಹಾಕುವುದು ಅಸಾಧ್ಯ. ಆಗ ಅದು ತನ್ನ ಎಚ್ಚರವನ್ನು ಕಳೆದುಕೊಳ್ಳುತ್ತದೆ. ಅದರ ಸಮತೋಲಕ್ಕೆ ಬಾಧೆ ತಟ್ಟುತ್ತದೆ. ಕೆರಳುವಿಕೆ ಹೆಚ್ಚಿದಷ್ಟು ಮನದ ಕಡಿವಾಣ ಹೆಚ್ಚು ಹೆಚ್ಚು ಸಡಿಲಾದೀತು. ಕ್ರೋಧದಿಂದ ಸಮ್ಮೋಹ, ಸಮ್ಮೋಹದಿಂದ ಸ್ಮೃತಿವಿಭ್ರಮ-ವಿಸ್ಮರಣೆ ಹಾಗೂ ಈ ವಿಸ್ಮರಣೆಯಿಂದಾಗಿ ಕೊನೆಗೆ ಬುದ್ಧಿನಾಶ—ವಿವೇಕಭ್ರಷ್ಟತೆ.[28] ಶಾಪವನ್ನು ಉಚ್ಚರಿಸುವ ಕಾಲಕ್ಕೆ ಬಾಯಿಂದ ಹೊರಬರುವ ಪದಗಳಿಂದ ಉಂಟಾಗಬಹುದಾದ ಪರಿಣಾಮವನ್ನು ಲಕ್ಕಿಸುವ ವಿವೇಕ ಬುದ್ಧಿ ಇರಲಾರದು. ಕೋಪ ತುಂಬ ಕೆರಳಿರುವ ಕಾರಣ ವಿವೇಕ ಬುದ್ಧಿಗೆ ಆಸ್ಪದವೇ ಸಿಕ್ಕಲಾರದು ಬಾಯಿಂದ

25 ಶಾಪ, ಕ್ರ. ೧೦೦
26 ಶಾಪ, ಕ್ರ. ೮೦
27 ಮಮಾಪಿ ಶಾಪೋ ಭವತಾ ದತ್ತೋ ನ ಭವೇದಿತಿ । —ಶಾಪ, ಕ್ರ. ೧೧
28 ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾತ್ ಬುದ್ಧಿನಾಶೋ . ॥ —ಭಗವದ್ಗೀತೆ, ೨/೬೩

ಆಚರಿಸಿದ ಕಾರಣ ಅವನು ವಧ್ಯನೆನ್ನಿಸಿದನು. ಇದೆಲ್ಲ ನಿಜವಾದರೂ ಕಲಿಯುಗದಲ್ಲಿ ಮಾತ್ರ ಶೂದ್ರರಿಗೂ ಈ ಅಧಿಕಾರ ದೊರಕಲಿದೆಯೆಂದು ನಾರದನು ಹೇಳಿದ್ದಾನೆ.[23] ವೈದಿಕ ಕಾಲದಲ್ಲಿ ಶೂದ್ರರಿಗೆ ತಪಸ್ಸಿನ ಅಧಿಕಾರವಿತ್ತು. ಮಂತ್ರದ್ರಷ್ಟಾರರಾದ ಕೆಲವ ರಂತೂ ಶೂದ್ರರೇ ಆಗಿದ್ದರು. ಮುಂದೆ ಕಾಲಪ್ರವಾಹದಲ್ಲಿ ಅವರ ಮೇಲೆ ಹೇರಲಾದ ಕೆಲವು ಕಟ್ಟುಪಾಡುಗಳಿಂದಾಗಿ ಅವರು ತಮ್ಮ ಈ ಅಧಿಕಾರವನ್ನು ಕಳೆದುಕೊಂಡಿರು ವಂತಿದೆ.

ತಪಸ್ಸು ಒಂದು ಇಬ್ಬದಿಯ ಅಲಗಿನಂತಿರುತ್ತದೆ. ಉಪಕಾರಿಯಾದಷ್ಟೇ ಅದು ಅಪಾಯಕಾರಿಯೂ ಅಹುದು. ಅದು ಸಂರಕ್ಷಣೆ ಹಾಗೂ ಸಂಹಾರದ ಸಾಮರ್ಥ್ಯಗಳೆರ ಡನ್ನೂ ಹೊಂದಿರುವಂಥದು. ರಾಕ್ಷಸರು ತಾವು ಪಡೆದ ವರವನ್ನು ಸಂಹಾರಕ್ಕಾಗಿ ಬಳಸಿ ದುದು ಕಂಡುಬರುತ್ತದೆ. ತಪಸ್ಸಿನಿಂದಾಗಿ ವಿನಾಶವನ್ನು ಬರಮಾಡಿಕೊಂಡಿರುವ ಹಲವರ ಉದಾಹರಣೆಗಳನ್ನು ಮಹಾಭಾರತದಲ್ಲಿ ಕಾಣಬಹುದು. ಅಂಬೆ ತಪಸ್ಸನ್ನು ಕೈಕೊಂಡದ್ದು ಭೀಷ್ಮನಿಗಾಗಿ. ಆದರೆ ಆತ್ಮಾರ್ಪಣವನ್ನೇ ಕೈಕೊಳ್ಳಬೇಕಾಗಿಬಂದಿತು. ಶಾಪವನ್ನೀಯು ವುದರಿಂದ ತಮಗೆ ತಪಕ್ಷಯ ಉಂಟಾಗುವುದೆಂಬ ನಂಬಿಕೆಯಿದೆ. ತಪಸ್ಸಿನ ಸಂಹಾರಕ ಶಕ್ತಿಯನ್ನು ಗಮನಿಸಿ ಅದನ್ನು ಪಡೆಯಲೆಂದು ಹಲವು ಬಗೆಯ ಹಂಚಿಕೆಗಳನ್ನು ಹೂಡ ಲಾಗುತ್ತಿತ್ತು. ವಿಶ್ವಾಮಿತ್ರನ ತಪಸ್ಸನ್ನು ಮುರಿಯಲೆಂದು ರಂಭೆ-ಮೇನಕೆಯರಂತಹ ಅಪ್ಸರೆಯರನ್ನು ಅವನ ಬಳಿಗೆ ಕಳುಹಿಸಲಾಗಿತ್ತು. ವರ್ಗಾದಿ ಐವರು ಅಪ್ಸರೆಯರು ಬ್ರಾಹ್ಮಣನೊಬ್ಬನ ತಪಸ್ಸನ್ನು ಹಾಳುಗೆಡವಿದ ಶಿಕ್ಷೆಯೆಂದು ಅವರಿಗೆ ಮೊಸಳೆಗಳಾಗಿ ಹುಟ್ಟಿ ಬರಬೇಕಾಯಿತು (ಶಾಪ, ಕ್ರ. ೭).

ಯಾತು, ಯಜ್ಞ ಹಾಗೂ ತಪಸ್ಸುಗಳನ್ನು ಮುಖ್ಯವಾಗಿ ಐಹಿಕ ಸುಖಸಂವರ್ಧನೆ ಗಾಗಿಯೂ, ದುಃಖನಿವಾರಣೆಗಾಗಿಯೂ ಬಳಸಲಾಗಿದ್ದುದನ್ನು ಕಾಣಬಹುದು. ಯಾತು- ಕ್ರಿಯೆ ಮೊರೆಹೊಗುವುದು ಮಂತ್ರಗಳನ್ನಾದರೆ ಯಜ್ಞ ನಂಬುವುದು ಇಷ್ಟದೇವತೆಯ ಕೃಪಾದೃಷ್ಟಿಯ ಅಗತ್ಯವನ್ನು. ಇವೆರಡೂ ಪರಾವಲಂಬಿಯಾದ ದಾರಿಗಳು. ತಪಾಚರಣೆ ಯಲ್ಲಿಯೂ ಇಷ್ಟದೇವತೆಯ ಕೃಪಾದೃಷ್ಟಿ ಅಗತ್ಯದ್ದೆನ್ನಿಸಿದ್ದರೂ ಅದನ್ನು ಪಡೆದು ಕೊಳ್ಳುವ ಹೊಣೆ ತಪಸ್ಸನ್ನು ಆಚರಿಸುವವನದೇ ಆಗಿರುವಂಥದು. ತಮ್ಮ ಮನದ ಬಯಕೆ ಈಡೇರಿರುವವರೆಗೂ ತಪಸ್ಸನ್ನು ಮುಂದುವರಿಸಬಹುದಾಗಿದೆ. ಹೀಗಾಗಿ ಇದು ಯಾತು ಇಲ್ಲವೆ ಯಜ್ಞಗಳಿಗಿಂತಲೂ ಹೆಚ್ಚು ಪ್ರಭಾವಿಯೂ, ತಪ್ಪದೆ ಗೆಲವನ್ನು ಪಡೆಯುವಂಥದೂ ಆಗಿದೆ. ಭಗೀರಥನು ಸ್ವರ್ಗದಿಂದ ಗಂಗೆಯನ್ನು ಧರೆಗೆ ಕರೆತಂದು ದಾಗಲಿ, ವಿಶ್ವಾಮಿತ್ರನು ಬ್ರಾಹ್ಮಣ್ಯವನ್ನು ಹೊಂದಿದುದಾಗಲಿ ತಪಸ್ಸಿನಿಂದಾಗಿಯೇ. ಸಿದ್ಧಿಯನ್ನು ಪಡೆಯಲು ಯಾತು ಹಾಗೂ ಯಜ್ಞಗಳು ಸಾಧನಗಳೆನ್ನಿಸಿದ್ದು ತಪಸ್ಸು ಒಂದು (ಮಾನಸಿಕ) ಕ್ರಿಯೆಯೆನ್ನಿಸಿದೆ.

---

23. ಹೀನವರ್ಣೋ ನೃಪಶ್ರೇಷ್ಠ ತಪ್ಯತೇ ಸುಮಹತ್ತಪಃ ।
ಭವಿಷ್ಯಚ್ಛೂದ್ರಯೋನ್ಯಾಂ ಹಿ ತಪಶ್ಚರ್ಯಾ ಕಲೌ ಯುಗೇ ॥
—ವಾಲ್ಮೀಕಿ ರಾಮಾಯಣ, ಉತ್ತರಕಾಂಡ, ೭೪/೨೭

ಪದಗಳು ಬೃಹದ್ವೇಗದಿಂದ ಹೊರಹಾಕಲ್ಪಡುತ್ತವೆ. ವರವನ್ನೀಯುವಾಗ ಮಾತ್ರ ಮನಸ್ಸು ಪ್ರಸನ್ನತೆಯಿಂದ ಕೂಡಿರುವ ಕಾರಣ ಭಾವನೋದ್ರೇಕ ಮಂದವೂ, ಶಾಂತವೂ ಹಾಗೂ ಸಂಯಮದ್ದೂ ಆಗಿರುತ್ತದೆ ವರವನ್ನು ಉಚ್ಚರಿಸುವ ಮೊದಲು ಯೋಚಿಸಲು ಅವಕಾಶ ಒದಗುತ್ತದೆ. ಮುಂದಾಗಬಹುದಾದ ಪರಿಣಾಮಗಳನ್ನು ಕುರಿತು ಮೊದಲಲ್ಲೇ ಯೋಚಿಸಲು ಸಾಧ್ಯ. ವರಗಳನ್ನು ನೀಡುವುದರಲ್ಲಿ ಶಿವ ಹಾಗೂ ಬ್ರಹ್ಮ ತುಂಬ ಅವಸರ ದವರೆಂದು ತೋರುತ್ತದೆ. ವರಗಳನ್ನು ನೀಡಿ, ಅವುಗಳಿಂದಾದ ಗೊಂದಲ, ಅನರ್ಥಗಳನ್ನು ಎದುರಿಸುವಲ್ಲಿ ಅವರು ತುಂಬ ಹೆಣಗಾಡಬೇಕಾಗುತ್ತದೆ. ವರದಲ್ಲಿ ಶಬ್ದದ ಸಾಮರ್ಥ್ಯ ಹೆಚ್ಚು, ಶಾಪದಲ್ಲಿ ಮಾತ್ರ ಶಬ್ದಕ್ಕಿಂತಲೂ ವಿಚಾರಕ್ಕೆ ಹೆಚ್ಚಿನ ಪ್ರಾಮುಖ್ಯತೆ.[29] ಇದರರ್ಥ ಶಾಪಗಳನ್ನು ವಿಚಾರಪೂರ್ವಕವಾಗಿ ಉಚ್ಚರಿಸಲಾಗುತ್ತದೆ, ಎನ್ನುವಂತಿಲ್ಲ.

ಶಾಪ/ವರಗಳನ್ನೀಯುವ ಅಧಿಕಾರವನ್ನು ಋಷಿ–ಮುನಿಗಳು ಪಡೆಯುವುದು ತಪಸ್ಸಿ ನಿಂದಾಗಿ. ದೇವತೆಗಳಿಗೆ ಈ ಸಾಮರ್ಥ್ಯ ಅವರ ಸ್ಥಾನಮಾನಗಳಿಂದಾಗಿಯೇ ತುಸು ಮಟ್ಟಿಗೆ ಲಭ್ಯವಿದ್ದು ಅದನ್ನು ಹೆಚ್ಚಿಸಿಕೊಳ್ಳಲು ಅವರು ಕೂಡ ತಪಸ್ಸನ್ನು ಕೈಕೊಳ್ಳ ಬೇಕಿದೆ. ಬ್ರಹ್ಮದೇವ, ಶಿವ, ಉಮೆಯರೆಲ್ಲ ಉಗ್ರವಾದ ತಪಸ್ಸನ್ನು ಆಚರಿಸಿದರು. ದೇವ, ದಾನವ, ಮಾನವರೆಲ್ಲ ಶಾಪ/ವರಗಳ ತಮ್ಮ ಸಾಮರ್ಥ್ಯವನ್ನು ಬಲಪಡಿಸಲು ಯತ್ನಿಸಿರು ವುದನ್ನು ಕಾಣಬಹುದು. ರಾಕ್ಷಸರು ತಪಸ್ಸಿನ ಮೂಲಕ ಹಲವು ವರಗಳನ್ನು ಪಡೆದರು. ಆದರೆ, ಅವರು ಶಾಪ/ವರಗಳನ್ನು ಈಯುವ ಸಾಮರ್ಥ್ಯವನ್ನು ಪಡೆದ ಉಲ್ಲೇಖ ರಾಮಾಯಣ–ಮಹಾಭಾರತಗಳಲ್ಲಂತೂ ಕಾಣದು, ರಾಮಾಯಣದೊಡನೆ ಹೋಲಿಸಿದರೆ ಮಹಾಭಾರತದಲ್ಲಿ ರಾಕ್ಷಸರು ಇಲ್ಲವೆಂದರೂ ಆದೀತು. ಹೀಗಾಗಿ ಅವರಿತ್ತ ಶಾಪ/ವರಗಳ ಉಲ್ಲೇಖಗಳೂ ತೀರ ಕಡಿಮೆ. ದೇವತೆಗಳು ಶಾಪವನ್ನೀಯುವುದಕ್ಕಿಂತಲೂ ವರಗಳ ನ್ನೀಯಲು ಹೆಚ್ಚು ಅನುಕೂಲರು. ಮಹಾಭಾರತದಲ್ಲಿ ದೇವತೆಗಳು ನೀಡಿದ ಶಾಪಗಳು ವರಗಳಿಗಿಂತ ತೀರ ಕಡಿಮೆ, ಋಷಿ–ಮುನಿಗಳಿಗೆ ಮಾತ್ರ ಶಾಪ/ವರಗಳನ್ನೀಯಲು ಎಷ್ಟೇ ಚಿಲ್ಲರೆ ಕಾರಣವೂ ಸಾಕಿತ್ತು. ಕಾರಣವೇ ಬೇಕಿರಲಿಲ್ಲವೆಂದರೂ ಆದೀತು. ಈ ವಿವೇಚನೆಯಿಂದ ಕಂಡುಬರುವ ಸಂಗತಿಯೆಂದರೆ ಸತ್ವ, ರಜ, ತಮ ಗುಣಗಳನ್ನವ ಲಂಬಿಸಿಯೇ ಶಾಪ/ವರಗಳನ್ನು ನೀಡಲಾಗುತ್ತಿತ್ತೆಂಬುದು.

ಶಾಪ/ವರಗಳನ್ನೀವ ಪ್ರಕ್ರಿಯೆಯಲ್ಲಿ ಪದಗಳನ್ನು ಉಚ್ಚರಿಸುವುದಲ್ಲದೆ ಇನ್ನಿತರ ಮಾಧ್ಯಮಗಳನ್ನೂ ಬಳಸಲಾಗುತ್ತದೆ. ಮೈ ಮುಟ್ಟುವುದರಿಂದ ಮನದಲ್ಲಿರುವ ಯೋಚನೆ ಸಂಕ್ರಮಣಗೊಳ್ಳಲು ಅನುಕೂಲ. ಈ ಮುಟ್ಟುವಿಕೆಯಲ್ಲಿ ಇಚ್ಛಾ-ವಾಹಕತೆಯ ಗುಣ ಧರ್ಮ (conduction) ಹೆಚ್ಚು. ಸ್ಪರ್ಶದಿಂದ ಉಂಟಾಗುವ ಕಂಪನವು ಅದರಲ್ಲಡಕವಾದ ಭಾವನೆಯನ್ನು ಖಚಿತಪಡಿಸುವಂತಿರುತ್ತದೆ.[30] ತಾಯಿಯ ಸ್ಪರ್ಶದ ಮೂಲಕ ವಾತ್ಸಲ್ಯ ಭಾವನೆ ಒಸರುತ್ತದೆ. ಸ್ಪರ್ಶದ ಮೂಲಕವೇ ನಲ್ಲನಲ್ಲೆಯರ ಶೃಂಗಾರ ಸೂರೆಗೊಳ್ಳು

---

29. **It is notable that the blessing by words is the more powerful; but the curse by the thought is more powerful than that by words.**

—*Encyclopaedia of Religion and Ethics*, **Vol. IV, p. 368.**

30. **Physical contact is the most efficacious means of transmission.**

ವುದು. ಡಾಂಭಿಕತೆ, ಸುಳ್ಳು, ಕಪಟಗಳೆಲ್ಲ ತಿಳಿದುಬರುವುದು ಸ್ಪರ್ಶದ ಮೂಲಕವೇ. ಹರಸುವಾಗ ತಲೆಯ ಮೇಲೆ ಕೈಯಿರಿಸುವುದು, ಭಲೇ ಎಂದೆನ್ನುವಾಗ ಬೆನ್ನುಚಪ್ಪರಿಸು ಸುವುದು, ಸಂತೋಷವನ್ನು ವ್ಯಕ್ತಪಡಿಸುವಾಗ ಚಪ್ಪಾಳೆ ತಟ್ಟುವುದರಂತೆಯೇ ಶಾಪ ವನ್ನೀಯುವಾಗ ಕೈಯೆತ್ತುವುದು ಸ್ವಾಭಾವಿಕವಾದ ಕ್ರಿಯೆಯಾಗಿದೆ. ನೀರು ಕೂಡ ಸ್ಪರ್ಶದಂತೆಯೇ ಒಂದು ಒಳ್ಳೆಯ ಮಾಧ್ಯಮ ಎಂದು ತಿಳಿಯಲ್ಪಡುತ್ತದೆ. ನಾಯಣಾ ಚಾರ್ಯನ ಅಭಿಪ್ರಾಯದಲ್ಲಿ ನೀರು ಎಂಬ ಪದ ಶಾಪ ಎಂಬ ಅರ್ಥದಲ್ಲಿಯೇ ಇದೆಯಂತೆ. ವಿದ್ಯುತ್ತಿನಿಂದಾಗುವ ಆಘಾತದ ತೀವ್ರತೆಯು ವಿದ್ಯುಚ್ಛಕ್ತಿಯ ಸಾಮರ್ಥ್ಯ ಹಾಗೂ ಅದು ಹರಿಯುವ (ತಾಮ್ರದ) ತಂತಿಗಳ ಆಕಾರಗಳನ್ನವಲಂಬಿಸಿರುತ್ತದೆ ಅದೇ ರೀತಿಯಾಗಿ ಮನದಿಚ್ಛೆ ಇಲ್ಲವೆ ಶಾಪದ ಪರಿಣಾಮದ ತೀವ್ರತೆಯು ಅದನ್ನು ಉಚ್ಚರಿಸು ವವನ ಸಾಮರ್ಥ್ಯ ಹಾಗೂ ಅದು ವ್ಯಕ್ತಗೊಳ್ಳುವ ಮಾಧ್ಯಮವನ್ನವಲಂಬಿಸಿದೆ.[31] ನೆತ್ತರೆ ಹಾಗೂ ಆಹಾರಗಳು ಪ್ರಭಾವಿಯಾದ ಮಾಧ್ಯಮಗಳು. ಸೂರ್ಯೋಪಾಸನೆಯಲ್ಲಿ ಅರ್ಘ್ಯವನ್ನು ನೀಡುವಾಗಲಾಗಲಿ ಇಲ್ಲವೆ ಅಭಿಷೇಕದ ಕಾಲಕ್ಕೆ ನೀರನ್ನು ಬಳಸುವುದು ಇದೇ ಕಾರಣಕ್ಕಾಗಿ ಶ್ರಾದ್ಧವಿಧಿಯಲ್ಲಿ ತರ್ಪಣವನ್ನೀಯಲು ನೀರನ್ನೇ ಬಳಸುತ್ತಾರೆ.

ಸಾಮಾನ್ಯವಾಗಿ ಶಾಪವನ್ನು ಹೊಂದಲಿರುವವನಿರುವಾಗಲೇ ಅವನಿಗೆ ಅದನ್ನು ಈಯಲಾಗುತ್ತದೆ. ಕೆಲವು ಶಾಪಗಳನ್ನು ಅವನಿಲ್ಲದಿರುವಾಗಲೂ ನೀಡಲಾಗುತ್ತದೆ. ಗೈರು ಹಾಜರಿಯಲ್ಲಿ ನೀಡಲಾದ ಶಾಪಗಳೂ ಅಷ್ಟೇ ಪರಿಣಾಮಕಾರಿಗಳೆನ್ನಿಸುತ್ತವೆ. ಶೃಂಗಿಯು ಪರೀಕ್ಷಿತನಿಗೆ ಅವನಿಲ್ಲದಾಗಲೇ ಶಾಪವನ್ನಿತ್ತನು. ಆದರೂ ಅದರಿಂದ ಆಗಬೇಕಿದ್ದ ಪರಿಣಾಮ ಆಗದಿರಲಿಲ್ಲ. ಶಾಪವನ್ನು ಹೊಂದುವವನು ಎದುರಿನಲ್ಲಿ ಇಲ್ಲದಾಗ ಕೆಲವು ಪ್ರತೀಕಗಳ ಮೂಲಕ ಅವನಿಗೆ ಶಾಪವನ್ನೀಯಲಾಗುತ್ತಿತ್ತು. ಆಹಾರ, ಹಣ್ಣು, ಪೇಯ ಮೊದಲಾದ ಪದಾರ್ಥಗಳು ಇಂಥ ಪ್ರತೀಕಗಳೆನ್ನಿಸಿದ್ದವು.

ಶಾಪಿತನು ಶಾಪವನ್ನು ನಿರಾಕರಿಸುವಂತಿಲ್ಲ. ಅದನ್ನು ಪಡೆಯದೆ ಬೇರೆ ವಿಧಿಯಿಲ್ಲ. ಹೀಗಾಗಿ ವರಗಳಲ್ಲಿರುವಂತೆ ಶಾಪಗಳಲ್ಲಿ ಸ್ವೀಕೃತ/ಅಸ್ವೀಕೃತ ಎಂಬ ಪ್ರಕಾರಗಳಿಲ್ಲ. ಶಾಪ ಗಳೆಲ್ಲವುಗಳೂ ಸ್ವೀಕೃತಿಯನ್ನು ಹೊಂದಲೇಬೇಕಿದ್ದವುಗಳು. ಹಾಗೆಯೇ, ಅವೆಲ್ಲವುಗಳೂ ಅಯಾಚಿತವಾದವುಗಳೇ. ಯಾರೂ ಶಾಪಕ್ಕಾಗಿ ಕೇಳದಿರುವ ಕಾರಣ 'ಯಾಚಿತ' ಶಾಪ ಗಳು ಇರವು. ಮಹಾಭಾರತದಲ್ಲಿ ಒಂದು ಮಾತ್ರ ಯಾಚಿತ ಶಾಪವಿದೆ. ಇದೊಂದು ಅಪವಾದವೇ ಸರಿ. ಗಾಂಧಾರಿಯ ನೂರು ಜನ ಮಕ್ಕಳು ಯುದ್ಧದಲ್ಲಿ ಸಾವನ್ನಪ್ಪಿದರು. ದುಃಖಿತಳಾದ ಅವಳನ್ನು ಸಂತೈಸಲೆಂದು ಯುಧಿಷ್ಠಿರನು ಬರಲಿದ್ದನು. ಈ ವಾರ್ತೆಯನ್ನು ಕೇಳಿ ಅವಳು ಕೆರಳಿ ಅವನನ್ನು ಶಪಿಸಲು ಸಿದ್ಧಳಾದಳು. ವ್ಯಾಸರು ತಮ್ಮ ದಿವ್ಯದೃಷ್ಟಿ ಯಿಂದ ಇದನ್ನರಿತು ಹಾಗೆ ಮಾಡದಿರಲು ಅವಳಿಗೆ ತಿಳಿಹೇಳಿದರು. ಯುಧಿಷ್ಠಿರನನ್ನು

31. The efficacy of a wish or a curse depends not only upon the potency which it possesses from the beginning owing to certain qualities in the person from whom it originates but also on the vehicle by which it is conducted, just as the strength of an electric shock depends both on the original intensity of the current and the condition of the conductor

—*Encyclopaedia of Religion and Ethics*, Vol. IV, p 369.

ಶಪಿಸುವುದು ಹೇಗೆ ಸರಿಯಲ್ಲ ಎಂಬುದನ್ನು ಅವರು ಅವಳಿಗೆ ಮನಗಾಣಿಸಿದನು. ಹೀಗಾಗಿ ಅವಳು ಅವನನ್ನು ಶಪಿಸದೆ ತಪ್ಪಿಸಿದ್ದರೂ ಪಾಂಡವರ ಬಗೆಗಿನ ತನ್ನ ಕೋಪವನ್ನು ಮರೆಯದಾದಳು. ಯುಧಿಷ್ಠಿರನು ಮಾತ್ರ ಸಂಹಾರದ ಇಡಿಯ ಹೊಣೆಯನ್ನು ಹೊತ್ತನು. ಅವನು ಗಾಂಧಾರಿಗೆ, 'ನಿನ್ನ ಮಕ್ಕಳ ವಧೆಗೂ, ಈ ಪೃಥ್ವಿಯ ನಾಶಕ್ಕೂ ನಾನೇ ಕಾರಣನು, ಶಾಪಹೊಂದಲು ಅರ್ಹನು. ನನ್ನನ್ನು ಶಪಿಸು' ಎಂದೆನ್ನುತ್ತಾನೆ.[32] ಒಟ್ಟಿನಲ್ಲಿ, ಶಾಪವನ್ನು ನೀಡುವುದೆಂದರೆ ನಿಂದನೀಯವಾದುದೇ ಸರಿ. ವೈದಿಕ ಆರ್ಯರು ಶಾಪವನ್ನು ನಿಷೇಧಿಸಿದ್ದಾರೆ. 'ಸಕಾರಣ ಇಲ್ಲವೆ ಅಕಾರಣ ಶಾಪವನ್ನೀಯುವವನು ಸಿಡಿಲು ಬಡಿದ ಮರದ ಹಾಗೆ ಸುಟ್ಟುಹೋಗಲಿ' ಎಂಬುದು ಅಥರ್ವವೇದದ ಪ್ರಾರ್ಥನೆಯಾಗಿದೆ. ಶಾಪವು ತಿರುಗುಬಾಣದಂತೆ ಅದನ್ನಿತ್ತವನಿಗೇ ತಗಲಬಾರದೆಂದೇನೂ ಇಲ್ಲ. ಹೀಗಾಗಿ, ಅದನ್ನೀಯುವಾಗ ಬಲು ಎಚ್ಚರದಿಂದಿರಬೇಕಿದೆ. ಇಷ್ಟಾಗಿಯೂ ಎಲ್ಲ ಸರಿಹೋದೀತೆಂಬ ಖಚಿತತೆಯೂ ಇರುತ್ತಿರಲಿಲ್ಲ. ತಿರುಗುಮುರುಗಾಗುವ ಶಾಪವನ್ನು ಕುರಿತು ಗ್ರಿಮ್ ಹೀಗೆಂದಿದ್ದಾನೆ: 'Curses like chickens come home to roost. They turn home as birds to the nest.'[33]

ಪ್ರಾಚೀನ ಸಮಾಜದಲ್ಲಿ ಕಟ್ಟಳೆಗಳು ಹುಟ್ಟಿಕೊಳ್ಳುವ ಮೊದಲಿನ ಕಾಲ. ಅಂದು, ಶಾಪ/ವರಗಳು ಸಮಾಜದ ಸ್ಥಿರತೆ ಹಾಗೂ ಆರೋಗ್ಯವನ್ನು ಕಾಪಾಡಿಕೊಳ್ಳುವ ಕೆಲಸವನ್ನು ಮಾಡಿದವು. ಶಾಪವು ಒಂದು ಪ್ರಭಾವಶಾಲಿಯಾದ ದಂಡಶಕ್ತಿ ಎನ್ನಿಸಿದೆ. ಸಮಾಜ ಶಾಪದ ಶಿಕ್ಷೆಗೆ ಹೆದರುತ್ತಿತ್ತು. ಒಬ್ಬನಿಗೆ ದೊರೆತ ಶಾಪ ಉಳಿದವರಿಗೆ ಒಂದು ಎಚ್ಚರಿಕೆಯ ಉದಾಹರಣೆ ಎನ್ನಿಸುತ್ತಿತ್ತು. ಪಾಪಭೀರುಗಳಾದ ಸಾಮಾನ್ಯ ಜನತೆ ಸಮಾಜವಿರೋಧಿಯಾದ ಕೃತ್ಯಗಳಿಂದ ದೂರವುಳಿಯಲು ಇವುಗಳಿಂದ ನೆರವಾಗುತ್ತಿತ್ತು. ಶಾಪಗಳಿಂದಾಗಿ ಮಾನವನ ಬದುಕಿನಲ್ಲಿ ಹಲವು ಸಲ ನಾಟ್ಯಮಯವಾದ ಘಟನೆಗಳು ನಡೆದಿದ್ದರೂ ಶಾಪಗಳ ಪರಿಕಲ್ಪನೆಯ ಸಮಾಜಧಾರಣೆಗೆ ಉಪಯುಕ್ತವಾದ ಸಂಗತಿಯಾಗಿತ್ತು.

## ಶಾಪಗಳಿಗೆ ಕಾರಣಗಳು

ಧರ್ಮದ ಪಾಲನೆ, ಅಧರ್ಮದ ನಿವಾರಣೆ ಹಾಗೂ ಸಮಾಜದ ಆರೋಗ್ಯವನ್ನು ಕಾಪಾಡುವುದಕ್ಕಾಗಿಯೂ, ಅವುಗಳಿಗೆ ಬಾಧೆ ತಟ್ಟಕೂಡದೆಂದೂ ನೀಡಲಾದ ಶಾಪಗಳನ್ನು ಧಾರ್ಮಿಕಗಳೆನ್ನಲಾಗಿದೆ. ಅಭಿಚಾರದಿಂದ ಕೂಡಿದ ಶಾಪದ ಗುರಿಯೆಂದರೆ ಐಹಿಕ ಹಾಗೂ ವ್ಯಕ್ತಿಗತವಾದ ಬಯಕೆಗಳನ್ನು ಈಡೇರಿಸಿಕೊಳ್ಳುವುದು. ಮಹಾಭಾರತದಲ್ಲಿಯ ಒಟ್ಟು ಶಾಪಗಳಲ್ಲಿ ದೇವತೆಗಳು ಹಾಗೂ ಸ್ತ್ರೀಯರು ನೀಡಿದವುಗಳು ತೀರ ಕಡಿಮೆ. ಅವರ ಒಲವು ಶಾಪಗಳತ್ತ ಅಷ್ಟಾಗಿ ಇಲ್ಲ. ಮಾನವರು ತಮಗಿಂತಲೂ ಪ್ರಬಲರಾಗ

---

32. ಪುತ್ರಹಂತಾ ನೃಶಂಸೋಽಹಂ ತವ ದೇವಿ ಯುಧಿಷ್ಠಿರಃ ।
ಶಾಪಾರ್ಹಃ ಪೃಥಿವೀನಾಶೇ ಹೇತುಭೂತಃ ಶಪಸ್ವ ಮಾಮ್ ॥ —ಸ್ತ್ರೀ, ೧೫/೨೬

33. *Encyclopaedia of Religion and Ethics*, Vol. IV, p 369.

ಕೂಡದೆಂಬ ಬಗೆಗೆ ಮಾತ್ರ ದೇವತೆಗಳು ಜಾಗ್ರತೆಯಿಂದಿರುವಂತಿದೆ. ತಪಸ್ವಿಯೊಬ್ಬನು ಅಸಾಧ್ಯವಾದುದನ್ನು ಸಾಧ್ಯಗೊಳಿಸಲು ಸಿದ್ಧನಾದನೆಂದರೆ ದೇವತೆಗಳು ಅವನಿಂದ ಶಾಪ ವನ್ನೀಯುಹಚ್ಚಿ ಅವನ ತಪಸ್ಸಿನ ಸಾಮರ್ಥ್ಯವನ್ನು ಕಡಿಮೆ ಮಾಡುವ ಹವಣಿಕೆಯಲ್ಲಿರು ತ್ತಾರೆ. ತಪೋಭಂಗಕ್ಕಾಗಿ ಅಪ್ಸರೆಯರನ್ನು ಬಳಸಲಾಗುತ್ತಿತ್ತು. ಶಾಪ ನೀಡಲು ಋಷಿ-ಮುನಿಗಳಿಗೆ ತೀರ ಚಿಲ್ಲರೆ ಕಾರಣವೂ ಸಾಕಿತ್ತು. ಕೋಪ, ಅಸೂಯೆ, ಅಸಂತೋಷ, ಅಸಮಾಧಾನ ಮೊದಲಾದ ಹಲವಾರು ಸಂಗತಿಗಳು ಶಾಪಗಳ ಹಿಂಬದಿಯಲ್ಲಿ ಕೆಲಸ ಮಾಡುತ್ತಿದ್ದವು. ಅವುಗಳ ಅಭಿವ್ಯಕ್ತಿಗಾಗಿ ನಿಮಿತ್ತಗಳೂ ಹಲವು. ತಪೋಭಂಗ, ವ್ರತಭಂಗ, ಆಜ್ಞಾಭಂಗ, ವಚನಭಂಗ ಪ್ರತಿಜ್ಞಾಭಂಗ, ಶೀಲಭಂಗ, ರಾಜ್ಯಹಾನಿ, ವಿತ್ತಹಾನಿ, ಅಪತ್ಯಹಾನಿ, ವಧೆ, ಮೃತ್ಯು, ನಾಶ, ಕೊಳ್ಳೆಯಿಡುವುದು, ಜಗಳ, ಹಿಂಸೆ, ಅವಮರ್ಯಾದೆ, ಅಪ್ರತಿಷ್ಠೆ, ಅಪಹೇಳನೆ, ಕರ್ತವ್ಯಚ್ಯುತಿ, ಅಪ್ರಿಯವಾದ ಸತ್ಯವನ್ನು ಹೇಳುವುದು, ರಾಜ್ಯದಾಸೆ, ಹೆಣ್ಣಿನಾಸೆ, ಪ್ರಣಯಾರಾಧನೆ, ಕಾಮಕೇಳಿ, ಸಂತಾನ ಪ್ರಾಪ್ತಿಯಲ್ಲಿ ವಿಘ್ನ, ಒಲುಮೆಯ ವ್ಯಕ್ತಿಯ ಸಾವು, ಮದುವೆಯ ಮುರುಗಡ, ಕನ್ನ, ಚಾಡಿಕೋರತನ, ಅಲಕ್ಷ್ಯ ಮೊದಲಾದ ಹಲವಾರು ಕಾರಣಗಳಿಂದಾಗಿ ಶಾಪವನ್ನೀಯ ಲಾಗುತ್ತಿತ್ತು.

ಶಾಪದ ಒಂದು ಮುಖ್ಯ ಕಾರಣ ಆಜ್ಞೆಯನ್ನು ಮೀರುವುದು. ತಮ್ಮ ಮಕ್ಕಳು ಅಪ್ಪಣೆಗಳನ್ನು ಮೀರಿದ್ದ ಕಾರಣಗಳಿಗಾಗಿ ಯಯಾತಿ, ಜಮದಗ್ನಿ ಹಾಗೂ ವಿಶ್ವಾಮಿತ್ರರು ಅವರನ್ನು ಬಲುಕಠೋರವಾಗಿ ಶಪಿಸಿದ್ದಾರೆ. ಅಪ್ಪಣೆಯನ್ನು ಮೀರಿದ ಳೆಂದು ಜಮದಗ್ನಿಯು ತನ್ನ ಮಡದಿಯನ್ನು ಶಪಿಸಲು ಹಿಂಜರಿದವನಲ್ಲ. ವಡವಾಮುಖನ ಕರೆಯನ್ನು ಮನ್ನಿಸಿ ಅವನಲ್ಲಿಗೆ ಹೋಗಲು ಹಿಂಜರಿದುದಕ್ಕಾಗಿ ಕಡಲು ಹಾಗೂ ಬ್ರಹ್ಮ ದೇವನ ಸಭೆಗೆ ಬಾರದ್ದಕ್ಕಾಗಿ ರಾಜಧರ್ಮ ಬಕಪಕ್ಷಿಯು ಶಾಪಕ್ಕೀಡಾಗಬೇಕಾಯಿತು. ಅದಿತಿಯು ದೇವತೆಗಳಿಗೆಂದು ತಯಾರಿಸಿದ ಆಹಾರವನ್ನು ಅವರಿಗಿಂತಲೂ ಮೊದಲು ಬುಧನಿಗೆ ನೀಡಲು ನಿರಾಕರಿಸಿದ್ದರಿಂದ ಅವಳಿಗೂ ಶಾಪದ ಬಿಸಿ ತಟ್ಟದಿರಲಿಲ್ಲ. ರಂಭೆ, ವರ್ಗಾ, ಸೌರಮೇಯಿ, ಸಮೀಚಿ. ಬುದ್ಬುದೆ ಹಾಗೂ ಲತೆ ಎಂಬ ಅಪ್ಸರೆಯರು ಶಾಪ ಗಳಿಗೀಡಾಗಲು ಅವರಿಂದಾದ ತಪೋಭಂಗಗಳೇ ಕಾರಣ. ಅಗಸ್ತ್ಯನ ಮೈಮೇಲೆ ಉಗಿದ ಕಾರಣಕ್ಕಾಗಿ ಮಣಿಮಾನ ಯಕ್ಷ ಶಾಪವನ್ನು ಬರಮಾಡಿಕೊಳ್ಳುವಂತಾಯಿತು. ಅದು ಅವನನ್ನಷ್ಟೇ ಅಲ್ಲದೆ ಕುಬೇರನನ್ನೂ, ಅವನ ಸೈನಿಕರನ್ನೂ ತಟ್ಟಿತು. ನಹುಷನು ಅಗಸ್ತ್ಯನ ತಲೆಗೂ, ಅವನ ಜೊತೆಯಲ್ಲಿ ಕುಳಿತಿದ್ದ ಭೃಗುವಿಗೂ ಒದೆತವನ್ನು ಇಕ್ಕಿದ್ದ ರಿಂದ ಅವರ ಭಯಂಕರವಾದ ಶಾಪಗಳಿಗೆ ಗುರಿಯಾದನಲ್ಲದೆ ಶಚಿಯಂತೂ ಅವನಿಗೆ ದಕ್ಕಲೇ ಇಲ್ಲ. ಕೌಶಿಕ ಋಷಿಯ ಮೈಮೇಲೆ ಹೇಸಿಕೆ ಚೆಲ್ಲಿದ್ದಕ್ಕಾಗಿ ಕೊಕ್ಕರೆ ಸಾವಿಗೆ ಈಡಾಗಬೇಕಾಯಿತು. ಮದಾಂಧನಾದ ಬಾಲಧಿಯ ಮಗ ಮೇಧಾವಿಯು ಧನುಷಾಕ್ಷ ರಾಕ್ಷಸನನ್ನು ಪೀಡಿಸಿದ್ದಕ್ಕಾಗಿ ಹಾಗೂ ತುರ್ತುಪರಿಸ್ಥಿತಿಯಿಂದಾಗಿ ಶಿಖಂಡಿಯ ಹೆಣ್ಣು-ತನವನ್ನು ತಾನು ಪಡೆದು ಯಕ್ಷರ ಪಂಗಡವು ತಮ್ಮ ತಲೆತಗ್ಗಿಸುವಂತೆ ಮಾಡಿದ್ದಕ್ಕಾಗಿ ಸ್ಥೂಣಕರ್ಣನು ಶಾಪಿತನಾಗಬೇಕಾಯಿತು.

ಹಿರಣ್ಯಕಶಿಪುವಿಗೆ ಶಾಪಬರಲು ಕಾರಣ ಅವನು ವಸಿಷ್ಠರ ಪೌರೋಹಿತ್ಯವನ್ನು

ಧಿಕ್ಕರಿಸಿ, ಇನ್ನೊಬ್ಬರಿಂದ ಯಜ್ಞಕರ್ಮಗಳನ್ನು ನೆರವೇರಿಸಿ ವಸಿಷ್ಠರಿಗೆ ತೋರಿದ ಅಗೌರವ ಹಾಗೂ ಅವರಿಗಾದ ಅಪಮಾನಗಳೇ ಸರಿ. ಪರೀಕ್ಷಿತ ರಾಜನು ಶಮೀಕ ಋಷಿಯ ಮೈಮೇಲೆ ಸತ್ತ ಹಾವನ್ನು ಎಸೆದುದಕ್ಕಾಗಿಯೂ, ಸಹಸ್ರಪಾತನು ಖಗಮ ಋಷಿಯ ಮೈಮೇಲೆ ಹುಲ್ಲಿನ ಹಾವನ್ನೆಸೆದುದಕ್ಕಾಗಿಯೂ ಶಾಪಕ್ಕೆ ಬಲಿಯಾದರು. ಸಾಂಬ ಮೊದಲಾದ ಯಾದವರು ಬ್ರಾಹ್ಮಣರನ್ನು ಕುಚೋದ್ಯಕ್ಕೀಡುಮಾಡಿದುದು ಅವರಿಗೆ ದುಬಾರಿಯಾಯಿತು. ಚಾಡಿ ಹೇಳುವುದು ಕೆಟ್ಟ ಸಂಗತಿ. ಭೃಗುವಿನ ಮಡದಿಯ ಮಾಹಿತಿಯನ್ನು ರಾಕ್ಷಸನಿಗೆ ನೀಡಿದುದಕ್ಕಾಗಿ ಅಗ್ನಿ, ಅಗ್ನಿಯ ಅಸ್ತಿತ್ವದ ನಿಗೂಢತೆಯನ್ನು ಹೊರಗೆಡಹಿದ್ದಕ್ಕಾಗಿ ಮೀನು, ಆನೆ, ಕಪ್ಪೆ ಹಾಗೂ ಗಿಳಿಗಳು ತಮ್ಮ ಮೇಲೆ ಶಾಪಗಳನ್ನು ಎಳೆದುಕೊಂಡರು. ಗೃತ್ಸಮದನು ತನ್ನ ಮೇಲಿನವರ ವರಣದಲ್ಲಿಯ ತಪ್ಪುಗಳನ್ನು ತೋರಿಸಿಕೊಟ್ಟಿದ್ದಕ್ಕಾಗಿ ಅವರ ಶಾಪಕ್ಕೆ ಗುರಿಯಾದನು. ಕಹೋಡನ ಮಗನು ಬಸಿರಲ್ಲಿರುವಾಗಲೇ ತನ್ನ ತಂದೆಯ ಶಾಪಕ್ಕೀಡಾದನು. ತನ್ನ ಗುರುಪತ್ನಿಯನ್ನು ಕಾಪಾಡುವ ಒಳ್ಳೆಯ ಉದ್ದೇಶದಿಂದಲೇ ವಿಪುಲನು ತನ್ನ ಯೋಗಬಲದಿಂದ ಅವಳ ದೇಹವನ್ನು ತಾನು ಹೊಕ್ಕ ಸಂಗತಿಯನ್ನು ತನ್ನ ಗುರುವಿಗೆ ಹೇಳದ್ದಕ್ಕಾಗಿ ಶಾಪವನ್ನನು ಭವಿಸಿದನು. ದ್ಯೌನಿಯು ವಸಿಷ್ಠನ ಕಾಮಧೇನುವನ್ನು ಕಳ್ಳತನದಿಂದ ಓಡಿಸಿಕೊಂಡು ಹೋದುದರಿಂದ, ಕರ್ಕೋಟಕನು ನಾರದನನ್ನು ಮೋಸಗೊಳಿಸಿದ್ದರಿಂದ, ಸುಶೋಭನೆಯು ಹಲವು ಜನ ರಾಜರನ್ನು ವಂಚಿಸಿದುದರಿಂದ, ಬ್ರಾಹ್ಮಣನ ಸೋಗುಹಾಕಿ ಕರ್ಣನು ಬ್ರಹ್ಮಾಸ್ತ್ರವನ್ನು ಪಡೆಯಲು ಹವಣಿಸಿದ್ದರಿಂದ ಹಾಗೂ ಸರಸ್ವತಿ ಹೊಳೆಯು ಕಣ್ಣು ತಪ್ಪಿಸುವುದರಿಂದ ಶಾಪಗಳಿಗೀಡಾಗಬೇಕಾಯಿತು. ಈ ಶಾಪಗಳಿಗೆ ಮುಖ್ಯವಾದ ಕಾರಣ ಗಳೆಂದರೆ ಠಕ್ಕು, ಮೋಸ, ಕಳವುಗಳು. ಅಶ್ವಸೇನ ನಾಗನ ತಾಯಿಯು ಖಾಂಡವವನ ದಿಂದ ಮಗುವನ್ನು ಎತ್ತಿಕೊಂಡು ಒಯ್ಯುವ ಹವಣಿಕೆಗಾಗಿ ತನ್ನ ಜೀವವನ್ನೇ ತೆರಬೇಕಾ ಯಿತು. ಸುಪ್ರತೀಕನು ಪ್ರಾಪ್ತಿಯಲ್ಲಿ ಪಾಲು ಕೇಳಿದ್ದಕ್ಕಾಗಿ, ರಾವಣನು ಪುಷ್ಪಕವಿಮಾನ ವನ್ನು ಅಪಹರಣ ಮಾಡಿದ್ದಕ್ಕಾಗಿ, ಒಡಹುಟ್ಟಿದವನಿಂದ ಏಕತ ಹಾಗೂ ದ್ವಿತರಿಗೆ ಅವರ ಹಣದಾಸೆಗಾಗಿಯೂ ಶಾಪಗಳು ದೊರೆತವು. ಇವುಗಳಿಗೆ ಕಾರಣ ಹಣ ಹಾಗೂ ರಾಜ್ಯದ ಆಸೆ.

ಶಾಪ–ಕೋಪಗಳ ನಡುವೆ ಮಗ–ತಂದೆಯ ನಂಟಿದೆ. ಹೀಗಾಗಿ ಕೋಪದಿಂದ ಹುಟ್ಟಿ ಬಂದ ಶಾಪಗಳು ಹೇರಳವಾಗಿವೆ. ತಾನಿನ್ನೂ ಸರಿಯಾಗಿ ಕಾವು ಕಾಣದ ತತ್ತಿಯಾಗಿರು ವಾಗಲೇ ಅದನ್ನೊಡೆದು ತನ್ನನ್ನು ಬಾಳಿಡೀ ಅಂಗವಿಕಲನನ್ನಾಗಿ ಮಾಡಿದುದಕ್ಕಾಗಿ ಅರುಣನು ತನ್ನ ಅಮ್ಮ ವಿನತೆಯನ್ನು ಶಪಿಸಿದನು. ಕೊಟ್ಟ ಮಾತಿಗೆ ತಪ್ಪಿದ್ದಕ್ಕಾಗಿ ನಾರದನ ಸೋದರನ ಮಗ ಪರ್ವತಋಷಿಯು ಅವನನ್ನು ಶಪಿಸುತ್ತಾನೆ. ನಚಿಕೇತನು ತನ್ನ ತಂದೆಯಾದ ಉದ್ದಾಲಕನು ತನಗೊಪ್ಪಿಸಿದ ಕೆಲಸವನ್ನು ಮಾಡದ್ದಕ್ಕಾಗಿ ಶಾಪಿತ ನಾದನು. ಇಲ್ಲಿ, ತೀರ ಹತ್ತಿರದವರೇ ತಡೆದುಕೊಳ್ಳಲಾಗದ ಕೋಪದಿಂದಾಗಿ ಶಾಪವನ್ನಿ ತ್ತಿರುವುದನ್ನು ಕಾಣಬಹುದು. ಕಪಿಲನ ಕೋಪದಿಂದ ಸಗರನ ಅರವತ್ತುಸಾವಿರ ಜನ ಮಕ್ಕಳು ಸುಟ್ಟು ಬೂದಿಯಾದರು. ನಾಸ್ತಿಕನಾಗಿದ್ದ ವಾಲ್ಮೀಕಿಯು ಮುನಿಗಳ ಶಾಪ ವನ್ನು ಸಹಿಸಿಕೊಳ್ಳಬೇಕಾಯಿತು. ದೇವಶುನಿಯು ಮಗನು ಜನಮೇಜಯ ಹಾಗೂ ಅವನ

ಸೋದರನಿಂದ, ಇಕ್ಕಟ್ಟಾದ ಹಾದಿಯಲ್ಲಿ ಬರುತ್ತಿದ್ದ ಕಲ್ಮಾಷಪಾದನಿಗೆ ದಾರಿಯನ್ನು ಬಿಟ್ಟುಕೊಡದ್ದಕ್ಕಾಗಿ ಶಕ್ತಿಯು ಅವನಿಂದ, ಬ್ರಾಹ್ಮಣನು ವೃಷದರ್ಭನಿಂದ, ಋಷಿಗಳನ್ನು ಹೊಡೆದು ಬಡಿದು ಅವರನ್ನು ಪೀಡಿಸಿದುದಕ್ಕಾಗಿ ಸುಂದೋಪಸುಂದರು ಆ ಋಷಿಗಳಿಂದ ಶಾಪವನ್ನು ಪಡೆಯಬೇಕಾಯಿತು. ದುರ್ಯೋಧನನಿಗೆ ಮೈತ್ರೇಯನಿಂದ, ಪುರೂರವನಿಗೆ ಋಷಿಗಳಿಂದ ಹಾಗೂ ಕೃಷ್ಣನಿಗೆ ಗಾಂಧಾರಿಯಿಂದ ಶಾಪಗಳು ದೊರಕಲು ಅವರೆಲ್ಲ ತೋರಿದ ಅಸಡ್ಡೆಯೇ ಕಾರಣ. ಇದೇ ಕಾರಣದಿಂದಾಗಿ ಉತ್ತಂಕನು ಪೌಷ್ಯರಾಜನಿಗೂ, ದಕ್ಷನು ಸೋಮ(ಚಂದ್ರ)ನಿಗೂ ಶಾಪವನ್ನಿತ್ತಿರುವರು. ಜನಮೇಜಯನಿಂದ ತಪ್ಪಿನಡೆದ ಬ್ರಹ್ಮಹತ್ಯೆಗಾಗಿ ಅವನಿಗೆ ಇಂದ್ರೋತನ ಶಾಪ ಹಾಗೂ ಗೌತಮನು ಬೇಕೆಂದೇ ಗೆಳೆಯನಿಗೆ ದ್ರೋಹ ಬಗೆದುದಕ್ಕಾಗಿ ದೇವತೆಗಳ ಶಾಪಗಳನ್ನು ಸಹಿಸಿಕೊಳ್ಳದೆ ಬೇರೆ ವಿಧಿಯಿರಲಿಲ್ಲ.

ಮಹಾಭಾರತದಲ್ಲಿಯ ಕೆಲವು ಶಾಪಗಳು ಗಂಡು–ಹೆಣ್ಣಿನ ಸಂಬಂಧಗಳನ್ನು ಕುರಿತಾದವುಗಳು. ಭೃಗುವು ಹಿಮವತ್‌ನಿಗೆ ಶಾಪವನ್ನೀಯಲು ಕಾರಣ ಅವನು ತನ್ನ ಮದುವೆಯ ಕೋರಿಕೆಯನ್ನು ತಳ್ಳಿಹಾಕಿದುದು. ತನ್ನ ಗುರುವಿನ ಮಡದಿ ರುಚಿಯೊಂದಿಗೆ ಸಂಭೋಗವನ್ನು ಬಯಸಿದ್ದಕ್ಕಾಗಿ ಇಂದ್ರನಿಗೆ ವಿಪುಲನಿಂದ ಶಾಪ ದೊರಕಿತು. ವಿಪುಲನು ಇಂದ್ರನನ್ನು ತುಂಬ ಹೀಯಾಳಿಸಿದನು. ಜಿಗರೆಯ ರೂಪವನ್ನು ಪೊಂದಿ ತನ್ನ ಮಡದಿಯೊಂದಿಗೆ ಕಾಮಕೇಳಿಯಲ್ಲಿ ರತನಾದ ಕಿಂದಮಋಷಿಯ ಶಾಪ ಪಾಂಡುವಿಗೆ ತಟ್ಟಿತು. ಬೃಹಸ್ಪತಿ ತನ್ನ ಅತ್ತಿಗೆಯನ್ನು ಬಲವಂತದಿಂದ ಸಂಭೋಗಿಸಬಯಸಿದಾಗ ಅವಳ ಬಸಿರಲ್ಲಿದ್ದ ಉತಥ್ಯನ ಮಗು ಅವನನ್ನೆದುರಿಸಲು ಹವಣಿಸಿ ಶಾಪಕ್ಕೆ ಗುರಿಯಾಗುತ್ತದೆ. ರತಿಕ್ರೀಡೆಯಲ್ಲಿ ಅಡ್ಡಿಯನ್ನುಂಟುಮಾಡಿದುದೇ ಈ ಶಾಪಕ್ಕೆ ಕಾರಣ. ವ್ಯಾಸ ಹಾಗೂ ಕೃಷ್ಣರು ಉತ್ತರೆಯ ಬಸಿರಿನ ಮೇಲೆ ಬ್ರಹ್ಮಾಸ್ತ್ರವನ್ನು ಎಸೆಯುವ ಅಶ್ವತ್ಥಾಮನನ್ನು ಶಪಿಸಿದರು. ರಂಭೆ, ಅಹಲ್ಯೆ ಹಾಗೂ ಆರಟ್ಟನಾಡಿನ ಗರತಿಯೋರ್ವಳ ಮೇಲೆ ಅತ್ಯಾಚಾರವೆಸಗಿದ ಕಾರಣಕ್ಕಾಗಿ ಕ್ರಮವಾಗಿ ರಾವಣ, ಇಂದ್ರ ಹಾಗೂ ಕಳ್ಳರು ಬಲುಕಠೋರವಾದ ಶಾಪಗಳನ್ನು ಹೊಂದಿದರು. ತುಂಬಿದ ಸಭೆಯಲ್ಲಿ ಗಾಳಿ ಬೀಸಿದ ಕಾರಣ ಗಂಗೆಯ ಮೈಯ ಮೇಲಿನ ಉಡುಗೆತೊಡುಗೆಗಳು ಹಾರಿದಾಗ ಮಹಾಭಿಷನು ಅವಳ ತೆರೆದ ಮೈಮೇಲೆ ಕಣ್ಣಾಡಿಸಿದುದನ್ನು ಕಂಡು ಬ್ರಹ್ಮದೇವನು ಅವನನ್ನು ಶಪಿಸಿದನು. ದಂಶರಾಜನು ಭೃಗುವಿನ ಕಠೋರವಾದ ಶಾಪಕ್ಕೆ ಈಡಾಗಲು ಕಾರಣವೇನೆಂದರೆ ಈ ರಾಜನು ಭೃಗುವಿನ ಮಡದಿಯನ್ನು ಅಪಹರಿಸಲು ಯತ್ನಿಸಿದುದು.

ಶಾಪಗಳಿಗೆ ಮುಖ್ಯವಾದ ಕಾರಣಗಳಲ್ಲಿ ಕೊಲೆ, ಸಾವುಗಳೂ ಉಂಟು. ಚಿಲ್ಲರೆ ಕಾರಣಗಳಿಗಾಗಿ ಮರಣದ ಶಿಕ್ಷೆಯನ್ನೀಯುತ್ತಲಿದ್ದ ಯಮಧರ್ಮನಿಗೆ ಅಣಿಮಾಂಡವ್ಯ ಋಷಿಯಿಂದ ಶಾಪ ಸಿಕ್ಕಿತು. ತನ್ನ ಮಗನನ್ನು ಕೊಂದ ರೈಭ್ಯನಿಗೆ ಭಾರದ್ವಾಜ ಋಷಿಯ ಶಾಪ, ಬ್ರಾಹ್ಮಣನೋರ್ವನ ಯಜ್ಞದ ಹಸುವಿಗೆ ತಪ್ಪಿ ಬಾಣ ತಗಲಿದ್ದಕ್ಕಾಗಿ ಕರ್ಣನಿಗೆ ಶಾಪ. ತನ್ನನ್ನು ಉಪಕರಿಸಿದ ಋಷಿಯನ್ನೇ ನುಂಗಹೊರಟ ಶರಭನಿಗೆ (ನಾಯಿಗೆ) ಶಾಪ ದೊರಕಲು ಕಾರಣ ಸಾವು. ವ್ಯಾಸ, ಉತ್ತಂಕ, ವಿಭಾವಸು, ದೇವಯಾನಿ, ವಸಿಷ್ಠ, ಪರ್ವತ ಹಾಗೂ ವಿಶ್ವಾಮಿತ್ರರಂತಹ ಋಷಿಗಳು ಶಾಪವನ್ನೀಯಲು ಕಾರಣಗಳೆಂದರೆ

ಅವರಿಗೆ ತಟ್ಟಿದ ಶಾಪಗಳೇ ಆಗಿವೆ. ಶಾಪದ ಇನ್ನಿತರ ಕಾರಣಗಳೆಂದರೆ ಮದೋನ್ಮತ್ತ ನಾದ ಕಾರ್ತವೀರ್ಯನು ಭಯಂಕರವಾಗಿ ಕೊಳ್ಳೆಯಿಕ್ಕುತ್ತಹೋದುದು, ನೆರೆಗುಂಡುಕ ರಾದ ಬ್ರಾಹ್ಮಣರು, ಅಶುದ್ಧ ನೀರು, ಅಶುದ್ಧವಾದ ಆಹಾರ, ಶ್ರಾದ್ಧಕ್ಕೆಂದು ಕಾದಿರಿಸಿದ ಹಾಲನ್ನು ಅಶುದ್ಧಗೊಳಿಸಿದುದು, ಹಿಂಸಾಪ್ರಧಾನವಾದ ಯಜ್ಞಗಳನ್ನು ಬೆಂಬಲಿಸುವ ದೇವತೆಗಳ ಬದಿಯವರಾಗುವುದು, ಹೊತ್ತಲ್ಲದ ಹೊತ್ತಿನಲ್ಲಿ ಹೂಬಿಡುವುದು, ಕರ್ಣನ ಹುಟ್ಟಿನ ಗುಟ್ಟು ಮೊದಲೇ ತಿಳಿದುಬಾರದ್ದರಿಂದಾದ ಸಂಹಾರ ಮೊದಲಾದವುಗಳು.

ಮಹಾಭಾರತದಲ್ಲಿಯ ಹದಿನಾರು ಶಾಪಗಳಿಗೆ ಖಚಿತವಾದ ಕಾರಣಗಳು ತಿಳಿದು ಬಂದಿಲ್ಲ. ಅವುಗಳಲ್ಲಿ (ಕ್ರ: ೬೦, ೬೮, ೧೩೭ ಮತ್ತು ೧೪೨) ನಾಲ್ಕು ಶಾಪಗಳನ್ನು ನೀಡಿದವರಾರೆಂ ಎಂಬುದು ಕೂಡ ಖಚಿತವಾಗಿ ತಿಳಿದಿಲ್ಲ. ಮೂವತ್ತೈದು ಅನುಚ್ಚಾರಿತ ವಾದ ಶಾಪಗಳಿವೆ. ಇವುಗಳನ್ನು ಕುರಿತು ಹಾಗೂ ಸ್ತ್ರೀಯರು ನೀಡಿದ ಶಾಪಗಳನ್ನು ಕುರಿತು ಬೇರೆಡೆಯಲ್ಲಿ ವಿವೇಚಿಸಲಾಗಿದೆ.

## ಶಾಪಗಳ ಪರಿಣಾಮಗಳು

ಶಾಪಗಳ ಪರಿಣಾಮಗಳು ಹಲವು ಬಗೆಯವು. ಅವು ಬಲು ದಾರುಣವಾದವುಗಳು, ಅಘೋರವಾದವುಗಳು, ದಾಹಕವಾದವುಗಳಲ್ಲದೆ ಕಷ್ಟಕರವಾದವುಗಳೂ ಅಹುದು. ಅವು ಬಹುಕಾಲ ಉಳಿದುಕೊಳ್ಳುವಂಥವುಗಳು. ಬಾಳಿನ ಯಾವುದೇ ಹಂತದಲ್ಲೂ ಶಾಪ ಕ್ಕೀಡಾಗುವ ಸಾಧ್ಯತೆ ಇರುತ್ತದೆ. ಹೀಗಾಗಿ ಬಸಿರಿನಿಂದ ಹಿಡಿದು ಸಾವಿನವರೆಗೆ, ಕೆಲವು ಸಲವಂತೂ ಆಮೇಲೆ ಕೂಡ ಶಾಪಗಳನ್ನು ಅನುಭವಿಸಬೇಕಿದೆ. ಶಾಪಗಳ ಹಲವು ಬಗೆಯ ಪರಿಣಾಮಗಳೆಂದರೆ ಕೊಲೆ, ಸಾವು, ನಾಶ, ಸುಡುವುದು. ಹೀನಾವಸ್ಥೆ, ಕೀಳ್ಮಟ್ಟದ ಹುಟ್ಟು, ದೇಹದ ವಿಕೃತಿ, ಸಂತತಿಯ ನಾಶ, ತಮ್ಮವರಿಂದ ದೂರಾಗುವುದು, ಕಾಮ ವಾಸನೆ ಈಡೇರದಿರುವುದು, ರಾಜ್ಯವನ್ನು ಕಳೆದುಕೊಳ್ಳುವುದು, ಹಣವನ್ನು ಕಳೆದು ಕೊಳ್ಳುವುದು, ಹೆಣ್ಣಿನ ಸುಖವನ್ನು ಪಡೆಯದಿರುವುದು, ಅಕಾಲಿಕವಾದ ಮುಪ್ಪು, ಸ್ವರ್ಗಚ್ಯುತಿ, ಸ್ವರ್ಗವನ್ನು ಪಡೆಯುವುದರಲ್ಲಿ ಅಡೆತಡೆ-ವಂಚನೆ ಮೊದಲಾದವುಗಳು.

ಮಹಾಭಾರತವು ಮುಖ್ಯವಾಗಿ ಯುದ್ಧದ ಕಥೆಯಾಗಿದೆ. ಅದರಲ್ಲಿರುವ ಒಟ್ಟು ಶಾಪಗಳ ಪೈಕಿ ಐದರಲ್ಲಿ ಒಂದು ಪಾಲು ಶಾಪಗಳ ಪರಿಣಾಮ ಎಂದರೆ ಕೊಲೆ, ಸಾವು. ಬ್ರಹ್ಮನ ಶಾಪದಿಂದಾಗಿ ವೃಷ್ಣಿವೀರರು ತಮ್ಮತಮ್ಮಲ್ಲಿ ಕಾದಾಡಿ ನಾಶಹೊಂದಿದರು. ಮೈತ್ರೇಯನ ಶಾಪದಿಂದಾಗಿ ದುರ್ಯೋಧನ ಊರುಭಂಗದಿಂದ ಸಾವನ್ನಪ್ಪುವುದನ್ನು ತಪ್ಪಿಸದಂತಿತ್ತು. ಭೀಮನ ಪ್ರತಿಜ್ಞೆಯಿಂದಾಗಿಯಂತೂ ಅದು ಇನ್ನಷ್ಟು ಗಟ್ಟಿಗೊಳ್ಳು ವಂತಾಯಿತು (ಸಭಾ/೭೧). ಆಸ್ತಿಕನ ಮಂತ್ರವನ್ನು ನೆನಪಿಗೆ ತಂದುಕೊಳ್ಳಲಾಗದ ಹಾವುಗಳು ತಲೆಯೊಡೆದು ಫತಗಳ್ಳಿಯ ಹಣ್ಣುಗಳಂತೆ ಹಾಳಾಗಿಹೋದವು. ರೈಭ್ಯನ ವಧೆ ಅವನ ಮಗನಿಂದಲೇ ಎಂಬುದು ಭಾರದ್ವಾಜನ ಶಾಪದ ಅಂತಿಮವಾದ ಪರಿಣಾಮ. ಅನಾಮಿಕನೊಬ್ಬನ ಶಾಪದಿಂದಾಗಿ ಹಲವು ಜನರು ಸೌದಾಸನಿಗೆ ಬಲಿಯಾದರು. ಬ್ರಹ್ಮ ದೇವನ ಶಾಪದಿಂದಾಗಿ ಸಾವು ರಾಜಧರ್ಮದ ಕೊಕ್ಕರೆಯನ್ನು ಬಂದಪ್ಪಿತು. ವಸಿಷ್ಠನ ಶಾಪದಿಂದಾಗಿ ಹಿರಣ್ಯಕಶಿಪು ಒಂದು ಅದ್ಭುತವಾದ ಪ್ರಾಣಿಯ (ನರಸಿಂಹನ) ಕೈಯಲ್ಲಿ

ಸಾವಿಗೀಡಾದನು. ಮರುತ್ ಹಾಗೂ ಅವನ ಬಂಧುಬಾಂಧವರ ಸಂಹಾರವು ಸಂವರ್ತನ ಕೋಪವನ್ನವಲಂಬಿಸಿದ್ದಿತು. ಕಪಿಲನ ಶಾಪವಂತೂ ಎಲ್ಲಕ್ಕೂ ಬಲು ಭೀಷಣವಾದುದು. ಅರವತ್ತುಸಾವಿರ ಜನ ಸಗರಪುತ್ರರು ಅರೆನಿಮಿಷದಲ್ಲಿಯೇ ಸುಟ್ಟು ಬೂದಿಯಾದರು. ಯುದ್ಧದಲ್ಲೂ ಕೂಡ ಇಷ್ಟೊಂದು ಶೀಘ್ರವಾಗಿ ಇಂತಹ ಬೃಹತ್ಸಂಹಾರ ನಡೆಯದು.

ಮಡದಿಯನ್ನು ಕೂಡುವುದೆಂದರೆ ತನ್ನ ಸಾವಿಗೆ ಕರೆ ಎಂಬುದು ಪಾಂಡುವಿಗೆ ತಿಳಿದೂ ಕೂಡ ಆತ ತನ್ನ ಆಸೆಯನ್ನು ಹತ್ತಿಕ್ಕದೇ ಹೋದನು. ಹೀಗಾಗಿ ಅವನು ತಾನಾಗಿಯೇ ಸಾವನ್ನು ಬರಮಾಡಿಕೊಂಡಂತಾಯಿತು. ತನಗೆ ಮಕ್ಕಳಾಗಲೆಂದು ಕಲ್ಮಾಷಪಾದನು ತನ್ನ ಮಡದಿಯನ್ನು ವಸಿಷ್ಠರ ಬಳಿಗೆ ಕಳಿಸಬೇಕಾಯಿತು. ಅಗಸ್ತ್ಯನ ಶಾಪದಿಂದಾಗಿ ಮಣಿಮಾನ್ ಯಕ್ಷ ಹಾಗೂ ಅವನ ಸೈನಿಕರನೇಕರು ಯಮಲೋಕವನ್ನು ಸೇರಿದರು. ಅದರಿಂದಾಗಿ ಕುಬೇರನು ಈ ಬವಣೆಯನ್ನು ತೆಪ್ಪಗೆ ನುಂಗಿಕೊಳ್ಳಬೇಕಾಯಿತು. ನಿಮಿಯ ಶಾಪದಿಂದಾಗಿ ವಶಿಷ್ಠನ ಚೈತನ್ಯ ಉಡುಗಿತು. ಯುದ್ಧ ಶುರುವಾಗುವ ಮೊದಲಲ್ಲೇ ಯುಧಿಷ್ಠಿರನು ಭೀಷ್ಮ, ದ್ರೋಣ, ಕೃಪ ಹಾಗೂ ಶಲ್ಯರಿಂದ ಹರಕೆಗಳನ್ನು ಪಡೆಯದಿದ್ದರೆ ಅವನ ಸಾವು ಖಂಡಿತವಿತ್ತು. ನಲಕೂಬರನ ಶಾಪದಿಂದಾಗಿ ರಾವಣ ಪರಸ್ತ್ರೀಯನ್ನು ಮುಟ್ಟಲು ಸಾಹಸಪಡುತ್ತಿರಲಿಲ್ಲ ಕುಬೇರನ ಶಾಪದಿಂದಾಗಿ ರಾವಣ ತಾನಾಗಿಯೇ ತನ್ನ ಸಾವನ್ನು ಬರಮಾಡಿಕೊಂಡಂತಾಯಿತು. ನಚಿಕೇತನು ಯಮನ ಆಸ್ಥಾನಕ್ಕೆ ಬಂದುದು ತನ್ನ ತಂದೆಯ ಶಾಪದಿಂದಾಗಿ ಶಾಪವಾಣಿಯನ್ನು ಉಚ್ಚರಿಸದಿದ್ದರೆ ಅದು ಪರಿಣಾಮಕಾರಿ ಎನ್ನಿಸದು. ಆದರೆ ಕೌಶಿಕನ ಕ್ರೋಧ ಅದೆಷ್ಟು ಕೆರಳಿತ್ತೆಂದರೆ ಅವನ ಕಣ್ಣುನೋಟದಿಂದಲೇ ಕೊಕ್ಕರೆಗಳೆಲ್ಲ ಸಾವನ್ನಪ್ಪಿದವು.

ಕೀಳುಯೋನಿಯ ಹುಟ್ಟು, ಅವಮಾನಕರವಾದ ಅವಸ್ಥೆಗಳಿಗೂ ಶಾಪಗಳೇ ಕಾರಣಗಳೆನ್ನಿಸಿವೆ. ಅಣಿಮಾಂಡವ್ಯನ ಶಾಪದಿಂದಾಗಿ ಯಮಧರ್ಮ ದಾಸಿಯ ಮಗನಾಗಿ (ವಿದುರ) ಜನ್ಮತಳೆದನು. ಲತೆ, ವರ್ಗಾ, ಬುದ್ಬುದೆ, ಸೌರಮೇಯಿ ಹಾಗೂ ಸಮೀಚಿಯರೆಂಬ ಅಪ್ಸರೆಯರು ಸ್ವರ್ಗವನ್ನು ತೊರೆದು ಪೃಥ್ವಿಯ ಮೇಲೆ ನೂರು ವರ್ಷಗಳ ಕಾಲ ಮೊಸಳೆಗಳಾಗಿ ಬದುಕಬೇಕಾಗಿಬಂದುದು ಒಬ್ಬ ಬ್ರಾಹ್ಮಣನ ಶಾಪದಿಂದಾಗಿ. ಬ್ರಹ್ಮದೇವನ ಶಾಪದಿಂದಾಗಿ ಅದ್ರಿಕೆ ಎಂಬ ಅಪ್ಸರೆಗೆ ಮೀನಿನ ಜನ್ಮ ಬಂದಿತು. ಸಹಸ್ರಪಾದನ ಹಣೆಯಲ್ಲಿ ಎರೆಹುಳುವಿನ ಜನ್ಮವನ್ನು ಬರೆಯಲಾಯಿತು. ಸುಪ್ರತೀಕ ಹಾಗೂ ವಿಭಾವಸು ಇವರಿಗೆ ತಿರ್ಯಗ್‌ಯೋನಿ ಪ್ರಾಪ್ತವಾಯಿತು. ಅಷ್ಟವಸುಗಳು ಸ್ವರ್ಗಭ್ರಷ್ಟರಾಗಿ ಮಾನವಜನ್ಮವನ್ನು ತಳೆಯಬೇಕಾಯಿತು, ತನ್ನ ಮಡದಿಯೇ ತನ್ನ ಏಳೂ ಜನ ಮಕ್ಕಳನ್ನು ಕೊಲ್ಲುವುದನ್ನು ಕಣ್ಣಿಂದ ಕಾಣುವುದಲ್ಲದೆ ತೆಪ್ಪಗೆ ಆ ಭವಣೆಯನ್ನು ಸಹಿಸಿಕೊಳ್ಳುವ ಹೊತ್ತು ಮಹಾಭಿಷನಿಗೆ ಬಂದಿತು. ಭೃಗುವಿನ ಶಾಪದಿಂದಾಗಿ ಅಲರ್ಕ ನರಕದ ಹುಳುವಾದನು. ಜನಮೇಜಯನಿಗೆ ತಲೆಕೆಳಗಾಗಿ ನೇತಾಡುವ ಹಾಗೂ ಹದ್ದುಗಳಿಗೆ ಆಹಾರವಾಗುವ ಹೊತ್ತು ಬಂದುದು ಇಂದ್ರೋತನ ಶಾಪದಿಂದಾಗಿ. ದೇವಗಣದ ಕೋಪಕ್ಕೆ ಗುರಿಯಾದ ಗೌತಮ ಬ್ರಾಹ್ಮಣ ನರಕಕ್ಕೆ ಪಾತ್ರನಾದನು. ವಿಶ್ವಾಮಿತ್ರನ ಮಕ್ಕಳಿಗೆ ಚಾಂಡಾಲಯೋನಿ ಪ್ರಾಪ್ತವಾಯಿತು. (ಉಪರಿಚರ) ವಸುವಿಗೆ ಅನಾಮಿಕನ

ಶಾಪದಿಂದಾಗಿ ಮಾನವಜನ್ಮ ಬಂದಿತು. ಕ್ರೋಧನು (ಯಮ) ಪಿತೃಗಳ ಕೋಪದಿಂದಾಗಿ ಮುಂಗುಸಿಯಾಗಿ ಹುಟ್ಟಬೇಕಾಯಿತು. ಒಬ್ಬ ಋಷಿಯ ಶಾಪದಿಂದಾಗಿ ಬ್ರಾಹ್ಮಣ ನೊಬ್ಬನಿಗೆ ಶೂದ್ರತ್ವ ಬಂದಿತು, ವಿಶ್ವಾವಸು ಗಂಧರ್ವನಿಗೆ ರಾಕ್ಷಸತ್ವ ಬಂದಿತು.

ಅರುಣಿಯ ಮಗನ ಶಾಪದಿಂದಾಗಿ ವಿನತೆ ತನ್ನ ಸವತಿಗೆ ದಾಸಿಯಾದಳು.[34] ಶಕ್ತಿ ಹಾಗೂ ವಸಿಷ್ಠರ ಶಾಪಗಳಿಂದಾಗಿ ರಾಜ ನರಮಾಂಸಭಕ್ಷ ರಾಕ್ಷಸನಾದನು. ಸೋದರನ ಶಾಪದಿಂದಾಗಿ ಏಕತ ಹಾಗೂ ದ್ವಿತರು ತೋಳಗಳಾದರು. ಮುನಿಯ ಅವಕೃಪೆಯಿಂದಾಗಿ ನಾಯಿಗೆ ಬಂದ ಮಿಡತೆಯ ಅವಸ್ಥೆ ಕೊನೆಗೊಂಡು ಅದು ಆಶ್ರಮದಿಂದ ಹೊರ ಹಾಕಲ್ಪಟ್ಟಿತು. ಉಪರಿಚರ ವಸುವು ಬ್ರಾಹ್ಮಣನ ಶಾಪದಿಂದಾಗಿ ಸ್ವರ್ಗಭ್ರಷ್ಟನಾದನಲ್ಲದೆ ಅವನಿಗೆ ಭೂಮಿಯ ಮೇಲೆ ಕೂಡ ಸ್ಥಾನ ದೊರೆಕಲಿಲ್ಲ. ಹೀಗಾಗಿ ಅವನನ್ನು ಪಾತಾಳಕ್ಕೆ ರವಾನಿಸಲಾಯಿತು. ವಿಶ್ವಾಮಿತ್ರನ ಶಾಪದಿಂದಾಗಿ ಲಾವಣ್ಯವತಿ ರಂಭೆ ಶಿಲೆಯಾದಳು. ನಹುಷನ ಇಂದ್ರಪದ ಹೋಯಿತು, ಸರ್ಪಯೋನಿಯಲ್ಲಿ ಹುಟ್ಟಿ ಬರಬೇಕಾಯಿತು. ಶ್ರೀಕೃಷ್ಣನ ಶಾಪದಿಂದಾಗಿ ಅಸ್ವತ್ಥಾಮನಿಗೆ ಕೀವು, ನೆತ್ತರ, ಹೇಸಿಗೆ, ಹೊಲಸು ವಾಸನೆ ಗಳಿಂವ ಕೂಡಿದ ಬಲುಕೀಳು ಬಾಳನ್ನು ಸವೆಯಿಸಬೇಕಾಯಿತು. ವಿಪುಲನು ನೀಡಿದ ಶಾಪ ದಿಂದಾಗಿ ಇಂದ್ರನ ಪೂಜೆ ಹೆಚ್ಚುಕಾಲ ಮುಂದುವರಿಯಲಿಲ್ಲ.

ಶಾಪದಿಂದಾಗಿ ದೇಹ ವಿಕಾರಗೊಳ್ಳುವುದೂ ಹೆಚ್ಚಿನ ಪ್ರಮಾಣದಲ್ಲಿದೆ. ಪೌಷ್ಯ ರಾಜ ನಿಗೆ ಕುರುಡು, ಯಯಾತಿಗೆ ಶೀಘ್ರವಾದ ಮುಪ್ಪು, ಸ್ಥೂಣಾಕರ್ಣನಿಗೆ ಹೆಣ್ಣುತನಗಳು ಬಂದವು. ಅರ್ಜುನನಂತಹ ಕಲಿಗೆ ನಪುಂಸಕತ್ವ ಬಂದಿತು. ಅವನು ಹೆಣ್ಣುಗಳಿಗೆ ಕುಣಿತವನ್ನು ಕಲಿಸುವ ನರ್ತಕನೆನ್ನಿಸಿದನು, ಯಯಾತಿಯ ಶಾಪದಿಂದಾಗಿ ಅವನ ಹಿರಿಯದ ಮಗ ಅನು ಕೂಡ ಮುಪ್ಪಿನವನಾಗಿಬಿಟ್ಟನು. ಜಮದಗ್ನಿಯ ಶಾಪಕ್ಕೀಡಾಗಿ ಅವನ ನಾಲ್ವರು ಮಕ್ಕಳೆಲ್ಲ ಮಂದಬುದ್ಧಿಯವರಾದರು. ಕಹೋಡನ ಶಾಪದಿಂದ ಅವನ ಮಗ ಅಷ್ಟಾವಕ್ರ, ಬೃಹಸ್ಪತಿಯ ಶಾಪದಿಂದ ಉತಥ್ಯನ ಮಗನು ದೀರ್ಘತಮನೆನ್ನಿಸಿ ದನು. ದಕ್ಷನ ಶಾಪದಿಂದ ಚಂದ್ರನಿಗೆ ಕ್ಷಯರೋಗ ಅಂಟಿಕೊಂಡಿತು, ಜಮದಗ್ನಿಯ ಶಾಪದಿಂದಾಗಿ ಕಾರ್ತವೀರ್ಯನ ಬಾಹುಗಳು ಕತ್ತರಿಸಲ್ಪಟ್ಟವು. ಇಂದ್ರನ ಮೀಸೆಗಳಿಗೆ ಕಂದು ಬಣ್ಣ ಬರಲು ಕಾರಣ ಗೌತಮನ ಶಾಪ.[35] ಕೌಶಿಕನ ಶಾಪದಿಂದ ಇಂದ್ರನ ವೃಷಣಗಳು ಬಿದ್ದುಹೋದವು.[36] ಬೃಹಸ್ಪತಿಯ ಶಾಪದಿಂದಾಗಿ ನೀರಿನ ಶುದ್ಧತೆ ಹಾಳಾಯಿತು. ಅಗ್ನಿಯ ಶಾಪದಿಂದ ಕಪ್ಪೆಗೆ ನಾಲಿಗೆಯಿದ್ದೂ ಇಲ್ಲದಂತಾಯಿತು. ಸವಿಯನ್ನರಿಯುವ ಅದರ ಸಾಮರ್ಥ್ಯ ಕಳೆದುಹೋಯಿತು. ಗಿಳಿ ಮಾತನ್ನು ಕಳೆದು ಕೊಂಡಿತು. ಆನೆಯ ನಾಲಿಗೆ ತಿರುಗುಮುರುಗಾಯಿತು.

ಕೆಲವು ಶಾಪಗಳು ಸಂತತಿಯ ಮೇಲೆ ತಮ್ಮ ಪ್ರಭಾವವನ್ನು ಬೀರಿದಂತಿದೆ. ತಂದೆಯ ಶಾಪದಿಂದಾಗಿ ತುರ್ವಸು ಹಾಗೂ ಪೌಷ್ಯನ ಶಾಪದಿಂದಾಗಿ ಉತ್ತಂಕ ತಮ್ಮ ತಮ್ಮ ಮಕ್ಕಳನ್ನು ಕಳೆದುಕೊಳ್ಳಬೇಕಾಯಿತು. ಅಶ್ವತ್ಥಾಮನು ಕೃಷ್ಣನಿಗಿತ್ತ ಶಾಪದ ಸ್ವರೂಪವು

---

34. ಇದು ಶಾಪದ ಪರಿಣಾಮವೋ ಇಲ್ಲವೆ ಪಣದಲ್ಲಿಯ ಸೋಲೋ ?

35. ಈ ಪರಿಣಾಮ ಹಾಗೂ 36. ಕೌಶಿಕ > ಇಂದ್ರ, ವಾಲ್ಮೀಕಿರಾಮಾಯಣದಲ್ಲಿಲ್ಲ,

ಅಷ್ಟಾಗಿ ಖಚಿತವಾಗಿಲ್ಲವಾದರೂ ಅದು ಪಾಂಡವರನ್ನು ನಿರ್ವಂಶರನ್ನಾಗಿ ಮಾಡುವು ದನ್ನು ಕುರಿತಾಗಿರಲು ಸಾಧ್ಯ. ಕೆಲವು ಶಾಪಗಳಿಂದಾಗಿ ವಿದ್ಯೆ, ವಿತ್ತ ಮೊದಲಾದವುಗಳು ಹಾನಿಗೀಡಾದಂತೆ ತೋರುತ್ತದೆ. ಕುಬೇರನ ಶಾಪದಿಂದಾಗಿ ರಾವಣನ ಪುಷ್ಪಕ ವಿಮಾನ ಕೆಲಸಕ್ಕೆ ಬಾರದ್ದಾಯಿತು. ತುಂಬ ಹೆಣಗಿ ಪರಶುರಾಮನಿಂದ ಪಡೆದ ಬ್ರಹ್ಮಾಸ್ತ್ರ ಕರ್ಣನಿಗೆ ನಿರುಪಯುಕ್ತವಾಯಿತು. ಅಂಗೀರಸನ ಶಾಪದ ಫಲವಾಗಿ ಅಗ್ನಿಯ ಹೊನ್ನ ಕಾಂತಿ, ಊರ್ಧ್ವಗಾಮಿಯಾದ ನಾಲಿಗೆ, ಹೊಗೆ ಕೆಳಗಿಳಿದು ಬರುವಂತಹ ಅಲೌಕಿಕವಾದ ಗುಣಗಳು ನಾಶಹೊಂದಿದವು. ನಾರದ ಹಾಗೂ ಪರ್ವತ ಒಬ್ಬರನ್ನೊಬ್ಬರು ಶಪಿಸಿದ್ದ ರಿಂದ ಅವರಿಬ್ಬರೂ ಸ್ವರ್ಗಕ್ಕೆ ವಂಚಿತರಾದರು. ಶಂಕರನ ಶಾಪದಿಂದಾಗಿ ಸುರಭಿ ಸ್ವರ್ಗ ಭ್ರಷ್ಟವಾಯಿತು. ಯದು ಹಿರಿಯ ಮಗನೆನ್ನಿಸಿಯೂ ರಾಜ್ಯವನ್ನು ಪಡೆಯಲಿಲ್ಲ. ಇಷ್ಟೇ ಅಲ್ಲದೆ ಅವನ ಮುಂದಿನ ತಲೆಮಾರಿನವರಿಗೂ ಅದು ದೊರಕಲಿಲ್ಲ. ದ್ರುಹ್ಯುವಿಗೂ ಇಂಥದೇ ಅವಸ್ಥೆ ಬಂದೊದಗಿತು. ಇದೆಲ್ಲ ತಂದೆಯ ಶಾಪದ ಪರಿಣಾಮ. ಬ್ರಾಹ್ಮಣನ ಶಾಪದಿಂದಾಗಿ ನೆಲವು ಕರ್ಣನ ರಥದ ಗಾಲಿಯನ್ನು ನುಂಗಿತಲ್ಲದೆ ಮೃತ್ಯುವು ಅವನ ಪ್ರಾಣವನ್ನೇ ನುಂಗಿಹಾಕಿತು.

ಬ್ರಹ್ಮದೇವನ ಮಾತನ್ನು ಮನಗಂಡ ಕಾರಣ ಮೃತ್ಯುದೇವತೆಗೆ, ಕೌಶಿಕನ ಉಪದೇಶ ವನ್ನು ಒಪ್ಪಿಕೊಂಡದ್ದರಿಂದ ಇಕ್ಷ್ವಾಕುವಿಗೆ ಹಾಗೂ ಹಿಂಸೆಯಿಂದ ಕೂಡಿದ ಯಜ್ಞ ತನಗೆ ಒಪ್ಪಿಗೆಯಿಲ್ಲದೆಯೂ ಗಂಡನ ಮಾತನ್ನು ಒಪ್ಪಿದ್ದರಿಂದಾಗಿ ಪುಷ್ಪಧಾರಿಣಿಗೆ ಶಾಪಗಳ ಪರಿಣಾಮಗಳನ್ನು ಅನುಭವಿಸಬೇಕಾಗಿಬರಲಿಲ್ಲ. ಬುಧನ ಶಾಪದಿಂದ ಅದಿತಿಯು ತನ್ನ ಬಸಿರುಗಾಲದಲ್ಲಿ ತುಂಬ ಯಾತನೆಗೀಡಾದಳು. ತನ್ನ ಮೇಲಿನವರ ಶಾಪದಿಂದಾಗಿ ಗೃತ್ಸಮದನು ಹವೆ–ನೀರುಗಳಿಲ್ಲದೆ ಹತ್ತು ಸಾವಿರದ ಹದಿನೆಂಟು ನೂರು ವರ್ಷಗಳ ಕಾಲ ಕ್ರೂರಪ್ರಾಣಿಗಳ ನಿವಾಸದಲ್ಲಿ ಕೊಳೆಯುತ್ತ ಬಿದ್ದಿರಬೇಕಾಯಿತು.

ಭೃಗುವಿನ ಶಾಪದಿಂದ ಅಗ್ನಿ ಸರ್ವಭಕ್ಷಕನಾದನು. ಅಗ್ನಿ, ಅರ್ಜುನ ಹಾಗೂ ಕೃಷ್ಣ ಇವರ ಶಾಪಗಳಿಂದಾಗಿ ಅಶ್ವಸೇನ ಭೂಮಿಯ ಮೇಲೆ ವಾಸಿಸುವುದು ಅಸಾಧ್ಯವಾಯಿತು. ಕಲಿಯು ನಳನನ್ನು ಪೀಡಿಸತೊಡಗಿದನು. ನಾರದನು ಕರ್ಕೋಟಕನ ಜಂಗಮತೆಯನ್ನು ಕಸಿದುಕೊಂಡನು. ಆಯುವಿನ ಶಾಪದಿಂದಾಗಿ ಅವನ ಮಗಳ ಮಕ್ಕಳೇ ಬ್ರಾಹ್ಮಣರ ಹಗೆಗಳಾದರು. ವಿಶ್ವಾಮಿತ್ರನ ಶಾಪದಿಂದಾಗಿ ಸರಸ್ವತಿಯು ರಕ್ತಲಾಂಛಿತಳಾದಳು. ಸ್ಥೂಲಶಿರನು ಮರಗಳ ಹಣ್ಣು ಬಿಡುವ ಸಾಮರ್ಥ್ಯಕ್ಕೆ ಕಾಲನಿರ್ಬಂಧನೆಯನ್ನು ಹೇರಿದನು. ಭೃಗುವು ಹಿಮಾಲಯವನ್ನು ರತ್ನಹೀನವನ್ನಾಗಿ ಮಾಡಿದನು. ಬ್ರಾಹ್ಮಣನ ಶಾಪದಿಂದಾಗಿ ಕಡಲಿನ ನೀರು ಮೊದಲೇ ಕುಡಿಯಲು ಅಯೋಗ್ಯವೆನ್ನಿಸಿತ್ತು. ಪಡಬಾಮುಖದಿಂದಾಗಿ ಅದರಲ್ಲಿ ಇನ್ನಷ್ಟು ಕ್ಷಾರಗಳು ಬೆರೆತವು. ಯುಧಿಷ್ಠಿರನ ಶಾಪದ ಪರಿಣಾಮವೆಂದರೆ ಹೆಣ್ಣು ಯಾವ ಸಂಗತಿಯನ್ನೂ ಹೆಚ್ಚುಕಾಲ ಬಚ್ಚಿಟ್ಟುಕೊಳ್ಳದಿರುವುದು.

ಶಾಪ/ವರಗಳು ಆದೆಂದಿಗೂ ಪರಿಣಾಮವಿಲ್ಲದವುಗಳಾಗಲಿ ಇಲ್ಲವೆ ವಿಫಲವಾದವುಗಳು ಅಲ್ಲ. ಅವು ಸಳ್ಳಾಗಲಾರವು. ಮಹಾಭಾರತದಲ್ಲಿ ಮಾತ್ರ ಕೆಲವು ಅರೆಬರೆಯಾಗಿ ಇಲ್ಲವೆ ಇಡಿಯಾಗಿ ವಿಫಲಗೊಂಡ ಶಾಪಗಳಿವೆ. ಒಮ್ಮೆ ಇತ್ತ ಶಾಪವನ್ನು ಹಿಂತೆಗೆದುಕೊಳ್ಳ ಲಾಗದು. ಆದರೂ ಇಂಥ ಒಂದು ಉದಾಹರಣೆಯೂ ಇಲ್ಲಿದೆ. ಧನುಷಾಕ್ಷನು ಬಾಲಧಿಯ

ಮಗನಾದ ಮೇಧಾವಿಗೆ ನೀಡಿದ ಶಾಪವು ಪರಿಣಾಮಕಾರಿ ಆಗಲೇಯಿಲ್ಲ. ಹೀಗಾಗಲು ಕಾರಣ ಬಾಲಧಿಯು ಮೇಧಾವಿಗಾಗಿ ಸೀಮಿತವಾದ ಅಮರತ್ವದ ವರವನ್ನು ಪಡೆದುದು. ಈ ಶಾಪಗಳು ಒಂದಕ್ಕೊಂದು ವಿರೋಧಿಯಾದವುಗಳೂ. ಮಾರಕವೂ ಆಗಿವೆ. ವರದ ಪರಿಣಾಮದಿಂದಾಗಿ ಶಾಪವು ಪರಿಣಾಮಕಾರಿಯಾಗಿಲ್ಲ. ಇವೆರಡೂ ಶಾಪಗಳು ವಿಫಲಗೊಂಡಿವೆ. ಗಂಗೆಯು ಅಂಬೆಗಿತ್ತ ಶಾಪವು ಅವಳ ಅರೆಮೈಗಷ್ಟೇ ಸೀಮಿತಗೊಂಡು ಉಳಿದರ್ಧದಲ್ಲಿ ಪರಿಣಾಮಕಾರಿಯಾಗದೆ ಅದು ಅರೆಬರೆಯಾಗಿ ವಿಫಲಗೊಂಡ ಶಾಪವೆನ್ನಿಸಿತು. ಪರ್ವತ ಹಾಗೂ ನಾರದರು ಪರಸ್ಪರರಿಗೆ ನೀಡಿದ ಶಾಪಗಳನ್ನು ಪರಿಹರಿಸಿಕೊಳ್ಳುವುದು ಕೂಡ ಒಂದು ಅಪವಾದ ಎನ್ನಬೇಕಷ್ಟೆ.

ಮಹಾಭಾರತದಲ್ಲಿರುವ ಮೂವತ್ತಾರು ಶಾಪಗಳ ಪರಿಣಾಮಗಳು ಸ್ಪಷ್ಟವಾದವುಗಳಲ್ಲ. ಅವುಗಳಲ್ಲಿ ಕೆಲವು ಶಾಪಗಳು ಅನುಚ್ಚಾರಿತವಾದವುಗಳು, ಕೆಲವು ಶರತ್ತಿನವು. ಶರತ್ತುಗಳನ್ನು ಪಾಲಿಸಲಾಗಿದೆ. ಕೆಲವು ಶಾಪಗಳಲ್ಲಿ ತಾವು ಶಾಪವನ್ನು ಹೊಂದಬಹುದೆಂಬ ಹೆದರಿಕೆ ವ್ಯಕ್ತವಾಗಿದೆ. ಸ್ತ್ರೀ-ಶಾಪಗಳ ಕುರಿತು ಬೇರೆಡೆಯಲ್ಲಿ ಇನ್ನಷ್ಟು ಚರ್ಚಿಸಲಾಗಿದೆ.

## ಉಃಶಾಪ

ಶಾಪದ ಪರಿಣಾಮ ಹಾಗೂ ಅದರ ಕಾಲಾವಧಿಯನ್ನು ಮೊಟಕುಗೊಳಿಸುವ ಉಪಾಯವೆಂದರೆ ಉಃಶಾಪ. ಒಂದೊಂದು ಸಲ ಒಂದು ವರವನ್ನು ನೀಡಿ ಈ ಕೆಲಸವನ್ನು ಮಾಡಬಹುದು. ಶಾಪಗಳ ಪರಿಣಾಮವನ್ನು ತಪ್ಪಿಸಲಾಗದು. ಶಾಪಗಳು ಅಪರಿವರ್ತನೀಯವೆನ್ನಿಸುತ್ತವೆ. ಅವುಗಳನ್ನು ಹಿಂತೆಗೆದುಕೊಳ್ಳುವಂತಿಲ್ಲ. ಹಲವು ಸಲ ಸಿಟ್ಟಿನ ಭರದಲ್ಲಿ ಸುಡುಸುಡುವ ಶಾಪಗಳನ್ನು ಉಚ್ಚರಿಸಲಾಗುತ್ತದೆ. ಆ ಕಾಲಕ್ಕೆ ಅವುಗಳ ಪರಿಣಾಮಗಳ ಭಯಂಕರತೆ ಗಮನದಲ್ಲಿರದು. ಸಿಟ್ಟು ಇಳಿದ ಬಳಿಕ ಮಾತ್ರ ತಾನು ಇಷ್ಟೊಂದು ಕಠೋರವಾದ ಶಾಪವನ್ನೀಯಬಾರದಿತ್ತೆಂಬ ಕಳವಳ ತಲೆದೋರುವುದುಂಟು. ಇಂಥ ಭಾವನೆಯಿಂದ ಈಯಲಾದ ಉಃಶಾಪಗಳು ಅಯಾಚಿತವಾದವುಗಳು. ಅದೆಷ್ಟೋ ಸಲ ಶಾಪಿತನಲ್ಲಿ ತನ್ನ ತಪ್ಪಿನ ಅರಿವು ಮೂಡಲಿ, ಅವನು ತನ್ನನ್ನು ತಾನು ತಿದ್ದಿಕೊಳ್ಳಲಿ, ಅವನು ಶಾಪದ ಪರಿಣಾಮವನ್ನು ಸಹಿಸಿಕೊಳ್ಳುವಂತಾಗಲಿ ಎಂಬೆಲ್ಲ ಕಾರಣಗಳಿಂದಾಗಿ ಶಾಪದ ಜೊತೆಗೆ ಅಯಾಚಿತವಾದ ಉಃಶಾಪವನ್ನೂ ನೀಡಲಾಗುತ್ತದೆ. ಶಾಪಿತನ ಕೋರಿಕೆಯ ಮೇರೆಗೆ ನೀಡಲಾದ ಉಃಶಾಪ ಯಾಚಿತವಾದುದು. ಇವೆರಡೂ ಬಗೆಯ ಉಃಶಾಪಗಳನ್ನು ನೀಡುವುದು ಶಾಪವನ್ನೀಯುವವನನ್ನೇ ಅವಲಂಬಿಸಿದ ಸಂಗತಿ. ಶಾಪಿತನ ಕೋರಿಕೆಯನ್ನು ಮನ್ನಿಸಲೇಬೇಕೆಂಬ ಕಡ್ಡಾಯ ಶಾಪವನ್ನೀಯುವವನ ಮೇಲಿಲ್ಲ. ಹೀಗಾಗಿ ಉಃಶಾಪ ಶಾಪದ ಒಂದು ಭಾಗವಲ್ಲ. ಪ್ರತಿಯೊಂದು ಶಾಪಕ್ಕೆ ಒಂದು ಉಃಶಾಪ ಇರಲೇಬೇಕೆಂದೇನೂ ಇಲ್ಲ. ಉಃಶಾಪವೇ ಇಲ್ಲದ ಶಾಪಗಳೂ ಹಲವು. ಮಹಾಭಾರತದಲ್ಲಿಯ ಒಟ್ಟು ೧೪೭ ಶಾಪಗಳಲ್ಲಿ ೧೩೦ ಶಾಪಗಳಿಗೆ ಉಃಶಾಪಗಳಿಲ್ಲ. ಬರಿ ೧೭ ಶಾಪಗಳಿಗೆ ಮಾತ್ರ ಅವು ಇವೆ, ಕೆಲವು ಉಃಶಾಪಗಳು ಶರತ್ತಿನೊಂದಿಗೆ ಇವೆ. ಶರತ್ತುಗಳನ್ನು ಪೂರ್ತಿಗೊಳಿಸುವ ಹೊಣೆ ಶಾಪಿತನದು. ಶರತ್ತಿನ ಉಃಶಾಪವು ತಪ್ಪಿತಸ್ಥನಿಗೆ ತನ್ನ ತಪ್ಪುಗಳನ್ನು ತಿದ್ದಿಕೊಳ್ಳುವ ಒಂದು ಅವಕಾಶವನ್ನೀಯುತ್ತದೆ. ಶಾಪಿತನು

ಶರತ್ತುಗಳನ್ನು ಸರಿಯಾಗಿ ಪಾಲಿಸಿದರೆ ಮಾತ್ರ ಅವನಿಗೆ ಉಃಶಾಪದಿಂದ ದೊರೆಕಬಹು ದಾದ ರಿಯಾಯಿತಿಗಳು ಲಭ್ಯ. ಅವನು ಶರತ್ತುಗಳನ್ನು ಸರಿಯಾಗಿ ಪಾಲಿಸದಿದ್ದರೆ ಉಃಶಾಪ ತನ್ನ ಪರಿಣಾಮವನ್ನು ಕಳೆದುಕೊಂಡು ಶಾಪಿತನಾದವನು ಶಾಪದ ಪರಿಣಾಮ ಗಳನ್ನೆಲ್ಲ ಅನುಭವಿಸಲೇಬೇಕಿದೆ. ಶಾಪಿತನೇ ಸಾಮಾನ್ಯವಾಗಿ ಉಃಶಾಪವನ್ನು ಕೇಳಿ ಕೊಳ್ಳುವುದುಂಟು. ಕೆಲವು ಸಲ ಬೇರೊಬ್ಬನು ಶಾಪಿತನಿಗಾಗಿ ಉಃಶಾಪವನ್ನು ಕೇಳಿ ಕೊಂಡುದೂ ಉಂಟು. ಉಃಶಾಪಕ್ಕೆ ತನ್ನದೇ ಆದ ಒಂದು ಅಸ್ತಿತ್ವವಿಲ್ಲ, ಶಾಪವನ್ನು ಆಧರಿಸಿಯೇ ಅದನ್ನೀಯಲಾಗುತ್ತದೆ.

ಅಯಾಚಿತವಾದ ಉಃಶಾಪಗಳು ಐದು ಬಗೆಯವು. ಅವುಗಳಲ್ಲಿಯ ಎರಡು ಶರತ್ತಿ ನವು. ತನ್ನ ನಾಚಿಕೆಗೆಟ್ಟ ನಡತೆಯಿಂದಾಗಿ ಮಹಾಭಿಷನು ಬ್ರಹ್ಮದೇವನ ಶಾಪಕ್ಕೆ ಗುರಿ ಯಾಗಿ ಸ್ವರ್ಗವನ್ನು ಕಳೆದುಕೊಂಡು ಈ ಮರ್ತ್ಯಲೋಕದಲ್ಲಿ ಹುಟ್ಟಿಬರಬೇಕಾಯಿತು. ಅವನು ಗಂಗೆಯ ಅರೆತೆರೆದ ಪ್ರಯತ್ತ ಹಸಿದ ಕಣ್ಣುಗಳಿಂದ ನೋಡಿದ್ದನು. ಅವನಿಗೆ ಅವಳಿಂದ ಅಯಾಚಿತವಾದ ಉಃಶಾಪ ದೊರೆಕಿದುದಲ್ಲದೆ ಅವಳು ಅವನ ಮಡದಿಯೂ ಆದಳು, ಅವನಿಗೆ ತುಂಬ ಹೆಣ್ಣಿನ ಸುಖವನ್ನು ನೀಡಿದಳು. ಇಷ್ಟೆಲ್ಲವಿದ್ದೂ, ಶರತ್ತಿನ ಕತ್ತಿ ಅವನ ತಲೆಯ ಮೇಲೆ ಯಾವಾಗಲೂ ನೇತಾಡುತ್ತಲೇ ಇತ್ತು. ಹೆಂಡತಿಯಾದ ಅವಳು ಹೇಗೆ ನಡೆದುಕೊಂಡರೂ ಅದಕ್ಕವನು ಚಕಾರವನ್ನೆತ್ತುವಂತಿರಲಿಲ್ಲ. ಈ ಶರತ್ತನ್ನು ಮುರಿದ ಕ್ಷಣಕ್ಕೆ ಅವಳು ಅವನನ್ನಗಲಲಿದ್ದಳು. ಹೀಗಾಗಿ ತನ್ನ ಬಯಕೆಗಳನ್ನೆಲ್ಲ ಅದುಮಿ ಇಡದೆ ಅವನಿಗೆ ಬೇರೆ ವಿಧಿಯಿರಲಿಲ್ಲ. ತನ್ನ ತಾಯಿಯ ಅವಸರದ ಸ್ವಭಾವ ಹಾಗೂ ತನ್ನಲ್ಲಿಯ ಈರ್ಷೆಯಿಂದಾಗಿ ಅರುಣನು ಮಾಗದ ತತ್ತಿಗಳನ್ನು ಒಡೆದುಹಾಕಿದ ಕಾರಣ ಅವನು ತನ್ನ ಬಾಳಿಡೀ ವಿಕಲಾಂಗನಾಗಿಯೇ ಉಳಿಯಬೇಕಾಯಿತು. ಅವನು ತನ್ನ ತಾಯಿಯ ಮೇಲೆ ತುಂಬ ರೋಸಿದ್ದನು. ತಾಯಿಗೆ ತಾನು ಶಾಪವನ್ನೀಯುವುದು ತಪ್ಪೆಂಬುದರ ಅರಿವನ್ನು ಕಳೆದುಕೊಂಡನು. 'ನೀನು ನಿನ್ನ ಸವತಿಗೆ ದಾಸಿಯಾಗುವೆ' ಎಂದು ಅವಳನ್ನು ಶಪಿಸಿಬಿಟ್ಟನು. ಅವಳಿಗೆ ಈ ತಾಪತ್ರಯ ಹೆಚ್ಚುಕಾಲ ಬೇಡವೆಂದು ಹೊಳೆದದ್ದರಿಂದ ಕೂಡಲೇ ಅವನು ಅವಳಿಗೆ ಒಂದು ಉಃಶಾಪವನ್ನೂ ನೀಡಿದನು. ಅದೊಂದು ಶರತ್ತಿನ ಉಃಶಾಪವಾಗಿತ್ತು. ಅವಳಿಗೆ ತಾನೆಸಗಿದ ತಪ್ಪಿನ ಅರಿವಾಗಲಿ ಎಂಬ ಕಳಕಳಿ ಅದರಲ್ಲಿತ್ತು. ಶರತ್ತನ್ನು ಪಾಲಿಸಿದರೆ ಅವಳು ಶೀಘ್ರವಾಗಿ ದಾಸ್ಯದಿಂದ ಬಿಡುಗಡೆಹೊಂದಲು ಸಾಧ್ಯ ಎಂಬ ಭರವಸೆಯನ್ನೀಯಲಾಗಿತ್ತು. ನಾರದನನ್ನು ಮೋಸ ಗೊಳಿಸಿದ್ದಕ್ಕಾಗಿ ಕರ್ಕೋಟಕನು ಮರದ ಹಾಗೆ ಒಂದೆಡೆಯಲ್ಲಿಯೇ ಸ್ಥಿರವಾಗಿ ನಿಂತು ಬಾಳನ್ನು ಸವೆಯಿಸಬೇಕೆಂಬ ಶಿಕ್ಷೆಯನ್ನನುಭವಿಸಬೇಕಾಯಿತು. ನಾರದನು ಶಾಪದ ಉಳಿದರ್ಧದಲ್ಲಿ 'ನಳನಿಂದ ಶಾಪಮುಕ್ತಿ ದೊರೆತೀತು' ಎಂಬ ಭರವಸೆಯ ಉಃಶಾಪವನ್ನು ಅವನಿಗೆ ನೀಡಿರುವನು. ಮಣಿಮಾನ್ ಯಕ್ಷ ಹಾಗೂ ಅವನ ಸೈನಿಕರು ಅಗಸ್ತ್ಯನ ತಲೆಯ ಮೇಲೆ ಉಗುಳುವ ಹೀನಕೃತ್ಯಕ್ಕಾಗಿ ಮಾನವನಿಂದ ಸಾವು ಬರಲೆಂದು ಅವನಿಂದ ಶಾಪ ಕ್ಕೀಡಾದರು. ಈ ಶಾಪದ ಬಿಸಿ ಕುಬೇರನಿಗೂ ತಗಲದಿರಲಿಲ್ಲ. ಈ ಶಾಪದಿಂದ ಬಿಡುಗಡೆ ಹೊಂದಲೆಂದು ಹೇಳಲಾದ ಉಪಾಯದಲ್ಲಿ ಉಃಶಾಪ ಅಡಕಗೊಂಡಿತ್ತು, ಕೊಕ್ಕರೆ ರಾಜ- ಧರ್ಮ ಬ್ರಹ್ಮದೇವನ ಒಡ್ಡೋಲಗದಲ್ಲಿ ಹಾಜರಾಗದೆ ಉದ್ದಾಮವಾದ ನಡತೆಯನ್ನು

ಮೆರೆಯಿತು. ಹೀಗಾಗಿ ವಧೆಯು ಶಾಪಕ್ಕೀಡಾಯಿತು. ಬ್ರಹ್ಮದೇವನ ಅಪ್ಪಣೆಯನ್ನು ಪಾಲಿಸಲೆಂದು ಗೌತಮನು ಅದನ್ನು ಕೊಂದುಹಾಕಿದನು. ಬ್ರಹ್ಮದೇವನು ತರುವಾಯದಲ್ಲಿ ಅದರ ಹೆಣದ ಮೇಲೆ ಅಮೃತವನ್ನೆರಚಿ ಅದು ಮರುಜೀವ ಪಡೆಯುವಂತೆ ಮಾಡಿದನು. ಇಲ್ಲಿ ಅಮೃತಸಿಂಚನ ಎಂದರೆ ಒಂದು ಉಃಶಾಪವೇ ಆಗಿದೆ ಎನ್ನಬಹುದು.

ಮಹಾಭಾರತದಲ್ಲಿರುವ ಒಟ್ಟು ಹನ್ನೆರಡು ಉಃಶಾಪಗಳಲ್ಲಿ ಮೂರು ಶರತ್ತಿನಿಂದ ಕೂಡಿದವುಗಳು. ದುರ್ಯೋಧನನು ತನ್ನ ಉಪದೇಶವನ್ನು ಅಲಕ್ಷ್ಯ ಮಾಡಿದ್ದರಿಂದ ಮೈತ್ರೇಯನು ಅವನನ್ನು 'ಭೀಮನಿಂದ ನಿನ್ನ ಊರುಭಂಗ ನಡೆಯಲಿ' ಎಂದು ಶಪಿಸಿದನು. ಇದನ್ನು ಕೇಳಿದ ಧೃತರಾಷ್ಟ್ರ ತುಂಬ ಕಳವಳಕ್ಕೀಡಾದನು. ತನ್ನ ಮಗನಿಗಿತ್ತ ಈ ಕಠೋರವಾದ ಶಿಕ್ಷೆಯನ್ನು ಆದಷ್ಟು ಹಗುರಗೊಳಿಸಬೇಕೆಂದು ಅವನು ಆ ಮುನಿಯನ್ನು ಕೇಳಿಕೊಂಡನು. ಮೈತ್ರೇಯನು ಧೃತರಾಷ್ಟ್ರನ ಕೋರಿಕೆಯನ್ನು ಮನ್ನಿಸಿ ಉಃಶಾಪವನ್ನಿತ್ತನು. ದುರ್ಯೋಧನನು ಈ ಉಃಶಾಪದ ಶರತ್ತುಗಳನ್ನು ಪಾಲಿಸಿದರೆ ಮಾತ್ರ ಶಾಪದ ಪರಿಣಾಮದಿಂದ ಬಿಡುಗಡೆಹೊಂದಲು ಸಾಧ್ಯವಿತ್ತು. ಆದರೆ ದುರ್ಯೋಧನ ಆ ಗೋಜಿಗೆ ಹೋಗದ್ದರಿಂದ ಶಾಪದ ಪರಿಣಾಮ ಖಚಿತವಾಯಿತು. ಯಯಾತಿಯು ಶರ್ಮಿಷ್ಠೆಯೊಂದಿಗೆ ಹಾಸಿಗೆಯ ನಂಟನ್ನಿರಿಸಿಕೊಳ್ಳಕೂಡದೆಂದು ಶುಕ್ರಾಚಾರ್ಯರು ಅವನನ್ನು ಎಚ್ಚರಿಸಿದ್ದರು. ಅವನು ಮಾತ್ರ ಅವರ ಮಾತನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಅದರಿಂದಾಗಿ ಅಕಾಲಿಕವಾದ ಮುಪ್ಪನ್ನು ಬರಮಾಡಿಕೊಳ್ಳಬೇಕಾಯಿತು. ದೇವಯಾನಿಯೊಡನೆಯ ಅವನ ಕಾಮತೃಷೆ ಹಿಂಗಿರಲಿಲ್ಲ. ಹೀಗಾಗಿ ಅವನು ದಯೆ ಕೋರಿದನು. ಆಗ ಶುಕ್ರಾಚಾರ್ಯರು ಯಾರಾದರೂ ಯಯಾತಿಯ ಮುಪ್ಪಿಗೆ ಬದಲಾಗಿ ತಮ್ಮ ಯೌವನವನ್ನು ಅವನಿಗೆ ನೀಡುವಂತಿದ್ದರೆ ಇದು ಸಾಧ್ಯ ಎಂಬ ಭರವಸೆಯನ್ನು ಅವನಿಗಿತ್ತರು. ಸವಲತ್ತಿನಿಂದ ಕೂಡಿದ ಉಃಶಾಪ ಇದಾಗಿತ್ತು. ಸೋಮನು ತನ್ನ ತಪ್ಪುಗಳನ್ನು ತಿದ್ದಿಕೊಂಡು ಸರಿಯಾಗಿ ನಡೆದುಕೊಳ್ಳಲಿ ಎಂದು ದಕ್ಷನು ಅವನಿಗೆ ಮತ್ತೆ ಮತ್ತೆ ಹೇಳಿಯೂ ಆತ ಈ ಮಾತುಗಳನ್ನು ಕಡೆಗಣಿಸಿದನು. ಹೀಗಾಗಿ 'ಕ್ಷಯರೋಗಕ್ಕೆ ತುತ್ತಾಗು' ಎಂದು ದಕ್ಷನು ಅವನಿಗೆ ಶಾಪವನ್ನಿತ್ತನು. ಇದರಿಂದಾಗಿ ಭೂಮಿಯ ಮೇಲಿನ ಜನ ಪೀಡೆಗೊಳಗಾದರು. ಇದನ್ನು ಕಂಡು ದೇವತೆಗಳು ದಕ್ಷನನ್ನು ಮೊರೆಹೊಕ್ಕರು. ಅವರ ಈ ಕೋರಿಕೆ ಒಂದು ಉಃಶಾಪಕ್ಕಾಗಿ ಇದ್ದಿತು. ದಕ್ಷನು ಅವರಿಗೆ ಶರತ್ತಿನ ಒಂದು ಉಃಶಾಪವನ್ನು ನೀಡಿದನು. ಚಂದ್ರನು ದಕ್ಷನ ಕನ್ಯೆಯರಾದ ತನ್ನ ಇಪ್ಪತ್ತೇಳು ಜನ ಮಡದಿಯರನ್ನು ಸರಿಯಾಗಿ ನೋಡಿಕೊಳ್ಳತಕ್ಕದ್ದು, ಅಂದರೆ ಮಾತ್ರ ಆತನ ತೇಜಸ್ಸು ಹದಿನೈದು ದಿನ ಹೆಚ್ಚುತ್ತಹೋಗಿ ತಿಂಗಳ ಉಳಿದ ಹದಿನೈದು ದಿನ ಕುಂದುತ್ತಹೋದೀತು ಎಂಬ ಉಃಶಾಪವನ್ನಿತ್ತನು. ಚಂದ್ರನು ಈ ಶರತ್ತನ್ನು ಪಾಲಿಸಿದನು. ಬ್ರಾಹ್ಮಣ ನೋರ್ವನ ಶಾಪದಲ್ಲಿ ಅಡ್ಡಿಯನ್ನೊಡ್ಡಿದ್ದುದಕ್ಕಾಗಿ ಲತೆ, ಸೌರಮೇಯಿ ಮೊದಲಾದ ಐವರು ಅಪ್ಸರೆಯರು ಅವನ ಶಾಪಕ್ಕೀಡಾಗಿ ಒಂದು ನೂರು ವರ್ಷಗಳ ಕಾಲ ಮೊಸಳೆಗಳಾಗಿ ಬದುಕನ್ನು ಸವೆಯಿಸಬೇಕಾಯಿತು. ಅವರು ಆ ಬ್ರಾಹ್ಮಣನನ್ನು ಕ್ಷಮೆಗಾಗಿ ಕೋರಿದರು. ತಮ್ಮ ತಪ್ಪುಗಳನ್ನು ಒಪ್ಪಿಕೊಂಡರು. ಆಗ, ಒಬ್ಬ ಮಹಾಪುರುಷನಿಂದ

ಅವರಿಗೆ ಮುಕ್ತಿ ದೊರಕೀತೆಂದೂ ಅವರಿದ್ದ ಸ್ವರ್ಗೋಪರೆಕ್ಕೆ ನಾರೀತೀರ್ಥದ ಪಾನತೆ ದೊರಕಲಿದೆಯೆಂದೂ ಉಃಶಾಪ ಸಿಕ್ಕಿತು.

ಅಶುದ್ಧವಾದ ಆಹಾರವನ್ನು ನೀಡಿದ್ದಕ್ಕಾಗಿ ಪೌಷ್ಯರಾಜನು ಉತ್ತಂಕನ ಶಾಪಕ್ಕೆ ಗುರಿಯಾದನು. ಕುರುಡಾಗೆಂಬ ಶಾಪವಿತ್ತು. ರಾಜನು ಅವನ ಕ್ಷಮೆ ಕೋರಿದ್ದರಿಂದ ಉಃಶಾಪದ ಮೂಲಕ ಅವನ ಕುರುಡಿನ ಕಾಲಾವಧಿಯನ್ನು ಮೊಟಕುಗೊಳಿಸಲಾಯಿತು. ಸಹಸ್ರಪಾತನು ಖಗಮ ಋಷಿಯನ್ನು ಹೆದರಿಸಲೆಂದು ಅವನ ಮೈಮೇಲೆ ಒಂದು ಹುಲ್ಲಿನ ಹಾವನ್ನೆಸೆದನು. ಅದರಿಂದಾಗಿ ಅವನು ಆ ಋಷಿಯ ಶಾಪಕ್ಕೀಡಾಗಿ ಎರೆಹುಳು ವಾಗಿ ಜನ್ಮತಳೆದನು. ಅವನ ಕೋರಿಕೆಯನ್ನು ಮನ್ನಿಸಿದ ಋಷಿಯು, 'ರುರುವಿನ ದರ್ಶನದಿಂದ ನಿನಗೆ ಮುಕ್ತಿ ಸಿಕ್ಕೀತು' ಎಂದು ಭರವಸೆಯನ್ನಿತ್ತನು. ಈ ಭರವಸೆಯೆಂದರೆ ಒಂದು ಯಾಚಿತವಾದ ಉಃಶಾಪ ಎನ್ನಬೇಕು. ಅಷ್ಟವಸುಗಳು ಕಾಮಧೇನುವನ್ನು ಕಳವು ಮಾಡಿದ್ದಕ್ಕಾಗಿ ವಸಿಷ್ಠ ಅವರನ್ನು ಶಪಿಸುತ್ತಾನೆ. ಆದರಿಂದಾಗಿ ಅವರು ಮಾನವರ ಜನ್ಮವನ್ನು ತಳೆಯುವಂತಾಗುತ್ತದೆ. ಅವರು ಅವನನ್ನು ಉಃಶಾಪಕ್ಕಾಗಿ ಕೋರುತ್ತಾರೆ. ಆಗ ವಸಿಷ್ಠನು 'ದೌ' ಒಬ್ಬನನ್ನುಳಿದು ಉಳಿದವರಿಗೆಲ್ಲ ಶೀಘ್ರವಾಗಿ ಸ್ವರ್ಗಪ್ರಾಪ್ತಿ ಯಾದೀತೆಂದು ಉಃಶಾಪವನ್ನು ನೀಡುತ್ತಾನೆ, 'ದೌ'ನ ಅಪರಾಧ ಉಳಿದವರಿಗಿಂತ ದೊಡ್ಡದಿತ್ತು. ಹೀಗಾಗಿ ಅವನು ಬಹಳ ಕಾಲದವರೆಗೆ ಮರ್ತ್ಯಲೋಕದಲ್ಲಿ ಉಳಿಯ ಬೇಕಾಯಿತು. ಊರ್ವಶಿಯ ಶಾಪದಿಂದಾಗಿ ಅರ್ಜುನ ನಪುಂಸಕನಾಗಿ ಹೆಂಗಳೆಯರ ನಡುವೆ ನರ್ತಕನೆಂದು ಹೀನಾಯದ ಬಾಳನ್ನು ಹೊಂದಬೇಕಾಯಿತು. ಇಂದ್ರನು ನೀಡಿದ ಉಃಶಾಪದಿಂದಾಗಿ ಅರ್ಜುನನ ಷಂಡತ್ವದ ಕಾಲ ಒಂದು ವರ್ಷಕ್ಕೆ ಮಿತಿಗೊಂಡಿತು. ಇಲ್ಲಿ ಶಾಪವನ್ನು ನೀಡಿದವಳು ಊರ್ವಶಿಯಾಗಿದ್ದು ಉಃಶಾಪವನ್ನು ನೀಡುವವನು ಮಾತ್ರ ಇಂದ್ರ. ಇದೊಂದು ಅಪವಾದದ ಸಂಗತಿಯೇ ಸರಿ.

ನಹುಷನ ಉದ್ದಾಮವರ್ತನೆಯಿಂದ ಸಂತಪ್ತನಾದ (ಭೃಗು) ಅಗಸ್ತ್ಯನು ಅವನಿಗೆ ಸರ್ಪತ್ವದ ಶಾಪವನ್ನೀಯುವನು. ನಹುಷನು ಆಗ ತನ್ನ ಶಾಪಕ್ಕೆ ಪರಿಹಾರವೇನೆಂದು ಅವನನ್ನು ಕೇಳಲಾಗಿ ಅವನಿತ್ತ ಭರವಸೆಯೇ ಒಂದು ಉಃಶಾಪದಂತಿದೆ. ಬ್ರಾಹ್ಮಣ ನೊಬ್ಬನ ಬಾಣವು ತಪ್ಪಿ ಒಬ್ಬ ಋಷಿಗೆ ತಗಲುತ್ತಲೇ ಅವನು ಸಂತಪ್ತನಾಗಿ 'ಶೂದ್ರ ಯೋನಿಯಲ್ಲಿ ಹುಟ್ಟುವಿ' ಎಂದು ಬ್ರಾಹ್ಮಣನಿಗೆ ಶಾಪವಿತ್ತನು. ಬ್ರಾಹ್ಮಣನಿಗೆ ತನ್ನ ತಪ್ಪಿನ ಅರಿವಾಗಿ ಋಷಿಯ ಕ್ಷಮೆ ಕೋರುತ್ತಾನೆ. ಆಗ ಋಷಿಯು ಶಾಪದಿಂದ ಬಿಡುಗಡೆ ಯಾದ ತರುವಾಯದಲ್ಲಿ ಅವನು ಮತ್ತೆ ತನ್ನ ಬ್ರಾಹ್ಮಣತ್ವವನ್ನು ಮರಳಿ ಪಡೆಯಲಿರು ವನೆಂದು ಹೇಳಿದನು. ಇದು ಯಾಚಿತವಾದ ಉಃಶಾಪವೆನ್ನಿಸಿದೆ. ಸ್ಥೂಣಕರ್ಣನು ಕೊಂಚ ಸಮಯದವರೆಗೆ ಶಿಖಂಡಿಯ ಹೆಣ್ಣುತನವನ್ನು ತಾನು ಪಡೆದು ಅವಳಿಗೆ ತನ್ನ ಗಂಡಸು ತನವನ್ನು ಎರವಲಾಗಿ ನೀಡಿದ್ದನು. ಕುಬೇರನು ಇದನ್ನು ಯಕ್ಷಕುಲದ ಅವಮಾನವೆಂದು ಬಗೆದನು. ಹೀಗಾಗಿ ಸ್ಥೂಣಕರ್ಣನಿಗೆ ಕೊನೆಯವರೆಗೂ ಹೆಣ್ಣಾಗಿ ಉಳಿಯೆಂದು ಶಾಪ ವನ್ನಿತ್ತನು. ಕೊನೆಗೆ ಸ್ಥೂಣಕರ್ಣನ ಕೋರಿಕೆಯಂತೆ ಕುಬೇರನು ಅವನಿಗೆ ಒಂದು ಉಃಶಾಪವನ್ನು ನೀಡಿದನು. ಶಿಖಂಡಿ ಸಾಯುವವರೆಗೆ ಮಾತ್ರ ಆತ ಹೆಣ್ಣಾಗಿದ್ದು ತರುವಾಯದಲ್ಲಿ ಮರಳಿ ತನ್ನ ಗಂಡಸುತನವನ್ನು ಪಡೆಯುವನೆಂದು ಭರವಸೆಯಿತ್ತನು.

ತನ್ನ ಮುದ್ದಿನ ಮಡದಿಯನ್ನು ಅಪಹರಿಸಿದ ದಂಶರಾಜನನ್ನು (ಅಲರ್ಕ) ಶ್ಲೇಷ್ಮ, ರಕ್ತ, ಕೀವುಗಳನ್ನು ಸೇವಿಸುವ ಕ್ಷುದ್ರವಾದ ಕೀಟಕವಾಗೆಂದು ಭೃಗುವು ಶಾಪವನ್ನಿತ್ತನು. ಪರಶುರಾಮನಿಂದ ಆತನ ಶಾಪವಿಮೋಚನೆ ಆಗಲಿದೆಯೆಂಬ ಉಃಶಾಪವನ್ನೂ ನೀಡಿದನು.

## ಶರತ್ತಿನ ಶಾಪಗಳು

ಶರತ್ತಿನ ಶಾಪಗಳು (conditional curse) ಎಂಬ ಪದವನ್ನು ಬಳಸಿದ ಮೊದಲಿಗ ನೆಂದರೆ ವೆಸ್ಟರ್‌ಮಾರ್ಕ್ ಎಂಬಾತನು. ಶರತ್ತಿನ ಶಾಪವು ಶಾಪಪ್ರಕ್ರಿಯೆಯ ಒಂದು ಮುಖ್ಯವಾದ ಘಟ್ಟ ಎಂದು ಅವನು ಅಭಿಪ್ರಾಯಪಡುತ್ತಾನೆ. ಅವರ ಸಾಮರ್ಥ್ಯ ದಿಂದಾಗಿ ಸದ್ಭಾವ ಹಾಗೂ ಪ್ರಾಮಾಣಿಕತೆಗಳಲ್ಲದೆ ಸತ್ಯದರ್ಶನಕ್ಕೆ ಒಂದು ನೈತಿಕ ಅಧಿಷ್ಠಾನ ಲಭಿಸುತ್ತದೆ. ಸಾಮಾನ್ಯವಾದ ಶಾಪ ಹಾಗೂ ಅದರಲ್ಲಿ ಹುದುಗಿದ ಸುಪ್ತ ಸಾಮರ್ಥ್ಯಕ್ಕಿಂತಲೂ ಶರತ್ತಿನ ಶಾಪದ ಸಾಮರ್ಥ್ಯ ಅದ್ಭುತವಾದುದು.[37] ಶರತ್ತಿನ ಶಾಪದ ಉದ್ದೇಶ ಹಾಗೂ ಪರಿಣಾಮಗಳು ಉಳಿದ ಶಾಪಗಳಿಗಿಂತ ಭಿನ್ನವಾದವುಗಳು. ಶಾಪಿತನಿಗೆ ಶಿಕ್ಷೆಯಾಗಬೇಕೆಂಬ ಒಂದೇ ಉದ್ದೇಶ ಶರತ್ತಿನ ಶಾಪದ್ದಲ್ಲ. ಇಷ್ಟೇ ಏಕೆ, ಶಿಕ್ಷೆ ಯಾಗಕೂಡದು ಎಂಬುದೇ ಅದರ ಮುಖ್ಯ ಕಳಕಳಿ. ಶಾಪದ ಪರಿಣಾಮದಿಂದ ಆದಷ್ಟು ಮಟ್ಟಿಗೆ ಬಿಡುಗಡೆ ದೊರೆಯಲೆಂಬ ಮಾರ್ಗದರ್ಶನ ಶರತ್ತಿನ ಶಾಪದಲ್ಲಿರುವಂಥದು. ಶಾಪಿತನಿಗೆ ಅವನ ತಪ್ಪನ್ನು ತೋರಿಸಿಕೊಡುವ ಉದ್ದೇಶ, ಎಚ್ಚರದ ಯತ್ನ ಅದರಲ್ಲಿ ಹುದುಗಿರುತ್ತದೆ. ಶರತ್ತನ್ನು ಸರಿಯಾಗಿ ಪಾಲಿಸಿ ಶಾಪದ ಪರಿಣಾಮವನ್ನು ತಪ್ಪಿಸುವ ಅವಕಾಶ ಶಾಪಿತನಿಗೆ ದೊರಕುತ್ತದೆ. ಶರತ್ತನ್ನು ಪಾಲಿಸದಿದ್ದರೆ ಮಾತ್ರ ಉಳಿದ ಶಾಪ ಗಳ ಹಾಗೆ ಅವುಗಳ ಪರಿಣಾಮದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಶರತ್ತಿನ ಶಾಪಗಳಲ್ಲಿ ಸಾಮಾಜಿಕ ಹಾಗೂ ನೀತಿಮತ್ತೆಯ ದೃಷ್ಟಿ ಇರುತ್ತದೆ. ಉಃಶಾಪ ಇಲ್ಲವ ವರದಿಂದಾಗಿ ಶಾಪದ ತೀವ್ರತೆ ಹಾಗೂ ಕಾಲಮಿತಿಯನ್ನು ಮೊಟಕುಗೊಳಿಸಲಿಹುದಾದರೂ ಅವುಗಳನ್ನು ಸರಿಯಾಗಿ ತಪ್ಪಿಸಲು ಸಾಧ್ಯವಿಲ್ಲ. ಶರತ್ತಿನ ಶಾಪದಲ್ಲಾದರೆ ಶರತ್ತನ್ನು ಸರಿಯಾಗಿ ಪಾಲಿಸ ಲಾಗಿ ಶಾಪ ತನ್ನ ಪರಿಣಾಮವನ್ನು ಕಳೆದುಕೊಳ್ಳುತ್ತದೆ. ಉಃಶಾಪ ಹಾಗೂ ವರಗಳು ದೊರಕುವುದಾಗಲಿ, ದೊರಕದಿರುವುದಾಗಲಿ ಅವುಗಳನ್ನು ನೀಡುವವನ ಇಚ್ಛೆ ಹಾಗೂ ಕೃಪೆಯನ್ನವಲಂಬಿಸಿರುತ್ತದೆ. ಶರತ್ತಿನ ಶಾಪದಲ್ಲಿ ಶರತ್ತನ್ನು ಪಾಲಿಸುವುದು ಶಾಪಿತನಿಗೆ ಸಂಬಂಧಿಸಿದ ಸಂಗತಿಯಾದ್ದರಿಂದ ಇಲ್ಲಿ ಶಾಪವನ್ನೀಯುವವನ ಇಚ್ಛೆ–ಅನಿಚ್ಛೆ, ಕೃಪೆ–ಅವಕೃಪೆಗಳ ಪ್ರಶ್ನೆಯೇ ಹುಟ್ಟಿಕೊಳ್ಳದು.

---

37. The conditional curse ..is an important development of the principle of cursing and blessing, and has had considerable influence in the making of morality, especially in the sphere of good faith, honesty and truthfulness The energy of a conditional curse is the Supernatural Energy of an ordinary curse or of its embodiment, in a latent state.

—*Encyclopaedia of Religion and Ethics*, Vol. IV, p. 372.

ಮಹಾಭಾರತದ ಒಟ್ಟು ಶರತ್ತಿನ ಶಾಪಗಳಲ್ಲಿ ಹದಿನೆಂಟು ಶಾಪಗಳು ಒಂದಿಲ್ಲೊಂದು ಕಾರಣಕ್ಕಾಗಿ ಅನುಚ್ಚಾರಿತವಾದ ಶಾಪಗಳಾಗಿವೆ. ಇವುಗಳನ್ನು ಕುರಿತು ಅನುಚ್ಚಾರಿತ ಶಾಪಗಳ ವಿವೇಚನೆಯಲ್ಲಿ ಸವಿಸ್ತಾರವಾಗಿ ಚರ್ಚಿಸಲಾಗಿದೆ. ಪ್ರತ್ಯಕ್ಷದಲ್ಲಿ ಮಾತ್ರ, ಬರಿ ಎರಡೇ ಎರಡು ಶರತ್ತಿನ ಶಾಪಗಳನ್ನು ಉಚ್ಚರಿಸಲಾಗಿದೆ. ಆಸ್ತಿಕನು ನಾಗರಹಾವುಗಳಿಗೆ ತನ್ನನ್ನು ನೆನೆಸುವ ಅಭಯವನ್ನಿತ್ತನು. ಹೀಗಾಗಿ ಅವು ಅವನನ್ನು ನೆನೆಸಿ ಘೋರವಾದ ಶಾಪದ ಪರಿಣಾಮಗಳನ್ನು ತಪ್ಪಿಸಿಕೊಂಡವು. ಹಾಗೆ ಅವನನ್ನು ನೆನೆಸದ ಹಾವುಗಳ ತಲೆ ಗಳೊಡೆದು ಕಳ್ಳಿಯ ಹಣ್ಣಿನಂತೆ ಸಾವಿರ ಹೋಳುಗಳಾಗುವ ಹೆದರಿಕೆ ಇದ್ದೇ ಇತ್ತು. ಅಂಬೆಯು ಭೀಷ್ಮನನ್ನು ಕೊಲ್ಲದಿರಲೆಂದು ಗಂಗೆಯು ಪರಿಪರಿಯಾಗಿ ಪ್ರಯತ್ನಿಸಿದಳು. ಆದರೆ ಅಂಬೆ ತನ್ನ ಹಟವನ್ನು ಬಿಟ್ಟುಕೊಡಲು ಒಪ್ಪಲಿಲ್ಲ. ಇಷ್ಟಾಗಿಯೂ ಗಂಗೆಯು ಅವಳಿಗೊಂದು ಶರತ್ತಿನ ಶಾಪವನ್ನಿತ್ತು ಅವಳಿಗೆ ತನ್ನ ತಪ್ಪನ್ನು ತಿದ್ದಿಕೊಳ್ಳಲು ಒಂದು ಅವಕಾಶವನ್ನು ಒದಗಿಸಿದಳು. ಗಂಗೆಯ ಶಾಪದ ಪರಿಣಾಮಗಳು ಸೌಮ್ಯವೂ, ನಿರುಪದ್ರವಿಯೂ, ತೀರ ನಷ್ಟವಿಯೂ ಆಗಿದ್ದವು. ಆದರೂ ಅಂಬೆ ವಿಚಲಿತಳಾಗದೆ ತನ್ನ ಕಾಯಕವನ್ನು ಹಾಗೆಯೇ ಮುಂದುವರೆಸಿದಳು. ಹೀಗಾಗಿ ಶಾಪದ ಪರಿಣಾಮ ವೆಂದು ಅವಳು ಒಂದು ಹೊಳೆಯಾಗಿ ಪರಿವರ್ತಿತಳಾದಳು. ಮಳೆಗಾಲದಲ್ಲಿ ಈ ಹೊಳೆ ಯನ್ನು ದಾಟುವುದು ಅಸಾಧ್ಯವೆನ್ನಿಸುವ ಮಟ್ಟಿಗೆ ಅದು ತುಂಬಿ ಹರಿಯುತ್ತಲಿದ್ದು ವರ್ಷದ ಉಳಿದ ಎಂಟು ತಿಂಗಳುಗಳ ಕಾಲ ನೀರೆಲ್ಲ ಬತ್ತಿಹೋಗಿ ಈ ಹೊಳೆ ಅಲಕ್ಷ್ಯ ಕ್ಕೀಡಾಗತೊಡಗಿತು, ಯಾರಿಗೂ ಕೆಲಸಕ್ಕೆ ಬಾರದ್ದೆನ್ನಿಸಿತು. ಈ ಶಾಪದ ಪರಿಣಾಮ ಆದುದು ಅಂಬೆಯ ಅರ್ಧ ದೇಹದ ಮೇಲೆ ಮಾತ್ರ. ಉಳಿದರ್ಧಭಾಗವು ಮುಂದಿನ ಜನ್ಮದಲ್ಲಿ ಶಿಖಂಡಿಯ ರೂಪವನ್ನು ತಳೆಯಿತು. ಅದರಿಂದಾಗಿ ಅವಳು ತನ್ನ ಗುರಿಯನ್ನು ತಲಪುವಂತಾಯಿತು. ಹೀಗಾಗಿ, ಅಂಬೆಯು ಶರತ್ತನ್ನು ಪಾಲಿಸದೆಯೂ (ಅದೇ ದೇಹ ದಿಂದಲೇ ಏಕಾಗಲೊಲ್ಲದು) ಶಾಪದ ಪರಿಣಾಮಗಳನ್ನು ತಪ್ಪಿಸುವಲ್ಲಿ ಯಶಸ್ವಿಯಾ ದಳು. ಶರತ್ತಿನ ಶಾಪಗಳಲ್ಲಿ ಶರತ್ತುಗಳನ್ನು ಪಾಲಿಸದಿದ್ದರೆ ಶಾಪಗಳ ಪರಿಣಾಮಗಳು ಕಟ್ಟಿಟ್ಟ ಬುತ್ತಿ. ಅಂಬೆಯ ಸಂದರ್ಭದಲ್ಲಿ ಮಾತ್ರ ಅಪವಾದ ನಡೆದಂತಿದೆ. ಇಲ್ಲಿ ಶಾಪವು ತುಸು ಮಟ್ಟಿಗೆ ವಿಫಲಗೊಂಡಿದೆ. ಅಂಬೆಯ ಅರ್ಧ ದೇಹಕ್ಕೆ ಯಶ ದೊರೆಯಲು ಶಂಕರ ಅವಳಿಗೆ ನೀಡಿದ ವರವೇ ಕಾರಣ.[38]

ಗಂಗೆಯು ಅಂಬೆಗಿತ್ತ ಶಾಪವು ಇಡಿಯಾಗಿ ತನ್ನ ಪರಿಣಾಮವನ್ನು ಬೀರಿದ್ದರೆ ಶಂಕರನ ಈ ವರಕ್ಕೆ ಧಕ್ಕೆ ತಗಲಬಹುದಿತ್ತು. ಅದು ಸುಳ್ಳಾಗಬಹುದಿತ್ತು. ಶಾಪ/ವರ ಗಳು ಹುಸಿಹೋಗಲಾರವು ಎಂಬ ಕಾರಣಕ್ಕಾಗಿ ಈ ಪರ್ಯಾಯವೆಂದು ಕಾಣುತ್ತದೆ.

---

38. ಹನಿಷ್ಯಸಿ ರಣೇ ಭೀಷ್ಮಂ ಪುರುಷತ್ವಂ ಚ ಲಪ್ಸ್ಯಸೇ ।
ಸ್ಮರಿಷ್ಯಸಿ ಚ ತತ್ಸರ್ವಂ ದೇಹಮನ್ಯಂ ಗತಾ ಸತೀ ॥ ೧೩ ॥
ದ್ರುಪದಸ್ಯ ಕುಲೇ ಜಾತಾ ಭವಿಷ್ಯಸಿ ಮಹಾರಥಃ ।
ಶೀಘ್ರಾಸ್ತ್ರಶ್ಚಿತ್ರಯೋಧೀ ಚ ಭವಿಷ್ಯಸಿ ಸುಸಮ್ಮತಃ ॥ ೧೪ ॥
ಯಥೋಕ್ತಮೇವ ಕಲ್ಯಾಣಿ ಸರ್ವಮೇತದ್ ಭವಿಷ್ಯತಿ ।
ಭವಿಷ್ಯಸಿ ಪುಮಾನ್ ಪಶ್ಚಾತ್ ಕಸ್ಮಾಚ್ಚಿತ್ ಕಾಲಪರ್ಯಯಾತ್ ॥ ೧೫ ॥
—ಉದ್ಯೋಗ/೧೮೭

ಇದೇ ಬಗೆಯಾಗಿ ವಾಲ್ಮೀಕಿರಾಮಾಯಣದಲ್ಲಿ ಕೂಡ ಬ್ರಹ್ಮದೇವನ ಶಾಪ ಹುಸಿ ಹೋಗದಿರಲೆಂದು ಈ ಬಗೆಯ ಹಂಚಿಕೆಯನ್ನು ಹೂಡಿದಂತಿದೆ. ರಾವಣ ಹಾಗೂ ನಿವಾತಕವಚರಲ್ಲಿ ಒಪ್ಪಂದವನ್ನು ಮಾಡಿಕೊಳ್ಳಲು ಹಚ್ಚಿ ರಾವಣನ ಮೇಲೆ ಕಾಲದಂಡ ವನ್ನು ಎತ್ತಲಿದ್ದ ಯಮರಾಜನನ್ನು ಯುದ್ಧದಿಂದ ದೂರವಿರಿಸಲಾಗಿದೆ. (ವಾಲ್ಮೀಕಿ ರಾಮಾಯಣ: ಶಾಪ ಮತ್ತು ವರ, ಕ್ರ. ೬೨ ಹಾಗೂ ಉತ್ತರಕಾಂಡ/೨೨ಗಳನ್ನು ನೋಡಿ.)

## ಮರುಶಾಪ

ಶಾಪಕ್ಕೆ ಇನ್ನೊಂದು ಶಾಪದಿಂದಲೇ ನೀಡಲಾದ ಮಾರುತ್ತರ ಎಂದರೆ ಮರುಶಾಪ. ಶಾಪವನ್ನೀಯಲು ಬೇಕಿದ್ದ ಹಲವು ಕಾರಣಗಳಲ್ಲಿ ಶಾಪವೂ ಒಂದಿರಲು ಸಾಧ್ಯ. ಮಹಾ ಭಾರತದಲ್ಲಿ ಮರುಶಾಪದ ಒಟ್ಟು ಏಳು ಉದಾಹರಣೆಗಳಿವೆ.

ಅಶ್ವತ್ಥಾಮನು ಉತ್ತರೆಯ ಬಸಿರಿನ ಮೇಲೆ ಬ್ರಹ್ಮಾಸ್ತ್ರವನ್ನು ಎಸೆದ ಕಾರಣ ವ್ಯಾಸನು ಅವನಿಗೆ ಶಾಪವನ್ನಿತ್ತನು (ಶಾ.ಕ್ರ. ೨). ಅದರಿಂದಾಗಿ ಕೆರಳಿದ ಅಶ್ವತ್ಥಾ ಮನು ವ್ಯಾಸನಿಗೆ ಮರುಶಾಪವನ್ನಿತ್ತ ಒಂದು ಉಲ್ಲೇಖ ಆದಿ/೨ರಲ್ಲಿದೆ. ಈ ಮರು ಶಾಪದ ಸ್ವರೂಪ ಮಾತ್ರ ನಿಖರವಾಗಿಲ್ಲ. ಗುರುವಿಗೆ ಸಮಾನರಾದ ವ್ಯಕ್ತಿಗಳನ್ನು ಶಪಿಸಕೂಡದೆಂಬ ಸಂಕೇತವನ್ನು ಅಶ್ವತ್ಥಾಮನು ಪಾಲಿಸಿದಂತಿಲ್ಲ. ವಿಭಾವಸು ಹಾಗೂ ಸುಪ್ರತೀಕರು ಪರಸ್ಪರರಿಗಿತ್ತ ಶಾಪ/ಮರುಶಾಪಗಳು ಹಾಗೂ ಅವುಗಳ ಕಾರಣಗಳು ಚಿಲ್ಲರೆಯಾದವುಗಳು. ಇವುಗಳ ಪರಿಣಾಮ ಎಂದರೆ ಅವರಿಬ್ಬರಿಗೂ ತಿರ್ಯಗ್ಯೋನಿ ದೊರೆತುದು. ದೇವಯಾನಿಯು ಕಚನಿಗಿತ್ತ ಶಾಪವನ್ನು ಕುರಿತು ಸ್ತ್ರೀಶಾಪಗಳಲ್ಲಿ ವಿಸ್ತಾರ ದಿಂದ ವಿವೇಚಿಸಲಾಗಿದೆ. ಅವಳ ಶಾಪಕ್ಕೆ ಆಧಾರವಿಲ್ಲದಿದ್ದರೂ ಅದರ ಪರಿಣಾಮ ಮಾತ್ರ ಬಲು ಉಗ್ರವಾದುದು. ಕಚನ ತಪಸ್ಸು ಸಂಜೀವಿನಿವಿದ್ಯೆಯನ್ನು ಪಡೆಯಲೆಂದೇ ಸಾಗಿದುದು. ತನ್ನ ಗುರುವನ್ನು ಪ್ರಸನ್ನನಾಗಿರಿಸಲೆಂದು ಅವನು ಕಠೋರವಾದ ಬ್ರಹ್ಮಚರ್ಯ ಜೀವನವನ್ನು ಅಂಗೀಕರಿಸಿದನು ಆದರೆ ದೇವಯಾನಿಯ ಶಾಪದಿಂದಾಗಿ ಅದೆಲ್ಲದರ ಮೇಲೆ ನೀರೆರೆಚಿದಂತಾಯಿತು. ಹೀಗಾಗಿ ಮರುಶಾಪವನ್ನೀಯದೆ ಅವನಿಗೆ ಬೇರೆ ವಿಧಿ ಯಿರಲಿಲ್ಲ. ದೇವಯಾನಿಯು ನಲ್ಮೆಯೀ ಕಚನನ್ನು ಸಂಕಟದಿಂದ ಪಾರುಮಾಡಿತ್ತೆಂಬುದು ನಿಜವಾದರೂ ಅವನಿಗೆ ಸಂಜೀವಿನಿ ದೊರೆತದ್ದು ದೈತ್ಯರ ಮೂರ್ಖತನದಿಂದಾಗಿ, ದೇವಯಾನಿಯ ಯತ್ನಗಳಿಂದಾಗಿಯಲ್ಲ. ಕಚನು ತನ್ನ ಶಿಷ್ಯರಿಗೆ ವಿದ್ಯೆಯನ್ನು ಹೇಳಿ ಕೊಟ್ಟು ಅವರ ಮೂಲಕ ಅದನ್ನು ಸಫಲಗೊಳಿಸಲು ಯತ್ನಿಸಿದ ಕಾರಣ ದೇವ ಯಾನಿಯ ಶಾಪ ಫಲಕಾರಿಯಾಗಲಿಲ್ಲ. ನಿಮಿಯು ವಸಿಷ್ಠನಿಗೆ ಇತ್ತುದು ಮರುಶಾಪ ವಾಗಿರುವ ಸಾಧ್ಯತೆಯಿದೆ. ಹೀಗೆನ್ನಲು ಕಾರಣವೆಂದರೆ ವಸಿಷ್ಠನು ಅವನನ್ನು ಶಪಿಸಿದ ಒಂದು ಮಸುಕಾದ ಉಲ್ಲೇಖ ಉದ್ಯೋಗ/೧೦೮-೧೩ರಲ್ಲಿದೆ. ವಾಲ್ಮೀಕಿರಾಮಾಯಣ ದಲ್ಲಿ ಮಾತ್ರ ವಸಿಷ್ಠ-ನಿಮಿಯರ ಶಾಪ-ಮರುಶಾಪಗಳನ್ನು ಕುರಿತು ವಿಸ್ತಾರದಿಂದ ಬಣ್ಣಿಸಲಾಗಿದೆ.[39] ವಿಶ್ವಾಮಿತ್ರನ ಶಾಪಯುಕ್ತಿಯನ್ನು ಕುರಿತಾದ ಉಲ್ಲೇಖ ಅನುಶಾಸನ,

39. ನೋಡಿ: ವಾಲ್ಮೀಕಿರಾಮಾಯಣ - ಶಾಪ ಮತ್ತು ವರ, ಶಾ.ಕ್ರ. ೫೦/೫೧.

೩/೧೪ರಲ್ಲಿದೆ. ಹೀಗಾಗಿ ಅವನು ಈ ಮೊದಲು ಶಾಪಿತನಾಗಿದ್ದನೆಂಬ ಅನುಮಾನವನ್ನು ಕಟ್ಟಬಹುದು. ವಿಶ್ವಾಮಿತ್ರನು ವಸಿಷ್ಠರ ಮಕ್ಕಳನ್ನು 'ಚಾಂಡಾಲ'ರಾಗಿರೆಂದು ಶಪಿಸಿದುದೇ ಬಹಳಷ್ಟುಮಟ್ಟಿಗೆ ಈ ಶಾಪಕ್ಕೆ ಕಾರಣವಾಗಿರಲು ಸಾಕು. ಮಹಾಭಾರತದಲ್ಲಿ ಮಾತ್ರ ಇವೆರಡೂ ಶಾಪಗಳಿಲ್ಲ. ವಾಲ್ಮೀಕಿರಾಮಾಯಣದ ಆಧಾರದಿಂದ ಹೇಳುವುದಾದರೆ ಮೇಲಿನದು ಮರುಶಾಪ ಎನ್ನಿಸುತ್ತದೆ.[40]

ನಾರದನು ಮಾತು ಮುರಿದದ್ದರಿಂದ ಪರ್ವತಋಷಿಯು ಅವನನ್ನು ಶಪಿಸಿದನು. ಆದರಿಂದಾಗಿ ಅವರಿಬ್ಬರಿಗೂ ಸ್ವರ್ಗದಲ್ಲಿ ಪ್ರವೇಶ ಇಲ್ಲದಂತಾಯಿತು (ಶಾ.ಕ್ರ. ೮೮-೮೯). ಕಾಲಾಂತರದಲ್ಲಿ ಅವರಿಬ್ಬರೂ ತಮ್ಮ ಶಾಪ-ಮರುಶಾಪಗಳ ತಪ್ಪನ್ನು ಮನಗಂಡು ಪಶ್ಚಾತ್ತಾಪ ಪಟ್ಟ ಕಾರಣ ಅವರು ಪರಸ್ಪರರ ಶಾಪಗಳನ್ನು ನಿವಾರಿಸಿದರು.[41]

ಪರ್ವತನು ನಾರದನಿಗೆ ಸಲ್ಲಿಸಿದ ಕೋರಿಕೆ ಒಂಮ ಉಃಶಾಪವಾಗಿ ಕಾಣುತ್ತದೆ. ಆದರೆ ನಾರದನು ಉಃಶಾಪವನ್ನು ಕೇಳಿಲ್ಲ. ಪರ್ವತನು ಕೂಡ ಕೇಳುವ ಮೊದಲೇ ಅವನಿಗೆ ಉಃಶಾಪವನ್ನು ನೀಡಿಲ್ಲ. ಅವನು ಬೇರೊಂದು ವರವನ್ನಿತ್ತ ಉಲ್ಲೇಖವೂ ಕಂಡಿಲ್ಲ. ಉಃಶಾಪ ಇಲ್ಲವೆ ವರದ ಪರಿಣಾಮವು ಸೌಮ್ಯವೂ, ಸೀಮಿತವೂ ಆದುದರಿಂದ ಶಾಪವು ಪೂರ್ತಿಯಾಗಿ ನಿವಾರಣೆಗೊಳ್ಳದು. ಇಲ್ಲಿ ಹೀಗಾಗಿರುವುದನ್ನು ಒಂದು ಅಪವಾದವೆನ್ನಬೇಕಷ್ಟೆ.

ಪೌಷ್ಯನು ಉತ್ತಂಕನನ್ನು ಉಣ್ಣುವಂತೆ ಬಲವಂತ ಮಾಡುತ್ತಾನೆ. ಆದರೆ ಅವನಿಗೆ ನೀಡಿದ ಅಡುಗೆ ಶುದ್ಧವಾಗಿರುವುದನ್ನು ಖಚಿತಪಡಿಸಿಕೊಂಡಿರಲಿಲ್ಲ. ಹೀಗಾಗಿ ಉತ್ತಂಕನು ಪೌಷ್ಯನನ್ನು ಶಪಿಸಲು ಕಾರಣ ಅಶುದ್ಧವಾದ ಆಹಾರ. ಪೌಷ್ಯನು ತನ್ನ ತಪ್ಪನ್ನು ಮನಗಾಣದೆಯೇ ಉತ್ತಂಕನಿಗೆ ಮರುಶಾಪವನ್ನೀಯುವನು. ಉತ್ತಂಕನು ಪೌಷ್ಯನ ತಪ್ಪನ್ನು ಪುರಾವೆಯೊಂದಿಗೆ ಸಿದ್ಧಪಡಿಸಿ ತೋರಿಸುತ್ತಲೇ ಅವನು ನಾಚಿಕೆಯಿಂದ ಉತ್ತಂಕನ ಕ್ಷಮೆ ಕೋರಿದನಲ್ಲದೆ ಉಃಶಾಪಕ್ಕಾಗಿಯೂ ಅವನನ್ನು ಬೇಡಿಕೊಂಡನು. ಉತ್ತಂಕನು ಅವನಿಗೆ ಉಃಶಾಪವನ್ನಿತ್ತು ಅವನ ಕುರುಡುತನದ ಕಾಲಮಿತಿಯನ್ನು ಮೊಟಕುಗೊಳಿಸಿ ಅವನಿಗೆ ತನ್ನ ಶಾಪವನ್ನು ಹಿಂತೆಗೆದುಕೊಳ್ಳುವಂತೆ ಹೇಳಿದನು. ಆದರೆ ಪೌಷ್ಯನ ಕೋಪ ಇಳಿದಿರದ್ದರಿಂದ ಅವನು ಅದನ್ನು ಹಿಂತೆಗೆದುಕೊಳ್ಳಲು ನಿರಾಕರಿಸುತ್ತಾನೆ. ತನ್ನ ಈ ನಿರಾಕರಣೆಗೆ ಬ್ರಾಹ್ಮಣ-ಕ್ಷತ್ರಿಯರ ಮನೋಧರ್ಮಗಳಲ್ಲಿರುವ ವ್ಯತ್ಯಾಸವೇ ಕಾರಣವೆಂದು ಅವನಿಗೆ ಹೇಳುತ್ತಾನೆ. ಇಲ್ಲಿ ಪೌಷ್ಯನ ನಡತೆ ತಪ್ಪಾದುದರಿಂದ ಅವನಿತ್ತ ಮರುಶಾಪವನ್ನು ಸಮರ್ಥಿಸುವುದು ಕಷ್ಟದ್ದೆನ್ನಿಸುತ್ತದೆ. ಪೌಷ್ಯನ ಮರುಶಾಪಕ್ಕೆ ಪೆಟ್ಟುಕೊಡಲೆಂದು ಉತ್ತಂಕನು ನೀಡಿದ ಮಾರುತ್ತರದಿಂದಾಗಿ ಪೌಷ್ಯನ ಮರುಶಾಪ ನಿಷ್ಫಲವಾಯಿತಲ್ಲದೆ ಅವನು ಮರುಶಾಪಕ್ಕೆ ಬದಲಾಗಿ ಇನ್ನೊಂದು ಭಾರೀ ಮರುಶಾಪವು ಅವನಿಗೆ ಸಿಕ್ಕಿತು.

---

40. ನೋಡಿ : ಅದೇ, ಶಾ.ಕ್ರ. ೧೫.
41. ನ್ಯವರ್ತಯೇತಾಂ ತೌ ಶಾಪಾವನ್ಯೋನ್ಯೇನ ತದಾ ಮುನೀ । —ಶಾಂತಿ, ೩೦/೩೯

## ಅನುಚ್ಚಾರಿತ ಶಾಪ

ಶಾಪವೆಂದರೆ ಬಲು ಪ್ರಭಾವಿಯಾದ ಒಂದು ವಾಕ್‌ಶಕ್ತಿ. ಹೀಗಾಗಿ ಶಾಪಕ್ರಿಯೆಯಲ್ಲಿ ಅದರ ಉಚ್ಚಾರಣೆಗೆ ಅನನ್ಯಸಾಧಾರಣವಾದ ಪ್ರಾಮುಖ್ಯತೆಯಿದೆ. ಶಾಪದ ಪರಿಣಾಮ ಅದರ ಉಚ್ಚಾರಣೆಯನ್ನವಲಂಬಿಸಿದುದು. ಶಾಪವನ್ನೀಯುವ ಬಯಕೆ ಮನದಲ್ಲಿ ಹುಟ್ಟಿಯೂ ಅದರ ಉಚ್ಚಾರಣೆಯಾಗುವವರೆಗೆ ಅದನ್ನು 'ಶಾಪ' ಎನ್ನಲಾಗದು. ಉಚ್ಚರಿಸದಿದ್ದ ಬಯಕೆ ಶಾಪವೆನ್ನಿಸದು, ಶಾಪದ ರೂಪವನ್ನು ತಳೆಯದು. ಶಾಪದ ಪರಿಣಾಮವು ಅಪರಿವರ್ತನೀಯವೂ, ಅಮೋಘವಾದುದೂ, ತಪ್ಪಿಸಲು ಬಾರದಂಥದೂ ಆಗಿರುವಂಥದು. ಹೀಗಾಗಿ ತಮ್ಮ ಸಿಟ್ಟು-ಕೋಪಗಳನ್ನು ಹಿಡಿತದಲ್ಲಿಟ್ಟುಕೊಳ್ಳುವವರಾದ ದೇವತೆಗಳು, ಜ್ಞಾನಿಗಳು, ತಪಸ್ವಿಗಳು, ವ್ರತಸ್ಥರು ಹಾಗೂ ಸ್ತ್ರೀಯರು ಯತ್ನಪೂರ್ವಕವಾಗಿ ಶಾಪವನ್ನೀಯುವುದನ್ನು ತಪ್ಪಿಸುತ್ತಾರೆ. ಆದರೆ ಮುಂಗೋಪಿಗಳು ಶಾಪವನ್ನೀಯದಿರಲಾರರು. ಶಾಪವನ್ನೀಯುವುದು ಸರಿಯಲ್ಲವೆಂದು ತಿಳಿಯಲಾಗಿದೆ. ಹೀಗಾಗಿ ಶಾಪವನ್ನೀಯುವಲ್ಲಿ ಎಲ್ಲಿಲ್ಲದ ಎಚ್ಚರಿಕೆಯನ್ನು ತಾಳಲಾಗುತ್ತದೆ. ಹಿರಿಯರು, ಗಣ್ಯರು, ಘನವಂತರು ಎನ್ನಿಸಿದವರನ್ನು ಶಪಿಸುವುದು ತಪ್ಪೆಂದು ಭಾವಿಸಲಾಗಿದೆ. ಹೀಗಾಗಿ ಅವರ ಬಗೆಗೆ ಕೋಪ ಬಂದಾಗ ಅದಕ್ಕೆ ಆದಷ್ಟುಮಟ್ಟಿಗೆ ಕಡಿವಾಣವನ್ನು ಹಾಕಲಾಗುತ್ತದೆ. ಶಾಪವನ್ನೀಯುವುದರಿಂದ ತಮ್ಮ ಪುಣ್ಯ ಕ್ಷಯಿಸುವುದು, ಮಹತ್ಪ್ರಯಾಸದಿಂದ ಕೈಕೊಂಡ ತಪಸ್ಸು ಹಾಳಾಗುತ್ತದೆ ಎಂದು ಬಗೆಯಲಾಗಿದೆ. ಶರತ್ತಿನ ಶಾಪಗಳ ಸಂದರ್ಭದಲ್ಲಿ ಅವುಗಳ ಶರತ್ತನ್ನು ಪಾಲಿಸಿದರೆ ಆ ಶಾಪದ ಪರಿಣಾಮ ಇಲ್ಲದಂತಾಗುತ್ತದೆ. 'ದಯವಿಟ್ಟು ನನ್ನನ್ನು ಶಪಿಸಬೇಡಿ' ಎಂದು ಕೇಳಿಕೊಂಡವನನ್ನು ಶಪಿಸದೆಯೂ ಇರಬಹುದು. ತಮಗೆ ಶಾಪ ದೊರೆತೀತೆಂಬ ಹೆದರಿಕೆಯೇ ಹಲವು ಸಂದರ್ಭಗಳಲ್ಲಿ ಹೆಚ್ಚಾಗಿ ಇರುವುದು ಕಂಡುಬರುತ್ತದೆ. ಮಹಾಭಾರತದಲ್ಲಿ ಒಟ್ಟು ಮೂವತ್ತೇಳು ಅನುಚ್ಚಾರಿತವಾದ ಶಾಪಗಳಿವೆ.

ಅಗ್ನಿಯು ಭೃಗುವಿನ ಮಡದಿಯನ್ನು ಕುರಿತು ಪುಲೋಮ ರಾಕ್ಷಸನಿಗೆ ಹೇಳಿದ್ದನೆಂಬುದು ನಿಜ. ಭೃಗುವಿಗೆ ಇದು ಹಿಡಿಸಲಿಲ್ಲ. ಹೀಗಾಗಿ ಅವನು ಅಗ್ನಿಯನ್ನು ಶಪಿಸಿದನು. ಭೃಗುವನ್ನು ಶಪಿಸಬಹುದಾದ ಸಾಮರ್ಥ್ಯ ಅಗ್ನಿಯ ಬಳಿ ಇತ್ತು. ಆದರೂ ಅವನು ಮರುಶಾಪವನ್ನೀಯಲಿಲ್ಲ. ಇದಕ್ಕೆ ಕಾರಣ ಋಷಿಯು ಪೂಜ್ಯನೂ, ವಂದ್ಯನೂ ಎನ್ನಿಸಿರುವುದು. ಯುದ್ಧ ಶುರುವಾಗುವ ಮೊದಲು ಪರಶುರಾಮನ ಶಿಷ್ಯನೆನ್ನಿಸಿದ ಭೀಷ್ಮನು ತನ್ನ ಗುರುವಿನ ಅಪ್ಪಣೆಯನ್ನು ಪಡೆಯುವುದು ಅಗತ್ಯದ್ದಾಗಿತ್ತು. ಅದೇ ರೀತಿಯಾಗಿ ಯುಧಿಷ್ಠಿರನು ಭೀಷ್ಮ, ದ್ರೋಣ, ಕೃಪ ಹಾಗೂ ಶಲ್ಯರಿಂದ ಅಪ್ಪಣೆ, ಹರಕೆಗಳನ್ನು ಪಡೆಯಬೇಕಿತ್ತು. ಇವರಿಬ್ಬರೂ ಸರಿಯಾಗಿ ನಡೆದುಕೊಂಡ ಕಾರಣ ಅವರು ಶಾಪಕ್ಕೀಡಾಗುವ ಹೊತ್ತು ಬರಲಿಲ್ಲ. ಉತ್ತಂಕನು ವೇಳೆಗೆ ಸರಿಯಾಗಿ ಗುರುದಕ್ಷಿಣೆಯನ್ನು ಸಲ್ಲಿಸದೆ ಹೋಗಿದ್ದರೆ ಗುರುಪತ್ನಿ ಅವನನ್ನು ಶಪಿಸದಿರುತ್ತಿರಲಿಲ್ಲ. ಅವನು ಸರಿಯಾದ ಹೊತ್ತಿಗೆ ಗುರುದಕ್ಷಿಣೆಯನ್ನು ಸಲ್ಲಿಸಿದ್ದರಿಂದ ಅವಳ ಶಾಪವು ವರವಾಗಿ ಪರಿಣಮಿಸಿತು. ಪುಷ್ಪಧಾರಿಣಿಯು ಹಿಂಸೆಯಿಂದ ಕೂಡಿದ ಯಜ್ಞವನ್ನು ಒಪ್ಪಿದವಳಲ್ಲ.

ಆದರೆ ಪತ್ನಿಗೆ ಪತಿಯೇ ಪರದೈವವೆಂಬುದನ್ನು ಅರಿತವಳಾಕೆ. ತನ್ನ ಗಂಡನ ಇಚ್ಛೆಗೆ ತಲೆಬಾಗದಿದ್ದರೆ ಅವಳು ಅವನ ಶಾಪಕ್ಕೀಡಾಗಬಹುದಿತ್ತು. ಭೀಷ್ಮ ಶರಪಂಜರದ ಮೇಲೆ ಒರಗಿದಾಗ ಅರ್ಜುನನು ಅವನಿಗೆ ತಕ್ಕ ಬಾಣಗಳ ತಲೆದಿಂಬನ್ನು ಒದಗಿಸಿದ್ದರಿಂದ ಭೀಷ್ಮನ ಶಾಪಕ್ಕೆ ಗುರಿಯಾಗಲಿಲ್ಲ, ಇಕ್ಷ್ವಾಕುವು 'ಕ್ಷತ್ರಿಯನು ದಾನವನ್ನು ಪಡೆಯ ಕೂಡದು' ಎಂಬ ಧರ್ಮವನ್ನು ಮರೆತದ್ದರಿಂದ ಕುಶಿಕನಿಗೆ ಅವನ ಜಪದ ಫಲವನ್ನು ತನಗೆ ಕೊಡೆಂದು ಕೇಳುತ್ತಾನೆ. ಕುಶಿಕನು ಅದನ್ನು ಕೊಡಮಾಡಿದಾಗ ಮಾತ್ರ ಇಕ್ಷ್ವಾಕು ಹಿಂದೇಟುಹಾಕುತ್ತಾನೆ. ಆಗ ಕುಶಿಕನು ಅವನಿಗೆ ತಿಳಿಹೇಳುತ್ತಾನೆ. ಅದು ಒಪ್ಪಿಗೆ ಯಾದುದರಿಂದ ಇಲ್ಲಿ ಶಾಪವನ್ನು ನೀಡಲಾಗಲಿಲ್ಲ, ಕುಂತಿಯು ತನ್ನೊಡನೆ ಸಮಾಗಮಕ್ಕೆ ಒಪ್ಪಿಕೊಂಡದ್ದರಿಂದ ಸೂರ್ಯನು ಅವಳು, ಅವಳ ತಂದೆ ಹಾಗೂ ಅವಳಿಗೆ ಮಂತ್ರವನ್ನು ನೀಡಿದ ಬ್ರಾಹ್ಮಣನನ್ನು ಶಪಿಸಲಿಲ್ಲ. ಸತ್ಯವತಿಯು ಪರಾಶರನ ಕೋರಿಕೆ ಯನ್ನು ಮನ್ನಿಸಿದ್ದರಿಂದ ಅವಳ ಶಾಪದ ಹೆದರಿಕೆ ಸುಳ್ಳಾಯಿತು. ರೈಭ್ಯನ ಸೊಸೆಗೆ ಯವಕ್ರೀತನ ಸ್ವಭಾವ, ಅವನ ತಪಸ್ಸಾಮರ್ಥ್ಯಗಳ ಅರಿವಿತ್ತು. ತಾನೊಬ್ಬ ಪತಿವ್ರತೆ ಯಾಗಿದ್ದು ಕೂಡ ಅವಳು ಅವನೊಡನೆಯ ಸಂಭೋಗಕ್ಕೆ ಸಿದ್ಧಳಾಗುತ್ತಾಳೆ. ಹೀಗಾಗಿ ಯವಕ್ರೀತ ಅವಳನ್ನು ಶಪಿಸುವ ಪ್ರಮೇಯ ಹುಟ್ಟಿಕೊಳ್ಳಲಿಲ್ಲ. ಅಗಸ್ತ್ಯನು ವಿದರ್ಭ ರಾಜ ಪೃಥ್ವೀಪತಿಯನ್ನು ತನಗೆ ಲೋಪಾಮುದ್ರೆಯನ್ನು ಕೊಡುವಂತೆ ಕೇಳುತ್ತಾನೆ. ರಾಜನು ಈ ಬೇಡಿಕೆಯನ್ನು ನಿರಾಕರಿಸುತ್ತಾನೆ. ಇಷ್ಟಾಗಿಯೂ ಅಗಸ್ತ್ಯನು ರಾಜನನ್ನು ಶಪಿಸಲಿಲ್ಲವೇಕೆ ?—ಎಂಬುದು ಮಾತ್ರ ಅರ್ಥವಾಗದು. ಕೌರವರು ತುಂಬುಸಭೆಯಲ್ಲಿ ದ್ರೌಪದಿಯ ಮಾನಭಂಗವನ್ನು ಮಾಡಿದ ಸನ್ನಿವೇಶ ಜಗತ್ತಿನ ಇತಿಹಾಸದಲ್ಲಿ ಇನ್ನೆಲ್ಲೂ ಇರಲಿಕ್ಕಿಲ್ಲ. ಆದರೂ ಅವಳು ಯಾರನ್ನೂ ಶಪಿಸಲಿಲ್ಲವೇಕೆ ? ಅವಳು ಅದೆಷ್ಟೇ ಕಠೋರ ವಾದ ಶಾಪವನ್ನು ಉಚ್ಚರಿಸಿದ್ದರೂ ಅವಳನ್ನು ಕ್ಷಮಿಸಬಹುದಿತ್ತು. ಆದರೆ ಅವಳು ತನ್ನ ಅಳಲನ್ನು ತೋಡಿಕೊಳ್ಳುವುದರಾಚೆಗೆ ಏನನ್ನೂ ಮಾಡಲಿಲ್ಲ. ಸರಸ್ವತಿಯು ತನ್ನನ್ನು ವಿಶ್ವಾಮಿತ್ರನಲ್ಲಿಗೆ ಕೊಂಡೊಯ್ದರೆ ತಾನು ಅವಳನ್ನು ಶಪಿಸಬಹುದೆಂದು ಅವಳು ಸುಮ್ಮನೆ ಹೆದರಿದ್ದುದಾಗಿ ವಸಿಷ್ಠ ಹೇಳುತ್ತಾನೆ. ದುರ್ಯೋಧನ ಶೀಘ್ರಕೋಪಿ ಯಾದ ದುರ್ವಾಸನ ಸ್ವಭಾವದ ಓರೆಕೋರೆಗಳನ್ನು ಅರಿತವನು. ಹೀಗಾಗಿ ಅವನು ದುರ್ವಾಸನ ಮನದಂತೆ ನಡೆದುಕೊಂಡ ಕಾರಣ ಅವನ ಶಾಪಕ್ಕೆ ಗುರಿಯಾಗಲಿಲ್ಲ. ತಾನು ದುರ್ವಾಸನಿಂದ ಮಂತ್ರವನ್ನು ಪಡೆಯಲು ನಿರಾಕರಿಸಿದ್ದರೆ ತಪ್ಪದೆ ಅವನ ಶಾಪಕ್ಕೆ ಗುರಿಯಾಗುವೆನೆಂಬ ಹೆದರಿಕೆ ಕುಂತಿಯಲ್ಲಿತ್ತು. ಋಚೀಕನು ಗಾಧಿ ಕೇಳಿದ ಕನ್ಯಾಶುಲ್ಕ ವನ್ನು ಒಪ್ಪಿಸಿದ್ದರಿಂದ ಗಾಧಿಯು ತನ್ನ ಮಗಳನ್ನು ಅವನಿಗೆ ಧಾರೆಯೆರೆದುಕೊಡಲೇ ಬೇಕಾಯಿತು. ಕನ್ಯಾದಾನ ನಡೆದುದರಿಂದ ಇಲ್ಲಿ ಶಾಪದ ಸನ್ನಿವೇಶ ಹುಟ್ಟಿಕೊಳ್ಳಲಿಲ್ಲ. ದೇವಶರ್ಮನ ಹೇಳಿಕೆಯಂತೆ ವಿಪುಲನು ತನ್ನ ಗುರುಪತ್ನಿಯನ್ನು ಇಂದ್ರನಿಂದ ಕಾಪಾಡಿದ್ದರಿಂದ ಅವನಿಗೆ ಶಾಪ ತಪ್ಪಿತು. ಚ್ಯವನ ಭಾರ್ಗವನು ತಮ್ಮ ರಾಜ-ರಾಣಿ ಯರನ್ನು ಹಿಂಸಿಸುವುದನ್ನು ಪ್ರಜೆಗಳು ಸಹಿಸದಂತಾದರು. ಶಾಪಕ್ಕೆ ಹೆದರಿ ಅವರೆಲ್ಲ ತೆಪ್ಪಗಿದ್ದರು. ಹೀಗಾಗಿ ಚ್ಯವನ ಅವರನ್ನು ಶಪಿಸಲಿಲ್ಲ. ಆದರೆ ಅವನು ರಾಜ-ರಾಣಿ ಯರನ್ನು ಶಪಿಸಲು ಹೊಂಚುಹಾಕಿದ್ದನು. ಅವನಿಗೆ ಅದಾವ ನೆಪವೂ ಸಿಕ್ಕಲಿಲ್ಲ. ಅಂದ

ಬಳಿಕ ಅವನಾದರೂ ಅವರನ್ನು ಹೇಗೆ ಶಪಿಸಿಯಾನು ? ಮಗನು ತಂದೆಯ ಶ್ರಾದ್ಧವನ್ನು ಮಾಡುವುದು ಸರಿಯೋ, ತಪ್ಪೋ ಎಂಬುದನ್ನು ಅರಿಯದ ನಿಮಿಗೆ ಶಾಪದ ಹೆದರಿಕೆ ಯಿತ್ತು. ಪತಿಸೇವೆಯಲ್ಲಿ ವಿಳಂಬವಾದರೆ ತಾನು ಶಾಪಕ್ಕೀಡಾಗುವ ಹೆದರಿಕೆ ರೇಣುಕೆ ಯಲ್ಲಿತ್ತು. ಯಜ್ಞಕಾರ್ಯದಲ್ಲಿ ತಾನು ಸರಿಯಾಗಿ ಸಹಕರಿಸದಿದ್ದರೆ ಶಾಪಕ್ಕೆ ಗುರಿ ಯಾಗುವ ಹೆದರಿಕೆ ಸಂವರ್ತಗೆ ಇದ್ದಿತು. ತಾನು ಅಕಾರಣವಾಗಿ ಬ್ರಾಹ್ಮಣರನ್ನು ಪೀಡಿಸುತ್ತಿದ್ದ ಕಾರಣ ಅವರ ಶಾಪಕ್ಕೆ ಗುರಿಯಾಗುವೆನೆಂಬ ಹೆದರಿಕೆ ವೃಷದರ್ಭನಲ್ಲಿ ಇದ್ದುದು ಸ್ವಾಭಾವಿಕವೇ ಸರಿ. ತಂದೆಯು ಸಾವಿನ ಗುಟ್ಟನ್ನು ಬಹುಕಾಲ ತನ್ನ ಮಕ್ಕಳಿಂದ ಬಚ್ಚಿಟ್ಟ ಕಾರಣ ಅಷ್ಟಾವಕ್ರನಿಂದ ತನಗೆ ಶಾಪ ದೊರೆತೀತೆಂಬ ಕಾರಣವಿಲ್ಲದ ಹೆದರಿಕೆ ಸುಜಾತೆಯಲ್ಲಿ ಮನೆಮಾಡಿಕೊಂಡಿತ್ತು. ತನಗೆ ಜರತ್ಕಾರುವಿನ ಶಾಪ ತಟ್ಟೀತೆಂಬ ಹೆದರಿಕೆ ವಾಸುಕಿಯದು. ಅದಕ್ಕೆ ಅದಾವ ಕಾರಣವೂ ಇರಲಿಲ್ಲ. ಶಿಖಂಡಿಯು ಭೀಷ್ಮನ ಮೇಲೆ ಅವನ ಬೆಂಗಡೆಯಿಂದ ಬಾಣಗಳನ್ನೆಸೆದುದಕ್ಕಾಗಿ ವಸುವು ಅರ್ಜುನನ ಮೇಲೆ ತುಂಬ ಕೆರಳಿದನು. ಹೀಗಿದ್ದೂ ಅವನು ಶಾಪವನ್ನೀಯಲಿಲ್ಲವೇಕೆ ?—ಎಂಬುದು ಮಾತ್ರ ಅರ್ಥವಾಗದ ಸಂಗತಿ. ಶಾಪವನ್ನೀಯುವ ಸಾಮರ್ಥ್ಯ ಅವನ ಬಳಿಯಿದ್ದುದೂ ಅಷ್ಟೇ ನಿಜ. ಕಲಿಯು ನಳನನ್ನು ಶಪಿಸದಿರಲು, ಮೃತ್ಯುದೇವತೆಯು ಬ್ರಹ್ಮನನ್ನು ಶಪಿಸದಿರಲು ಅವರವರ ಕೋರಿಕೆಯ ಮೇರೆಗೆ ಒಪ್ಪಿಕೊಂಡರು. ತನ್ನ ನೂರು ಜನ ಮಕ್ಕಳನ್ನು ಯುಧಿಷ್ಠಿರನು ಕೊಂದುದಕ್ಕಾಗಿ ಗಾಂಧಾರಿಯು ಅವನನ್ನು ಶಪಿಸಲು ಸಿದ್ಧಳಾಗಿ ಕುಳಿತಿ ದ್ದಳು. ಕೊನೆಗೆ ವ್ಯಾಸರ ಉಪದೇಶವನ್ನು ಮನ್ನಿಸಿ ಅವಳು ತನ್ನ ಕೋಪವನ್ನು ಹಿಡಿತಕ್ಕೆ ತಂದುಕೊಂಡು ಶಾಪವನ್ನೀಯುವ ಯೋಚನೆಯನ್ನು ಕೈಬಿಟ್ಟಳು. ತಾನು ಕೃಷ್ಣನನ್ನು ಶಪಿಸುವುದರಿಂದ ಉಂಟಾಗಬಹುದಾದ ತಪ್ಪು ಸರಿಯಾದ ಸಮಯಕ್ಕೆ ಉತ್ತಂಕನ ಗಮನಕ್ಕೆ ಬಂದುದರಿಂದ ಒಂದು ಶಾಪ ತಪ್ಪಿತು.

## ಸ್ತ್ರೀಯರ ಶಾಪಗಳು

ಹೆಣ್ಣು ಸಾಮಾನ್ಯವಾಗಿ ಶಾಂತಸ್ವಭಾವದವಳು, ಸಂಯಮಿ, ಸಹನಶೀಲೆ, ತ್ಯಾಗಿ ಹಾಗೂ 'ಮೃದೂನಿ ಕುಸುಮಾದಪಿ' ಮನೋಧರ್ಮದವಳಾಗಿರುತ್ತಾಳೆ. ಆದರೂ ಕಾರಣಾಂತರಗಳಿಂದಾಗಿ ಅವಳಲ್ಲೂ ಕೋಪ, ಅಸೂಯೆಗಳು ಉಕ್ಕಿಬರಬಾರದೆಂದಿಲ್ಲ. ಹೀಗಾದಾಗ ಅವಳ ಸಹನೆ ಕಟ್ಟೊಡೆದು ಶಾಪನುಡಿ ಅವಳಿಂದ ಬರುವುದು ಸ್ವಾಭಾವಿಕ. ಋಷಿಯಂತೆಯೇ ಹೆಣ್ಣು ಕೂಡ ಅಕಾರಣವಾಗಿ ಶಾಪವನ್ನೀಯುವವಳಲ್ಲ.

ಶಾಪವನ್ನೀಯುವ ಮಹಾಭಾರತದ ಮಹಿಳೆಯರು ಮೇಲುಕುಲದಲ್ಲಿ ಹುಟ್ಟಿದವರು, ಸುಸಂಸ್ಕೃತರು, ತಿಳಿವಳಿಕೆಯವರು, ಸತ್ಪ್ರವೃತ್ತರು. ಒಂದು ಅಪವಾದ ಇಲ್ಲದಿಲ್ಲ. ಅದೆಂದರೆ ಕಶ್ಯಪನ ಮಡದಿ ಕದ್ರುವಿನದು. ಹೆಣ್ಣು ಶಾಪವನ್ನೀಯಲು ಕಾರಣಗಳು ಹಲವು. ಅವೆಂದರೆ, ಪ್ರಣಯಾರಾಧನೆಯಲ್ಲಿ ದೊರೆತ ದಾರುಣವಾದ ಪರಾಭವ, ಕಾಮಕೇಳಿಯಲ್ಲಿ ತಡೆಯುಂಟಾಗುವುದು, ಅಪಹರಣ, ಅತ್ಯಾಚಾರ, ಮಕ್ಕಳ ಸಾವು, ನಲ್ಲನ ಕೊಲೆ, ಅವನ ಸಾವು, ಹರಿದುಹೋದ ನಂಟು, ಅವನ ಕಾಟ, ಪಾತಿವ್ರತ್ಯಕ್ಕೆ ತಗಲಿದ ಪೆಟ್ಟು,

ಅವಮಾನ, ಜೀವಕ್ಕೆ ತಂದೊಡ್ಡಲಾದ ಸಂಚಕಾರ, ಮೊದಲಾದವುಗಳು. ತಾನು ಶಾಪ ವನ್ನೀಯುವಾಗ ಮಾತ್ರ ಹೆಣ್ಣು ಬಲು ಕ್ರೂರಳೂ, ಕಠೋರಳೂ ಆಗುವುದುಂಟು. ಅವಳಿತ್ತ ಶಾಪಗಳ ಪರಿಣಾಮಗಳು ನಂಜಿನಂಥವು. ಮಹಾಭಾರತದಲ್ಲಿ ಒಟ್ಟು ಹದಿ ನಾಲ್ಕು ಸ್ತ್ರೀಯರ ಶಾಪಗಳಿವೆ. ಅವುಗಳಲ್ಲಿಯ ಎರಡು ಶಾಪಗಳನ್ನು ಉಚ್ಚರಿಸಲಾಗಿಲ್ಲ. ಬದಲು ಶಾಪವನ್ನೀಯಬೇಕೆಂಬ ಆಲೋಚನೆ ಹುಟ್ಟಿಕೊಂಡಿತೆಂದು ಅನ್ನಲಾಗಿದೆ. ಅವು ಗಳಲ್ಲಿ ಒಂದು ಶರತ್ತಿನದು. ಶರತ್ತಿನ ಪರಿಪಾಲನೆಯಾದ ಕಾರಣ ಈ ಶಾಪ ತನ್ನ ಪರಿಣಾಮವನ್ನು ಕಳೆದುಕೊಂಡಿದೆ.

ಪ್ರಣಯಾರಾಧನೆಯ ಕಾಲಕ್ಕೆ ತನ್ನ ನಲ್ಲನಿಂದ ಸರಿಯಾದ ಪ್ರತಿಸ್ಪಂದನೆ ದೊರೆಕದ್ದ ರಿಂದಾಗಿ ಗಾಸಿಗೊಂಡು, ಕೆರಳಿ, ಅವಮಾನದಿಂದ ಕುದಿದುಹೋದವರಾದ ದೇವಯಾನಿ ಹಾಗೂ ಊರ್ವಶಿಯರು ಅನುಕ್ರಮದಿಂದ ಕಚನಿಗೂ, ಅರ್ಜುನನಿಗೂ ಇತ್ತ ಶಾಪ ಗಳನ್ನು ಸಮರ್ಥಿಸಿಕೊಳ್ಳುವುದು ಬಲು ಕಷ್ಟದ್ದು. ಕಚನು ದೇವಯಾನಿಯ ಇಲ್ಲವೆ ಅರ್ಜುನನು ಊರ್ವಶಿಯ ತನ್ನನ್ನು ಹಿಂಬಾಲಿಸುವಂತೆ ಮಾಡಿರಲಿಲ್ಲ. ಸುಳ್ಳುಮಾತು ಗಳನ್ನು ಕೊಟ್ಟಿರಲಿಲ್ಲ. ಅವರೊಂದಿಗೆ ನಲಿಗೆಯಿಂದ ನಡೆದುಕೊಂಡಿರಲಿಲ್ಲ. ಎದುರಿನ ವ್ಯಕ್ತಿಯಿಂದ ತಾನಾಗಿಯೇ ಮುನ್ನುಗ್ಗಿ ಬಂದ ಪ್ರಣಯದ ಕರೆಯನ್ನು ಎಳ್ಳಷ್ಟೂ ಪ್ರೋತ್ಸಾಹಿಸಿರಲಿಲ್ಲ. ಇಷ್ಟಾಗಿಯೂ ನಿರಪರಾಧಿಗಳಾದ ಕಚ, ಅರ್ಜುನರಿಗೆ ದೊರೆತ ಶಿಕ್ಷೆಗಳು ಬಲು ಕಠೋರವಾದವುಗಳು. ದೇವಯಾನಿ ಇಲ್ಲವೆ ಊರ್ವಶಿಯ ಪ್ರಣಯಾ ರಾಧನೆಯ ಅಡಿಗಲ್ಲು ತೀರ ಪೊಳ್ಳಾದುದು. ಕಚ ಇಲ್ಲವೆ ಅರ್ಜುನ ತಮ್ಮನ್ನು ಪ್ರೀತಿಸಿದ ರೆಂದು ಇವರಿಬ್ಬರೂ ಹೆಣ್ಣುಗಳು ಬಗೆದುದು ಅದಾವ ಆಧಾರವೂ ಇಲ್ಲದೆಯೇ. ಇವರ ಅಲೌಕಿಕವಾದ ಗುಣಗಳು ಹಾಗೂ ಅಂದಗಳಿಂದಾಗಿ ದೇವಯಾನಿ, ಊರ್ವಶಿಯರು ನೆಳೆತ ಕ್ಕೊಳಗಾಗುವುದಾಗಲಿ ಇವರನ್ನು ಬಯಸುವುದರಲ್ಲಾಗಲಿ ತಪ್ಪೇನೂ ಇಲ್ಲ. ಆದರೆ ಕಚ, ಅರ್ಜುನರ ಒಲವುಗಳು ತಮ್ಮತ್ತ ಎಷ್ಟರಮಟ್ಟಿಗೆ ಇದೆ ಎಂಬುದನ್ನು ಅರಿತುಕೊಳ್ಳುವ ಗೋಜಿಗೆ ಹೆಂಗಳೆಯರಿಬ್ಬರೂ ಹೋದಂತಿಲ್ಲ. ಅವರಿಬ್ಬರೂ ತಮ್ಮ ಒಂದು ಬದಿ ಯಿಂದಲೇ ಪ್ರಣಯಾರಾಧನೆಯಲ್ಲಿ ಮುನ್ನಡೆದರು. ಕಚನಾಗಲಿ ಇಲ್ಲವೆ ಅರ್ಜುನನಾಗಲಿ. ಅವರತ್ತ ಪ್ರಣಯದ ಕಣ್ಣಿಂದ ಕಂಡವರೇ ಅಲ್ಲ. ಕಚನು ದೇವಯಾನಿಯನ್ನು ತನ್ನ ಗುರುವಿನ ಮಗಳೆಂದು ಗೌರವಿಸಿದನು. ಅವಳು ತನಗೆ ಜೀವದಾನವನ್ನಿತ್ತಕಾರಣ ಅವನು ಅವಳ ಉಪಕಾರದಿಂದ ಪ್ರಭಾವಿತನಾಗಿದ್ದನು. ತಾನು ಶುಕ್ರಾಚಾರ್ಯರ ಒಡಲಲ್ಲಿ ಮರುಹುಟ್ಟು ಪಡೆದು ಬಂದ ಕಾರಣ ಅವಳು-ತಾನು ಒಡಹುಟ್ಟಿದವರೆಂಬ ಭಾವನೆ ಅವನದಾಗಿತ್ತು. ದೇವಯಾನಿ ಮಾತ್ರ ಅವನ ಬಗೆಗಿನ ತನ್ನ ಪ್ರಣಯಭಾವನೆಯನ್ನು ತನ್ನ ತಂದೆಯ ಎದುರು ನಾಚಿಕೊಳ್ಳದೆ ಹೇಳಿದಳು. ಕಚನಿಲ್ಲದೆ ತಾನು ಅರೆಕ್ಷಣವೂ ಬಾಳಲಾರೆನೆಂದು ಸಾರಿದಳು.

ಊರ್ವಶಿಯು ಅರ್ಜುನನ ಬಗೆಗಿನ ತನ್ನ ಕಾಮಭಾವನೆಯನ್ನು ಚಿತ್ರಸೇನೆಯ ಎದುರು ವ್ಯಕ್ತಪಡಿಸಿದಳು. ಅರ್ಜುನ ತನ್ನತ್ತ ಕಣ್ಣಿಟ್ಟುನೋಡಿದುದನ್ನು ಅವಳು ತಪ್ಪಾಗಿ ಭಾವಿಸಿದಳು. ಈ ಬಗೆಗೆ ಅರ್ಜುನನು ನೀಡಿದ ವಿವರಣೆ ಮುಖ್ಯವಾದುದು. ಆತ ಅವಳತ್ತ ಕಣ್ಣುಮಿಳುಕಿಸದೆಯೇ ನೋಡಿದ್ದುದೇನೋ ನಿಜವೇ ಆದರೂ ಅದರ ಕಾರಣ—

'ಮನಸ್ಸಿಗೆ ಸಂತಸವನ್ನು ನೀಡುವ ಈ ಊರ್ವಶಿ ಕುರುವಂಶದ ತಾಯಿಯೆಂಬ ಯೋಚನೆಯಿಂದ ನನ್ನ ಕಣ್ಣುಗಳು ಹಿಗ್ಗಿದವು. ನಾನು ನಿನ್ನತ್ತ ನೋಡಿದುದು ಇದೇ ನೋಟದಿಂದ. ನೀನು ನನ್ನ ಬಗೆಗೆ ಇನ್ನಾವ ಬಗೆಯ ಭಾವನೆಯನ್ನು ಹೊಂದುವುದೂ ಬೇಡ. ನೀನು ನನ್ನ ಕುಲವನ್ನು ಬೆಳೆಯಿಸಿದ (ಮಾತೆಯಾಗಿ) ಕಾರಣ ನನಗೆ ಗುರುವಿಗಿಂತಲೂ ಶ್ರೇಷ್ಠಳು.' (ವನ, ೪೬/೪೦–೪೧)

ಅರ್ಜುನನ ಪ್ರಾಮಾಣಿಕತೆಯನ್ನು ಶಂಕಿಸಬಹುದಾದ ಯಾವುದೇ ಪುರಾವೆ ಸಿಕ್ಕದು. ಕಚನಂತೂ ದೇವಯಾನಿಯೆಂದರೆ ಇಂದ್ರನ ಮಡದಿ ಶಚಿಗೆ ಇಲ್ಲವೆ ಕುಂತಿಗೆ ಸರಿಸಮಾನಳೆಂದು ಅಡಿ ತೋರಿಸುವುದಲ್ಲದೆ ಅವಳ ಪಾದಗಳಿಗೆ ಬಾಗಿ ಶರಣುಹೋಗಿದ್ದಾನೆ.

ದೇವಯಾನಿಯು ತನ್ನ ಮನದ ನೋವನ್ನು ಅವನೆದುರು ಪ್ರಾಮಾಣಿಕವಾಗಿಯೇ ತೋಡಿಕೊಂಡಿದ್ದಾಳೆ. ಆದರೆ ಅವಳು ಅವನ ಮನಸ್ಸಿನ ನಿಗ್ರಹವನ್ನು ಅರ್ಥಮಾಡಿಕೊಳ್ಳುವುದು ಅಗತ್ಯವಿದ್ದಿತ್ತು. ಇನ್ನು ತನಗೆ ಕಚನಿಂದ ಮರುಸ್ಪಂದನ ದೊರಕದೆಂಬುದು ಖಚಿತವಾಗುತ್ತಲೇ ಅವಳು ಹೀಗೆ ನುಡಿಯುತ್ತಾಳೆ—

'ಧರ್ಮ ಹಾಗೂ ಕಾಮ ಇವೆರಡು ಪುರುಷಾರ್ಥಗಳನ್ನು ಪಡೆಯಲೆಂದು ನಾನು ನಿನ್ನಲ್ಲಿ ಬೇಡಿಕೊಂಡೆ. ನೀನು ಮಾತ್ರ ಅವುಗಳನ್ನು ನೀಡದೆ ನನ್ನನ್ನು ತಿರಸ್ಕರಿಸುತ್ತಿರುವಿ. ಅಂದಬಳಿಕ ನೀನು ಪಡೆದ ವಿದ್ಯೆ ನಿನಗೂ ಫಲ ನೀಡದಿರಲಿ.' (ಆದಿ, ೭೭/೧೬). ಊರ್ವಶಿಯು ಅರ್ಜುನನಿಗಿತ್ತ ಶಾಪವೂ ಇದೇ ಬಗೆಯದು—

'ನಿನ್ನ ತಂದೆಯ ಅಪ್ಪಣೆಯ ಮೇರೆಗೆ ನಾನಿಲ್ಲಿಗೆ ಬಂದೆ. ಕಾಮವಿಹ್ವಲಳಾಗಿ ಬಂದೆ. ನಾನಾಗಿಯೇ ನಿನ್ನಲ್ಲಿಗೆ ಬಂದೆ. ಹೀಗಿದ್ದೂ ನೀನು ಮಾತ್ರ ನನ್ನನ್ನು ತಿರಸ್ಕರಿಸುತ್ತಿರುವಿ. ಅಂದಬಳಿಕ ಹೆಣ್ಣುಗಳ ನಡುವೆ ನರ್ತಕನಾಗಿ ಕುಣಿ. ಅವಮಾನಕ್ಕೀಡಾಗು. ನಪುಂಸಕನೆನ್ನಿಸು.' (ವನ, ೪೬/೪೯–೫೦). ಅರ್ಜುನನಂತಹ ಕಲಿಗೆ ಷಂಡತ್ವದ ಇಂಥ ಶಾಪ ಎಂದರೆ ಸಾವಿಗಿಂತಲೂ ಭಯಂಕರವಾದುದು. ಅಷ್ಟೇ ಅಲ್ಲ, ಇದು ಘೃಣಾಸ್ಪದವಾದುದೂ ಅಹುದು. ಇಂದ್ರ ಅರ್ಜುನನಿಗೆ ತಿಳಿಹೇಳಿ ಈ ಶಿಕ್ಷೆಯನ್ನು ಒಂದು ವರ್ಷದ ಮಟ್ಟಿಗೆ ಸೀಮಿತಗೊಳಿಸಿದನೇನೋ ನಿಜ. ಆದರೂ ಅವನ ಮನದ ನೋವು ಕಡಿಮೆಯಾಗಲಿಲ್ಲ. ಊರ್ವಶಿ ತನ್ನ ಕಾಮೇಚ್ಛೆಯನ್ನು ನೇರವಾಗಿ ಒಪ್ಪಿಕೊಂಡಿದ್ದಾಳೆ. ದೇವಯಾನಿಯು ಅದಕ್ಕೆ ಧರ್ಮದ ಹೊದಿಕೆಯನ್ನು ಹಾಕುತ್ತಾಳೆ. ಊರ್ವಶಿಯ ಶಾಪವು ಅರ್ಜುನನಿಗೆ ಅವನ ಅಜ್ಞಾತವಾಸದ ಕಾಲಕ್ಕೆ ಒಂದು ವರವಾಗಿ ಪರಿಣಮಿಸಿತೆಂಬುದು ಬೇರೆ ಮಾತು. ಕಚನು ವಿದ್ಯೆಯನ್ನು ತನ್ನ ಶಿಷ್ಯರ ಮೂಲಕ ಬಳಸಿಕೊಳ್ಳುವಂತಾಯಿತು.

ಕಾಮಕೇಳಿಯಲ್ಲಿ ಉಂಟಾದ ಅಡೆತಡೆಯಿಂದಾಗಿ ಮಹಾಭಾರತದಲ್ಲಿ ಎರಡು ಶಾಪಗಳಿವೆ. ಶಂಕರನು ಉಮೆಯನ್ನು ಮದುವೆಯಾಗುತ್ತಲೇ ದೇವತೆಗಳೆಲ್ಲ ಹೆದರಿ ಕಂಗಾಲಾದರು. ಅವರಿಬ್ಬರ ಮಿಲನವೆಂದರೆ ಎರಡು ಪ್ರಖರವಾದ ತೇಜಸ್ಸುಗಳ ಮಿಲನ. ಇಬ್ಬರೂ ತಪಸ್ವಿಗಳು. ಅವರಿಂದ ಹುಟ್ಟಬಹುದಾದ ಮಗು ಅದೆಷ್ಟು ತೇಜಸ್ವಿಯಾದೀತೆಂದು ಹೇಳಲೇಬೇಕಿರಲಿಲ್ಲ. ಈ ತೇಜಸ್ಸಿನಿಂದಾಗಿ ತ್ರಿಭುವನದಲ್ಲಿ ಏನೇನೂ ಉಳಿದುಕೊಳ್ಳಲು ಅಸಾಧ್ಯ ಎಂಬ ಹೆದರಿಕೆ ದೇವತೆಗಳಲ್ಲುಂಟಾದುದು ಸ್ವಾಭಾವಿಕವೇ. ಹೀಗಾಗಿ ದೇವತೆಗಳೆಲ್ಲ ಕೂಡಿ ಶಂಕರನಿಗೆ ಶರಣುಹೋದರು. ಕೂಟದ ಮೂಲಕ ಅವನು ಮಗುವನು

ಹುಟ್ಟುಹಾಕದ ಹಾಗೆ ಅವನಿಂದ ವರವನ್ನು ಕೋರಿ ಪಡೆದರು. ಈ ರೀತಿಯಾಗಿ ದೇವತೆಗಳು ಉಮೆಯ ಕಾಮಕೇಳಿಗೂ, ಅವಳು ಮಗುವನ್ನು ಪಡೆಯುವುದಕ್ಕೂ ವಿಘ್ನವನ್ನು ತಂದೊಡ್ಡಿದರು. ಇದನ್ನು ಕಂಡು ಅವಳು ಕೆರಳಿ ಕೆಂಡವಾದಳು. ಆಗ ಅವಳು ಶಾಪವನ್ನು ಉಚ್ಚರಿಸಿದಳು—

'ನಾನು, ನನ್ನ ಗಂಡ ಮಗುವಿಗಾಗಿ ಹಾತೊರೆದಿದ್ದೆವು. ಆದರೆ ನೀವು ಅವನನ್ನು ಅದರಿಂದ ದೂರವಿರಿಸಿದಿರಿ. ಅಂದಬಳಿಕ ನೀವೆಲ್ಲ ದೇವತೆಗಳಿಗೂ ಮಕ್ಕಳಾಗದಿರಲಿ. ನನ್ನ ಕುಲದ ಬೆಳವಣಿಗೆಯನ್ನು ತಡೆದ ನಿಮ್ಮ ಕುಲಗಳೂ ಬೆಳೆಯದಿರಲಿ.' (ಅನುಶಾಸನ, ೮೪/೭೪).

ಉಮೆಯು ಈ ಶಾಪವನ್ನೀಯುವ ಕಾಲಕ್ಕೆ ಅಗ್ನಿ ಮಾತ್ರ ಅಲ್ಲಿರಲಿಲ್ಲ. ಹೀಗಾಗಿ ಅವನಿಗೆ ಅದು ತಟ್ಟಲಿಲ್ಲ.

ಅಂಗಿರಸ ಕುಲದಲ್ಲಿ ಹುಟ್ಟಿದ ಒಬ್ಬಳು ಸಾಧ್ವಿಯು ಕಲ್ಮಾಷಪಾದನಿಗೆ ಇತ್ತ ಶಾಪವು ಇಷ್ಟೇ ದಾಹಕವಾದುದು. ಕಲ್ಮಾಷಪಾದನು ವಸಿಷ್ಠನ ಮಗನಾದ ಶಕ್ತಿಯ ಶಾಪಕ್ಕೀಡಾಗಿ ನರಮಾಂಸಭಕ್ಷಕ ರಾಕ್ಷಸ ನಾಗುತ್ತಾನೆ. ಅವನು ತನ್ನ ಮಡದಿಯೊಂದಿಗೆ ಕಾಡಿನಲ್ಲಿ ಅಲೆದಾಡುತ್ತಿರುತ್ತಾನೆ. ಆಗ ಒಮ್ಮೆ, ಒಬ್ಬ ಬ್ರಾಹ್ಮಣ ತನ್ನ ಮಡದಿಯೊಂದಿಗೆ ಒಂದೆಡೆ ಕಾಮಕ್ರೀಡೆಯಲ್ಲಿ ರತನಾಗಿರುವುದನ್ನು ಕಂಡನು. ಗಂಡ-ಹೆಂಡತಿಗೆ ಕಲ್ಮಾಷಪಾದನ ಸುಳಿವು ಸಿಕ್ಕುತ್ತಲೆ ಅವರು ನಾಚಿಕೆಯಿಂದ ಬೇರ್ಪಟ್ಟು ಅಲ್ಲಿಂದ ಕಾಲ್ತೆಗೆದರು. ರಾಕ್ಷಸ ತುಂಬ ಹಸಿದಿದ್ದನು. ಅವನು ಬ್ರಾಹ್ಮಣನನ್ನು ಬೆನ್ನಟ್ಟಿಹೋಗಿ ಅವನನ್ನು ಹಿಡಿದುಕೊಂಡನು. ಹಿಡಿದು ಅವನನ್ನು ತಿನ್ನಲೆಳಸಿದನು. ಇಷ್ಟೊಂದು ಕ್ರೌರ್ಯಕ್ಕಿಳಿಯಬೇಡ ಎಂದು ಬ್ರಾಹ್ಮಣನ ಮಡದಿಯು ಅವನನ್ನು ಪರಿಪರಿಯಾಗಿ ಬೇಡಿಕೊಂಡಳು. ಆದರೂ ತನ್ನ ಗಂಡನನ್ನು ಬದುಕಿಸಿ ಉಳಿಸಿಕೊಳ್ಳುವ ಅವಳ ಯತ್ನಗಳು ಕೈಗೂಡಲಿಲ್ಲ. ಆ ರಾಕ್ಷಸನು ಅವಳ ಗಂಡನನ್ನು ಅವಳ ಕಣ್ಣೆದುರಿನಲ್ಲಿಯೇ ಕೊಂದು ತಿಂದು ತೇಗಿದನು. ಭಯಂಕರವಾದ ಆ ನೋಟದಿಂದಾಗಿ ಆ ಸಾಧ್ವಿಯು ಕೆರಳಿ ಕೆಂಡವಾದಳು. ಮಗುವನ್ನು ಪಡೆಯಲೆಂಬ ಅಭಿಲಾಷೆಯಿಂದ ಅವಳು ತನ್ನ ಗಂಡನೊಡನೆ ಒಂದಾಗಿದ್ದಳು. ಅವಳ ಮನದ ಆಸೆ ಕೈಗೂಡುವ ಮೊದಲೇ ಕಲ್ಮಾಷಪಾದರಾಜ ರಾಕ್ಷಸರೂಪದಲ್ಲಿ ತಮ್ಮೀರ್ವರನ್ನು ಬೇರ್ಪಡಿಸಿದುದನ್ನು ಕಂಡು ಅವಳು ಈ ರೀತಿಯಾಗಿ ಕಿಡಿಕಾರಿದಳು—

'ನನ್ನ ಶಾಪದ ಬಲದಿಂದಾಗಿ ಹತಬಲನಾಗು. ನಿನ್ನ ಹೆಂಡತಿ ಋತುಮತಿಯಾದ ಕಾಲಕ್ಕೆ ಅವಳನ್ನು ಕೂಡಿದೆಯೆಂದರೆ ತಪ್ಪದೆ ಸಾವನ್ನಪ್ಪುವೆ. ಅಲ್ಲದೆ ವಸಿಷ್ಠನ ಮಕ್ಕಳನ್ನು ಕೊಂದೆಯಾದಕಾರಣ ನಿನ್ನ ಹೆಂಡತಿಯನ್ನು ಅದೇ ವಸಿಷ್ಠರೊಂದಿಗೆ ಕೂಡಿಕೊಳ್ಳಲು ಕಳಿಸುತ್ತೀಯೆ. ಅವರಿಬ್ಬರ ಕೂಟದ ಫಲವಾಗಿ ಹುಟ್ಟಿಬಂದ ಮಗನಿಂದಲೇ ನಿನ್ನ ವಂಶ ಮುಂದುವರೆಯಲಿ.' (ಆದಿ, ೧೮೧/೧೯-೨೧). ಕಿಂದಮ ಋಷಿಯು ಪಾಂಡುವಿಗಿತ್ತ ಶಾಪಕ್ಕೂ ಇದಕ್ಕೂ ತುಂಬ ಹೋಲಿಕೆಯಿದೆ. ಇವೆರಡು ಸನ್ನಿವೇಶಗಳಲ್ಲಿರುವ ಒಂದೇ ಒಂದು ವ್ಯತ್ಯಾಸ ಎಂದರೆ ಪಾಂಡು ಅರಿವಿಲ್ಲದೆಯೇ ಬಾಣಗಳನ್ನೆಸೆದಿದ್ದುದು.

ಪತಿವ್ರತೆಯು ಪ್ರಾಣಕ್ಕಿಂತಲೂ ಹೆಚ್ಚಾಗಿ ತನ್ನ ಶೀಲವನ್ನು ಕಾಪಾಡಿಕೊಳ್ಳುವಳು. ಆದರೆ ಕಾಮಾತುರರು ಮಾತ್ರ ಅವಳ ಅಸಹಾಯಕತೆಯನ್ನು ಬಳಸಿಕೊಳ್ಳಲು ಹೊಂಚು

ಹಾಕಿರುತ್ತಾರೆ. ಸಾಧ್ವಿಯು ಇಂಥ ಗಂಡುಗಳನ್ನು ಹೇಗೆ ಎದುರಿಸಬಲ್ಲಳು ಎಂಬುದನ್ನು ಕುರಿತು ಮಹಾಭಾರತದಲ್ಲಿ ಬಲು ಅಂದವಾದ ಎರಡು ಉದಾಹರಣೆಗಳಿವೆ. ನಳನು ದಮಯಂತಿಯನ್ನು ತೊರೆದ ಬಳಿಕ ಅವಳು ಒಂಟಿಯಾಗಿ ಕಾಡುಮೇಡುಗಳಲ್ಲಿ ಅಲೆಯು ತ್ತಿದ್ದಳು. ಒಂದು ಸಲ ಒಂದು ಹೆಬ್ಬಾವು ಅವಳನ್ನು ಗಟ್ಟಿಯಾಗಿ ಸುತ್ತಿಕೊಳ್ಳುತ್ತದೆ. ಅವಳು ಹೆದರಿ ಹೌಹಾರುತ್ತಾಳೆ. ಅವಳ ಕೂಗಾಟವನ್ನು ಕೇಳಿ ಒಬ್ಬ ಬೇಡನು ಬಾಣ ವನ್ನೆಸೆದು ಅವಳನ್ನು ಹಾವಿನ ಹಿಡಿತದಿಂದ ಬಿಡಿಸುತ್ತಾನೆ. ಆಮೇಲೆ ಅವಳ ಚೆಲುವನ್ನು ಕಂಡು ಅವನು ಕಾಮಪೀಡಿತನಾಗುತ್ತಾನೆ. ಈಗ ಅವಳೆದುರು ಹೆಬ್ಬಾವಿನ ಹಿಡಿತ ಕ್ಕಿಂತಲೂ ಹಿರಿದಾದ ಸಂಕಟ ಧುತ್ತೆಂದು ನಿಲ್ಲುತ್ತದೆ. ಆ ರಕ್ಕ ಬೇಡ ನವಿಯಾದ ಮಾತು ಗಳಿಂದ ತನ್ನ ಮನವೊಲಿಸಲು ಹವಣಿಸುತ್ತಿರುವುದನ್ನು ಅವಳು ಕಂಡುಕೊಂಡಳು. ಅವನ ಬಯಕೆಯನ್ನರಿತಳು. ಜವನ ಹಂಚಿಕೆ ಸೋತಿತು. ಅವಳ ಮೇಲೆ ಅತ್ಯಾಚಾರವನ್ನು ಕೈಕೊಳ್ಳಬೇಕೆಂದರೂ ಅದು ಕೈಗೂಡಲಿಲ್ಲ. ದಮಯಂತಿಯು ಇಂಥ ದುರಾಲೋಚನೆ ಗಳನ್ನು ಕೈಬಿಡುವಂತೆ ಎಚ್ಚರಿಸುತ್ತಾಳೆ. ಆದರೆ ಅವಳ ಮಾತುಗಳು ಹೊಳೆಯಲ್ಲಿ ತೊಳೆದ ಹುಣಿಸೆಯ ಹಣ್ಣುಗಳಂತಾಗುತ್ತಲೆ ಅವಳು ಕೆರಳಿ ಈ ರೀತಿ ಆಡುತ್ತಾಳೆ—

'ನಾನು ನಿಷಧದ ರಾಜನನ್ನಲ್ಲದೆ ಎಂದಿಗಾದರೂ ತಪ್ಪಿ ಕೂಡ ಇನ್ನೊಬ್ಬನಿಗಾಗಿ ಆಸೆಪಟ್ಟಿಲ್ಲ ಎನ್ನುವುದು ನಿಜವಾಗಿದ್ದರೆ ನನ್ನೀ ಸಾಮರ್ಥ್ಯದಿಂದಾಗಿ ಈ ಬೇಡನು ಈಗಿಂದೀಗ ಸಾವನ್ನಪ್ಪಲಿ.' (ವನ, ೬೩/೩೮).

ಈ ರೀತಿಯಾಗಿ ದಮಯಂತಿ ತನ್ನ ಮೇಲಾಗಬಹುದಿದ್ದ ಅತ್ಯಾಚಾರವನ್ನು ತಪ್ಪಿಸಿ ಕೊಂಡಳು. ಇಂಥದೇ ಆದ ಇನ್ನೊಂದು ಸನ್ನಿವೇಶದಲ್ಲಿ, ಇನ್ನೊಬ್ಬ ಮಹಿಳೆ ಸಾಮರ್ಥ್ಯ ಸಾಲದೆ ಅತ್ಯಾಚಾರಕ್ಕೆ ಗುರಿಯಾಗುವಂತಾಯಿತು. ಶಲ್ಯನ ಚುಚ್ಚುಮಾತುಗಳನ್ನು ಸಹಿಸಿಕೊಳ್ಳುವುದು ಕರ್ಣನಿಗೆ ಅಸಾಧ್ಯವೆನ್ನಿಸುತ್ತದೆ. ಆಗ ಅವನು ಮದ್ರ, ಬಾಹ್ಲಿಕ ಮೊದಲಾದ ನಾಡುಗಳ ಜನರ ಹೀನ ನಡತೆಗಳನ್ನು ಆತನ ಗಮನಕ್ಕೆ ತಂದುಕೊಡುತ್ತಾನೆ. ಅವನಿಗೆ ಅಂಥ ಕಥೆಗಳನ್ನು ಹೇಳುತ್ತಾನೆ. ಅವುಗಳಲ್ಲಿಯ ಒಂದು ಕಥೆಯೆಂದರೆ ಆರಟ್ಟ ನಾಡಿನ ಅಪಹೃತಳಾದ ಕನ್ಯೆಯೊಬ್ಬಳಿಗೆ ಸಂಬಂಧಿಸಿದುದು. ಕಳ್ಳರು ಅವಳನ್ನೆತ್ತಿ ಒಯ್ಯುತ್ತಾರೆ. ಅವಳು ಅವರ ಕಾಲಿಗೆ ಬಿದ್ದು ಕೇಳಿಕೊಂಡರೂ ಅವರು ಅವಳ ಮಾತು ಕೇಳದೆಯೇ ಅವಳ ಮೇಲೆ ಅತ್ಯಾಚಾರವನ್ನು ಎಸಗುತ್ತಾರೆ. ಹೀಗಾಗಿ ಅವಳು ಕೆರಳಿ ಹೀಗನ್ನುತ್ತಾಳೆ—

'ನನ್ನ ಕುಲದವರೆಲ್ಲ ಸತ್ತರೆಂದು ತಿಳಿಯಬೇಡಿ. ನಾನಿನ್ನೂ ಬಾಲಿಕೆ. ಇಷ್ಟಾಗಿಯೂ ನೀವು ನನ್ನ ಮೇಲೆ ಅತ್ಯಾಚಾರವನ್ನು ಎಸಗಿರುವಿರಿ. ಅಂದಬಳಿಕ ನಿಮ್ಮ ಕುಲದ ಹೆಣ್ಣು ಗಳೆಲ್ಲರೂ ಹಾದರಗಿತ್ತಿಯರಾಗಲಿ. ನರಾಧಮರೇ! ನಿಮಗೆಂದಿಗೂ ಈ ಶಾಪದಿಂದ ಬಿಡುಗಡೆ ಎಂಬುದೇ ಸಿಕ್ಕದಿರಲಿ.' (ಕರ್ಣ, ೩೪೫/೧೨–೧೩). ಅವಳ ಈ ಕಠೋರವಾದ ಶಾಪವು ಕಳ್ಳರಿಗಾಗಿ ಎಂದಿದ್ದರೂ ಅದು ತಟ್ಟಿದುದು ಮಾತ್ರ ಅವರ ಹೆಣ್ಣುಗಳಿಗೆ.

ಯಾರಾದರೂ ತನ್ನ ಮಕ್ಕಳನ್ನು ಪೀಡಿಸಿದಾಗ ಇಲ್ಲವೆ ಕೊಲೆಗೈದಾಗ ಮೊದಲಾದ ಸನ್ನಿವೇಶಗಳಲ್ಲಿ ಹೆಣ್ಣು ಶಾಪವನ್ನೀಯಲು ಸನ್ನದ್ಧಳಾಗುತ್ತಾಳೆ. ಜನಮೇಜಯನು ಸರಮೆಯ (ದೇವಶುನಿ) ಮಕ್ಕಳನ್ನು ಅಕಾರಣವಾಗಿ ತೀರಿಸಿದ್ದರಿಂದ ಅವಳು ಅವನನ್ನು

ಶಪಿಸುತ್ತಾಳೆ. ಗಾಂಧಾರಿಯು ತನ್ನ ಮಕ್ಕಳ ಕೊಲೆಗಾಗಿ ಕೃಷ್ಣನನ್ನು ಶಪಿಸುತ್ತಾಳೆ. ಸರಮೆಯ ಮಗ ಸಾರಮೇಯನು ಜನಮೇಜಯನ ಸತ್ರದ ಬಳಿಗೆ ಬರುತ್ತಲೇ ಅವನ ಒಡಹುಟ್ಟಿದವರು ಅಕಾರಣವಾಗಿ ಸಾರಮೇಯನನ್ನು ಹೊಡೆದು ಬಡಿದು ಮಾಡುತ್ತಾರೆ. ಆಮೇಲೆ ಅವನು ನಡೆದುದನ್ನೆಲ್ಲ ತನ್ನ ತಾಯಿಗೆ ಅರುಹುತ್ತಾನೆ. ಅವನು ಹವಿರ್ಭಾಗ ದತ್ತ ಕಣ್ಣೆತ್ತಿ ನೋಡದೆಯೂ ಸುಮ್ಮನೆ ಶಿಕ್ಷೆಯನ್ನು ಅನುಭವಿಸಬೇಕಾಗಿಬಂದಿತ್ತು. ಸರಮೆ ತನ್ನ ಮಗನ ಅವಸ್ಥೆಯನ್ನು ಕಂಡು ವ್ಯಾಕುಲಗೊಂಡಳು. ಹಾಗೆಯೇ ಎದ್ದು ಜನಮೇಜಯನ ಯಜ್ಞ ನಡೆದಿದ್ದಲ್ಲಿಗೆ ಹೋಗಿ ಸಾರಮೇಯನನ್ನು ಹೊಡೆಯಲು ಕಾರಣ ವೇನೆಂದು ಅವನನ್ನು ಕೇಳಿದಳು. ಅವರಾರೂ ಅವಳಿಗೆ ಸರಿಯಾಗಿ ಉತ್ತರಿಸುವ ಗೋಜಿಗೆ ಹೋಗಲಿಲ್ಲ. ಹೀಗಾಗಿ—

'ನನ್ನ ಮಗನ ಅದಾವ ತಪ್ಪು ಇಲ್ಲದಾಗಲೂ ನೀವೆಲ್ಲ ಅವನನ್ನು ಚೆನ್ನಾಗಿಯೇ ಥಳಿಸಿರುವಿರಿ. ನಿಮಗೂ ಇಂಥದೇ ಅನಪೇಕ್ಷಿತವಾದ ಸಂಕಟ ಬರಲಿ' (ಆದಿ, ೩/೮) ಎಂದು ಅವರನ್ನವಳು ಶಪಿಸಿದಳು. ಹಾಗೆ ಇದು ತೀರ ಸೌಮ್ಯವಾದ ಶಾಪವೇ ಎನ್ನ ಬೇಕು. ಗಾಂಧಾರಿ ಹಾಗೂ ಸರಮೆಯರ ಬವಣೆಗಳನ್ನು ಹೋಲಿಸಲಾಗದು. ಭೀಮ ಗಾಂಧಾರಿಯ ನೂರು ಜನ ಗಂಡುಮಕ್ಕಳನ್ನು ರಣಾಂಗಣದಲ್ಲಿ ಕೊಂದುಹಾಕಿದ್ದಾನೆ. ವಂಶವನ್ನು ಮುಂದುವರಿಸಲು ಒಬ್ಬ ಮಗನೂ ಬದುಕಿ ಉಳಿದಿಲ್ಲ. ತಾಯಿಯಾದವಳು ತನ್ನ ಒಬ್ಬ ಮಗನ ಸಾವನ್ನು ಕೂಡ ಸಹಿಸಿಕೊಳ್ಳುವುದು ಕಷ್ಟದ್ದು. ಅಂದಬಳಿಕ ಗಾಂಧಾರಿಯ ಈ ಬವಣೆಯನ್ನು ಏನೆಂದು ಬಣ್ಣಿಸಲು ಸಾಧ್ಯ ? ಯುದ್ಧ ಮುಗಿದ ತರುವಾಯ ಯುಧಿಷ್ಠಿರನು ಪಾಂಡವರೊಡಗೂಡಿ ಅವಳನ್ನು ಕಾಣಲೆಂದು ಬರಲಿದ್ದನು. ಈ ವಾರ್ತೆಯನ್ನು ಕೇಳಿ ಅವಳು ಕೆರಳಿಹೋಗುವುದು ಸ್ವಾಭಾವಿಕವೇ ಆಗಿತ್ತು.

ತನ್ನ ಮಕ್ಕಳ ಸಾವಿಗಾಗಿ ನೊಂದ ಗಾಂಧಾರಿ ಯುಧಿಷ್ಠಿರನನ್ನು ಶಪಿಸಲು ಸಿದ್ಧಳಾಗಿ ದ್ದಳು. ವ್ಯಾಸನು ತನ್ನ ದಿವ್ಯದೃಷ್ಟಿಯಿಂದ ಈ ಸಂಗತಿಯನ್ನರಿತನು. ಹೀಗಾಗಿ ಅವನು ಅವಳನ್ನು ಬಳಿಸಾರಿ ಹೀಗೆಂದನು—

**'ನ ಕೋಪಃ ಪಾಂಡವೇ ಕಾರ್ಯೋ ಗಾಂಧಾರಿ ಶಮಮಾಪ್ನುಹಿ ॥'** —ಸ್ತ್ರೀಪರ್ವ, ೧೪-೭

ಯುದ್ಧ ನಾಗಿದ ಕಾಲಕ್ಕೆ ದಿನಾಲು ದುರ್ಯೋಧನ ತನಗೆ ಜಯ ದೊರಕಲೆಂದು ಹರಸುವಂತೆ ಗಾಂಧಾರಿಯನ್ನು ಕೇಳಿಕೊಳ್ಳುತ್ತಿದ್ದನು. ಅದಕ್ಕೆ ಅವಳು,

**'ಯತೋ ಧರ್ಮಸ್ತತೋ ಜಯಃ ॥'**

ಎಂದು ಹೇಳುತ್ತಿದ್ದಳು. ವ್ಯಾಸ ಈಗ ಅವಳಿಗೆ ಈ ಮಾತನ್ನು ನೆನಪಿಗೆ ತಂದುಕೊಡು ತ್ತಾನೆ. ಗಾಂಧಾರಿ ಅವನ ಮಾತನ್ನು ಮನ್ನಿಸುತ್ತಾಳೆ. ಯುಧಿಷ್ಠಿರನನ್ನು ಶಪಿಸದಿರುವ ಸಂಯಮವನ್ನು ತೋರುತ್ತಾಳೆ ; ಕೃಷ್ಣನ ಬಗೆಗೆ ಮಾತ್ರ ತೋರಲಿಲ್ಲ. ಭಾರತಯುದ್ಧ ದಿಂದ ಪ್ರಚಂಡವಾದ ನರಸಂಹಾರವಾಗಿತ್ತು. ಅದನ್ನು ತಪ್ಪಿಸುವುದು ಕೃಷ್ಣನ ಕೈಲಾಗದ ಸಂಗತಿಯೇನಾಗಿರಲಿಲ್ಲ. ಅವನೊಬ್ಬ ವೇದಶಾಸ್ತ್ರಜ್ಞನೂ ಆಗಿದ್ದವನು. ಆದರೂ ಕುರು ಕುಲ ತನ್ನ ಕಣ್ಣೆದುರಲ್ಲೇ ನಾಶಹೊಂದುವುದನ್ನು ಕಂಡೂ ಕಾಣದಂತಿದ್ದನು. ಹೀಗಾಗಿ ಅವಳಿಗೆ ಅವನ ಬಗೆಗಿನ ತನ್ನೀ ಕೋಪವನ್ನು ತಾಳಿಕೊಳ್ಳಲಾಗಲಿಲ್ಲ. ಕೃಷ್ಣನ ಅಪರಾಧ

ಕ್ಷಮಿಸಲರ್ಹವಲ್ಲ ಎಂದೇ ಅವಳು ಬಗೆದಳು. ಅವನಿಗೆ ತಕ್ಕ ಶಾಸ್ತಿಯಾಗಲೇಬೇಕು. ಹೀಗಾಗಿ ಅವಳು ತನ್ನ ತಪಸ್ಸು ಹಾಗೂ ಪತಿಸೇವೆಯನ್ನು ನೆನೆದು ಕೃಷ್ಣನಿಗೆ ಈ ರೀತಿ ಶಾಪವಿತ್ತಳು—

'ಎಲೋ ಗೋವಿಂದ ! ಒಂದೇ ಕುಲದಲ್ಲಿ ಹುಟ್ಟಿಬಂದ ಕೌರವ–ಪಾಂಡವರು ತಮ್ಮ ತಮ್ಮಲ್ಲಿ ಕಾದಾಡುತ್ತಿರುವಾಗ ನೀನದನ್ನು ಕಡೆಗಣಿಸಿದೆ. ಹಾಗೆಯೇ ನೀನೂ, ನಿನ್ನ ಕುಲದವರೆಲ್ಲರೂ ನಾಶಹೊಂದಿರಿ. ಇಂದಿನಿಂದ ಮೂವತ್ತೆರಡು ವರ್ಷಗಳ ತರುವಾಯ ನಿನ್ನ ಜಾತಿಬಾಂಧವರು, ಅಮಾತ್ಯರು, ಮಕ್ಕಳೆಲ್ಲ ತಮ್ಮತಮ್ಮಲ್ಲಿ ಕಾದಾಡಿ ಸಾಯಲಿ. ಜನ ನಿಮ್ಮತ್ತ ಅಲಕ್ಷ್ಯವನ್ನು ತಳೆಯುವಂತಾಗಲಿ. ನಿನಗೂ ಅದೇ ಅವಸ್ಥೆ ಬರಲಿ. ನೀನು ತಬ್ಬಲಿಯಾದ ಅಲೆಮಾರಿಯಾಗಿ ಕಾಡುಮೇಡುಗಳನ್ನು ಸುತ್ತುವಾಗಲೇ ನಿನಗೆ ಸಾವು ಬರಲಿ. ನಿಮ್ಮ ಕುಲದ ಹೆಣ್ಣುಗಳಿಗೂ ನಮ್ಮ ಹೆಣ್ಣುಗಳಿಗೆ ಬಂದಂತಹ ಅವಸ್ಥೆ ಬಂದೊದಗಲಿ. ಅವರು ಕೂಡ ತಮ್ಮ ಗಂಡಂದಿರು, ಮಕ್ಕಳನ್ನು ಕಳೆದುಕೊಂಡು ಅವರ ಹೆಣಗಳ ಮೇಲೆ ಹೊರಳಾಡುವಂತಾಗಲಿ.' (ಸ್ತ್ರೀ, ೨೫/೪೩-೪೬), ಗಾಂಧಾರಿಯ ಈ ಮಾತುಗಳಲ್ಲಿ ಅದೆಷ್ಟು ದಾಹಕತೆ ತುಂಬಿದೆಯೆಂಬುದನ್ನು ಬೇರೆಯಾಗಿ ಬಿಡಿಸಿ ಹೇಳಬೇಕಿಲ್ಲ.

ಇತ್ತ ಅಪ್ಪಣೆಗಳನ್ನು ಮೀರುವುದು ಮಹಾಭಾರತದ ಎರಡು ಶಾಪಗಳಿಗೆ ಕಾರಣವೆನ್ನಿಸಿದೆ. ಅವುಗಳಲ್ಲಿ ಒಂದು ಶರತ್ತಿನದು. ಶರತ್ತಿನ ಪಾಲನೆ ಸರಿಯಾಗಿ ನಡೆದ ಕಾರಣ ಅದರ ದುಷ್ಪರಿಣಾಮವನ್ನು ಅನುಭವಿಸಬೇಕಾಗಿ ಬಂದಿಲ್ಲ. ವೇದನೆಂಬ ಋಷಿಯ ಮಡದಿಯು ಉತ್ತಂಕನೆಂಬ ಶಿಷ್ಯನಿಗೆ ಇಂತಿಷ್ಟು ಅವಧಿಯಲ್ಲಿ ಇಂಥದೊಂದು ಗುರುದಕ್ಷಿಣೆಯನ್ನು ತಂದೊಪ್ಪಿಸೆಂದು ಹೇಳುತ್ತಾಳೆ. ಕಾಲಾವಧಿ ಮುಗಿಯಬಂದರೂ ಅವನಿಂದ ಗುರುದಕ್ಷಿಣೆ ಬರಲಿಲ್ಲ. ಹೀಗಾಗಿ ಅವಳು ಆ ಶಿಷ್ಯನನ್ನು ಶಪಿಸುವ ಸನ್ನಾಹದಲ್ಲಿರುತ್ತಾಳೆ. ಅಷ್ಟರಲ್ಲಿಯೇ ಉತ್ತಂಕ ಮರಳಿ ಬರುತ್ತಾನೆ. ಗುರುದಕ್ಷಿಣೆಯನ್ನು ತಂದು ಅವಳಿಗೆ ಒಪ್ಪಿಸುತ್ತಾನೆ. ಸಂತೋಷದಿಂದ ಅವಳೆಂದಳು—

'ಮಗು ! ನೀನು ವೇಳೆಗೆ ಸರಿಯಾಗಿ ಮರಳಿ ಬಂದೆ. ನಿನಗೆ ಸ್ವಾಗತ. (ನೀನು ಬಾರದೆ ಹೋಗಿದ್ದರೆ ಮಾತ್ರ) ನೀನು ತಪ್ಪುಮಾಡದೆ ಇದ್ದಾಗಲೂ ನಿನ್ನನ್ನು ಶಪಿಸುವವಳಿದ್ದೆ. ನೀನು ಅದೃಷ್ಟವಂತ. ಜಯಶಾಲಿಯಾಗು.' (ಆದಿ, ೩/೧೫೫). ಈ ರೀತಿಯಾಗಿ ಇಲ್ಲಿ ಶಾಪವು ವರವಾಗಿ, ಪರಿಣಮಿಸಿತು.

ಕಶ್ಯಪನ ಮಡದಿ ಕದ್ರುವು ಮಕ್ಕಳು ತನ್ನ ಅಪ್ಪಣೆ ಮೀರಿದರೆಂದು ಅವರನ್ನು ಶಪಿಸುತ್ತಾಳೆ. ಹಾಗೆ ನೋಡಿದರೆ ಅವಳ ಮಕ್ಕಳಾದ ಹಾವುಗಳು ಅಂಥ ತಪ್ಪನ್ನೇನೂ ಮಾಡಿರಲಿಲ್ಲ. ಆದರೆ ಬಲು ಕಠೋರವಾದ ಶಿಕ್ಷೆಗೆ ಗುರಿಯಾದವು. ಒಂದು ಸಲ ಕದ್ರು ಹಾಗೂ ಅವಳ ಸವತಿಯಾದ ವಿನತೆಯರಲ್ಲಿ ಒಂದು ಪಣ ಏರ್ಪಟ್ಟಿತು : ಅದು ಉಚ್ಚೈಃಶ್ರವ ಎಂಬ ಕುದುರೆಯ ಬಾಲದ ಬಣ್ಣ ಎಂಥದು ಎಂಬ ಮಾತನ್ನು ಕುರಿತಾದದ್ದು. ಸೋತವಳು ಗೆದ್ದವಳಿಗೆ ದಾಸಿಯಾಗಬೇಕಿತ್ತು, ಕುದುರೆಯ ಬಾಲ ಬೆಳ್ಳಗಿತ್ತೆಂಬುದನ್ನು ಅರಿತಿದ್ದರೂ ಅದು ಕಪ್ಪಾಗಿದೆಯೆಂದು ಕದ್ರು ವಾದಹೂಡಿದಳು. ಅದನ್ನು ಸಿದ್ಧಮಾಡಿ ತೋರಿಸಲೆಂದು, ಅವಳು ತನ್ನ ಮಕ್ಕಳಿಗೆ ಆ ಕುದುರೆಯ ಬಾಲವನ್ನು ಸುತ್ತಿಕೊಂಡು ಕುಳಿತಿರುವಂತೆ ಹೇಳಿದಳು. ಆದರೆ ಮಕ್ಕಳು ಅವಳ ಮಾತನ್ನು ಕೇಳಲಿಲ್ಲ. ಅದರಿಂದಾಗಿ

ಅವಳು ಕೆರಳಿಹೋದಳು; 'ಜನಮೇಜಯನ ಯಜ್ಞದ ಬೆಂಕಿಗೆ ಬೀಳುವಿರಿ' ಎಂದು ಅವರನ್ನು ಶಪಿಸಿದಳು (ಆದಿ, ೨೦/೮).

ಈ ಶಾಪವನ್ನು ಆಲಿಸಿ ಬ್ರಹ್ಮದೇವ ಸಂತೋಷಪಟ್ಟನು. ಇದಕ್ಕೆ ಕಾರಣ ಭೂಮಿಯ ಮೇಲಿನ ಜೀವಿಗಳೆಲ್ಲ ಈ ವಿಷದ ಹಾವುಗಳಿಂದಾಗಿ ಸಂಕಟದಲ್ಲಿ ಸಿಲುಕಿದ್ದವು. ಅವುಗಳ ತಾಯಿಯಿಂದಾಗಿಯೇ ಈ ಸಂಕಟ ನಿವಾರಣೆಯಾಗಲಿತ್ತು. ಬ್ರಹ್ಮದೇವ ಮಾತ್ರ ಈ ಶಾಪವನ್ನು ಕುರಿತು ಈ ರೀತಿ ಹೇಳುತ್ತಾನೆ—

**ಅತಿಕ್ರೂರಂ ಸಮುತ್ಸೃಷ್ಟಂ ಕದ್ರ್ವಾ ದೈವಾದತೀವ ಹಿ ||**

ಭೀಷ್ಮನನ್ನು ಕೊಲ್ಲಲೆಂದು ಅಂಬೆ ತಪಸ್ಸಿಗೆ ಕುಳಿತಿರುತ್ತಾಳೆ. ಗಂಗೆ ಸರಿಯಾದ ಸಮಯಕ್ಕೆ ಅವಳನ್ನು ಆ ಬಗೆಗೆ ಎಚ್ಚರಿಸುತ್ತಾಳೆ. ಅಂಬೆ ತಳೆದ ನಿಲುವು ಸರಿಯಲ್ಲ ವೆಂಬುದನ್ನು ಅವಳು ಪದೇ ಪದೇ ಅವಳಿಗೆ ಹೇಳುತ್ತಾಳೆ. ಇಷ್ಟಾಗಿಯೂ ಅಂಬೆ ಗಂಗೆಯ ಮಾತನ್ನು ನಡೆಯಿಸಿಕೊಡಲಿಲ್ಲ. ಕೊನೆಗೆ ಗಂಗೆಯು ಅಂಬೆಗೆ ಇನ್ನೊಂದು ಅವಕಾಶ ದೊರೆಕಲೆಂದು ಅವಳಿಗೆ ಒಂದು ಶರತ್ತಿನ ಶಾಪವನ್ನೀಯುತ್ತಾಳೆ—

'ನಿನ್ನ ದಾರಿ ಕಪಟದ್ದು. ಎಲೈ ಚಾರುಗಾತ್ರಿಯೇ, ನಿನ್ನ ಈ ಇಚ್ಛೆ ಅದೆಂದಿಗೂ ಕೈಗೂಡದು' ಎಂದು ನುಡಿದು ಮುಂದೆ—

'ಭೀಷ್ಮನನ್ನು ಕೊಲ್ಲಲೆಂದು ನೀನು ಈ ವ್ರತವನ್ನು ಕೈಕೊಂಡ ಕಾಲದಲ್ಲಿಯೇ ಅಸು ನೀಗಿದೆಯಾದರೆ ಮಳೆಗಾಲದಲ್ಲಿ ಅಂಕುಡೊಂಕಾಗಿ ತುಂಬಿ ಹರಿಯುವ ಹೊಳೆ ನೀನಾಗುವೆ. ಆಗ ನಿನ್ನನ್ನು ದಾಟಿ ಆಚೆಯ ದಡವನ್ನು ಕಾಣುವುದು ಕಷ್ಟದ್ದಾದೀತು. ಆದರೆ ವರ್ಷದ ಉಳಿದೆಂಟು ತಿಂಗಳುಗಳ ಕಾಲ ನೀನು ಬತ್ತಿಹೋಗಿ ನಿನಗೊಂದು ಅಸ್ತಿತ್ವ ಎನ್ನುವುದೇ ಉಳಿಯದೇ ಹೋದೀತು' ಎಂದೆನ್ನುತ್ತಾಳೆ. (ಉದ್ಯೋಗ, ೧೮೬/೩೪).

ದಮಯಂತಿ ಹಲವಾರು ಸಂಕಟಗಳಿಗೀಡಾಗಲು ಕಾರಣ ಕಲಿಯು ನಳನ ದೇಹವನ್ನು ಹೊಕ್ಕುದುದು. ಅವಳಿಗಿದು ಗೊತ್ತಿರಲಿಲ್ಲ. ಹೀಗಾಗಿ ಅವಳ ಶಾಪದ ನುಡಿಗಳು ಮೊತ್ತನೆ ಯವು. ದಮಯಂತಿಯು ನಳನ ಗುಣಗಳು, ಪರಾಕ್ರಮ, ರೂಪವೈಭವಗಳನ್ನು ಕಂಡು ಅವನಿಗೆ ವರಮಾಲೆಯನ್ನು ಹಾಕಿದುದು ಸ್ವಾಭಾವಿಕವೇ ಸರಿ. ಇದನ್ನೇ ತನ್ನ ಅವಮಾನ ವೆಂದು ಕಲಿಯು ಬಗೆದನು. ಹೀಗಾಗಿ ಅವನು ನಳನನ್ನು ಶಪಿಸಬೇಕೆಂದುಕೊಂಡನು. ದೇವತೆಗಳೆಲ್ಲ ಅವನನ್ನು ತಡೆದರು. ಬಿರುನುಡಿಗಳಿಂದ ಅವನನ್ನೆಚ್ಚರಿಸಿದರು. ನಳನನ್ನು ಶಪಿಸಿದೆಯಾದರೆ ನರಕವಾಸವನ್ನು ಅನುಭವಿಸುವೆ ಎಂದು ಖಡಾಖಂಡಿತವಾಗಿ ಅವನಿಗೆ ಹೇಳಿದರು. ಆದರೆ ಅವನು ಅವರ ಈ ಎಚ್ಚರಿಕೆಯನ್ನು ಲೆಕ್ಕಿಸಲಿಲ್ಲ. ನಳನನ್ನು ಪೀಡಿಸು ತ್ತಲೇ ಇದ್ದನು. ದಮಯಂತಿಯು ತಾನಿತ್ತ ಶಾಪದಲ್ಲಿ ಕಲಿಯ ಹೆಸರನ್ನು ಹೇಳದಿದ್ದರೂ ಅದು ಅವನನ್ನೇ ಕುರಿತಾದದ್ದು—

'ಯಾರ ಶಾಪದಿಂದಾಗಿ ನಳನಿಗೆ ಇಷ್ಟೆಲ್ಲ ಸಂಕಟ, ಬವಣೆಗಳನ್ನು ಸಹಿಸಿಕೊಳ್ಳ ಬೇಕಾಗಿಬಂದಿದೆಯೋ ಅಂಥ ಈ ಶಾಪವನ್ನೀಯುವವನು ನಮಗಿಂತಲೂ ಹೆಚ್ಚಿನ ಬವಣೆ ಗಳಿಗೊಳಗಾಗುವನು. ಯಾವ ಪಾಪಿಯಿಂದಾಗಿ ನಳನಂತಹ ಪುಣ್ಯವಂತನಿಗೆ ಇಂಥ ಅವಸ್ಥೆ ಬಂದಿತೋ ಅಂಥವನಿಗೆ ಇದಕ್ಕಿಂತಲೂ ಅವದೆಸೆ ಪ್ರಾಪ್ತವಾಗಲಿ. ಅವನು ಬಾಳಿದೀ

ಸಂಕಟಗಳಲ್ಲಿ ತೊಳಲಾಡುವಂತಾಗಲಿ.' (ವನ, ೬೩/೧೬-೧೭). ದಮಯಂತಿಯ ಮಾತು ಗಳಲ್ಲಡಗಿದ ಈ 'ಕಳವಳ'ವನ್ನು ಗಮನಿಸಿದರೆ ಅವುಗಳನ್ನು ಶಾಪದ ನುಡಿಗಳೆನ್ನುವುದು ಕಷ್ಟದ್ದು.

ಅವಳು ನೀಡಿದ ಇನ್ನೊಂದು ಶಾಪವಿದೆ. ಅದು ಯಾರಿಗೆಂಬುದನ್ನು ಹೇಳಿರದಿದ್ದರೂ ಸಂದರ್ಭದಿಂದಾಗಿ ಅದು ಕೌರವರಿಗಿತ್ತ ಶಾಪವಾಗಿದೆ ಎನ್ನಬಹುದು. ಅದು ಹೀಗಿದೆ—

'ಯಾರಿಂದಾಗಿ ನನ್ನಮೇಲೆ ಇಂಥ ವಿಪತ್ತು ಬಂದೆರಗಿದೆಯೋ ಅಂಥವರ ಹೆಂಡಂದಿರೆಲ್ಲ ಇನ್ನು ಹದಿನಾಲ್ಕು ವರ್ಷಗಳ ತರುವಾಯದಲ್ಲಿ ವಿಧವೆಯರಾಗಲಿ. ಅವರ ಮಕ್ಕಳು ಸಾವನ್ನಪ್ಪಲಿ. ಅವರ ಬಂಧುಬಳಗವೆಲ್ಲ ಮಣ್ಣುಗೂಡಲಿ. ಹೆಣ್ಣುಗಳೆಲ್ಲ (ನನ್ನಂತೆಯೇ) ತಲೆಗೂದಲುಗಳನ್ನು ಕಟ್ಟಿಕೊಳ್ಳದೆ ಇಳಿಬಿಟ್ಟು ಅಲೆದಾಡುವಂತಾಗಲಿ. ಮುಟ್ಟಿನಿಂದಾಗಿ ಅವರ ಉಟ್ಟುಡುಗೆಗಳೆಲ್ಲ ನೆತ್ತರಿನಲ್ಲಿ ನೆನೆದುಹೋಗಲಿ. ಮರಣವನ್ನಪ್ಪಿದ ತಮ್ಮ ಗಂಡಂದಿರಿಗೆ ತಿಲಾಂಜಲಿಯನ್ನರ್ಪಿಸುತ್ತಲೇ ಅವರೆಲ್ಲರಿಗೂ ಹಸ್ತಿನಾವುರವನ್ನು ಪ್ರವೇಶಿ ಸುವ ಹೊತ್ತು ಬಂದೀತು.'

## ಹಿಡಿಶಾಪ

ಹಿಡಿಶಾಪದಲ್ಲಿ ಬೈಗುಳ ಹಾಗೂ ಶಾಪ ಒಳಗೊಂಡಿರುತ್ತವೆ ಇಲ್ಲಿ 'ಶಾಪ' ಎನ್ನುವುದು ಅರ್ಥವಿಲ್ಲದ್ದು. ಅದು ಪರಿಣಾಮಕಾರಿಯಲ್ಲ. ಇಲ್ಲಿ ಬೈಗುಳಕ್ಕೇನೇ ಆದ್ಯತೆ. ಹಿಡಿಶಾಪ ವನ್ನು ಹಾಕುವುದು ಒಳ್ಳೆಯ ಮಾತೇನಲ್ಲ. ಇದು ನಿಂದನೀಯವೇ ಸರಿ. ಬೈಗುಳವಾಗಲಿ, ಶಾಪವಾಗಲಿ ಹುಟ್ಟಿ ಬರುವುದು ಸಿಟ್ಟು, ಮನಸ್ತಾಪಗಳಿಂದಲೇ. ಹಿಡಿಶಾಪವನ್ನು ಹಾಕುವುದು ಪ್ರತಿಷ್ಠಿತವಲ್ಲ. ಬೈಗುಳ ಹಾಗೂ ಶಾಪಗಳನ್ನು ಹೋಲಿಸಿನೋಡಿದರೆ ಇವು ಗಳಲ್ಲಿ ಬೈಗುಳವು ಹೆಚ್ಚು ಕೀಳುಮಟ್ಟದ್ದೆನಿಸುತ್ತದೆ ; ಸಭ್ಯತೆಯ ಎಲ್ಲೆಯನ್ನು ಮೀರು ವಂಥದಾಗಿ ಕಾಣುತ್ತದೆ. ಹೀಗಾಗಿ ಇದನ್ನು ಬಳಸುವುದು ಸಲ್ಲ. ಬೈಯುವವನು ಕೀಳು ಸಂಸ್ಕೃತಿಯವನೆನ್ನಿಸುತ್ತಾನೆ. ಬೈಗುಳಗಳ ನುಡಿ, ಅದರಲ್ಲಿ ಬಳಕೆಯಾಗುವ ಪದಗಳು ಯಾರೂ ಆಡಬಾರದಂಥವುಗಳು, ಅಸಭ್ಯವಾದವುಗಳು, ಅಶ್ಲೀಲವಾದವುಗಳು ಹಾಗೂ ಕಿವಿಗೆ ಬಲು ಕಠೋರವಾದವುಗಳೂ ಆಗಿರುತ್ತವೆ.

ಶಾಪವನ್ನೀಯುವವನು ಅಧಿಕಾರಸಂಪನ್ನನಾಗಿರತಕ್ಕದ್ದು. ಇಂಥ ಅಧಿಕಾರವನ್ನು ಗಳಿಸಲೆಂದು ಅವನು ಯಜ್ಞ, ದಾನ, ತಪಸ್ಸುಗಳನ್ನು ಕೈಕೊಳ್ಳಬೇಕಿದೆ, ಆದರೆ ಬೈಯುವವನಿಗೆ ಅದಾವ ಅಧಿಕಾರವೂ ಬೇಡ. ಯಾರು ಬೇಕಾದವರು ತಮಗೆ ಬೇಡ ವಾದವರನ್ನು ಮನಬಂದಂತೆ ಬೈಯಬಹುದು. ಶಾಪಗಳನ್ನೀಯುವಲ್ಲಿ ಕೆಲವೊಂದು ವಿಧಿ ನಿಷೇಧಗಳನ್ನು ಪಾಲಿಸಬೇಕಿದೆ ಬೈಗುಳಗಳಿಗೆ ಅಂಥದೇನೂ ಬೇಕಿಲ್ಲ. ಶಾಪದ ಪರಿಣಾಮ ಗಳನ್ನು ತಪ್ಪಿಸಲಾಗದು. ಬೈಗುಳಗಳಲ್ಲಿ ಅಂಥ ಪರಿಣಾಮ ಎಂಬುದು ಇರದು. ಅವುಗಳ ಪರಿಣಾಮಗಳು ಬಲು ಅಲ್ಪಜೀವಿಗಳು. ಶಾಪಗಳ ಪರಿಣಾಮಗಳಾದರೋ ಸಾಯುವ ವರೆಗೂ, ಅದರಾಚೆಗೂ ತಲಪುವಂಥವುಗಳು. ಶಾಪಕ್ಕೆ ಹೋಲಿಸಿದರೆ ಬೈಗುಳಗಳ ಉದ್ದೇಶವು ಕೀಳಾದುದು. ಬೈಗುಳವೆಂದರೆ ತಡೆದುಕೊಳ್ಳಲಾಗದ ಕೋಪತಾಪಗಳಿಗೆ ದಾರಿಮಾಡಿಕೊಡುವುದು. ಒಂದು ಬರಡು ಉಪಾಯ. ಬೈಗುಳಗಳ ಗುರಿಯೆಂದರೆ

ಬೈಸಿಕೊಳ್ಳುವವನ ಮುರ್ಖಕ್ಕೆ ಪೆಟ್ಟುಕೊಡುವುದು, ಅವನ ಕುಂದುಕೊರತೆಗಳತ್ತ ಬೆರಳು ಮಾಡಿ ತೋರುವುದು, ಅವನನ್ನು ಕೆಣಕುವುದು, ಅವಮಾನಕ್ಕೀಡುಮಾಡು ವುದು, ಅವನು ಕಣ್ಣೀರು ಹಾಕುವಂತೆ ಮಾಡುವುದು, ನಾಚಿಕೆಗೀಡುಮಾಡುವುದು, ಪೀಡಿಸುವುದು ಮೊದಲಾದ ಬಗೆಯದು. ಬೈಗುಳ ಬಳಿ ಶಾಪದ ಹಾಗೆ ಒಬ್ಬನನ್ನು ಶಿಕ್ಷೆಗೆ ಗುರಿಪಡಿಸುವ ಸಾಮರ್ಥ್ಯವಿರದು. ಒಂದೇ ಸವನೆಯ ಬಳಕೆಯಿಂದಾಗಿ ಬೈಗುಳಗಳ ಪದ ಗಳು ತಮ್ಮ ಅರ್ಥಗಳಿಗೆ ಎರವಾಗುತ್ತವೆ. ಶಾಪದ ಪದಗಳು ಮಾತ್ರ ಅರ್ಥಪೂರ್ಣವೂ, ಬಲು ಹರಿತವಾದವುಗಳೂ ಅಹುದು. ಬೈಗುಳಗಳಿಂದ ಹೊರಹೊಮ್ಮುವ ಅರ್ಥವಂತಿಕೆ ವಿಕೃತವಾದುದು. ಒಬ್ಬನನ್ನು ಬೈಯುವಾಗ ಅದು ಅವನಿಗೆ ಅನ್ವಯಿಸುವುದೋ ಹೇಗೆಂಬುದನ್ನು ಕುರಿತು ಯೋಚಿಸಲಾಗದು. ಬೈಗುಳ ಸಟೆ-ದಿಟಗಳ ಪರಿವೆಯನ್ನರಿ ಯದು. ಹೀಗಾಗಿ ಹಲವು ಸಲ ಬೈಗುಳಗಳ ಅರ್ಥಗಳು ಸುಳ್ಳಿನವು, ಹೇರಲ್ಪಟ್ಟವುಗಳು. ಅವುಗಳ ಮುಖ್ಯವಾದ ಕೆಲಸವೆಂದರೆ ಬೈಸಿಕೊಳ್ಳುವವನ ಶೀಲ, ನಡತೆಗಳ ಮೇಲೆ ರೊಜ್ಜು ಚೆಲ್ಲುವುದು. ತಾಯಿ-ತಂಗಿಯರ ಹೆಸರಿನಿಂದ ಬೈಯುವುದೆಂದರೆ ಹೆಣ್ಣುಜಾತಿ ಯನ್ನು ಅನ್ಯಾಯಕ್ಕೀಡುಮಾಡಿದಂತೆಯೇ ಸರಿ.

ಶಾಪಕ್ಕೆ ಭೂತಕಾಲ ಎಂಬುದಿಲ್ಲ. ಅದು ಪರಿಣಾಮ ಬೀರುವ ಕಾಲ ಭವಿಷ್ಯದ್ದು ಇಲ್ಲವೆ ಹತ್ತಿರದ ವರ್ತಮಾನದ್ದು. ಬೈಗುಳಗಳು ಮಾತ್ರ ಹಿಂದಕ್ಕೆ ನಡೆದುಹೋದ ಘಟನೆ—ಸನ್ನಿವೇಶಗಳನ್ನು ಆಧರಿಸಿದವುಗಳು (ಈ ಘಟನೆಗಳು ಸುಳ್ಳಾಗಿರಲಿ, ನಿಜವಿರಲಿ. ಸುಳ್ಳಾಗಿರುವುವೇ ಹೆಚ್ಚು). ಬೈಗುಳಗಳಿಗೆ ಭವಿಷ್ಯ ಎಂಬುದಿಲ್ಲ. ಒಬ್ಬನನ್ನು ಮಂಗನ ಮೋರೆಯವನೇ ! ಎಂದು ಬೈಯುವಲ್ಲಿ ಅವನ ಮೋರೆಗೂ ಮಂಗನ ಮೋರೆಗೂ ಇರುವ ಹೋಲಿಕೆಯನ್ನು ಮೊದಲೇ ಗಮನಿಸಲಾಗಿರುತ್ತದೆ ಎಂದಾಗಲಿ, ಹಾಗೆಂದುಕೊಂಡಿರ ಲಾಗುತ್ತದೆ ಎಂದಾಗಲಿ ಅನ್ನಬಹುದು. ಕೊಟ್ಟ ಮಾತನ್ನು ಮುರಿದ ನಾರದನಿಗೆ ಪರ್ವತ ಋಷಿಯು, '(ಈ ಚೆಲುವೆ ನಿನ್ನ ಮಡದಿಯಾಗಲಿರುವಳೆಂಬಲ್ಲಿ ಸಂದೇಹವಿಲ್ಲ. ಆದರೆ) ಮದುವೆಯ ತರುವಾಯ ನೀನು ಎಲ್ಲರಿಗೂ ಮಂಗನ ಮೋರೆಯವನಾಗಿ ಕಾಣಲಿರುವೆ' ಎಂದನು.[42] ಇದೊಂದು ಶಾಪವಾಣಿಯೆನ್ನಿಸಿದೆ. ನಾರದ ತನ್ನ ಮದುವೆಗೆ ಮೊದಲು ಮಂಗನ ಮೋರೆಯವನಾಗಿರಲಿಲ್ಲ. ನಾರದನ ಈ 'ಮಂಗನ ಮೋರೆ' ಭವಿಷ್ಯದಲ್ಲಿ ಕಾಣು ವಂಥದು. ಒಂದು ಹೆಣ್ಣನ್ನು ಕುಲಟೆ, ಹಾದರಗಿತ್ತಿ ಎಂದು ಕರೆಯುವುದೆಂದರೆ ಅವಳನ್ನು ಬೈಯುವುದು ಎಂದರ್ಥ. ಈ ಪದಗಳೆಂದರೆ ಅವಳ ಭೂತಕಾಲದ ಬಾಳಿಗೆ ಸಂಬಂಧಿಸಿದ ನಿಜ-ಸುಳ್ಳುಗಳನ್ನು ಆಧರಿಸಿದವುಗಳು. ಒಬ್ಬಳು ಬ್ರಾಹ್ಮಣ ಸ್ತ್ರೀಯು ಕಲ್ಮಾಷಪಾದವನನ್ನು ಕುರಿತು ಇಲ್ಲವೆ ಸಾಧ್ವಿಯೊಬ್ಬಳು ಆ ಕಳ್ಳರನ್ನು ಕುರಿತು ಆಡಿದ ಮಾತುಗಳೆಂದರೆ ಶಾಪ ಗಳೇ ಸರಿ.[43] ಒಬ್ಬನನ್ನು 'ಕುರುಡ'ನೆಂದು ಕರೆಯುವುದೆಂದರೆ ಅವನಿಗೆ ಕಣ್ಣು ಕಾಣದು ಎಂದು ಇಲ್ಲವೆ ಕಾಣುತ್ತಿದ್ದರೂ ಅವನು ಅಲಕ್ಷ್ಯತೋರಿದನೆಂದು ಬಗೆಯಲಾಗುತ್ತದಾದ್ದ

42. ವಾನರಂ ಚೈವ ತೇ ರೂಪಂ ವಿವಾಹಾತ್ ಪ್ರಭೃತಿ ಪ್ರಭೋ ।
ಸಂದ್ರಕ್ಷ್ಯಂತಿ ನರಾಶ್ಚಾನ್ಯೇ ಸ್ವರೂಪೇಣ ವಿನಾ ಕೃತಮ್ ॥

—ಶಾಂತಿ, ೩೦/೨೫-೨೬

43. ಶಾಪ, ಕ್ರ. ೪೨ ಹಾಗೂ ೯೧.

ರಿಂದ ಅದೊಂದು ಬೈಗುಳ ಎನ್ನಿಸುತ್ತದೆ. ಬೃಹಸ್ಪತಿಯ ಶಬ್ದೋಚ್ಚಾರದಿಂದಾಗಿ[44] ಬಸಿರಲ್ಲಿದ್ದ ಉತಥ್ಯನ ಮಗನು 'ದೀರ್ಘತಮಾ' ಎಂದೆನ್ನಿಸಿ ಹುಟ್ಟಿಬರುತ್ತಾನೆ. ಹೀಗಾಗಲು ಕಾರಣ ಇವೊಂದು ಶಾಪ ಎನ್ನಿಸಿರುವುದು. ಇಲ್ಲಿಯ ಕುರುಡು ಭವಿಷ್ಯತ್ತಿಗೆ ಸಂಬಂಧಿಸಿದುದು, ಶಬ್ದೋಚ್ಚಾರದ ತರುವಾಯದ ಕಾಲಕ್ಕೆ ಸಂಬಂಧಿಸಿದುದು. ಹಲವು ವೇಳೆಗಳಲ್ಲಿ ಚಾಂಡಾಲ ಎಂಬ ಜಾತಿವಾಚಕ ಬೈಗುಳವನ್ನು ಬಳಸಲಾಗುತ್ತದೆ. ವಿಶ್ವಾಮಿತ್ರನ ಶಾಪದಿಂದಾಗಿ ಮಾತ್ರ ಅವನ ಮಕ್ಕಳು ಚಾಂಡಾಲರಾಗಿಯೇ ಹುಟ್ಟಿ ಬಂದರು. ಹತ್ತಿರದ ಜನರನ್ನು ಕೂಡ ನರಪೇತಲ, ನರಸತ್ತವ, ಹೆಣದ ಮೋರೆಯವ ಎಂದೆಲ್ಲ ಸಾವಿಗೆ ಸಂಬಂಧಿಸಿದ ಪದಗಳಿಂದ ಬೈಯುವುದುಂಟು. ಹಾಗೆ ಅಂದಮಾತ್ರಕ್ಕೆ ಅಂಥವನು ಸತ್ತುಹೋಗಬೇಕೆಂಬ ನಿರೀಕ್ಷೆಯಿರದು. ಮಹರ್ಷಿಯು ಪುರೂರವನನ್ನು ಉದ್ದೇಶಿಸಿ ಆಡಿದ ಮಾತುಗಳು ಶಾಪವಾಗಿದ್ದಕಾರಣ ಅವನು ಸಾವನ್ನಪ್ಪಬೇಕಾಗಿ ಬಂದಿತು.[45]

ಮಹಾಭಾರತದ ಕೆಲವು ಶಾಪಗಳು ಬೈಗುಳಗಳಷ್ಟು ಕೆಳಮಟ್ಟದಲ್ಲಿರುವುದನ್ನು ಕಾಣ ಬಹುದು. ಅತ್ಯಾಚಾರಕ್ಕೊಳಗಾದ ಹೆಣ್ಣಿನ ಬವಣೆ ಬಲು ಉದ್ವೇಗಕರ ಎಂಬುದರಲ್ಲಿ ಸಂದೇಹವೇ ಇಲ್ಲ. ದಮಯಂತಿಯು ತನ್ನ ಮೇಲೆ ಅತ್ಯಾಚಾರವನ್ನು ಎಸಗಲು ಹವಣಿಸಿದ ಬೇಡನನ್ನು ಶಪಿಸುತ್ತಲೇ ಅವನಿಗೆ ಸಾವು ಬಂದಿತು. ಆರಟ್ಟನಾಡಿನ ಸಾಧ್ವಿಯು ತನ್ನನ್ನು ಅತ್ಯಾಚಾರಕ್ಕೆ ಗುರಿಪಡಿಸಿದ[46] ಕಳ್ಳರನ್ನು ಸಾಯಿಸಬೇಕೆಂದು ಶಪಿಸಿದ್ದುದು ಸರಿಯಾದುದೂ, ಕ್ಷಮೆಗೆ ಅರ್ಹವಾದುದೂ ಅಹುದು. ಆದರೆ ಆ ಕಳ್ಳರ ಹೆಂಡಂದಿರು ಇವಳಿಗೆ ಅದಾವ ಕೇಡನ್ನು ಮಾಡಿರದಿರುವಾಗಲೂ ಅವರನ್ನು 'ಹಾದರಗಿತ್ತಿ' ಯರಾಗಿರೆಂದು ಶಪಿಸುವುದು ಹಾಗೂ ಕಳ್ಳರ ಹಣ-ಸಂಪತ್ತು ಅವರ ಮಕ್ಕಳಿಗೆ ದಕ್ಕದೆ ಅವರ ಸೋದರಳಿಯಂದಿರಿಗೆ ದೊರಕುವಂತಾಗಲಿ ಎಂದು ಶಪಿಸುವುದು ಒಬ್ಬ ಸಾಧ್ವಿ ಯೆನ್ನಿಸಿದವಳಿಗೆ ಶೋಭಿಸದ ಸಂಗತಿಯಾಗಿದೆ. ಗಾಂಧಾರಿ ಒಂದು ಅರಸುಮನೆತನದಲ್ಲಿ ಹುಟ್ಟಿಬಂದವಳು. ಒಳ್ಳೆಯ ಸಂಸ್ಕಾರಗಳನ್ನು ಪಡೆದವಳು. ಅವಳೊಬ್ಬ ಅರಸುಗುಮಾರಿ, ಅರಸಿ, ರಾಜಮಾತೆಯಲ್ಲದೆ ಒಬ್ಬ ಶ್ರೇಷ್ಠಳಾದ ಪತಿವ್ರತೆ. ಅವಳು ಕೃಷ್ಣನಿಗಿತ್ತ ಶಾಪವನ್ನು ಸಮರ್ಥಿಸಿಕೊಳ್ಳಬಹುದೇನೋ. ಆದರೆ ಅವಳು ಯಾದವಸ್ತ್ರೀಯರನ್ನು ಕುರಿತು ಹಾಗೆಲ್ಲ ಅನ್ನಬಾರದಿತ್ತು. ಅವರು ಗಾಂಧಾರಿಗೆ ಮಾಡಿದ ಕೇಡೇನು ? ಕೃಷ್ಣನು ನಡೆಯಬಹುದಾದ ಸಂಹಾರವನ್ನು ತಪ್ಪಿಸುವಂತಿದ್ದೂ ಅತ್ತ ಅಲಕ್ಷ್ಯತೋರಿದನೆಂದು ಅವನನ್ನು ಶಪಿಸುವುದು ಸರಿಕಾಣಲೂಬಹುದು. ಆದರೆ ಅವನಿಂದಾಗಿ ಯಾದವರ ಸ್ತ್ರೀಯರೂ ಬವಣೆಗೀಡಾಗಬೇಕಾಯಿತಲ್ಲ. ದ್ರೌಪದಿಯು ಕೂಡ ಶಾಪವನ್ನೀಯುವಾಗ ಹೆಚ್ಚಿನ ಸಂಯಮವನ್ನು ತೋರಿದವಳಲ್ಲ. ಕೌರವರು ಅವಳನ್ನು ಅವಮಾನಕ್ಕೀಡು ಮಾಡಿದುದು ಉದ್ವೇಗಕರವೆಂಬುದರಲ್ಲಿ ಸಂದೇಹವೇ ಇಲ್ಲ. ಅದರಿಂದಾಗಿ ಅವಳು ದುರ್ಯೋಧನ, ದುಃಶಾಸನನಂತಹ ಕೌರವರು, ಧೃತರಾಷ್ಟ್ರ, ಭೀಷ್ಮ, ದ್ರೋಣ, ಶಕುನಿ,

---

44. ಶಾಪ, ಕ್ರ. ೩೮.
45. ಶಾಪ, ಕ್ರ. ೨೮.
46. ಶಾಪ, ಕ್ರ. ೯೧.

ಕರ್ಣ ಹಾಗೂ ಅವನಿಗೆ ನೆರವಾದವರೆಲ್ಲರಿಗೆ ಎಷ್ಟೋ ಕಿಡಿಕಾರುವ, ಶಾಪಗಳನ್ನಿತ್ತಿದ್ದರೂ ಕಡಿಮೆಯೇ. ಕೌರವರಿಂದಾಗಿ ತಾನು ಇಷ್ಟೆಲ್ಲ ಬವಣೆಯನ್ನು ಪಡಬೇಕಾಗಿಬಂದರೂ ಇದಕ್ಕೆ ಕೌರವಸ್ತ್ರೀಯರು ಹೊಣೆಗಾರರೆ ? ತುಂಬುಸಭೆಯಲ್ಲಿ ದ್ರೌಪದಿಯನ್ನು ಅವಮಾನಗೊಳಿಸಲು ಅವರು ತಮ್ಮ ಗಂಡಂದಿರಿಗೆ ಹೇಳಿದ್ದರೆ ? ಅವರ ತಪ್ಪು ಒಂದೇ ಒಂದು ಅದೆಂದರೆ ಅವರು ಕೌರವರ ಮಡದಿಯರಾಗಿದ್ದುದು. ದ್ರೌಪದಿಯ ಮಾತು ಗಳು ಅದೆಂತಹ ಸುಡುಸುಡುವ ಕೆಂಡಗಳಾಗಿವೆ ಎಂಬುದನ್ನು ಗಮನಿಸಿ : 'ಯಾರಿಂದಾಗಿ ನಾನು ಈ ವಿಪತ್ತಿಗೆ ಗುರಿಯಾದೆನೋ ಅಂಥವರ ಹೆಂಡಂದಿರೆಲ್ಲ ಇಂದಿನಿಂದ ಹದಿನಾಲ್ಕು ವರ್ಷಗಳ ತರುವಾಯ ವಿಧವೆಯರಾಗಲಿ. ಮಕ್ಕಳನ್ನು ಕಳೆದುಕೊಳ್ಳಲಿ. ಅವರ ಸೋದರ ರೆಲ್ಲ ಕೊಲೆಗೀಡಾಗಲಿ. ಆ ಹೆಣ್ಣುಗಳೆಲ್ಲರ ತಲೆಗೂದಲುಗಳು ಇದೇ ರೀತಿಯಾಗಿ ಬಿಚ್ಚಿ ನೇತಾಡಲಿ. ಅವರೆಲ್ಲ ಮುಟ್ಟಾಗಿ ಅವರ ಉಡುಗೆಗಳೆಲ್ಲ ನೆತ್ತರಿನಲ್ಲಿ ನೆನೆದುಹೋಗಲಿ. ಅವರೆಲ್ಲ ಇಂತಹ ಅವಸ್ಥೆಯಲ್ಲಿಯೇ ತಮ್ಮ ಗಂಡಂದಿರಿಗೆ ತಿಲಾಂಜಲಿಯನ್ನಿತ್ತು ಹಸ್ತಿನಾಪುರವನ್ನು ಪ್ರವೇಶಿಸುವಂತಾಗಲಿ."[47] ದ್ರೌಪದಿಯ ಯಾಜ್ಞಸೇನಿತ್ವ. ಪಾಂಡವರ ಪತ್ನಿತ್ವ, ಕೃಷ್ಣನ ಸೋದರಿತ್ವಗಳನ್ನು ಗಮನಿಸಿದರೆ ಅವರ ಬಾಯಲ್ಲಿ ಇಂಥ ಮಾತು ಗಳು ಖಂಡಿತವಾಗಿಯೂ ಶೋಭಿಸುವಂಥವಲ್ಲ. ಓಜ-ತೇಜಗಳನ್ನು ಹೊಂದಿದ ಅವಳ ಶೀಲಕ್ಕೆ ಸರಿಕಾಣದ ಸಂಗತಿಯಿದು.

ಯಯಾತಿ ತನ್ನ ಮಕ್ಕಳನ್ನು ಯೌವನಕ್ಕಾಗಿ ಕೇಳುತ್ತಾನೆ. ಅವರು ಅದನ್ನು ನಿರಾ ಕರಿಸುತ್ತಾರೆ. ಹೀಗಾಗಿ ಅವನಿಂದ ಶಾಪಕ್ಕೀಡಾಗುತ್ತಾರೆ. ಈ ಶಾಪಗಳ ದುಷ್ಪರಿಣಾಮ ಗಳು ಇವರಿಗಿಂತಲೂ ಇವರ ವಂಶಜರನ್ನೇ ಹೆಚ್ಚಾಗಿ ಕಾಡಿವೆ.[48] ಕುಂತಿಯು ಸೂರ್ಯನ ಸಮಾಗಮದ ಬೇಡಿಕೆಯನ್ನು ಮನ್ನಿಸದೆಹೋಗಿದ್ದರೆ ಅದರಿಂದಾಗಿ ಅವಳ ಅಪ್ಪ ಹಾಗೂ ಮಂತ್ರವನ್ನಿತ್ತ ಗುರು ತಮ್ಮ ಪ್ರಾಣಗಳನ್ನು ಕಳೆದುಕೊಳ್ಳಲಿದ್ದರು. ಅವಳು ಆವನನ್ನು ಕೂಡಲು ಒಪ್ಪಿಕೊಂಡ ಕಾರಣ ಆಗಬಹುದಾಗಿದ್ದ ಅನರ್ಥ ತಪ್ಪಿತೇನೋ ನಿಜ. ಆದರೆ ಸೂರ್ಯನಂತಹ ತೇಜಸ್ಸಿನ ಮೂರ್ತಿಯೆನ್ನಿಸಿದವನೇ ಈ ರೀತಿಯಾಗಿ ಅವಳನ್ನು ಹೆದರಿಸುವುದು ದುರದೃಷ್ಟವೇ ಸರಿ. ತ್ರಿತನ ಶಾಪದಿಂದಾಗಿ ಏಕತ ಹಾಗೂ ದ್ವಿತರ ಮಕ್ಕಳು ಕಾಡುಕೋಣಗಳು, ಗೋಲಾಂಗೂಲ ಹಾಗೂ ಮಂಗಗಳಾಗುವುದು ಅಚ್ಚರಿಯ ಮಾತು.[49] ಅಂದರೆ ಒಟ್ಟಿನಲ್ಲಿ ಒಣ ಉರುವಲಿನೊಡನೆ ಹಸಿಯದೂ ಸುಟ್ಟು ಹೋಗುವಂತೆ ತಪ್ಪುಗಾರರೊಂದಿಗೆ ತಪ್ಪಿತಸ್ಥರಲ್ಲದವರೂ ಶಿಕ್ಷೆಗಳಿಗೆ ಗುರಿಯಾಗಲು ಕಾರಣ ಶಾಪಿತನೊಂದಿಗೆ ಇದ್ದ ಅವರ ನಂಟು.

ಭೀಷ್ಮ, ಯುಧಿಷ್ಠಿರ, ಕೃಷ್ಣ ಮೊದಲಾದವರೆಲ್ಲ ಹಲವರ ಬೈಗಳಗಳಿಗೆ ಈಡಾದವರು.

---

47. ಹತಪತ್ಯೋ ಹತಸುತಾ ಹತಬಂಧುಜನಪ್ರಿಯಾಃ ॥
ಬಹುಶೋಣಿತದಿಗ್ಧಾಂಗ್ಯೋ ಮುಕ್ತಕೇಶ್ಯೋ ರಜಸ್ವಲಾಃ ।
ಏವಂ ಕೃತೋದಕಾ ಭಾರ್ಯಾಃ ಪ್ರವೇಕ್ಷ್ಯಂತಿ ಗಜಾಹ್ವಯಮ್ ॥
—ಸಭಾ, ೮೦/೨೦-೨೧

48. ಶಾಪ, ಕ್ರ. ೩೩-೩೭.

49. ಶಾಪ, ಕ್ರ. ೯೩.

ಭೀಷ್ಮ ಎಲ್ಲಕ್ಕೂ ಹೆಚ್ಚಿಗೆ ಬೈಸಿಕೊಂಡವನು. ಅವನು ಪರರಲ್ಲದೆ ತನ್ನವರಿಂದಲೂ ಸಹಿಸಲಸಾಧ್ಯವಾದ ಮಾತುಗಳನ್ನು ಕೇಳಿಕೊಳ್ಳಬೇಕಾಯಿತು. ಈತ ತನ್ನ ತಂದೆ ಶಂತನು ವಿನ ಕಾಮದ ಹಸಿವನ್ನು ಹಿಂಗಿಸಲೆಂದು ತುಂಬುಯೌವನದಲ್ಲಿರುವಾಗಲೇ ಹೆಣ್ಣಿನ ಸುಖ ಹಾಗೂ ಅರಸೊತ್ತಿಗೆಗಳ ಮೇಲೆ ನೀರುಬಿಡಬೇಕಾಯಿತು. ಬದಲು ಅವನು ತಂದೆಯಿಂದ ಪಡೆದ ಪ್ರಶಸ್ತಿಯೆಂದರೆ ಇಚ್ಛಾಮರಣ. ಈ ವರವೇ ಅವನಿಗೆ ಒಂದು ಶಾಪದಂತೆ ಮುಳುವಾಯಿತು. ಕುರುವಂಶದ ಕುಡಿಯನ್ನು ಕಾಪಾಡುವುದರಲ್ಲೇ ಅವನ ಬಾಳು ಸವೆಯಿತು. ಅವನು ಕೌರವರನ್ನು ವೈಭವದ ಶಿಖರಕ್ಕೇರಿಸಿದನು. ಮುಂದೆ ಆ ಕೀರ್ತಿಶಿಖರ ನೆಲಕ್ಕುರುಳಿ ಮಣ್ಣುಪಾಲಾದುದನ್ನೂ ಸುಟ್ಟುಬೂದಿಯಾಗಿ ಮೂಲೆಗುಂಪಾದುದನ್ನೂ ಅವರ ಬಾಳು ಮುರಿದು ಮೂರಾಬಟ್ಟೆಯಾದುದನ್ನೂ ಕಾಣುವ ಹಣೆಬರಹ ಅವನ ದಾಯಿತು. ಇವೆಲ್ಲ ಸಂಗತಿಗಳಿಗೆ ಕಾರಣ ಅವನ ಇಚ್ಛಾಮರಣದ ವರ. ಇಲ್ಲದಿದ್ದರೆ ಅವನು ಉತ್ತರಾಯಣಕ್ಕಾಗಿ ಆಸೆಪಟ್ಟು ಶರಶಯ್ಯೆಯ ಮೇಲೆ ಬಿದ್ದುಕೊಂಡಿರಬೇಕಿರ ಲಿಲ್ಲ. ಬೇರೆ ಕಡುಗಲಿಗಳಂತೆಯೇ ದೇಹವಿಟ್ಟೊಡನೆಯೇ ಅವನಿಗೂ ಮೋಕ್ಷವು ದೊರೆಕ ಬಹುದಿತ್ತು. ಈ ವರದಿಂದಾಗಿ ಅವನು ಶರಪಂಜರದ ಮೇಲೆ ಐವತ್ತೆಂಟು ದಿನಗಳ ಕಾಲ ಬಿದ್ದುಕೊಂಡು ಇರಬೇಕಾಯಿತು. ಶಿಶುಪಾಲನು ಭೀಷ್ಮನಂತಹ ಅದ್ವಿತೀಯನೆನ್ನಿಸಿದ ಕಡುಗಲಿಯನ್ನು ಕ್ಲೀಬನೆಂದು ಹಳಿದನು. ಊರ್ವಶಿಯ ಅರ್ಜುನನಿಗೆ ಇತ್ತ 'ಷಂಡತ್ವ'ದ ಶಾಪವು ಅಜ್ಞಾತವಾಸದಲ್ಲಿರುವಾಗ ಅವನಿಗೆ ನೆರವಾಯಿತು.

## ಬಂಧುಬಳಗದವರ ಶಾಪಗಳು

ಯಾವ ಯಾವ ವ್ಯಕ್ತಿಗಳನ್ನು ಶಪಿಸಕೂಡದು—ಎಂಬ ಸಂಗತಿಯ ಬಗೆಗೆ ಕೆಲವು ಸಂಕೇತ ಗಳು ಇರುವಂತಿದೆ. ಸಾಮಾನ್ಯವಾಗಿ ಕಿರಿಯನಾದನು ತನಗಿಂತ ಹಿರಿಯನನ್ನು, ಶ್ರೇಷ್ಠ ನಾದವನನ್ನು ಶಪಿಸುವುದು ಸರಿಯಲ್ಲ. ಶ್ರೇಷ್ಠತೆ-ಕನಿಷ್ಠತೆಗಳು ಹಲವು ಬಗೆಯಾಗಿರಲು ಸಾಧ್ಯ. ದೇವರು, ಗುರುಗಳು, ಆಚಾರ್ಯರು, ತಾಯಿ-ತಂದೆಗಳು, ಜ್ಞಾನಿಗಳು, ತಪಸ್ವಿ ಗಳು, ಅಧಿಕಾರಿಗಳು, ರಾಜರುಗಳು, ಗೌರವಾನ್ವಿತ ವ್ಯಕ್ತಿಗಳು, ಸಾವಿನ ಹೊಸ್ತಿಲಲ್ಲಿರು ವವರು ಎಂಬ ಮೊದಲಾದ ವ್ಯಕ್ತಿಗಳನ್ನು ಶಪಿಸಲಾಗದು, ಅದು ನಿಷೇಧಾರ್ಹವಾದುದು. ಬೈಬಲ್ಲು ಕೂಡ ಕಿವುಡರು ಹಾಗೂ ನಿರಾಧಾರರಾದವರನ್ನು ಶಪಿಸುವುದನ್ನು ನಿಷೇಧಿಸು ತ್ತದೆ. ಮೂಡಣದ ಜನ ಮಾತ್ರ ತೀರ ಚಿಲ್ಲರೆಯಾದ ಕಾರಣಗಳಿಗಾಗಿ ಕೂಡ ದೇವತೆ ಗಳನ್ನಾಗಲಿ, ಹಿರಿಯರನ್ನಾಗಲಿ ತಪಿಸಲು ಹಿಂಜರಿದವರಲ್ಲ.[50] ಕೌಶಿಕನು ಇಂದ್ರನನ್ನು ಏಕೆ ಶಪಿಸಿದನೆಂಬುದು ಖಚಿತವಾಗಿ ತಿಳಿಯದು. ಆದರೆ ಅದರಿಂದಾಗಿ ಇಂದ್ರನ ವೃಷಣಗಳು ಕಳಚಿಬಿದ್ದುದಂತೂ ನಿಜ.[51] ಅಗ್ನಿಯು ಪುಲೋಮ ರಾಕ್ಷಸನಿಗೆ ಭೃಗುವಿನ ಮಡದಿಯನ್ನು ಕುರಿತು ಇದ್ದ ವಿವರಗಳನ್ನೆಲ್ಲ ಹೇಳಿಬಿಟ್ಟ ಕಾರಣ ಅವನ ಶಾಪಕ್ಕೆ ಗುರಿಯಾಗಿ ಸರ್ವ

**50. Orientals have a tendency to curse God even on the slightest provocation in daily life.**

—*Encyclopaedia of Religion and Ethics*, Vol IV, p 371.

51. ಕೌಶಿಕನಿಮಿತ್ತಂ ಚೇಂದ್ರೋ ಮುಷ್ಕವಿಯೋಗಂ ಮೇಷವೃಷಣತ್ವಂ ಚಾವಾಪ ।

—ಶಾಂತಿ, ೩೪೨/೨೩

ಭಕ್ಷಕನಾದನು.[52] ತಾನು ಪರೀಕ್ಷಿತರಾಜನಿಗೆ ಶಾಪವಿತ್ತುದನ್ನು ಶೃಂಗಿಯು ತನ್ನ ತಂದೆ ಶಮೀಕನಿಗೆ ಹೇಳುತ್ತಾನೆ. ಆದರೆ ಅವನಿಗಿದು ಹಿಡಿಸಲಿಲ್ಲ. ಹೀಗಾಗಿ ಅವನು, 'ರಾಜ ನನ್ನು ಶಪಿಸುವುದು ಸರಿಯಲ್ಲ' ಎಂದು ನುಡಿಯುತ್ತಾನೆ.[53] ಗುರುವನ್ನು ಶಪಿಸುವುದಂತೂ ಬಲು ನಿಂದನೀಯವಾದ ಅಪರಾಧ ಎನ್ನಿಸಿತ್ತು. ಸೌದಾಸರಾಜನು ವಸಿಷ್ಠರಿಂದ ಶಪಿತ ನಾದಾಗ ತಾನೂ ಅವರಿಗೆ ಮರುಶಾಪವನ್ನೀಯಲು ಹವಣಿಸಿದನು. ಆಗ ಅವನ ಮಡದಿ ದಮಯಂತಿ 'ಭಗವಾನ್ ವಸಿಷ್ಠ ಋಷಿಗಳು ನಮ್ಮ ಕುಲಪುರೋಹಿತರು. ಅವರನ್ನು ಶಪಿಸುವುದು ತರವಲ್ಲ' ಎಂದು ಹೇಳಿ ಅವನನ್ನು ತಡೆಯುತ್ತಾಳೆ.[54]

ಬೃಹದಶ್ವ ಯುಧಿಷ್ಠಿರನಿಗೆ ನಲೋಪಾಖ್ಯಾನವನ್ನು ಹೇಳಿದ್ದಾನೆ. ಅದರಲ್ಲಿ ಯಾರು ಯಾರನ್ನು ಶಪಿಸಕೂಡದೆಂಬ ಬಗೆಗೆ ಚರ್ಚೆಯಿದೆ. ದಮಯಂತಿಯು ದೇವತೆಗಳ ಹಾಜರಿ ಯಲ್ಲಿ ಒಬ್ಬ ಚಿಲ್ಲರೆ ಮನುಷ್ಯನನ್ನು ಮದುವೆಯಾದುದು ಕಲಿಗೆ ಹಿಡಿಸಲಿಲ್ಲ. ಹೀಗಾಗಿ ಅವನು ನಳನನ್ನು ಶಪಿಸಬೇಕೆಂದುಕೊಂಡನು. ಅದನ್ನು ಅರಿತ ದೇವತೆಗಳು, 'ನಳನು ಕಟ್ಟುನಿಟ್ಟಾಗಿ ಬ್ರಹ್ಮಚರ್ಯೆಯನ್ನು ಪಾಲಿಸಿದವನು ನಾಲ್ಕು ವೇದಗಳು, ಇತಿಹಾಸ, ಪುರಾಣಗಳನ್ನು ಓದಿಕೊಂಡವನು, ಧರ್ಮವನ್ನರಿತವನು. ಪಂಚಯಜ್ಞಗಳಿಂದ ಗೃಹ ದೇವತೆಗಳನ್ನು ಸಂತುಷ್ಟಗೊಳಿಸಿರುವನು. ಆತ ಅಹಿಂಸಾಪರಾಯಣ, ಸತ್ಯವಾದಿ ಹಾಗೂ ದೃಢವ್ರತಿಯಾದವನು ಆತ ದಕ್ಷನು, ಜ್ಞಾನಿ, ತಪಸ್ವಿ, ಶುಚಿಯಾದವನು, ಶಮದಮಾದಿ ಗುಣಸಂಪನ್ನನು. ಅವನನ್ನು ಶಪಿಸುವವರು ತಮ್ಮನ್ನೇ ಶಪಿಸಿಕೊಂಡು ಹಾಳಾಗದಿರ ಲಾರರು' ಎಂದು ಹೇಳುತ್ತಾರೆ.[55]

ಕಿರಿಯರು ಹಿರಿಯರನ್ನು ಶಪಿಸಿದ ಕೆಲವು ಉದಾಹರಣೆಗಳು ಮಹಾಭಾರತದಲ್ಲಿವೆ. ಬೇರೆ ಬೇರೆ ಕಾರಣಗಳಿಂದಾಗಿ ಅವು ಯಶಸ್ವಿಯಾಗಿಲ್ಲವೆನ್ನುವುದೂ ನಿಜ. ಕರ್ಣನ ಹುಟ್ಟಿನ ಗುಟ್ಟು ಮೊದಲೇ ತಿಳಿದುಬಂದಿದ್ದರೆ ಬಲುದೊಡ್ಡದಾದ ಮಾನವಸಂಹಾರ ವನ್ನು ತಪ್ಪಿಸಬಹುದಿತ್ತೆಂದು ಯುಧಿಷ್ಠಿರನು ಬಗೆದನು. ಇದಕ್ಕಾಗಿ ಅವನು ತನ್ನ ತಾಯಿ ಕುಂತಿಯನ್ನು ಶಪಿಸದೆ ಇಡಿಯ ನಾರಿಯ ಕುಲವನ್ನೇ ಶಪಿಸಿಬಿಟ್ಟನು. ಹೆಣ್ಣಿನ ಬಾಯಲ್ಲಿ

52. ಭೃಗುಣಾ ಮಹರ್ಷಿಣಾ ಶಪ್ತೋಽಗ್ನಿಃ ಸರ್ವಭಕ್ಷತ್ವಮುಪಾನೀತಃ ॥

—ಶಾಂತಿ, ೩೪೨/೫೫

53. ನ ಹ್ಯರ್ಹತಿ ನೃಪಃ ಶಾಪಮಸ್ಮತ್ತಃ । —ಆದಿ, ೪೧/೩೩

54. ವಸಿಷ್ಠೋ ಭಗವಾನೃಷಿಃ ಪ್ರತಿಶಪ್ತುಂ ನ ಶಕ್ಯಸ್ತ್ವಂ ದೇವತುಲ್ಯಂ ಪುರೋಧಸಮ್ ।

—ವಾಲ್ಮೀಕಿರಾಮಾಯಣ, ಉತ್ತರ, ೬೫/೩೦

55. ಯೋ ವೇದ ಧರ್ಮಾನಖಿಲಾನ್ ಯಥಾವಚ್ಚರಿತವ್ರತಃ ।
ಯೋಽಧೀತೇ ಚತುರೋ ವೇದಾನ್ ಸರ್ವಾನಾಖ್ಯಾನಪಞ್ಚಮಾನ್ ॥ ೮ ॥
ನಿತ್ಯಂ ತೃಪ್ತಾ ಗೃಹೇ ಯಸ್ಯ ದೇವಾ ಯಜ್ಞೇ ಧರ್ಮತಃ ।
ಅಹಿಂಸಾನಿರತೋ ಯಶ್ಚ ಸತ್ಯವಾದೀ ದೃಢವ್ರತಃ ॥ ೯ ॥
ಯಸ್ಮಿನ್ ದಾಕ್ಷ್ಯಂ ಧೃತಿರ್ಜ್ಞಾನಂ ತಪಃ ಶೌಚಂ ದಮಃ ಶಮಃ ।
ಧ್ರುವಾಣಿ ಪುರುಷವ್ಯಾಘ್ರೇ ಲೋಕಪಾಲಸಮೇ ನೃಪೇ ॥ ೧೦ ॥
ಏವಂ ರೂಪಂ ನಲಂ ಯೋ ವೈ ಕಾಮಯೇಚ್ಛಪಿತುಂ ಕಲೇ ।
ಆತ್ಮಾನಂ ಚ ಶಪೇನ್ಮೂಢೋ ಹನ್ಯಾದಾತ್ಮಾನಮಾತ್ಮನಾ ॥ ೧೧ ॥

—ವನ, ೫೮

ಮಾತು ತಡೆಯದಿರಲೆಂಬುದೇ ಆ ಶಾಪ.[56] ತಂದೆಯು ಸಾವಿನ ಗುಟ್ಟನ್ನು ಹೆಚ್ಚು ಕಾಲ ಬಚ್ಚಿಟ್ಟರೆ ತನ್ನ ಮಗ ಅಷ್ಟಾವಕ್ರನು ತನ್ನನ್ನು ಶಪಿಸದಿರಲಾರನೆಂಬ ಹೆದರಿಕೆ ಸುಜಾತೆಗಿತ್ತು.[57] ಅಶ್ವತ್ಥಾಮನು ವ್ಯಾಸರಿಗೆ ಮರುಶಾಪವನ್ನೀಯಲಿದ್ದನೆಂಬ ಒಂದು ಉಲ್ಲೇಖವೂ ಇದೆ.[58] ಅಗ್ನಿಯು ಶಾಪವನ್ನೀಯುವ ಸಾಮರ್ಥ್ಯವನ್ನು ಹೊಂದಿದ್ದನು. ಆದರೂ ಅವನು ಪೂಜ್ಯನಾದ, ಗೌರವಾನ್ವಿತನಾದ ಭೃಗುವನ್ನು ಶಪಿಸಲಿಲ್ಲ.[59] ಮಗನಾದವನು ತನ್ನ ತಾಯಿಯನ್ನು ಶಪಿಸುವುದು ತಪ್ಪು. ಆದರೆ ಅರುಣನು ವಿನತೆಗೆ ಶರತ್ತಿನ ಶಾಪವೆನ್ನಿತ್ತನು.[60] ವಿನತೆ ಶರತ್ತನ್ನು ಪಾಲಿಸಿ ಆ ಶಾಪದಿಂದ ಬಿಡುಗಡೆಹೊಂದಿದಳು. ತನ್ನ ಒಡಹುಟ್ಟಿದವನು ತನ್ನ ಹಾಗೆಯೇ ಬಾಳಿಡಿ ಅಂಗವಿಕಲನಾಗದಿರಲೆಂಬ ಕಳಕಳಿಯೇ ಇಲ್ಲಿ ಶಾಪಕ್ಕಿಂತ ಮುಖ್ಯವೆನ್ನಿಸಿದೆ.

ತಾಯಿತಂದೆಗಳೇ ತಮ್ಮ ಮಕ್ಕಳಿಗಿತ್ತ ಶಾಪಗಳ ಹಲವು ಉದಾಹರಣೆಗಳು ಮಹಾಭಾರತದಲ್ಲಿವೆ. ತಂದೆಯು ತನ್ನ ಮಗನಿಗೆ ಇತ್ತ ಶಾಪಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ. ಇಂಥ ಶಾಪಗಳು ಭೀಕರವಾದ ಪರಿಣಾಮಗಳನ್ನು ಉಂಟುಮಾಡುವಂಥವುಗಳು. ತಾಯಿತಂದೆಗಳು ಸಂತಮಹಂತರಿಂದ ನೀಡಲಾದ ಶಾಪಗಳನ್ನು ಪರಿಹರಿಸಬಲ್ಲರು. ಆದರೆ ತಾಯಿತಂದೆಗಳಿತ್ತ ಶಾಪಗಳನ್ನು ಸಂತಮಹಂತರೂ ಕೂಡ ಪರಿಹರಿಸಲಾರರು.[61] ತಂದೆಯು ಹರಕೆಯಿಂದಾಗಿ ಮನೆಗೆ ವೈಭವ ಪ್ರಾಪ್ತವಾಗುವುದು. ಆದರೆ ತಾಯಿಯ ಶಾಪದಿಂದ ಮನೆಯು ಅಸ್ತಿವಾರವೇ ಅಲ್ಲಾಡದಿರದು.[62] ತಾಯಿಯ ಶಾಪ ಅದೆಷ್ಟು ದಾಹಕವಾದುದೆಂಬುದನ್ನು ಕುರಿತು ಮಹಾಭಾರತದಲ್ಲಿಯೇ ಒಂದು ಉದಾಹರಣೆಯಿದೆ. ಕದ್ರುವು ತನ್ನ ಮಕ್ಕಳಿಗಿತ್ತ ಶಾಪವು ಬಲು ಕ್ರೂರವಾದುವೆಂದು ಬ್ರಹ್ಮದೇವನೇ ಒಪ್ಪಿಕೊಂಡಿರುವನು.[63] ಪ್ಲೇಟೋನ ಅಭಿಪ್ರಾಯದಂತೆ ತಾಯಿತಂದೆಗಳು ತಮ್ಮ ಮಕ್ಕಳಿಗಿತ್ತ ಶಾಪಗಳು ಬೇರಿನ್ನಾವ ಶಾಪಗಳಿಗಿಂತಲೂ ಹೆಚ್ಚು ಘಾತಕವಾದವುಗಳು. ತಂದೆತಾಯಿಗಳು ಮಾತುಮೀರುವವರೂ, ಅಲಕ್ಷ್ಯತೋರುವವರೂ ಆದ ತಮ್ಮ ಮಕ್ಕಳನ್ನು ಶಪಿಸಿದರೆ ಇಲ್ಲವೆ ಧಿಕ್ಕರಿಸಿದರೆ ಈ ಶಾಪ, ಧಿಕ್ಕಾರಗಳು ಈ ಮಕ್ಕಳನ್ನು ಬಾಳಿಡಿಯಷ್ಟೇ ಅಲ್ಲದೆ ತರುವಾಯದಲ್ಲೂ ಅಂದರೆ (ಕುಂಭೀಪಾಕ) ನರಕದಲ್ಲೂ ಬೆಂಬತ್ತಿಹೋಗದಿರಲಾರವು.[64]

ತಂದೆಗಳು ತಮ್ಮ ಮಕ್ಕಳಿಗಿತ್ತ ಶಾಪಗಳಿಗೆ ಅಂತಹ ಮಹತ್ವದ ಕಾರಣಗಳೇನೂ

---

56. ಶಾಪ, ಕ್ರ. ೯೯. 57. ಶಾಪ, ಕ್ರ. ೫೭. 58 ಶಾಪ, ಕ್ರ. ೪.
59. ಶಾಪ, ಕ್ರ. ೧೫. 60. ಶಾಪ, ಕ್ರ ೧೮.

61. If the saints curse you, the parents will cure you ; but if the parents curse you, the saints will not cure you.

—*Encyclopaedia of Religion and Ethics*, Vol IV, p. 370.

62. The blessings of the father establisheth the houses of children but the curse of the mother rooteth out the foundations

—*Encyclopaedia of Religion and Ethics*, Vol. IV, p. 370

63. ಶಾಪ, ಕ್ರ. ೧೭.

64. Curses and disgrace in this life and the hottest hell in the world hereafter are the penalties of the disobedient or neglectful child.

—*Encyclopaedia of Religion and Ethics*, Vol. IV, p. 370.

ಇಲ್ಲ. ಕಹೋಡನ ಮಗನು ಇನ್ನೂ ಬಸಿರಲ್ಲಿರುವಾಗಲೇ ತನ್ನ ತಂದೆಯ ಪಠಣದಲ್ಲಾದ ತಪ್ಪನ್ನು ತೋರಿಸಿಕೊಟ್ಟಿದ್ದಕ್ಕಾಗಿ ಬಾಳಿಡೀ 'ಅಷ್ಟಾವಕ್ರ'ನ ಅವಸ್ಥೆಯಲ್ಲಿರಬೇಕಾಯಿತು.[65] ಜಮದಗ್ನಿಯ ಮಕ್ಕಳಾದ ರುಮಣ್ವಾನ್, ಸುಷೇಣ, ವಸು ಹಾಗೂ ವಿಶ್ವಾವಸು ಇವರು ತಮ್ಮ ತಂದೆಯ ಅಪ್ಪಣೆಯಂತೆ ತಮ್ಮ ತಾಯಿಯಾದ ರೇಣುಕೆಯ ರುಂಡವನ್ನು ಕಡಿಯಲು ನಿರಾಕರಿಸಿದ್ದರಿಂದ ಅವನ ಶಾಪಕ್ಕೆ ಗುರಿಯಾದರು.[66] ಅದರಿಂದಾಗಿ ಅವರು ಪಶುಪಕ್ಷಿಗಳಂತೆಯೇ ಮಂದಬುದ್ಧಿಯವರಾದರು, ವಿಚಾರಶಕ್ತಿಯನ್ನು ಕಳೆದುಕೊಂಡರು. ಯದು, ತುರ್ವಸು, ದ್ರುಹ್ಯು ಹಾಗೂ ಅನು ಇವರು ತಂದೆಯಿಂದ ಮುಪ್ಪನ್ನು ಪಡೆದು ಅವನಿಗೆ ತಮ್ಮ ಯೌವನವನ್ನು ಕೊಡಲು ನಿರಾಕರಿಸಿದ್ದಕ್ಕಾಗಿ ಅವರೆಲ್ಲ ರಾಜ್ಯವನ್ನು ಕಳೆದುಕೊಳ್ಳುವುದು, ನಿರ್ವಂಶತೆ, ಮ್ಲೇಂಛ ರಾಜ್ಯದ ಪ್ರಾಪ್ತಿ, ಮುಪ್ಪು, ಹರೆಯದ ಮಕ್ಕಳ ಸಾವು, ಅಗ್ನಿಹೋತ್ರ ನಿಂತುಬಿಡುವುದು ಮೊದಲಾದ ಹಲವಾರು ಯಾತನೆಗಳಿಗೆ ಈಡಾದುದು ತಮ್ಮ ತಂದೆಯ ಶಾಪದಿಂದಾಗಿ.[67] ಉದ್ದಾಲಕನಂತೂ ತನ್ನ ಮಗನನ್ನು ನೇರವಾಗಿ ಯಮಸದನಕ್ಕೇನೆ ಅಟ್ಟಿದನು.[68] ತನ್ನ ತಂದೆಯ ಪೂಜಾಸಾಮಗ್ರಿಗಳು ಹೊಳೆಯಲ್ಲಿ ಹರಿದು ಹೊರಟಾಗ ಅವುಗಳನ್ನು ಹೊರತೆಗೆಯಲು ಮಗನ ಕೈಲಾಗದುದೇ ಈ ಶಾಪಕ್ಕೆ ಕಾರಣ. ವಿಶ್ವಾಮಿತ್ರನ ಮಕ್ಕಳು ಅವನ ಶಾಪಕ್ಕೀಡಾಗಿ 'ಚಾಂಡಾಲ'ರಾದರು.[69] ಒಡಹುಟ್ಟಿದವನ ಮಗನೆಂದರೆ ತನ್ನ ಮಗನಿದ್ದಂತೆಯೇ ಸರಿ, ಆದರೂ ದೇವಗುರುವೆನ್ನಿಸಿದ ಬೃಹಸ್ಪತಿಯು ಕೂಡ ಉತಥ್ಯನ ಮಗು ಬಸಿರಲ್ಲಿರುವಾಗಲೇ ಅದನ್ನು ಶಪಿಸುತ್ತಾನೆ. ಅದರಿಂದಾಗಿ ಅದು ಕುರುಡು ಮಗುವಾಗಿ ಹುಟ್ಟಿಬಂದಿತು. 'ದೀರ್ಘತಮ'ನೆಂಬ ಹೆಸರನ್ನು ಹೊತ್ತು ತನ್ನ ಹೆಸರಿಗೆ ತಕ್ಕಂತೆ ದೀರ್ಘಕಾಲ ಕತ್ತಲಲ್ಲೇ ಬಾಳಬೇಕಾಯಿತು. ಅವನು ಮಾಡಿದ ತಪ್ಪು ಯಾವುದು? ತನ್ನ ಚಿಕ್ಕಪ್ಪನು ತನ್ನ ಅತ್ತಿಗೆಯ ಮೇಲೆ ಅತ್ಯಾಚಾರವನ್ನೆಸಗಲು ಹವಣಿಸಿದಾಗ ಬಸಿರಲ್ಲಿದ್ದ ಈ ಮಗು ಆ ಸಂಭೋಗದಲ್ಲಿ ತಡೆಯನ್ನುಂಟುಮಾಡಿದುದೇ ತಪ್ಪು.[70]

ತಾಯಿಯ ಶಾಪ ಮಕ್ಕಳಿಗೆ ತಟ್ಟುವುದೋ ಇಲ್ಲವೋ ಎಂಬ ಸಂಗತಿಯನ್ನು ಕುರಿತು ಬೇರೆ ಬೇರೆ ಹೊತ್ತಗೆಗಳಲ್ಲಿ ಒಂದಕ್ಕೊಂದು ವಿರೋಧದ ಉಲ್ಲೇಖಗಳಿರುವುದು ಕಂಡುಬರುತ್ತದೆ. ಮಹಾಭಾರತದಲ್ಲಿ, ಕದ್ರುವು ತನ್ನ ಮಕ್ಕಳಾದ ಹಾವುಗಳಿಗಿತ್ತ ಶಾಪ ಮಾತ್ರವಿದೆ (ಕ್ರ : ೧೭). ತಾಯಿಯ ಈ ಶಾಪಕ್ಕೆ ಕಾರಣ ಮಕ್ಕಳು ತನ್ನ ಮಾತು ಕೇಳದಿರುವುದು. ಅವಳು ತನ್ನ ಮಕ್ಕಳಿಗಿತ್ತ ಅಪ್ಪಣೆಯೇ ತಪ್ಪಾದುದು, ಸತ್ಯಕ್ಕೆ ದೂರವಾದುದು. ತನ್ನ ತಪ್ಪನ್ನು ಬಚ್ಚಿಡಲೆಂದು ಅವಳು ತನ್ನ ಮಕ್ಕಳಿಗೆ ತಪ್ಪಾಗಿ ನಡೆದುಕೊಳ್ಳುವಂತೆ ಅಪ್ಪಣೆಯನ್ನು ವಿಧಿಸಿದ್ದಳು. ಅವರು ಅವಳ ಅಪ್ಪಣೆಯನ್ನು ಮೀರಿದರು. ಹೀಗಾಗಿ ಅವಳು 'ಜನಮೇಜಯನ ಸರ್ಪಯಜ್ಞದ ಕಾಲಕ್ಕೆ ಅಗ್ನಿಯು ನಿಮ್ಮನ್ನು ನುಂಗಿಬಿಡಲಿ' ಎಂದು ಅವರನ್ನು ಶಪಿಸುತ್ತಾಳೆ.[71] ಅವಳ ಈ ಕಠೋರವಾದ ನುಡಿಯನ್ನು ಆಲಿಸಿದ ವಾಸುಕಿ ತುಂಬ ಕಳವಳಕ್ಕೀಡಾದನು. ಅವನು ಅವಳ ಶಾಪ ಹುಸಿಯಾಗಲೆಂದು ಬಯಸಿ

---

65. ಶಾಪು, ಕ್ರ ೫೫. 66. ಶಾಪ, ಕ್ರ. ೫೪. 67. ಶಾಪ, ಕ್ರ. ೩೩-೩೬.
68. ಶಾಪ, ಕ್ರ. ೧೩. 69. ಶಾಪ, ಕ್ರ. ೧೧೭. 70. ಶಾಪ, ಕ್ರ. ೩೮.
71. ಸರ್ಪಸತ್ರೇ ವರ್ತಮಾನೇ ಪಾವಕೋ ವಃ ಪ್ರಧಕ್ಷ್ಯತಿ । —ಆದಿ, ೨೦/೮

ದನಾದರೂ ಹಾಗಾಗುವುದು ಅಸಾಧ್ಯವೇ ಆಗಿತ್ತು. ಇನ್ನಾವ ಶಾಪವಾದರೂ ಆಗಿದ್ದರೆ ಅದನ್ನು ಶಮಿಸಬಹುವುದಿತ್ತೇನೋ. ಆದರೆ ತಾಯಿಯ ಶಾಪಕ್ಕೆ ಶಮನವಿಲ್ಲ ಎಂಬು ದನ್ನು ಅವನು ಚೆನ್ನಾಗಿಯೇ ಅರಿತವನು.[72] ತಾಯಿಯ ಶಾಪದಿಂದ ಬಿಡುಗಡೆಯಿಲ್ಲ. ಅದರ ಪರಿಣಾಮವನ್ನು ಮಾರ್ಪಡಿಸಲಾಗದು, ತಪ್ಪಿಸಲಾಗದು. ಹಾವುಗಳೆಲ್ಲ ಸರ್ಪ ಯಜ್ಞದಲ್ಲಿ ಆಹುತಿಗೊಂಡು ಕದ್ರುವಿನ ಶಾಪ ನಿಜವಾಯಿತು.

ತಾಯಿಯ ಶಾಪ ಮಕ್ಕಳಿಗೆ ತಟ್ಟಿದೆಂಬ ಒಂದು ಕಥೆ ವಿಷ್ಣುಪುರಾಣದಲ್ಲಿದೆ. ವಿಶ್ವ-ಕರ್ಮನ ಮಗಳಾದ ಸಂಜ್ಞೆ ಸೂರ್ಯನ ಮಡದಿ. ಸೂರ್ಯನಿಂದಾಗಿ ಅವಳ ಒಡಲಲ್ಲಿ ಯಮ ಮುಂತಾದ ಮೂರು ಜನ ಮಕ್ಕಳು ಹುಟ್ಟಿದರು. ಸೂರ್ಯನ ತೇಜಸ್ಸನ್ನು ಸಹಿಸುವುದು ಅವಳಿಂದ ಆಗುತ್ತಿರಲಿಲ್ಲ. ಹೀಗಾಗಿ ಅವಳು ತನ್ನಂತೆ ಕಾಣುವವಳಾದ ಛಾಯೆ ಎನ್ನುವವಳನ್ನು ನಿರ್ಮಿಸಿಟ್ಟು ತಾನು ಮಾತ್ರ ತಪಸ್ಸಿಗೆಂದು ಕಾಡಿಗೆ ತೆರಳಿ ದಳು. ಸೂರ್ಯನಿಗೆ ಛಾಯೆಯಿಂದಲೂ ಮೂರು ಮಕ್ಕಳಾದವು, ಇಷ್ಟಾಗಿಯೂ ಸೂರ್ಯನಿಗೆ ಅವಳು ಸಂಜ್ಞೆಯಲ್ಲಾಗಿರದೆ ಛಾಯೆಯಾಗಿರುವಳೆಂಬುದರ ಅರಿವೇ ಇರಲಿಲ್ಲ. ಒಂದು ದಿನ ಯಮನ ಕಾಲು ಛಾಯೆಗೆ ತಗಲುತ್ತಲೆ ಅವಳು 'ನಿನ್ನ ಕಾಲು ಉದುರಿ ಬೀಳಲಿ' ಎಂದು ಅವನನ್ನು ಶಪಿಸಿದಳು.[73] ಅವಳ ಶಾಪ ಯಮನಿಗೆ ತಟ್ಟಿತು. ಹೀಗಾಗಿ ಅವಳು ಸಂಜ್ಞೆಯಾಗಿರದೆ ಇನ್ನಾವಳೋ ಆಗಿರುವಳೆಂಬ ಸಂಗತಿ ಸೂರ್ಯನ ಗಮನಕ್ಕೆ ಬಂದಿತು. ಛಾಯೆಯು ನಡೆದುದನ್ನು ಅವನಿಗೆ ಅರುಹಿದಳು.

ಛಾಯೆಯ ಶಾಪ ಯಮನಿಗೆ ತಟ್ಟಿತೆಂದಬಳಿಕ ಅವಳು ಅವನ ತಾಯಿಯಲ್ಲ ಎಂಬ ಸೂರ್ಯನ ಲೆಕ್ಕ ಮುಖ್ಯವಾದದ್ದು. ಅಂದರೆ ತಾಯಿ ನೀಡಿದ ಶಾಪ ಮಗನಿಗೆ ತಟ್ಟದು ಎಂದರ್ಥ. ಡಬ್ಲ್ಯು. ಜೆ. ವಿಲ್ಕಿನ್ಸ್ ಇದನ್ನು ಕುರಿತು ಹೀಗೆನ್ನುತ್ತಾನೆ—

'For years Surya did not notice the change in wife, but one day in a fit of anger, Chhaya pronounced a curse on Yama, a child of Sanjnya which immediately took effect. As Surya knew that no mother's (curse) could destroy her offspring, he looked into the matter and discovered that his wife Sanjnya has forsaken him, leaving this other woman in her place.'

—*Indian Mythology*, **pp. 34–35**

ಶಾಪದ ಅಭ್ಯಾಸದ ದೃಷ್ಟಿಯಿಂದ ಈ ನಿವೇದನೆ ಬಲು ಮುಖ್ಯ. ಮಹಾಭಾರತ ಹಾಗೂ ವಿಷ್ಣುಪುರಾಣಗಳಲ್ಲಿಯ ಉದಾಹರಣೆಗಳು ಹಾಗೂ ಅವುಗಳ ವಿವರಣೆಗಳು ಒಂದಕ್ಕೊಂದು ವಿರೋಧಿಯಾದವುಗಳು.

ಕೌಸಲ್ಯೆಯು ರಾಮನನ್ನು ಉದ್ದೇಶಿಸಿ ಆಡಿದ ನುಡಿಗಳು ಶರತ್ತಿನವು. ಶರತ್ತನ್ನು

---

72. ಸರ್ವೇಷಾಮೇವ ಶಾಪಾನಾಂ ಪ್ರತಿಘಾತೋ ಹಿ ವಿದ್ಯತೇ ।
ನ ತು ಮಾತ್ರಾಭಿಶಪ್ತಾನಾಂ ಮೋಕ್ಷಃ ಕ್ವಚನ ವಿದ್ಯತೇ ॥ —ಆದಿ, ೩೭/೪

73. ಛಾಯಾಸಂಜ್ಞಾ ದದೌ ಶಾಪಂ ಯಮಾಯ ಕುಪಿತಾ ಯದಾ ।
ತದಾಽನ್ಯೇಯಮಸೌ ಬುದ್ಧಿರಿತ್ಯಾಸೀದ್ಯಮಸೂರ್ಯಯೋಃ ॥
—ವಿಷ್ಣುಪುರಾಣ, ತೃತೀಯಾಂಶ/೨

ಪಾಲಿಸುತ್ತಲೇ ಶಾಪ ತನ್ನ ಪರಿಣಾಮವನ್ನು ಕಳೆದುಕೊಳ್ಳುತ್ತದೆ. ಶರತ್ತನ್ನು ಮೀರಿದರೆ ಮಾತ್ರ ಶಾಪದ ಪರಿಣಾಮವನ್ನು ಅನುಭವಿಸದೆ ಬೇರೆ ವಿಧಿಯಿಲ್ಲ. ರಾಮ ವನವಾಸಕ್ಕೆ ಹೋಗಕೂಡದೆಂದು ಕೌಸಲ್ಯೆ ತುಂಬ ಆಸೆಪಟ್ಟಳು. ಅವಳು ಅವನನ್ನು ಅವನ ನಿರ್ಧಾರದಿಂದ ದೂರವಿರಿಸಲು ಬಗೆಬಗೆಯಾಗಿ ಹೆಣಗಿದಳು. ಆದರೆ ಆವಳ ಮಾತುಗಳು ಶ್ರೀರಾಮನ ಮೇಲೆ ಅದಾವುದೇ ಪರಿಣಾಮವನ್ನು ಬೀರಲಿಲ್ಲ. ಕೊನೆಗೆ ಅವಳು ನಿರುಪಾಯಳಾಗಿ, 'ನೀನು ನನ್ನ ಮಾತನ್ನು ಮೀರಿದೆಯಾದರೆ ನರಕಕ್ಕೆ ಹೋಗುವಿ'[74] ಎಂದು ನುಡಿಯುತ್ತಾಳೆ. ಕೌಸಲ್ಯೆಯ ಈ ನುಡಿಯೆಂದರೆ ಒಂದು ಶಾಪವೇ ಆಗಿದೆ; ಶರತ್ತಿನಿಂದ ಕೂಡಿದುದು ಅಷ್ಟೆ. ಅವನು ಈ ಶರತ್ತನ್ನು ಪಾಲಿಸಲಿಲ್ಲ. ಹೀಗಾಗಿ ಅವನಿಗೆ ನರಕ ತಪ್ಪಿರಲಿಲ್ಲ. ಆದರೆ ಅವನು ತೆರಳಿದ್ದು ಮಾತ್ರ ಸ್ವರ್ಗಕ್ಕೆ. ಸ್ವರ್ಗದಲ್ಲಿ ಬ್ರಹ್ಮದೇವನಂತಹ ದೇವತೆಗಳೆಲ್ಲ ಅವನನ್ನು ಬರಮಾಡಿಕೊಳ್ಳಲು ಸಿದ್ಧರಾಗಿಯೇ ಇದ್ದರು. ಈ ಸಂಗತಿಯನ್ನು ಕುರಿತಾದ ಉಲ್ಲೇಖ ಇರುವುದು ಉತ್ತರಕಾಂಡ/೧೧೦ರಲ್ಲಿ. ಇದರಿಂದಾಗಿ ತಿಳಿದುಬರುವ ಸಂಗತಿ ಎಂದರೆ ತಾಯಿಯ ಶಾಪ ಮಗನಿಗೆ ತಟ್ಟಿದುದು ಎಂಬುದು. ಇಲ್ಲವೆ ಇದೇ ಸಂಗತಿಯನ್ನು ಬೇರೊಂದು ಬಗೆಯಾಗಿ ಅರ್ಥೈಸುವುದಾದರೆ ಕೌಸಲ್ಯೆಯ ನುಡಿ ಶಾಪವಾಗಿರದೆ ಮಗ ಶ್ರೀರಾಮನ ಬಗೆಗಿನ ಮಮತೆಯಿಂದಾಗಿ ಹುಟ್ಟಿಕೊಂಡ ದುಗುಡದ ಉದ್ಗಾರ ಎಂದೆನ್ನಬೇಕಷ್ಟೆ.

## ಆಣೆ

ಶಾಪ, ಶಪಥ(ಇಲ್ಲವೆ ಆಣೆ)ಗಳು ಹುಟ್ಟಿದುದು ಶಪ್ ಎಂಬ ಒಂದು ಧಾತುವಿನಿಂದ. ಭಾರತೀಯ ಸಂಸ್ಕೃತಿ ಕೋಶದಲ್ಲಿ ಈ ಪದವನ್ನು ಕುರಿತಾದ ವ್ಯಾಖ್ಯೆಯನ್ನು ನೀಡಲಾಗಿದೆ. ಅದೆಂದರೆ, 'ತನ್ನ ನುಡಿ ನಿಜವಾಗಿದ್ದು ಅದು ಸುಳ್ಳೆಂದು ಸಿದ್ಧವಾದರೆ ತಾನು ಅರಿಷ್ಟಗಳಿಗೀಡಾಗುವೆನೆಂದು ಸಾರಿಹೇಳುವ ನುಡಿಯೇ ಶಪಥ/ಆಣೆ.'[75] ವೆಸ್ಟರ್‌ಮಾರ್ಕನು ತನ್ನದಾದ ಒಂದು ವ್ಯಾಖ್ಯೆಯನ್ನು ನೀಡಿದ್ದಾನೆ. 'ನನ್ನ ನುಡಿ ಸುಳ್ಳಾದರೆ ನಾನು ಇಂಥಿಂಥ ವಿಪತ್ತುಗಳಿಗೆ ಒಳಗಾಗುವೆನೆಂದು ಸಾರುವ ಒಂದು ಬಗೆಯ ಶಾಪವೆಂದರೆ ಈ ಶಪಥ/ಆಣೆ' ಎಂಬುದು.[76] ಒಡ್ ಎನ್ನುವವನು, 'ಒಬ್ಬ ದೇವತೆ ಇಲ್ಲವೆ ಒಂದು ಪವಿತ್ರವಾದ ವಸ್ತುವನ್ನು ಆವಾಹನೆ ಮಾಡಿ ತನ್ನ ನುಡಿಯ ಸತ್ಯತೆ ಹಾಗೂ ದೃಢತೆಗಳನ್ನು ಮನಗಾಣಿಸುವುದೇ ಆಣೆ' ಎಂಬ ವ್ಯಾಖ್ಯೆಯನ್ನು ನೀಡಿದ್ದಾನೆ. ಇವೆಲ್ಲ ವ್ಯಾಖ್ಯೆಗಳಿಂದ ಆಣೆಯ ಘಟಕಗಳನ್ನು ಅರಿತುಕೊಳ್ಳಬಹುದೇನೋ ನಿಜ. ಆದರೆ ಈ ವ್ಯಾಖ್ಯೆಗಳೆಲ್ಲ

---

74. ತತಸ್ತ್ವಂ ಪ್ರಾಪ್ಸ್ಯಸೇ ಪುತ್ರಂ ನಿರಯಂ ಲೋಕವಿಶ್ರುತಮ್ ।
ಬ್ರಹ್ಮಹತ್ಯಾಮಿವಾಧರ್ಮಾತ್ಸಮುದ್ರಃ ಸರಿತಾಂ ಪತಿಃ ॥
—ವಾಲ್ಮೀಕಿರಾಮಾಯಣ, ಅಯೋಧ್ಯಾ, ೨೧/೨೮

75. ಭಾರತೀಯ ಸಂಸ್ಕೃತಿ ಕೋಶ, ಖಂಡ ೯, ಪು. ೨೧೫.

76. **An oath may be regarded as essentially conditional self-imprecation, a curse by which a person calls down upon himself some evil in the event of what he says not being true.**
—***Encyclopaedia of Religion and Ethics*, Vol.IV, p 373.**

ಅವ್ಯಾಪ್ತಿಗೆ ದೋಷಕ್ಕೊಳಪಟ್ಟಿವೆ. ಇವು ಎಲ್ಲ ಬಗೆಯ ಆಣೆಗಳನ್ನು ತಮ್ಮೊಳವಿಗೆ ತಂದುಕೊಳ್ಳಲಾರದವು. ದ್ರೋಣ, ದುರ್ಯೋಧನ, ದಮಯಂತಿ ಹಾಗೂ ಅಶ್ವತ್ಥಾಮ ದುರ್ಯೋಧನರು ಕೊನೆಯುಸಿರು ಎಳೆಯುವಾಗ ಆಣೆಗಳನ್ನು ಮಾಡಿದ್ದಾರೆ. ಆದರೆ ಇವರಾರೂ ತಮ್ಮ ಮೇಲೆ 'ಅರಿಷ್ಟವನ್ನು ಬರಮಾಡಿಕೊಂಡೆ'ವೆಂದು ಹೇಳಿಲ್ಲ. ಶಿಖಂಡಿ ಭೀಷ್ಮನನ್ನು ಕೊಲ್ಲುವೆನೆಂದು ಮಾಡಿದ ಆಣೆಯಲ್ಲಿ 'ಶಾಪವನ್ನು' ಬರಮಾಡಿಕೊಂಡಿಲ್ಲ. ಅಂಬೆಯ ಆಣೆ ಕೂಡ ಶಾಪವಿಲ್ಲದುದು. ಭೀಮನು ಹಿಡಿಂಬೆಯನ್ನು ಮದುವೆಯಾಗುವೆ ನೆಂದು ಆಣೆಯ ಮೇಲೆ ಅವಳಿಗೆ ಮಾತುಕೊಡುತ್ತಾನೆ. ಆದರೆ ಅವನು ದೇವತೆಗಳನ್ನು ಮಾತ್ರ ಆವಾಹನೆ ಮಾಡುವ ಗೋಜಿಗೆ ಹೋಗಲಿಲ್ಲ. ಯುಧಿಷ್ಠಿರನು ಪುರಜನರಿಗೆ ಹಿಂತಿರುಗಿ ಹೋಗಲು ಆಣೆ ಹಾಕಿದ್ದಾನೆ. ಆದರೆ ಇಲ್ಲಿ ಕೂಡ ಅವನು ತನ್ನ ಮೇಲೆ ಅರಿಷ್ಟವನ್ನು ಬರಮಾಡಿಕೊಂಡುದಾಗಲಿ, ದೇವತೆಗಳನ್ನು ಆವಾಹಿಸಿದ್ದಾಗಲಿ ಇಲ್ಲ.[77]

ಬಹುಮಟ್ಟಿಗೆ ಆಣೆಗಳಲ್ಲೆಲ್ಲ ಸತ್ಯತೆಯ ಉಲ್ಲೇಖ ಇರುವುದುಂಟು. ಸತ್ಯತೆಯನ್ನು ಮನಗಾಣಿಸುವುದೇ ಆಣೆಯ ಮುಖ್ಯ ಉದ್ದೇಶ. ಆಣೆಯಿಟ್ಟು ಹೇಳುವಲ್ಲಿ ತನ್ನ ಮಾತಿನ ನೈಜತೆ, ತನ್ನ ಸಾಮರ್ಥ್ಯ, ತನ್ನ ನಿಷ್ಕಲಂಕವಾದ ಶೀಲ, ತನ್ನ ಅವ್ಯಭಿಚಾರಿಯಾದ ಪಾತಿವ್ರತ್ಯಗಳನ್ನು ಸಿದ್ಧಪಡಿಸಿ ತೋರಿಸುವುದು ಮುಖ್ಯ ಗುರಿಯಾಗಿರುತ್ತದೆ. ಆತ್ಮ ವಿಶ್ವಾಸವಿಲ್ಲದಿದ್ದರೆ ಮನಸ್ಸು ಆಣೆಯಿಡಲು ಅಣಿಯಾಗಲಾರದು. ಕೆಲವು ಆಣೆಯ ಮಾತುಗಳಲ್ಲಿ ದೇವರು, ಧರ್ಮಗ್ರಂಥಗಳು, ಗೌರವಾನ್ವಿತರಾದ ವ್ಯಕ್ತಿಗಳು, ಪವಿತ್ರ ವೆನ್ನಿಸಿದ ವಸ್ತುಗಳು ಉಲ್ಲೇಖಿಸಲ್ಪಡುತ್ತವೆ. ಅದೇ ರೀತಿಯಾಗಿ ತನ್ನ ಸ್ವಂತದ ಇಲ್ಲವೆ ತನ್ನ ಪ್ರಿಯ ವ್ಯಕ್ತಿಯ ಪ್ರಾಣ, ದೇಹ ಇಲ್ಲವೆ ಅವರ ಅವಯವಗಳಾದ ತಲೆ, ಕಾಲು ಮೊದಲಾದುವುಗಳನ್ನು ಉಲ್ಲೇಖಿಸುವುದರಿಂದ ಅವು ಆಣೆಗೆ ಸತ್ಯತೆಯ ಆಧಾರವನ್ನು ಒದಗಿಸಬಲ್ಲವು. ಅಂದಮಾತ್ರಕ್ಕೆ ಇಂಥ ಸಂಗತಿಗಳು ಆಣೆಯ ಮಾತಿನ ಅವಿಭಾಜ್ಯ ಅಂಗಗಳೆಂದಾಗಲಿ. ಅದರ ವ್ಯವಚ್ಛೇದಕ ಲಕ್ಷಣಗಳೆಂದಾಗಲಿ ಅಲ್ಲ. ಧೃತರಾಷ್ಟ್ರ-ಗಾಂಧಾರಿಯರು ವನವಾಸಕ್ಕೆಂದು ಹೊರಟು ನಿಂತಾಗ ಯುಧಿಷ್ಠಿರನು ಅವರೆದುರು ಮಾಡಿದ ಆಣೆಯಲ್ಲಿ ಸತ್ಯದ ಉಲ್ಲೇಖವಷ್ಟೇ ಇದೆ. ಆಣೆಯಲ್ಲಿ ತನ್ನ ಮೇಲಿನ ನೈತಿಕ ಹೊಣೆಗಾರಿಕೆಗೆ ಮುಖ್ಯವಾದ ಸ್ಥಾನವಿರುತ್ತದೆ. ಕರಾರು, ಜಿದ್ದು, ವ್ರತ, ಸತ್ಯಕ್ರಿಯೆ, ಪಣ ಮೊದಲಾದವುಗಳ ಮೂಲದಲ್ಲಿ ಆಣೆ ಇದ್ದೇ ಇರುತ್ತದೆ. ವ್ರತ, ಸತ್ಯಕ್ರಿಯೆ ಹಾಗೂ ಪಣಗಳಲ್ಲಿ ನೈತಿಕ ಹೊಣೆ ಮುಖ್ಯ. ಕರಾರು, ಜಿದ್ದುಗಳಲ್ಲಿ ಕೊಟ್ಟ ಮಾತಿಗೆ ತಪ್ಪದಿರುವ ಮಟ್ಟಿಗೆ ಮಾತ್ರ ಆಣೆಯು ಸೀಮಿತವಾದದ್ದು.

ಆಣೆಯ ಮೂಲಸ್ವರೂಪವು ಯಾತ್ವಾತ್ಮಕವಾದುದು. ಆಣೆಯ ಪದಗಳಲ್ಲಿಯೇ ಅದರ ಸಾಮರ್ಥ್ಯ ಹುದುಗಿರುವಂಥದು. ಎಷ್ಟೋ ಸಲ ಆಣೆ ಹಾಗೂ (ಅಭಿಚಾರದಿಂದ ಕೂಡಿದ) ಶಾಪ ಇವೆರಡೂ ಪದಗಳನ್ನು ಸಮಾನಾರ್ಥದಲ್ಲಿ ಬಳಸಲಾಗುತ್ತದೆ. ಅವುಗಳ ಸ್ವರೂಪ ಒಂದಲ್ಲ. ಅವುಗಳಲ್ಲಿ ಅಷ್ಟೊಂದು ಹೋಲಿಕೆಯೂ ಇಲ್ಲವಲ್ಲದೆ ವ್ಯತ್ಯಾಸವೇ ಹೆಚ್ಚಿಗಿದೆ. ಆಣೆ ಒಂದು ಬಗೆಯ ಭರವಸೆಯೆನ್ನಿಸಿದ್ದು ಶಾಪ ಒಂದು ಶಿಕ್ಷೆಯೆನ್ನಿಸಿವೆ. ಆಣೆಯು ಶಾಪವನ್ನೊಳಗೊಂಡಿರುವುದಾದರೂ ಶಾಪವು ಆಣೆಯನ್ನು ಒಳಗೊಂಡಿರದು.

---

77. ವನಪರ್ವ, ೧/೩೭.

ಆಣೆಯಲ್ಲಿರುವ ಶಾಪದ ಶಿಕ್ಷೆಯು ಮುಖ್ಯವಾಗಿ ಅದನ್ನು ಕೈಕೊಳ್ಳುವವನ ಮಟ್ಟಿಗೆ ಸೀಮಿತವಾಗಿದ್ದು, ಶಾಪದ ಶಿಕ್ಷೆಯು ಇನ್ನೊಬ್ಬರಿಗಾಗಿ ಇರುವಂಥದು. ಶಾಪವನ್ನೀಯುವ ಸಾಮರ್ಥ್ಯವನ್ನು ಹೊಂದಲು ದೊಡ್ಡದಾದ ತಪಸ್ಸನ್ನಾಚರಿಸಬೇಕಿದೆ. ಆಣೆ ಮಾಡಲು ಅದರ ಅಗತ್ಯವಿಲ್ಲ. ಶಾಪವನ್ನೀಯುವುದರಿಂದ ತಪಸ್ಸಿನ ಸಾಮರ್ಥ್ಯ ಕುಗ್ಗುತ್ತದೆ. ಆಣೆಯಲ್ಲಿ ಹಾಗಾಗದು. ಶಾಪಕ್ಕೆ ಉಃಶಾಪ ಇರಲು ಸಾಧ್ಯ. ಆಣೆಯಿಂದ ಮಾತ್ರ ಬಿಡುಗಡೆ ಎಂಬುದಿಲ್ಲ. ಶಾಪವು ತಿರುಗುಮುರುಗಾಗುವ ಹೆದರಿಕೆಯಿರುವಂತೆ ಆಣೆ ತಿರುಗುಮುರುಗಾಗದು. ವರ್ಣಗಳಿಗೆ ತಕ್ಕಂತೆ ಆಣೆಗಳು ಬೇರೆಬೇರೆಯಾಗಿರುವಂತೆ ಇಂತಹ ವರ್ಣಭೇದ ಶಾಪಗಳಲ್ಲಿಲ್ಲ. 'ಆಣೆಯು ತನ್ನ ಮಾಧ್ಯಮದಿಂದಾಗಿ ಪ್ರಭಾವಿಯೆನ್ನಿಸುವಂತೆ ಶಾಪವು ತಪಸ್ಸಿನಿಂದಾಗಿ ಪ್ರಭಾವಿಯೆನ್ನಿಸುವುದು' ಎಂದು ಭಾರತೀಯ ಸಂಸ್ಕೃತಿ ಕೋಶಕಾರರು ಆಣೆ-ಶಾಪಗಳ ವ್ಯತ್ಯಾಸವನ್ನು ಎತ್ತಿತೋರಿದ್ದಾರೆ.[78]

ಆಣೆಯಿಟ್ಟು ಹೇಳಲು ಯಾವುದೇ ಬಗೆಯ ಅಧಿಕಾರದ ಅಗತ್ಯವಿಲ್ಲ, ಯಾರು ಬೇಕಿದ್ದರೂ ಆಣೆ ಮಾಡಬಹುದು, ಇನ್ನೊಬ್ಬನಿಗೆ ಆಣೆ ಹಾಕಬಹುದು. ಹೀಗಾಗಿ ಆಣೆಯನ್ನು ಬಲು ಎಚ್ಚರದಿಂದ ಬಳಸಲಾಗುತ್ತದೆ. ಭೀಷ್ಮನು ಆಣೆಯ ಸಾಮರ್ಥ್ಯವನ್ನು ಕುರಿತು ಯುಧಿಷ್ಠಿರನಿಗೆ ಈ ರೀತಿಯಾಗಿ ಹೇಳಿದ್ದಾನೆ; 'ಬಲುಕ್ರೂರರು ಹಾಗೂ ಪಾಪದ ಕೆಲಸಗಳನ್ನೆಸಗಿದವರು ಕೂಡ ತಮ್ಮ ಸಂಗಡಿಗರೆದುರು ತಾವು ಮಾಡಿದ ಆಣೆಗಳನ್ನು ಪಾಲಿಸುವರು. ಅವುಗಳನ್ನು ಮೀರದೆ ಅವರು ತಮ್ಮ ವ್ಯವಹಾರಗಳನ್ನು ಸರಿಯಾಗಿಯೇ ಸಾಗಿಸಿಕೊಂಡು ಹೋಗುವರು.[79] 'ತನಗಾಗಿ ವೈಭವವನ್ನು ಪಡೆಯ ಬಯಸುವ ರಾಜನು ಕೂಡ ಹೊತ್ತುಬಂದಾಗ ತನ್ನ ವೈರಿಯ ಎದುರಿನಲ್ಲೂ ಕೈ ಜೋಡಿಸತಕ್ಕದ್ದು, ಆಣೆಯಿಟ್ಟು ಹೇಳತಕ್ಕದ್ದು, ಭರವಸೆಯ ಮಾತುಗಳನ್ನಾಡತಕ್ಕದ್ದು, (ಇಷ್ಟೇ ಸಾಲದೆಂಬಂತೆ) ತಲೆತಗ್ಗಿಸಲೂ ಬೇಕು.'[80] ಆಣೆಯ ಸಾಮರ್ಥ್ಯ ಇರುವುದು ಅದರ ಸತ್ಯತೆಯಲ್ಲಿ. ಹೀಗಾಗಿ ಈ ಸತ್ಯತೆಗೆ ಬಾಧೆ ತಟ್ಟಕೂಡದು. ಸುಳ್ಳು ಆಣೆ ಹೇಳುವುದು ಸರಿಯಲ್ಲ. ಸುಳ್ಳು ಆಣೆಯಿಟ್ಟರೆ ಪಾಪ ತಗಲುತ್ತದೆ ಎಂಬ ನಂಬಿಕೆ ಇದೆ. ಹಿಂದುಗಳಿಗೆ ಹಸುವೆಂದರೆ ಬಲುಪವಿತ್ರವಾದ ಪ್ರಾಣಿ. ಹಸುವಿನ ಮೇಲೆ ಆಣೆಯಿಟ್ಟು ಹೇಳಿ ಆ ಮಾತಿಗೆ ತಪ್ಪಿದರೆ ಆಣೆ ಮಾಡುವವನು ಘೋರವಾದ ಪಾಪಕ್ಕೆ ಒಳಗಾಗುತ್ತಾನೆ. ಭೀಷ್ಮನು ಯುಧಿಷ್ಠಿರನಿಗೆ ಹಸುವಿನ ಮೇಲೆ ಸುಳ್ಳು ಆಣೆಯಿಡುವುದರಿಂದ ಅನುಭವಿಸಬೇಕಾಗಿಬರುವ ಪಾತಕಗಳನ್ನು ಕುರಿತು ಸವಿಸ್ತಾರವಾಗಿ ಹೇಳಿದ್ದಾನೆ.[81] ಆದರೂ ಕೆಲವೊಂದು ಅಪರಿಹಾರ್ಯವಾದ ಸನ್ನಿವೇಶಗಳಲ್ಲಿ ಸುಳ್ಳು ಆಣೆಮಾಡುವುದು ತಪ್ಪಲ್ಲವೆಂಬ ಪರಿಹಾರವನ್ನೂ ಒದಗಿಸಲಾಗಿದೆ.

ದುಡ್ಡಿದ್ದವನ ಬಳಿಯಿರುವ ಮೊತ್ತ ತಿಳಿದಿದ್ದರೂ ಅದನ್ನು ಕಳ್ಳರಿಗೆ ಹೇಳದಿರುವುದು,

---

78. ಭಾರತೀಯ ಸಂಸ್ಕೃತಿ ಕೋಶ, ಖಂಡ ೯, ಪು. ೨೨೮.
79. ಅಪಿ ಪಾಪಕೃತೋ ರೌದ್ರಾಃ ಸತ್ಯಂ ಕೃತ್ವಾ ಪೃಥಕ್ ಪೃಥಕ್ ।
ಅದ್ರೋಹಮಿವ ಸಂವಾದಂ ಪ್ರವರ್ತಂತೇ ತದಾಶ್ರಯಾಃ ॥ —ಶಾಂತಿ, ೨೫೯/೧೧
80. ಅಂಜಲಿಂ ಶಪಥಂ ಸಾಂತ್ವಂ ಪ್ರಣಮ್ಯ ಶಿರಸಾ ವದೇತ್ । —ಶಾಂತಿ, ೧೪೦/೧೭
81. ಅನುಶಾಸನ, ೨೩/೩೩, ೪೪-೪೭.

ದುರುಳನ ಕೈಯಿಂದ ಪಾರಾಗಲೆಂದು ಸುಳ್ಳು ಹೇಳುವುದು ತಪ್ಪಲ್ಲ. ಅದು ಸರಿಯಾದುದೇ.[82] ಮದುವೆಯ ಕಾಲಕ್ಕೆ, ಬ್ರಾಹ್ಮಣನನ್ನು ಕಾಪಾಡಲು, ನಲ್ಲೆಯೊಂದಿಗಿನ ಸರಸಸಲ್ಲಾಪಗಳ ಕಾಲಕ್ಕೆ ಸುಳ್ಳು ಆಣೆ ಮಾಡುವುದನ್ನು ತಪ್ಪೆಂದು ಭಾವಿಸಲಾಗಿಲ್ಲ. ಚಿಕ್ಕಪುಟ್ಟ ಕಾರಣಗಳಿಗಾಗಿ ಆಣೆಯಿಡುವುದನ್ನು ಮಾತ್ರ ನಿಷೇಧಿಸಲಾಗಿದೆ. ತಮ್ಮ ಶೀಲ, ಪಾತಿವ್ರತ್ಯ ಮೊದಲಾದ ಸಂಗತಿಗಳ ಪರಿಶುದ್ಧತೆಯನ್ನು ಮನಗಾಣಿಸುವಲ್ಲಿ, ಆಪತ್ಕಾಲದಲ್ಲಿ, ಗೆಳೆತನವನ್ನು ಸಂಪಾದಿಸುವಲ್ಲಿ, ಚರ್ಚೆಯ ಒಳಗುಟ್ಟು, ಗೌರವ ಮೊದಲಾದವುಗಳನ್ನು ಕಾಯ್ದುಕೊಳ್ಳುವಲ್ಲಿ, ಅಧಿಕಾರವನ್ನೇರುವುದು, ಪಟ್ಟಾಭಿಷೇಕವನ್ನು ಮಾಡಿಸಿಕೊಳ್ಳುವುದು ಮೊದಲಾದ ಸನ್ನಿವೇಶಗಳಲ್ಲಿ ಆಣೆ, ಪ್ರಮಾಣಗಳನ್ನು ಮಾಡುವ ಸಂಪ್ರದಾಯವಿತ್ತು. ಇತ್ತೀಚೆಗೆ ಆಣೆ ತನ್ನ ಗಾಂಭೀರ್ಯವನ್ನು ಕಳೆದುಕೊಳ್ಳುತ್ತಲಿದೆ. ತಮ್ಮ ಹೇಳಿಕೆಯನ್ನು ಆಣೆಯಿಟ್ಟು ನಿಜ ಎಂದು ಸಿದ್ಧಪಡಿಸಲು ಹಾತೊರೆಯುವುದೆಂದರೆ ಬೇರೆಯವರು ನಮ್ಮಲ್ಲಿ ನಂಬಿಕೆಯನ್ನು ಉಳಿಸಿಕೊಂಡಿಲ್ಲವೆಂಬ ಸಂಗತಿಗೆ ನೀಡಿದ ಅಪ್ರತ್ಯಕ್ಷವಾದ ಸಾಕ್ಷಿಯೇ ಸರಿ ಹೀಗಾಗಿ ಸಾಮಾಜಿಕ ದೃಷ್ಟಿಯಿಂದ ನೋಡಿದರೆ ಆಣೆ ಮಾಡುವುದನ್ನು ಒಂದು ಆರೋಗ್ಯಕರವಾದ ಪ್ರವೃತ್ತಿ ಎಂದೆನ್ನಲಾಗದು. ಶರತ್ತಿನ ಶಾಪಗಳಂತೆಯೇ ಶರತ್ತಿನ ಆಣೆಗಳೂ ಉಂಟು. ಆಣೆಯ ಶರತ್ತನ್ನು ಪಾಲಿಸುವುದರಿಂದ ಅದರ ಪರಿಣಾಮದಿಂದ ಬಿಡುಗಡೆಹೊಂದಬಹುದು. ಅರ್ಜುನ ಯುದ್ಧದಲ್ಲಿ ನೆಲಕ್ಕುರುಳಿ ಸಾವನ್ನಪ್ಪುತ್ತಾನೆ. ಇದನ್ನು ಕಂಡು ಅವನ ಮಗ ಬಭ್ರುವಾಹನ ಒಂದು ಆಣೆಯನ್ನು ಮಾಡುತ್ತಾನೆ. ಅದೆಂದರೆ ಅರ್ಜುನ ಕೂಡಲೇ ಜೀವದೊಂದಿಗೆ ಎದ್ದುನಿಲ್ಲದಿದ್ದರೆ ತಾನು ತನ್ನನ್ನು ದೇಹದಂಡನೆಗೆ ಈಡುಮಾಡಿಕೊಳ್ಳುವೆನೆಂಬುದು. ಅವನು ತನ್ನ ತಾಯಿ ಉಲೂಪಿಯು ನೀಡಿದ ಮಣಿಯನ್ನು ಅರ್ಜುನನ ಎದೆಯ ಮೇಲೆ ಇಡುತ್ತಲೆ ಅವನು ನಿದ್ರೆಯಿಂದ ಎಚ್ಚೆತ್ತವನಂತೆ ಎದ್ದುನಿಲ್ಲುತ್ತಾನೆ. ಅದರಿಂದಾಗಿ ಬಭ್ರುವಾಹನನ ಈ ಶರತ್ತಿನ ಆಣೆ ತನ್ನ ಪರಿಣಾಮವನ್ನು ಕಳೆದುಕೊಂಡಿತು.[83]

ಮೂರು ಬಗೆಯ ಆಣೆಗಳಿರುತ್ತವೆ. ಅವೆಂದರೆ, ಆಣೆ ಮಾಡಿ ಹೇಳುವುದು, ಇನ್ನೊಬ್ಬರಿಗೆ ಆಣೆ ಹಾಕುವುದು, ಹಾಗೂ ಇನ್ನೊಬ್ಬರಿಂದ ಆಣೆ ಮಾಡಿಸುವುದು. ಮೊದಲಿನ ಎರಡಕ್ಕೆ ಹಿರಿತನ, ಅಧಿಕಾರಗಳ ಅಗತ್ಯವಿಲ್ಲ. ಆಣೆ ಮಾಡಿಸುವಲ್ಲಿ ಮಾತ್ರ ಇವು ಮುಖ್ಯ. ಇಂದಿಗೂ ಅಧಿಕಾರಗ್ರಹಣದ ಕಾಲಕ್ಕೆ ಪ್ರಮಾಣವಚನವನ್ನು ನೀಡುವ ಸಂಪ್ರದಾಯವಿದೆ. ಆಣೆ ಮಾಡುವಾಗ ಹಿರಿಯರ ಸಂದರ್ಭದಲ್ಲಿ ಮಾತ್ರ ಪಾದಗಳ ಇಲ್ಲವೆ ಪಾದಸ್ಪರ್ಶದ ಉಲ್ಲೇಖ ಬರುತ್ತದೆ. ದಮಯಂತಿಯು ನಳನಿಗೆ ತನ್ನ ಶುದ್ಧವಾದ ಶೀಲವನ್ನು ಮನಗಾಣಿಸಲೆಂದು ಆಣೆ ಮಾಡುವಾಗ ಅವನ ಪಾದಸ್ಪರ್ಶವನ್ನು ಕೂಡ ಉಲ್ಲೇಖಿಸುತ್ತಾಳೆ.[84] ಅಂಬೆಯು ಆಣೆ ಮಾಡಿ ಶಾಲ್ವಲನೆದುರು ಹೇಳುವಾಗ ಅವನ

---

82. ಶ್ರೇಯಸ್ತತ್ರಾನೃತಂ ವಕ್ತುಂ ಸತ್ಯಾದಿತಿ ವಿಚಾರಿತಮ್ ।
ಯಃ ಪಾಪೈಃ ಸಹ ಸಂಬಂಧಾನ್ಮುಚ್ಯತೇ ಶಪಥಾದಪಿ ॥ —ಶಾಂತಿ, ೧೦೯/೧೬

83. ಯದಿ ನೋತ್ತಿಷ್ಠತಿ ಜಯಃ ಪಿತಾ ಮೇ ನರಸತ್ತಮಃ ।
ಅಸ್ಮಿನ್ನೇವ ರಣೋದ್ದೇಶೇ ಶೋಷಯಿಷ್ಯೇ ಕಲೇವರಮ್ ॥ —ಆಶ್ವಮೇಧಿಕ, ೮೦/೩೬

84. ಸ್ಪೃಶೇಯಂ ತೇನ ಸತ್ಯೇನ ಪಾದಾವೇತೌ ಮಹೀಪತೇ । —ವನ, ೭೬/೩೧

ತಲೆಯ ಉಲ್ಲೇಖ ಬರುತ್ತದೆ.[85] ಆಣೆಮಾಡಿಸುವಾಗ ಧರ್ಮಗ್ರಂಥಗಳ ಮೇಲೆ ಕೈಯಿರಿಸಿ ಹೇಳಿಸುವ ಸಂಪ್ರದಾಯ ಇಂದಿಗೂ ನ್ಯಾಯಾಲಯಗಳಲ್ಲಿದೆ. ಸಾಕ್ಷಿಯನ್ನು ನೀಡುವವನು ತಾನು ಸತ್ಯವಾದುದನ್ನೇ ಹೇಳುವೆನೆಂದೆನ್ನಲು ಹಿಂದುವು ಭಗವದ್ಗೀತೆಯನ್ನು, ಮುಸಲ್ಮಾನ ಕುರಾಣವನ್ನು, ಶೀಖನು ಗ್ರಂಥಸಾಹಿಬವನ್ನು, ಕ್ರಿಸ್ತೀಯನು ಬೈಬಲನ್ನು ಹಾಗೂ ಪಾರಸಿಯು ಅವೆಸ್ತಾವನ್ನು ಮೊರೆಹೊಗುತ್ತಾನೆ. ಆಣೆಯ ಸಂದರ್ಭದಲ್ಲಿ ಮಮತೆಯ ವ್ಯಕ್ತಿ, ಅವನ ಪ್ರಾಣ, ಅವನ ದೇಹದ ಅವಯವಗಳು, ಆಣೆಯಿಡುವವನ ಪವಿತ್ರವಾದ ವಸ್ತುಗಳು, ಅವನ ಪುಣ್ಯ, ತಪಸ್ಸು, ಧರ್ಮ, ಜಪ, ದಾನ, ಇಷ್ಟ, ಆಪೂರ್ತ, ಶುಭ-ಕರ್ಮ, ಸಾಮರ್ಥ್ಯ ಮೊದಲಾದ ಸಂಗತಿಗಳನ್ನು ಬಳಸಲಾಗುತ್ತದೆ. ಅರ್ಜುನ, ಕರ್ಣ, ದ್ರೋಣ, ಶಾಲ್ವ ಮೊದಲಾದವರು ಆಣೆಗಾಗಿ ತಮ್ಮ ಆಯುಧಗಳ ಹೆಸರುಗಳನ್ನು ಉಚ್ಚರಿಸಿದ್ದು ಅಶ್ವತ್ಥಾಮನು ಇಷ್ಟ, ಆಪೂರ್ತ, ಸತ್ಯ, ದಾನ, ಜಪ ಗಳನ್ನು ಉಚ್ಚರಿಸುತ್ತಾನೆ.[86] ಭೀಮನ ಆಣೆಯಲ್ಲಿ ಧರ್ಮದ ಉಲ್ಲೇಖವಿದೆ.

ಮಹಾಭಾರತವು ಮುಖ್ಯವಾಗಿ ಒಂದು ಯುದ್ಧದ ಕಥೆಯಾಗಿರುವ ಕಾರಣ ಅದರಲ್ಲಿ ಹಗೆಯನ್ನು ಕೊಲ್ಲುವುದು, ಸಾವುಗಳು, ನಾಶ ಇವೇ ಮೊದಲಾದ ಸಂದರ್ಭದ ಆಣೆಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಅರ್ಜುನ, ಅಶ್ವತ್ಥಾಮ, ದ್ರೋಣ, ಭೀಮ, ಶಾಲ್ವ, ಶಿಖಂಡಿ, ಸಂಶಪ್ತಕ ಹಾಗೂ ಸಾತ್ಯಕಿ ಇವರೆಲ್ಲರ ಆಣೆಗಳ ಮುಖ್ಯವಾದ ತಿರುಳೆಂದರೆ ತಮ್ಮ ಹಗೆಗಳಿಗೆ ಹಾನಿಯನ್ನುಂಟುಮಾಡುವುದೊಂದೇ ಆಗಿದೆ. ಬಭ್ರುವಾಹನ ಹಾಗೂ ಅರ್ಜುನರ ಆಣೆಗಳಲ್ಲಿ ಮಾತ್ರ ತಮ್ಮನ್ನು ತಾವೇ ನಾಶಪಡಿಸಿಕೊಳ್ಳುವ ಸಿದ್ಧತೆ ಇರುವುದು ಕಂಡುಬರುತ್ತದೆ. ದುರ್ಯೋಧನನ ಆಣೆ ಯುದ್ಧವನ್ನು ಕುರಿತಾದದ್ದು. ಸಂಶಪ್ತಕರ ಆಣೆಯಲ್ಲಿ ಪರಲೋಕದ ಮಾತಿದೆ. ಅಷ್ಟಾವಕ್ರ ಮದುವೆಯಾಗಬಯಸಿದನಾದರೂ ಅವನು ಕಾಮಪೀಡಿತನಾಗಿರಲಿಲ್ಲ. ಅವನು ಮಾಡಿದ ಆಣೆ ತನಗೊಬ್ಬ ಮಗನನ್ನು ಪಡ ಯುವ ಮಟ್ಟಿಗೆ ಮಾತ್ರ ಸೀಮಿತವಾದುದು. ಶ್ರೀಕೃಷ್ಣ ಹಾಗೂ ಪುರೋಹಿತರ ಆಣೆಗಳು ಸತ್ಯವಚನವನ್ನು ಕುರಿತಾದವುಗಳು. ನಹುಷನು ನಂಬಿಕೆಯನ್ನು ಗಳಿಸಲೆಂದು ಆಣೆ ಮಾಡಿದ್ದಾನೆ. ಬೆಕ್ಕನ್ನು ಬಂಧನದಿಂದ ಬಿಡಿಸುವುದಾಗಿ ಇಲಿಯು ಆಣೆಮಾಡಿ ಹೇಳಿದೆ. ಅಶ್ವತ್ಥಾಮನ ಒಂದು ಆಣೆಯಲ್ಲಿ ಪಣವಿದ್ದು ಇನ್ನೊಂದರಲ್ಲಿ ಸತ್ಯಕ್ರಿಯೆ ಇದೆ. ಸ್ತ್ರೀಯರ ಆಣೆಗಳಿಗೆ ಮುಖ್ಯವಾದ ಕಾರಣಗಳೆಂದರೆ ಅವರ ಶೀಲ, ಪತಿನಿಷ್ಠೆ ಹಾಗೂ ವಾತ್ಸಲ್ಯ ಗಳು. ಅಂಬೆ, ದಮಯಂತಿಯರು ತಮ್ಮ ಶುದ್ಧವಾದ ಶೀಲವನ್ನು ಸಿದ್ಧಪಡಿಸಿ ತೋರಿಸ ಲೆಂದೇ ಆಣೆಮಾಡಿದ್ದಾರೆ.

ಮಹಾಭಾರತದಲ್ಲಿ ಇನ್ನೊಂದು ವಿಶಿಷ್ಟವಾದ ಸಂಗತಿಯೆಂದರೆ ಋಷಿಗಳು ಹಾಗೂ ರಾಜರುಗಳು ಮಾಡಿದ ಆಣೆಗಳು.[87] ಮಹಾಭಾರತಕಾಲದಲ್ಲಿ ಕಳವು ಮಾಡುವುದನ್ನು ಬಲುಹೀನವಾದ ಕಸುಬೆಂದು ಬಗೆಯಲಾಗುತ್ತಿತ್ತು. ಆದರಲ್ಲಿಯ ಆಣೆಗಳಿಂದಾಗಿ ಆ

---

85. ಯಥಾ ಶಾಲ್ವಪತೇ ನಾನ್ಯಂ ವರಂ ಧ್ಯಾಮಿ ಕಥಂಚನ ।
ತ್ವಾಮೃತೇ ಪುರುಷವ್ಯಾಘ್ರ ತಥಾ ಮೂರ್ಧಾನಮಾಲಭೇ ॥ —ಉದ್ಯೋಗ, ೧೭೫/೧೬
86. ಇಷ್ಟಾಪೂರ್ತೇನ ದಾನೇನ ಸತ್ಯೇನ ಚ ಜಪೇನ ಚ । —ಶಲ್ಯ, ೩೦/೨೦
87. ಅನುಶಾಸನಪರ್ವ, ಅಧ್ಯಾಯ ೯೩ ಹಾಗೂ ೯೪.

ಕಾಲಕ್ಕೆ ಕಳವಿಗಾಗಿ ಎಂತಹ ಕಠೋರವಾದ ಶಿಕ್ಷೆಯಾಗುತ್ತಿತ್ತೆಂಬುದನ್ನು ಕಾಣಬಹುದು. ತಮ್ಮ ಮೇಲೆ ಕಳವಿನ ಆರೋಪ ಬಾರದ ಹಾಗೆ ಅರಸರು, ಋಷಿಗಳು ಬಲು ಎಚ್ಚರ ದಿಂದಿರುತ್ತಿದ್ದರು. ಅವರು ತಮ್ಮ ನಿಷ್ಕಲಂಕವಾದ ನಡತೆಯನ್ನು ಸಿದ್ಧಮಾಡಿತೋರಿಸ ಲೆಂದು ಎಂತಹ ಕ್ರೂರವಾದ ಶಿಕ್ಷೆಗಳನ್ನು ಕೂಡ ಹೊಂದಲು ಮುಂದೆ ಬರುತ್ತಿದ್ದರೆಂಬ ಸಂಗತಿಯನ್ನು ಈ ಆಣೆಗಳಿಂದ ಕಂಡುಕೊಳ್ಳಬಹುದಾಗಿದೆ. ಈ ಆಣೆಗಳಿಂದ ಅಂದಿನ ನೈತಿಕ ಹಾಗೂ ಸಾಮಾಜಿಕ ಮೌಲ್ಯಗಳ ಬಗೆಗೆ ಸಾಕಷ್ಟು ಮಾಹಿತಿ ದೊರೆಕುತ್ತದೆ. ಹಸು ವನ್ನು ಕಾಲಿನಿಂದ ಒದೆಯುವುದು, ನೀಚಕೃತ್ಯಗಳಲ್ಲಿ ಪಾಲ್ಗೊಳ್ಳುವುದು, ಕತ್ತೆಗಳನ್ನು ಹೂಡಿದ ಬಂಡಿಯ ಮೇಲೆ ಕುಳಿತುಕೊಳ್ಳುವುದು, ತಾನಿತ್ತ ದಾನದ ಬಗೆಗೆ ಕೊಚ್ಚಿಕೊಳ್ಳು ವುದು, ಹೊಟ್ಟೆಹೊರೆಯಲೆಂದು ಊರ ಅಗಸಯಾಚೆಗೆ ಕಾಲಿಕ್ಕುವುದು, (ಬ್ರಾಹ್ಮಣರು) ಸಾಮಾನ್ಯವಾದ ಜಲಾಶಯದ ನೀರನ್ನು ಕುಡಿಯುವುದು, ಗೆಳೆಯನ ಉಪಕಾರವನ್ನು ಮರೆಯುವುದು, ಶೂದ್ರಳಾದ ಹೆಣ್ಣಿನ ಹೊಟ್ಟೆಯಿಂದ ಹುಟ್ಟಿಬರುವುದು, ಶೂದ್ರಳಾದ ಹೆಣ್ಣಿನೊಂದಿಗೆ ಸಂಬಂಧವನ್ನು ಇಟ್ಟುಕೊಳ್ಳುವುದು, ಮಡದಿಯು ವ್ರತಸ್ಥಳಾಗಿರುವಾಗ ಇಲ್ಲವೆ ಅವಳಿಗೆ ಋತುಕಾಲ ಒದಗಿಬಾರದಿದ್ದಾಗ ಅವಳನ್ನು ಕೂಡಿಕೊಳ್ಳುವುದು, ತನ್ನ ಹೊಟ್ಟೆಹೊರೆಯುವ ಹೊರೆಯನ್ನು ಅನ್ಯರ ಮೇಲೆ ಹೊರಿಸುವುದು, ಹೆಂಡತಿಯ ಮೂಲಕ ಹೊಟ್ಟೆಹೊರೆದುಕೊಳ್ಳುವುದು, ಯಜ್ಞದ ದೀಕ್ಷೆಯನ್ನು ಪಡೆದ ತರುವಾಯವೂ ಸ್ವೈರಾಚಾರಿಯಾಗಿರುವುದು, ವೈದಿಕನೆನ್ನಿಸಿಯೂ ನಾಗರಿಕರಂತೆ ಸುಖೋಪಭೋಗ ಗಳನ್ನು ಪಡೆಯುವುದು, ಸುಳ್ಳುಸಾಕ್ಷಿಯನ್ನು ನೀಡುವುದು, ಶ್ರಾದ್ಧದ ಕಾಲಕ್ಕೆ ಸ್ನೇಹಿತ ರಿಗೆ ಔತಣದ ಊಟವನ್ನಿಕ್ಕುವುದು ಮೊದಲಾದ ಸಂಗತಿಗಳನ್ನು ನಿಷಿದ್ಧವಾದವುಗಳೆಂದು ಬಗೆಯಲಾಗುತ್ತಿತ್ತು, ಸ್ವೈರಾಚಾರ, ಅನವಶ್ಯಕವಾದ ಮಾಂಸಾಹಾರ, ಅಧರ್ಮದ ನಡತೆ, ಹಗಲು ಮೈಥುನ, ಕರ್ತವ್ಯವನ್ನು ಕಡೆಗಣಿಸುವುದು, ಅನಧ್ಯಯನದ ಹೊತ್ತಿಗೆ ವರಣವನ್ನು ಮಾಡುವುದು, ಅಧ್ಯಯನವನ್ನು ಮಾಡುವುದು, ಸೂರ್ಯಸತ್ತ ನೋಡುತ್ತ ನಿಲ್ಲುವುದು, ಜಲಾಶಯಗಳಲ್ಲಿ ಮಲಮೂತ್ರವಿಸರ್ಜನೆ, ಶುಲ್ಕವನ್ನಿತ್ತು ಮದುವೆಯಾಗು ವುದು, ಪಾಪಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿರುವುದು, ತಪ್ಪಾದ ಪಠಣ, ಅಧ್ಯಯನ, ಒಣಹುಲ್ಲಿನ ಮೇಲೆ ಆಹುತಿಯನ್ನು ನೀಡುವುದು, ಪರರ ದುಡ್ಡನ್ನು ದೋಚಿಕೊಳ್ಳುವುದು, ವೈದ್ಯಕೀಯ ವೃತ್ತಿಗಿಳಿಯುವುದು, ಅಸೂಯೆ ಹಾಗೂ ಜಂಬ ಪಡುವುದು, ಬಂಧುಗಳೊಡನೆ ಜಗಳ, ದಾಸ್ಯವೃತ್ತಿ, ಮಕ್ಕಳಾಗದಿರುವುದು, ಹಣವಿಲ್ಲ ದಿರುವುದು, ನಾಸ್ತಿಕರಾಗಿರುವುದು, ಬೈಗಳಗಳು, ಬಡವರಿಂದ ಹಣವನ್ನು ಕಿತ್ತುಕೊಳ್ಳು ವುದು, ತಮ್ಮ ಸೇವಕರು ಹಾಗೂ ಗುರುಗಳ ಪೋಷಣೆಯನ್ನು ಬೇರೊಬ್ಬರ ಕೈಲಿ ಮಾಡಿಸುವುದು, (ಯೋಚನೆಯಿಲ್ಲದೆ) ಬಾಯಿಗೆ ಬಂದಂತೆ ಮಾತನಾಡುವುದು, ಅತಿಥಿ ಗಳಿಂದಲೇ ಆತಿಥ್ಯವನ್ನು ಪಡೆಯುವುದು, ಸೋಮರಸದ ಮಾರಾಟ, ಗೋಹತ್ಯೆ— ಈ ಮೊದಲಾದ ಕೃತ್ಯಗಳನ್ನು ನಿಂದನೀಯವಾದವುಗಳೆಂದು ಬಗೆಯಲಾಗುತ್ತಿತ್ತು. ತನ್ನ ಅತ್ತೆಯನ್ನು ತೆಗಳುವುದು, ತಿರಸ್ಕರಿಸುವುದು, ಗಂಡನ ಮಾತಿನಂತೆ ನಡೆಯದಿರುವುದು, ತಾನೊಬ್ಬಳೇ ಪಕ್ವಾನ್ನಗಳನ್ನೆಲ್ಲ ತಿಂದುಹಾಕುವುದು, ತನ್ನ ಕುಟುಂಬದವರನ್ನು ಅವಮಾನ ಗೊಳಿಸುವುದು ಮೊದಲಾದ ಸಂಗತಿಗಳು ಸ್ತ್ರೀಯರಿಗೆ ವರ್ಜ್ಯವಾದವುಗಳೆನ್ನಿಸಿದ್ದವು.

# ಪಣ

ಪಣ, ಆಣೆ, ಸತ್ಯಕ್ರಿಯೆ, ಜಿದ್ದುಕಟ್ಟುವುದು ಮೊದಲಾದವುಗಳನ್ನು ಅಂತಹ ಪ್ರಖರವಾದ ಕೆಚ್ಚು ಇಲ್ಲದೆ ಕೈಕೊಳ್ಳಲಾಗದು. ಇವುಗಳಲ್ಲೆಲ್ಲ ನುಡಿಯಂತೆ ನಡೆಯಿರಬೇಕಾದುದು ಬಲುಮುಖ್ಯವಾದ ಕಟ್ಟಳೆಯಾಗಿದೆ. ಜಿದ್ದಿನಲ್ಲಿ ಸೋತರೆ ದಂಡವನ್ನು ತೆರತಕ್ಕದ್ದು. ಸತ್ಯಕ್ರಿಯೆಗಳು ಮಾತ್ರ ಶರತ್ತುಗಳನ್ನು ಒಳಗೊಂಡವುಗಳಾಗಿರುತ್ತವೆ. ಶರತ್ತುಗಳನ್ನು ಪಾಲಿಸಲು ಆಗದಿದ್ದರೆ ಶಿಕ್ಷೆಯನ್ನು ಅನುಭವಿಸತಕ್ಕದ್ದು; ಒಂದೊಂದು ಸಲವಂತೂ ಇದಕ್ಕಾಗಿ ಜೀವಕ್ಕೆ ಎರವಾಗುವ ಹೊತ್ತು ಬರುತ್ತದೆ. ಪಣವನ್ನು ಪಾಲಿಸುವುದಂತೂ ಒಂದು ಕಠೋರವಾದ ವ್ರತ ಎನ್ನಿಸಿದೆ. ಭೀಷ್ಮನು ಅಚಲನೀಯವಾದ ನಿಷ್ಠೆಯಿಂದ ಆಮರಣ ಉಪವಾಸವನ್ನು ಕೈಗೊಂಡು ಜಗತ್ತಿನೆದುರು ಒಂದು ಹೊಸ ಆದರ್ಶವನ್ನೇ ಹುಟ್ಟುಹಾಕಿದನು. ಅವನಿಂದಾಗಿ 'ಭೀಷ್ಮಪ್ರತಿಜ್ಞೆ' ಎಂಬ ಪದಕ್ಕೆ ಹೊಸದೊಂದು ಅರ್ಥಪಂತಿಕೆ ಬಂದಿತು. ನುಡಿದಂತೆ ನಡೆಯಲಾಗದೆಹೋದಾಗ ಪಣಗಳು ಸೋಲನ್ನು ಕಾಣವುದುಂಟು, ನುಚ್ಚಾಗುವುದುಂಟು. ಕರ್ಣನು ಅರ್ಜುನನನ್ನು ಕೊಲ್ಲಲು ತೊಟ್ಟ ಪಣ ಸೋತಿತು. ರುಕ್ಮಿಯು ತಾನು ಕೃಷ್ಣನನ್ನು ಕೊಲ್ಲುವೆನೆಂದು ಆಡಿದುದು ಬರಿ ಒಂದು ಬೊಗಳೆಯೆನ್ನಿಸಿತು.

ಪಣ ಉತ್ತಮಪುರುಷಕ್ಕೆ ಸಂಬಂಧಿಸಿದುದು. ಪಣ ತೊಟ್ಟವನ ಮೇಲೆಯೇ ಅದನ್ನು ಪೂರ್ತಿಗೊಳಿಸುವ ಹೊಣೆಗಾರಿಕೆಯಿದ್ದಕಾರಣ ಅದು ಸ್ವಾವಲಂಬಿ ಎನ್ನಿಸಿದೆ. ಅದರ ಸೋಲು-ಗೆಲುವುಗಳು ಕೂಡ ಅವನ ಅಂಕೆಯಲ್ಲಿರುವಂಥವುಗಳು. ಆಣೆಯಲ್ಲಿ ಪ್ರಕಟವಾದ ಇಲ್ಲವೆ ಅಡಕಗೊಂಡಿರುವ ಪಣ ಇದ್ದೇ ಇರುತ್ತದೆ. ಅಂದಮಾತ್ರಕ್ಕೆ ಪಣದಲ್ಲಿ ಆಣೆ ಇದ್ದೇ ತೀರಬೇಕೆಂದೇನಿಲ್ಲ. ಹಲವು ಸಲ ಅದು ಇರದು. ಕೃಷ್ಣನು ಅಧರ್ಮವನ್ನು ಲೋಪಗೊಳಿಸಿ ಧರ್ಮಸಂಸ್ಥಾಪನೆಯನ್ನು ಮಾಡುವೆನೆಂದು ಕೈಕೊಂಡ ಪಣದಲ್ಲಿ ಆಣೆಯಿದೆ. ಅರ್ಜುನ ತಾನು ಜಯದ್ರಥನನ್ನು ಕೊಲ್ಲಲು ತೊಟ್ಟ ಪಣದಲ್ಲಿ ಮಾತ್ರ ಆಣೆಯಿಲ್ಲ. ಆಣೆಯಲ್ಲಿರುವಂತೆ ಪಣದಲ್ಲಿ ಶಾಪದ ಛಾಯೆ ಇರದು.

ಮಹಾಭಾರತದ ಒಟ್ಟು ಎಂಬತ್ತೈದು ಪಣಗಳಲ್ಲಿ ಗಂಡುಗಳು ತೊಟ್ಟ ಪಣಗಳು ಎಂಬತ್ತೊಂದಿದ್ದು ಹೆಣ್ಣುಗಳವು ನಾಲ್ಕು ಮಾತ್ರ. ತಮ್ಮ ಹಗೆಯನ್ನು ಕೊಲ್ಲುವುದು, ಸಂಹಾರ, ವಿನಾಶ, ಕದನಗಳು ಗಂಡುಗಳ ಪಣಗಳ ಮುಖ್ಯವಾದ ವಿಷಯಗಳು. ಕೊಲೆಗೈಯಲೆಂದು ತೊಟ್ಟ ಪಣಗಳು ಒಟ್ಟಿನಲ್ಲಿ ಇಪ್ಪತ್ತೆಂಟು. ಅವುಗಳಲ್ಲಿಯ ಆರು ಬರಿ ಅರ್ಜುನನವೇ ಆಗಿವೆ. ಅರ್ಜುನನು ಭೀಷ್ಮ, ವೃಷಸೇನ, ಕರ್ಣ ಹಾಗೂ ಜಯದ್ರಥನನ್ನು ಕೊಲ್ಲಲೆಂದು ತೊಟ್ಟ ಪಣ ಗೆಲವನ್ನು ಕಂಡಿವೆ. ಗಾಂಡೀವಧನುಷ್ಯವನ್ನು ಅವಮಾನಕ್ಕೀಡುಮಾಡಿದ ದುರ್ಯೋಧನನ ಕೊಲೆ ಕೃಷ್ಣನ ಕೋರಿಕೆಯ ಮೇರೆಗೆ ತಪ್ಪಿತಷ್ಟೆ. ಅಲಾಯುಧ, ಕರ್ಣ, ತ್ರಿಗರ್ತ ಹಾಗೂ ನಕುಲರ ಪಣಗಳು ಫಲವಿಲ್ಲದಾದವು. ರುರೂ ಈತನು 'ಕಂಡ ಹಾವನ್ನು ಚಚ್ಚಿಹಾಕುವೆ'ನೆಂಬ ತನ್ನ ಪಣವನ್ನು ಸಹಸ್ರಪಾತನ ಕೋರಿಕೆಯ ಮೇರೆಗೆ ಅವನ ಬಗೆಗೆ ಮಾತ್ರ ನಡಿಯಗೊಳಿಸಿದನು, ಸಂಶಪ್ತಕರು ಅರ್ಜುನನನ್ನು ಕೊಲ್ಲುವಲ್ಲಿ ಜಯಶಾಲಿಗಳಾಗಲಿಲ್ಲ. ಅವರ ಪಣ ವಿಫಲಗೊಂಡಿತು. ಅಶ್ವತ್ಥಾಮ ಹಾಗೂ ಶಿಖಂಡಿಯರು ತಮ್ಮ ತಮ್ಮ ಪಣಗಳನ್ನು ಪೂರ್ತಿಗೊಳಿಸಿದರೂ ಅವುಗಳ

ಶ್ರೇಯಸ್ಸನ್ನು ಅವರಿಗೆ ನೀಡಲಾಗದು. ಏಕೆಂದರೆ, ಆಗಧೃಷ್ಟದ್ಯುಮ್ನುವು ನಿದ್ರೆಯಲ್ಲಿದ್ದ. ಭೀಷ್ಮನು ಶಿಖಂಡಿಗೆ ಶಸ್ತ್ರಾಸ್ತ್ರಗಳಿಂದ ಮಾರುತ್ತರವನ್ನೀಯನೆಂದು ನಿರ್ಧರಿಸಿದ್ದನು. ವಾಲಿಯ ವಧೆಗಾಗಿ ಶ್ರೀರಾಮನು ತೊಟ್ಟ ಪಣ ದೋಷರಹಿತವಾದುದು ಎನ್ನಲಾಗದು.

ಮಹಾಭಾರತದಲ್ಲಿರುವ ಹದಿಮೂರು ಪಣಗಳ ಸ್ವರೂಪವು ನೇತ್ಯಾತ್ಮಕವಾದುದು. ಕರ್ಣ, ಶ್ರೀಕೃಷ್ಣ ಯುದ್ಧದಲ್ಲಿ ತಾವು ಶಸ್ತ್ರಗಳನ್ನೆತ್ತೆವೆಂದು ಪಣ ತೊಟ್ಟಿದ್ದಾರೆ. ಕರ್ಣ ತನ್ನ ಪಣವನ್ನು ಪಾಲಿಸಿರುವನು. ಶ್ರೀಕೃಷ್ಣನಿಗೆ ಮಾತ್ರ ತನ್ನ ಪಣವನ್ನು ಮುರಿಯುವ ಹೊತ್ತು ಬಂದಿತ್ತು. ಅರ್ಜುನ ಸರಿಯಾದ ವೇಳೆಗೆ ಅವನನ್ನು ಎಚ್ಚರಿಸುತ್ತಾನೆ, ಧೃಷ್ಟದ್ಯುಮ್ನನು ದ್ರೋಣನ ವಧೆಯಾಗುವವರೆಗೆ ತಾನು ಅಶ್ವತ್ಥಾಮನನ್ನು ಕೊಲ್ಲೆನೆಂಬ ಪಣವನ್ನು ಪಾಲಿಸಿದ್ದಾನೆ. ಪರಶುರಾಮನು ಅಂಬೆಯ ಕೋರಿಕೆಯನ್ನು ಖಡಾಖಂಡಿತ ವಾಗಿ ನಿರಾಕರಿಸಿದ್ದಾನೆ. ಭೀಷ್ಮನು ಶಿಖಂಡಿಯ ಬಗೆಗಿನ ತನ್ನ ಪಣವನ್ನು ಪೂರ್ತಿಗೊಳಿಸಿ ದ್ದಾನೆ. ಇಂದ್ರನು ನಮುಚಿಯನ್ನು ಕೊಲ್ಲೆನೆಂಬ ತನ್ನ ಪಣವನ್ನು ಪಾಲಿಸಲಿಲ್ಲ. ದುಃಶಾಸನನು ಪಣತೊಟ್ಟು ದುರ್ಯೋಧನನಿಗೆ ತನ್ನ ನಿರಾಕರಣೆಯನ್ನು ಅರುಹಿದ್ದಾನೆ. ಶ್ರೀಕೃಷ್ಣನ ಕೊಲೆಯ ಮುನ್ನ ತಾನು ರಣಾಂಗಣದಿಂದ ಹಿಂತಿರುಗೆನೆಂದು ರುಕ್ಮಿ ಪಣತೊಟ್ಟರೂ ಅದನ್ನು ಅವನಿಂದ ಪೂರ್ತಿಗೊಳಿಸಲಾಗಿಲ್ಲ. ಕರ್ಣನು ಇಂದ್ರನಿಂದ ಪಡೆದ ಸಾಮರ್ಥ್ಯವನ್ನು ಅರ್ಜುನನಿಗೆಂದೇ ಬಳಸಲೆಳಸಿದಾಗ ಶ್ರೀಕೃಷ್ಣನು ಅವನ ಈ ಯತ್ನವನ್ನು ಹಾಳುಮಾಡಿದ್ದಾನೆ. ದ್ರೋಣನು ಪಾಂಚಾಲನನ್ನು ಸಂಪೂರ್ಣವಾಗಿ ನಾಶ ಪಡಿಸಲು ಪಣತೊಟ್ಟಿದ್ದನು. ಅಲ್ಲಿಯವರೆಗೆ ತಾನು ತನ್ನ ಮೈಮೇಲಿನ ಕವಚವನ್ನು ಇಳಿಸಲಾರೆನೆಂದು ಹೇಳಿದನು. ತಾನು ಇಂದ್ರನ ಪೌರೋಹಿತ್ಯವನ್ನು ವಹಿಸಿದ ಅವಧಿ ಯಲ್ಲಿ ಮಾನವರು ನಡೆಯಿಸಿದ ಯಜ್ಞಗಳ ಕಾಲಕ್ಕೆ ತನ್ನ ಕೈಯಲ್ಲಿ ಸ್ರುವೆಯನ್ನು ಹಿಡಿಯಲಾರೆನೆಂದು ಬೃಹಸ್ಪತಿಯು ಪಣತೊಟ್ಟಿದ್ದನು. ಆದರೆ ಅದನ್ನವನು ಮುರಿಯುವ ಹೊತ್ತು ಬಂದಿತ್ತು.

ಹೆಣ್ಣುಗಳು ತೊಟ್ಟ ಪಣಗಳು ಆವರ ಹೆಣ್ಣುತನಗಳಿಗೆ ತಕ್ಕವುಗಳೇ ಆಗಿವೆ. ಕದನದಲ್ಲಿ ದುರ್ದೈವದಿಂದ ಅಭಿಮನ್ಯುವಿಗೆ ವೀರಗತಿಯು ಪ್ರಾಪ್ತವಾದರೆ ತಾನು ಸತಿಹೋಗುವೆ ನೆಂದು ಉತ್ತರೆಯು ಪಣತೊಟ್ಟಿದ್ದಳು. ಆದರೆ ಪಾಂಡವರ ವಂಶವನ್ನು ಉಳಿಸಲೆಂದು ಅವಳು ಅದನ್ನು ಕೈಬಿಡಬೇಕಾಗಿ ಬಂದಿತು. ದಮಯಂತಿ ಹೂಡಿದ ಅಣಕಸ್ವಯಂವರವು ನಳನನ್ನು ಕಂಡುಹಿಡಿಯಲೆಂದೇ ಆಗಿತ್ತು. ಅವನನ್ನು ಪಡೆಯದಿದ್ದರೆ ಅವಳು ಬೆಂಕಿಗೆ ಹಾರಿಕೊಳ್ಳುವವಳಿದ್ದಳು. ಆದರೆ ಅಂಥ ಹೊತ್ತು ಬರಲಿಲ್ಲ. ಕುಂತಿಯು ಮಾಡಿವ ಪಣ ದಲ್ಲಿ ಸೇವೆ ಹಾಗೂ ಅಪ್ಪಣೆಯನ್ನು ಪಾಲಿಸುವ ಅವಳ ನಿಷ್ಠೆ ವ್ಯಕ್ತಗೊಳ್ಳುತ್ತದೆ.

## ಸತ್ಯಕ್ರಿಯೆ

ಹಿಂದಿನ ಪರಂಪರಾಶೀಲರಾದ ಜನರಲ್ಲಿ 'ಸತ್ಯವನ್ನು ಉಚ್ಚರಿಸುವುದರಿಂದ ಬೇಕಾದಂಥ ಪವಾಡಗಳನ್ನು ಮೆರೆಯಬಹುದು' ಎಂಬ ನಂಬುಗೆ ಮನೆಮಾಡಿಕೊಂಡಿತ್ತು. ಜನ ತಮ್ಮ ಇಲ್ಲವೆ ಇನ್ನೊಬ್ಬರ ಸಂಕಟಗಳನ್ನು ಪರಿಹರಿಸಲಾಗಲಿ ಇಲ್ಲವೆ ನಿರಪರಾಧಿತ್ವವನ್ನು ಸಿದ್ಧ ಪಡಿಸಿ ತೋರಲೆಂದಾಗಲಿ ಸತ್ಯಕ್ರಿಯೆಯನ್ನು ಬಳಸುತ್ತಿದ್ದರು. ಸತ್ಯವನ್ನು ನುಡಿದು

ಪರೀಕ್ಷೆಗೆ ಒಳಗಾಗುವ ಈ ಕ್ರಿಯೆಯನ್ನು ಸತ್ಯಕ್ರಿಯೆ ಎಂದೆನ್ನುತ್ತಿದ್ದರು.'[88] ಆಣೆ, ಪಣಗಳಿಗಿಂತ ಸತ್ಯಕ್ರಿಯೆ ಹೆಚ್ಚು ಪರಿಣಾಮಕಾರಿಯೂ ಮನಗಾಣಿಸುವಂಥದೂ ಆಗಿರುವಂಥದು. ಇಲ್ಲಿ ನುಡಿಯಲ್ಲಿರುವ ನನ್ನಿಯನ್ನು ನಡೆಯಿಂದ ಸಿದ್ಧಪಡಿಸಿ ತೋರಿಸಲಾಗುತ್ತದೆ. ಹಲವು ಸತ್ಯಕ್ರಿಯೆಗಳಲ್ಲಿ ಶಾಪ, ಆಣೆ, ಪಣಗಳು ಖಚಿತವಾಗಿ ಅಡಕಗೊಂಡಿರಬಹುದಾದರೂ ಅವೆಲ್ಲ ಸತ್ಯಕ್ರಿಯೆಯ ಲಕ್ಷಣಗಳೆನ್ನಲಾಗದು. ವೆಸ್ಟರ್‌ಮಾರ್ಕನ ಅಭಿಪ್ರಾಯದ ಮೇರೆಗೆ ಸತ್ಯಕ್ರಿಯೆಯು ಮುಖ್ಯವಾಗಿ ಯಾಪಾತ್ಮಕವಾದುದು. ಆಣೆ, ಪಣಗಳು ನಿಜವಾದಾವೆಂದು ಖಚಿತವಾಗಿ ಹೇಳುವಂತಿಲ್ಲ ಕರ್ಣನು ಪಾಂಡವರನ್ನು ಕುರಿತು ಆಡಿದ ನುಡಿಗಳು ಹಾಗೂ ದ್ರೋಣನು ಯುಧಿಷ್ಠಿರನನ್ನು ಜೀವದೊಂದಿಗೆ ಸೆರೆ ಹಿಡಿದು ತರುವೆನೆಂದು ತೊಟ್ಟ ಪಣ ವ್ಯರ್ಥವಾದವು. ಸತ್ಯಕ್ರಿಯೆ ಮಾತ್ರ ಅದೆಂದಿಗೂ ವಿಫಲಗೊಳ್ಳದು. ಇಷ್ಟೇ ಏಕೆ, ವಿಫಲಗೊಳ್ಳುವ ಕ್ರಿಯೆಯನ್ನು ಸತ್ಯಕ್ರಿಯೆ ಎನ್ನಲಾಗದು. ಹಾಗೆಂದೇ ಸತ್ಯಕ್ರಿಯೆಯನ್ನು ತುಂಬು ಯೋಚನೆಯಿಂದಲೂ, ಬಲು ಎಚ್ಚರದಿಂದಲೂ ಉಚ್ಚರಿಸಲಾಗುತ್ತದೆ.

ಸಾಮರ್ಥ್ಯ, ಕರ್ತೃತ್ವ ಹಾಗೂ ಶೀಲಗಳನ್ನು ಕುರಿತಾದ ಗಟ್ಟಿಯಾದ ಆತ್ಮವಿಶ್ವಾಸವೇ ಸತ್ಯಕ್ರಿಯೆಯ ಜೀವಾಳ ಎಂದೆನ್ನಿಸಿದೆ. ಅರ್ಜುನನಲ್ಲಿ ಜಯದ್ರಥನನ್ನು ಕೊಲ್ಲುವ ಸಾಮರ್ಥ್ಯ ಖಂಡಿತವಾಗಿಯೂ ಇತ್ತು. ತಾನು ನಿಗದಿಗೊಳಿಸಿದ ಕಾಲಾವಧಿಯಲ್ಲಿ ಜಯದ್ರಥನನ್ನು ಕೊಂದೇ ತೀರುವೆನೆಂಬ ಕೆಚ್ಚು ಅರ್ಜುನನಲ್ಲಿತ್ತು. ಆದುದರಿಂದಲೇ ಅವನು ಹೊತ್ತುಬಂದರೆ ಬೆಂಕಿಗೆ ಹಾರಿಕೊಳ್ಳುವೆನೆಂದು ತನ್ನ ದೃಢವಾದ ನಿರ್ಧಾರವನ್ನು ವ್ಯಕ್ತಪಡಿಸಿದನು. ಸತ್ಯಕ್ರಿಯೆಯೆಂದರೆ ಒಂದು ವ್ಯಕ್ತಿಯು ಸ್ವೇಚ್ಛೆಯಿಂದ ಸಾವನ್ನು ಅಪ್ಪುವುದು, ಸತಿಯಂತೆ ಆತ್ಮಾರ್ಪಣೆಯನ್ನು ಮಾಡುವುದೇ ಆಗಿದೆ. ಅಂದಮಾತ್ರಕ್ಕೆ ಅದೊಂದು ಆತ್ಮಹತ್ಯೆಯ ಹೇಡಿತನವಾಗಲಿ, ಪಲಾಯನವಾಗಲಿ ಅಲ್ಲ. ಸತ್ಯಕ್ರಿಯೆ ಸಾಧ್ಯವಾಗುವುದು ಅಸಾಮಾನ್ಯವಾದ ಸಾಹಸದಿಂದಾಗಿಯೇ ಸರಿ. ಒಬ್ಬನು ತನ್ನ ಬಾಳಿಡೀ ತಬ್ಬಿಹಿಡಿದ ಮೌಲ್ಯಗಳು, ಅವನ ನಿಷ್ಕಳಂಕವಾದ ನಡತೆ, ಪರಾಕ್ರಮ, ಸದ್ಗುಣಗಳು ಹಾಗೂ ಶೀಲಗಳು ಅವಹೇಳನೆಗೆ ಗುರಿಯಾಗಿ, ಅವಮಾನಗೊಂಡು, ಅನ್ಯಾಯಕ್ಕೀಡಾಗಿ, ಹಿಂಸೆಯನ್ನನುಭವಿಸುವ ಹೊತ್ತು ಬಂದಾಗ ಇವೆಲ್ಲವುಗಳನ್ನು ಸಹಿಸಲಾಗದೆ ಅಂಥವನು ತನ್ನ ದೋಷರಾಹಿತ್ಯವನ್ನು ಸಿದ್ಧಪಡಿಸಿ ತೋರಿಸಲೆಂದೇ ಸತ್ಯಕ್ರಿಯೆಯನ್ನು ಕೈಕೊಳ್ಳುವುದುಂಟು.

ಸತ್ಯಕ್ರಿಯೆ ಒಂದು ಪ್ರಾಯಶ್ಚಿತ್ತವಲ್ಲ. ಪ್ರಾಯಶ್ಚಿತ್ತದಲ್ಲಿ ತನ್ನರಿವಿಲ್ಲದೆಯೇ ಆಗಲಿ ಇಲ್ಲವೆ ತಿಳಿದೇ ಆಗಲಿ ತನ್ನ ಕೈಯಿಂದಾದ ದುಷ್ಕೃತ್ಯಗಳನ್ನು, ಪಾಪಗಳನ್ನು, ಕೆಟ್ಟ ನಡತೆಗಳನ್ನು ಒಪ್ಪಿಕೊಳ್ಳಲಾಗುತ್ತದೆ. ಅವುಗಳ ದುಷ್ಪರಿಣಾಮಗಳಿಂದ ತಪ್ಪಿಸಿಕೊಳ್ಳಲೆಂದೇ ಪ್ರಾಯಶ್ಚಿತ್ತವನ್ನು ಕೈಕೊಳ್ಳಲಾಗುತ್ತದೆ. ಸತ್ಯಕ್ರಿಯೆಯಲ್ಲಾದರೆ ಸ್ವಂತದ ಸನ್ನಡತೆ ಹಾಗೂ ಸತ್ಕೃತ್ಯಗಳ ಭರವಸೆಯನ್ನೀಯಲಾಗುತ್ತದೆ. ಪ್ರಾಯಶ್ಚಿತ್ತವು ಒಂದು ಬಗೆಯ ಶಿಕ್ಷೆಯೆನ್ನಿಸಿದ್ದು ಸತ್ಯಕ್ರಿಯೆಯು ಆತ್ಮಗೌರವದ ಸಂಗತಿಯೆನ್ನಿಸಿದೆ. ಒಬ್ಬನು ಪ್ರಾಯಶ್ಚಿತ್ತವನ್ನು ಕೈಕೊಳ್ಳುವ ಹೊತ್ತು ಬಂದರೆ ಅದನ್ನು ಹೀನಾಯವೆಂದು ಬಗೆಯು

88. ಸಂತಸಾಹಿತ್ಯ ಆಣಿ ಲೋಕಸಾಹಿತ್ಯ (ಜನಪದ ಸಾಹಿತ್ಯ)—ಡಾ| ರಾ. ಚಿಂ. ಢೇರೆ

ಲಾಗುತ್ತದೆ. ಅದೇ, ಸತ್ಯಕ್ರಿಯೆಯನ್ನು ಕೈಕೊಳ್ಳುವವನು ಮಾತ್ರ ಭೂಷಣಾಸ್ಪದ ನೆನ್ನಿಸುತ್ತಾನೆ. ಹೀಗಾಗಿ ಸಮಾಜದಲ್ಲಿ ಅವನೊಬ್ಬ ಗೌರವಾನ್ವಿತ ವ್ಯಕ್ತಿ ಎನ್ನಿಸುತ್ತಾನೆ

ಸತ್ಯಕ್ರಿಯೆಯು ಶರತ್ತುಗಳನ್ನು ಒಳಗೊಂಡಿರುವಂಥ ಕ್ರಿಯೆ. ಅದರ ಮಾತಿನಲ್ಲಿಯ ಎರಡು ಹೇಳಿಕೆಗಳನ್ನು 'ಆದರೆ ಅಲ್ಲದೆ, ಒಂದು ವೇಳೆ, ಯಾವುದರಿಂದಲೋ–ಅದರಿಂದ' ಮೊದಲಾದ ಪದಗಳಿಂದ ಜೋಡಿಸಲಾಗುತ್ತದೆ. ಎರಡನೆಯ ಹೇಳಿಕೆ ಮೊದಲಿನದನ್ನು ಅವಲಂಬಿಸಿರುತ್ತದೆ. ಮೊದಲ ಹೇಳಿಕೆಯನ್ನು ಅದೆಂತಹ ಆತ್ಮವಿಶ್ವಾಸದಿಂದ ಉಚ್ಚರಿಸ ಲಾಗುತ್ತದೆ ಎಂದರೆ ಅದು ಸುಳ್ಳಾಗಿರಲು ಸಾಧ್ಯವೇ ಇಲ್ಲದ ಕಾರಣದಿಂದಾಗಿಯೇ ಅದನ್ನವಲಂಬಿಸಿದ ಎರಡನೆಯ ಹೇಳಿಕೆಯು ಸುಳ್ಳಾಗಲು ಸಾಧ್ಯವೇ ಇಲ್ಲವೆಂಬ ಖಚಿತತೆ ಅದರಲ್ಲಿರುತ್ತದೆ. ರುರೂವಿನ ಮದುವೆಯು ನಿಶ್ಚಿತಾರ್ಥ ನಡೆದು ಅವನ ಮದುಮಗಳಾದ ಪ್ರಮದ್ವರೆ ಹಾವು ಕಚ್ಚಿದ್ದರಿಂದ ಸಾವನ್ನಪ್ಪುತ್ತಾಳೆ. ಆಗ ಅವನು, 'ನಾನು ದಾನ-ಧರ್ಮಗಳನ್ನು ಮಾಡಿದುದು ನಿಜವಿದ್ದರೆ, ತಪಸ್ಸನ್ನಾಚರಿಸಿದವನಿದ್ದರೆ, ಗುರುವನ್ನು ಸೇವಿಸಿವವನೆನ್ನಿಸಿದ್ದರೆ (ಅವುಗಳ ಪುಣ್ಯದಿಂದಾಗಿ) ನನ್ನ ನಲ್ಲೆಯು (ಮಡದಿಯು) ಜೀವದಳೆಯುವಂತಾಗಲಿ.[89] ನಾನು ಬಾಳಿಡಿಯ ಸಂಯಮದಿಂದಿದ್ದು ಕಠೋರವಾದ ತಪವನ್ನಾಚರಿಸಿದೆ. ಅದರ ಸಾಮರ್ಥ್ಯದಿಂದಾಗಿಯಾದರೂ ನನ್ನ ನಲ್ಲೆಯು ಮರುಜೀವ ಪಡೆಯುವಂತಾಗಲಿ' ಎಂದು ಗೋಗರೆಯುತ್ತಾನೆ. ಹಲವು ಸಲ ಎರಡನೆಯ ಹೇಳಿಕೆಯು ಶಿಕ್ಷೆಯನ್ನು ಒಳಗೊಂಡಿರುತ್ತದೆ. ಭೀಮನು ದುಶ್ಶಾಸನನನ್ನು ಕೊಲ್ಲಲು ತೊಟ್ಟ ಪಣ ಹೀಗಿದೆ : 'ಭರತವಂಶಕ್ಕೆ ಕಲಂಕನೆನ್ನಿಸಿದ ಈ ದುಶ್ಶಾಸನನನ್ನು ಕೊಂದು ಅವನ ಎದೆಯನ್ನು ಬಗೆದು ನೆತ್ತರವನ್ನು ಹೀರುವನು. (ಆಡಿದಂತೆ) ನೆತ್ತರ ವನ್ನು ಹೀರಲಿಲ್ಲವಾದರೆ ನನಗೆ ನನ್ನ ಹಿರಿಯರಂತೆ ಸದ್ಗತಿಯು ಸಿಕ್ಕದೆ ಹೋಗಲಿ.'[90] ಭೀಮನು ತನ್ನ ಮೊದಲ ಹೇಳಿಕೆಯನ್ನು ನಿಜ ಮಾಡಿ ತೋರಿಸಿದ್ದರಿಂದ ಅವನು ಶಿಕ್ಷೆಯನ್ನು ಅನುಭವಿಸಬೇಕಾಗಿಬರಲಿಲ್ಲ ವ್ಯವಹಾರದಲ್ಲಿ 'ಹಾಗಿದ್ದರೆ-ಹೀಗೆ' ಎಂಬ ಮಾತುಗಳನ್ನು ಆಡಲಾಗುತ್ತದೆ. ಆದರೆ ಇಂಥ ಮಾತುಗಳ ಸ್ವರೂಪವೇ ಬೇರೆ. ಅದು, 'ಸೋದರತ್ತೆಗೆ ಮೀಸೆಯಿದ್ದರೆ' ಎಂಬ ಬಗೆಯದಾಗಿದ್ದು ನಿಜವಾಗುವ ಸಾಧ್ಯತೆಯಿಲ್ಲ. ಹೀಗಾಗಿ ಅವಳನ್ನು ಚಿಕ್ಕಪ್ಪನೆಂದು ಕರೆಯುವ ಪ್ರಮೇಯವೂ ಇರದು. ವ್ಯವಹಾರದ ಮಾತಿನಲ್ಲಿ 'ಹಾಗಿದ್ದರೆ'ಯ ತರುವಾಯದಲ್ಲಿ ಬರುವ ಹೇಳಿಕೆಯು ಅಸಾಧ್ಯವೆನ್ನಿಸು ವಂಥದಾಗಿದ್ದು ಸತ್ಯಕ್ರಿಯೆಯಲ್ಲಿ ಮಾತ್ರ ಇದು ನೂರಕ್ಕೆ ನೂರರಷ್ಟು ನಿಜ.

ಸತ್ಯಕ್ರಿಯೆ ಕೂಡ ಒಂದು ಬಗೆಯ ದಿವ್ಯವೇ ಎನ್ನಿಸಿದ್ದರೂ ಇವೆರಡೂ ಸಂಗತಿಗಳಲ್ಲಿ ಒಂದು ಖಚಿತವಾದ ವ್ಯತ್ಯಾಸ ಉಂಟು. ದಿವ್ಯ ಎಂದರೆ ದೈವದ ಪರೀಕ್ಷೆ. ಅದರ ಸ್ವರೂಪ

---

89. ಯದಿ ದತ್ತಂ ತಪಸ್ತಪ್ತಂ ಗುರವೋ ವಾ ಮಯಾ ಯದಿ ।
ಸಮ್ಯಗಾರಾಧಿತಾಸ್ತೇನ ಸಂಜೀವತು ಮಮ ಪ್ರಿಯಾ ॥
ಯಥಾ ಚ ಜನ್ಮಪ್ರಭೃತಿ ಯತಾತ್ಮಾಹಂ ಧೃತವ್ರತಃ ।
ಪ್ರಮದ್ವರಾ ತಥಾ ಹ್ಯೇಷಾ ಸಮುತ್ತಿಷ್ಠತು ಭಾಮಿನೀ ॥ —ಆದಿ, ೯/೪–೫

90. ಯದ್ಯೇತದೇವಮುಕ್ತ್ವಾಹಂ ನ ಕುರ್ಯಾಂ ಪೃಥಿವೀಶ್ವರಾಃ ।
ಪಿತಾಮಹಾನಾಂ ಪೂರ್ವೇಷಾಂ ನಾಹಂ ಗತಿಮವಾಪ್ನುಯಾಮ್ ॥ —ಸಭಾ, ೬೮/೫೨

ಬಲು ಅಘೋರಿಯಾದುದು. ಕುದಿಯುವ ನೀರಿನಲ್ಲಿ ಕೈ ಅದ್ದುವುದು, ಕಾದು ಕೆಂಡವಾದ ಕಬ್ಬಿಣವನ್ನು ಕೈಗೆತ್ತಿಕೊಳ್ಳುವುದು, ಬೆಂಕಿ ಇಲ್ಲವೆ ನೀರಿಗೆ ಹಾರಿಕೊಳ್ಳುವುದು ಮೊದಲಾದ ಕ್ರಿಯೆಗಳಿಂದ ಸಾಮಾನ್ಯವಾಗಿ ದೇಹಕ್ಕೆ ಆಗಬೇಕಿದ್ದ ಅಪಾಯಗಳು ಹಾಗೂ ಪೀಡೆಗಳು ಆಗದಿದ್ದರೆ ನಿರ್ದೋಷತ್ವವು ತಾನಾಗಿಯೇ ಸಿದ್ಧವಾಗುವುದಿಲ್ಲ. ಈ ರೀತಿಯಾಗಿ ಸಿದ್ಧಪಡಿಸುವ ಉಪಾಯ ಎಂದರೇನೆ ದಿವ್ಯ. ದಿವ್ಯವು ಒಂದು ಬಗೆಯ ಶಿಕ್ಷೆಯಾಗಿದೆ ಸಂಶಯಿತನ ಬಳಿ ತನ್ನ ನಿರ್ದೋಷತೆಯನ್ನು ಸಿದ್ಧಪಡಿಸಿ ತೋರಿಸುವ ಪುರಾವೆಗಳು ಇಲ್ಲದಿರುವಾಗ ಅವನು ದಿವ್ಯವನ್ನು ಕೈಕೊಂಡು ಹಾಗೆಂದು ತೋರಿಸಬೇಕೆಂಬ ಸವಾಲನ್ನು ಅವನಿಗೆ ಒಡ್ಡಲಾಗುತ್ತಿತ್ತು. ಅವನು ದಿವ್ಯಕ್ಕೆ ಸಿದ್ಧನಾಗದಿದ್ದರೆ ಅವನನ್ನು ತಪ್ಪುಗಾರನೆಂದು ನಿರ್ಧರಿಸಲಾಗುತ್ತಿತ್ತು. ಹೀಗಾಗಿ ದಿವ್ಯದಲ್ಲಿ ಒಂದು ಬಗೆಯ ಬಲಪಂತ ಇದೆ. ಸತ್ಯಕ್ರಿಯೆಯಾದರೆ ಒಬ್ಬನು ತನ್ನಿಚ್ಛೆಯಂತೆ ಕೈಕೊಂಡ ಕ್ರಿಯೆ. ದಿವ್ಯಕ್ರಿಯೆಯಲ್ಲಿ ಯಶಾಪಯಶಗಳು ಸಂದೇಹಾಸ್ಪದ. ಸತ್ಯಕ್ರಿಯೆಯಲ್ಲಿ ಮಾತ್ರ ಅಪಯಶದ ಹೆದರಿಕೆ ಕೊಂಚವೂ ಇರದು.

ಮಹಾಭಾರತದಲ್ಲಿ ಗಂಡು-ಹೆಣ್ಣುಗಳ ಹತ್ತು-ಹತ್ತು ಸತ್ಯಕ್ರಿಯೆಗಳು ಬಂದಿವೆ. ದಮಯಂತಿಯು ಮೂರನ್ನು ಉಚ್ಚರಿಸಿದ್ದು ಸೈರಂಧ್ರಿ ಹಾಗೂ ಗಾಂಧಾರಿಯರು ತಲಾ ಎರಡೆರಡನ್ನು ಉಚ್ಚರಿಸಿರುವರು. ಶಚಿ, ಸಾವಿತ್ರಿ ಹಾಗೂ ಸೀತೆಯರು ಒಂದೊಂದನ್ನು ಉಚ್ಚರಿಸಿರುವರು. ಗಂಡುಗಳಲ್ಲಿ ಅರ್ಜುನನವು ಎರಡಾದರೆ ಬೇರೆಯವರವು ತಲಾ ಒಂದೊಂದರಂತೆ ಇವೆ ಸತ್ಯಕ್ರಿಯೆಗಳಲ್ಲಿ ಸಾಮಾನ್ಯವಾಗಿ ಯಜ್ಞ, ದಾನ, ತಪಸ್ಸು, ಹೋಮ, ಪುಣ್ಯ, ಸತ್ಯಗಳ ಉಲ್ಲೇಖಗಳು ಇರುತ್ತವೆ. ಹೆಣ್ಣುಗಳ ಮಾತುಗಳಲ್ಲಿ ಪಾತಿವ್ರತ್ಯ, ಪತಿನಿಷ್ಠೆಗಳು ಇದ್ದು ಗಂಡುಗಳ ಸತ್ಯಕ್ರಿಯೆಗಳಲ್ಲಿ ಪರಾಕ್ರಮ, ಗುರುಸೇವೆಗಳು ಮುಖ್ಯವಾದವುಗಳು. ಗಾಂಧಾರಿಯು ತನ್ನ ಒಂದು ಸತ್ಯಕ್ರಿಯೆಯಲ್ಲಂತೂ ವೇದಗಳು ಹಾಗೂ ಶಾಸ್ತ್ರಗಳ ಸತ್ಯತೆಗೆಯೇ ಸವಾಲೊಡ್ಡಿದ್ದಾಳೆ. ಸಾವಿತ್ರಿಯ ಸತ್ಯಕ್ರಿಯೆ ಪರೋಪಕಾರಿಯಾದುದು. ಅವಳು ತನ್ನ ಗಂಡನ ಯೋಗಕ್ಷೇಮಗಳ ಜೊತೆಗೆ ತನ್ನ ಅತ್ತೆಮಾವಂದಿರಿಗೂ ಅವುಗಳನ್ನು ಬಯಸಿರುವಳು. ಸೀತೆ ಹಾಗೂ ಶಚಿ ಸತ್ಯಕ್ರಿಯೆಯನ್ನು ಕೈಕೊಂಡಿರುವುದು ತಮ್ಮ ಶುದ್ಧವಾದ ಶೀಲವನ್ನು ಮನಗಾಣಿಸಲೆಂದು. ಸೈರಂಧ್ರಿಯ ಎರಡೂ ಸತ್ಯಕ್ರಿಯೆಗಳು ಮಾತ್ರ ಸಂದೇಹಾಸ್ಪದವಾದವುಗಳು. ಬೇರೆಡೆಯಲ್ಲಿ ಈ ಸಂಗತಿಯನ್ನು ಕುರಿತು ಚರ್ಚಿಸಲಾಗಿದೆ. ಅರ್ಜುನ, ಭೀಮ, ಧೃಷ್ಟದ್ಯುಮ್ನರ ಸತ್ಯಕ್ರಿಯೆಗಳ ವಿಷಯ ತಮ್ಮ ಹಗೆಗಳ ಕೊಲೆಗಳಿಗೆ ಮಾತ್ರ ಸಂಬಂಧಪಟ್ಟುದು. ಧೃಷ್ಟದ್ಯುಮ್ನನು ತನ್ನಿಂದ ಜರುಗಿದ ಇಷ್ಟಾಪೂರ್ತಿಗಳಲ್ಲದೆ ತನ್ನ ಕ್ಷತ್ರಿಯತ್ವ ಹಾಗೂ ಬ್ರಾಹ್ಮಣತ್ವಗಳನ್ನು ಕೂಡ ಉಲ್ಲೇಖಿಸಿರುವನು ಅರ್ಜುನ ತಾನು ಗೊತ್ತುಪಡಿಸಿದ ಅವಧಿಯಲ್ಲಿ ಜಯದ್ರಥನನ್ನು ಕೊಲ್ಲದಿದ್ದರೆ ತಾನು ಹಲವು ಬಗೆಯ ಶಿಕ್ಷೆಗಳನ್ನು ಅನುಭವಿಸಲು ಸಿದ್ಧನಾಗಿರುವುದಲ್ಲದೆ ಅಗ್ನಿಪ್ರವೇಶವನ್ನು ಕೈಕೊಳ್ಳಲೂ ಸಿದ್ಧನೆಂದು ಸಾರಿರುವನು. ಪುರಜನ ಪಾಂಡವರಿಗೆ ಒಳ್ಳೆಯದನ್ನು ಕೋರಲೆಂದು ಕೈಕೊಂಡ ಸತ್ಯಕ್ರಿಯೆಯಲ್ಲಿ ಹರಕೆಯೂ ಇದೆ. ಪಾಂಡವರಿಗೆ ನೂರು ನೂರು ವರ್ಷಗಳ ಆಯುಸ್ಸು ದೊರಕಲೆಂದು ಹಾರೈಕೆ ವ್ಯಕ್ತಗೊಂಡಿದೆ. ಅರ್ಜುನನು ತೊಟ್ಟ ಪಣದಲ್ಲಿ ಅವನಿಗೆ ಗೆಲವು

ದೊರಕಲೆಂದು ಪಾಂಡವರ ಪಾಳೆಯದ ಕೆಲವರು ಯಜ್ಞಾದಿಕರ್ಮಗಳಿಂದಾಗಿ ತಮಗೆ ದೊರೆತ ಸಾಮರ್ಥ್ಯಗಳನ್ನು ಪಣಕ್ಕೊಡ್ಡಿದ್ದಾರೆ. ಅವನು ಬೆಂಕಿಗೆ ಹಾರಿಕೊಳ್ಳುವ ಪ್ರಸಂಗ ಬಾರದಿರಲೆಂಬುದೇ ಅವರ ಆಸೆಯಾಗಿತ್ತು. ಶ್ರೀಕೃಷ್ಣ ಹಾಗೂ ರುರೂ ಇವರ ಸತ್ಯಕ್ರಿಯೆಗಳು ಸತ್ತವರನ್ನು ಮತ್ತೆ ಜೀವಂತರನ್ನಾಗಿ ಮಾಡುವುದಕ್ಕೆ ಸಂಬಂಧಿಸಿದವು ಗಳು. ರುರುವು ತನ್ನ ಪ್ರಿಯತಮೆಗಾಗಿ ತನ್ನ ಅರ್ಧ ಆಯುಷ್ಯವನ್ನು ಕೊಡಮಾಡು ತ್ತಾನೆ. ಶ್ರೀಕೃಷ್ಣನು ಮೊದಲು ತನ್ನ ಸನ್ನಡತೆಯನ್ನು ಸಾರಿಹೇಳಿದ ತರುವಾಯ ತಾನು ಬ್ರಾಹ್ಮಣರಿಗೆ ಆಗೌರವ ತೋರದೆ, ಅರ್ಜುನನಿಗೆ ದ್ರೋಹಬಗೆಯುವ ಇಲ್ಲವೆ ಹಗೆಗಳಿಗೆ ಬೆನ್ನುತೋರುವ ಹೇಡಿತನವನ್ನು ಮಾಡದೆ ಹಾಗೂ ಸತ್ಯವನ್ನು ತಿರುಗುಮುರುಗಾಗಿ ಮಾಡಿ ಹೇಳದೆ ಪಡೆದ ಪುಣ್ಯವೇನಾದರೂ ಇದ್ದರೆ ಅದರಿಂದಾಗಿ ಸತ್ತುಹೋದ ಬಾಲಕನು ಮರುಜೀವ ಪಡೆಯಲೆಂದು ಅದನ್ನು ಪಣಕ್ಕೊಡ್ಡಿದನು. ಶ್ರೀಕೃಷ್ಣನ ಈ ಸತ್ಯಕ್ರಿಯೆಯಂತೆಯೇ ಇನ್ನೂ ಕೆಲವು ಸತ್ಯಕ್ರಿಯೆಗಳಲ್ಲಿ ನಕಾರಾತ್ಮಕವಾದ ಹೇಳಿಕೆ ಗಳಿವೆ. ಸತ್ಯಕ್ರಿಯೆಗಳಲ್ಲಿ, 'ಇಂದಿನವರೆಗೆ ನನ್ನ ಕೈಯಿಂದ ಸತ್ಕೃತ್ಯಗಳು ನಡೆದಿರದಿದ್ದರೆ, ಹೋಮಹವನ, ದಾನಧರ್ಮಗಳು ಆಗಿರದಿದ್ದರೆ ಪೂರ್ವಜರಂತಹ ಸದ್ಗತಿ ನನಗೆ ಪ್ರಾಪ್ತವಾಗದಿರಲಿ' ಎಂಬ ಮಾತು ಕಂಡುಬರುತ್ತದೆ. ಮರುತ್ತನು ದೇವಗುರು ಬೃಹಸ್ಪತಿಯ ಸೋದರಮಾನನಾದ ಸಂವರ್ತ ಇವನು ತನಗಾಗಿ ಯಜ್ಞಕರ್ಮವನ್ನು ಕೈಕೊಳ್ಳಬೇಕೆಂದು ಅವನನ್ನು ಕೋರುತ್ತಾನೆ. ತಾನು ಅವನಿಗೆ ನೆರವಾಗಲು ಒಪ್ಪಿ ಕೊಳ್ಳುತ್ತಾನೆ, ತನ್ನ ನುಡಿಯ ಸತ್ಯತೆ ಅವನಿಗೆ ಮನದಟ್ಟಾಗಲೆಂದು ಈ ರೀತಿ ಹೇಳು ತ್ತಾನೆ: 'ಎಲೈ ಬ್ರಾಹ್ಮಣನೇ, ನಾನು ನಿಜವಾಗಿಯೂ ನಿನ್ನ ನೆರವಿಗೆ ನಿಲ್ಲುವೆನು. (ಇಲ್ಲದಿದ್ದರೆ) ಸೂರ್ಯನು ಪ್ರಖರನಾಗಿ ಥಳಥಳಿಸುವವರೆಗೆ, ಪರ್ವತಗಳು ಅವಿಚಲ ವಾಗಿರುವವರೆಗೆ ನನಗೆ ಉತ್ತಮವಾದ ಲೋಕಗಳು ಪ್ರಾಪ್ತವಾಗದೆ ಹೋದಾವು. ನಾನು ನಿನ್ನೊಂದಿಗೆ ಸಹಕರಿಸೆನಾದರೆ ನನ್ನ ಬುದ್ಧಿಯು ವಿಷಯಮಗ್ನವಾಗಿಬಿಟ್ಟು ಅದೆಂದಿಗೂ ನನಗೆ ಸದ್ಬುದ್ಧಿಯು ಬಾರದೆಯೇ ಇದ್ದೀತು.'

## ಶಾಪಗಳು ಹಾಗೂ ಹೆಣ್ಣು-ಗಂಡಿನ ನಂಟುಗಳು

ಭಾರತೀಯ ಸಂಸ್ಕೃತಿಯ ಒಂದು ಅಮೂಲ್ಯವಾದ ನಿಕ್ಷೇಪ, ಧರ್ಮ, ನೀತಿ ಹಾಗೂ ತತ್ತ್ವಶಾಸ್ತ್ರಗಳ ಒಂದು ಕೋಶ, ಮಾನವಸ್ವಭಾವ, ಅವನ ವ್ಯವಹಾರಗಳ ಬಗೆಬಗೆಯ ಸ್ವರೂಪಗಳ ದರ್ಶನವನ್ನು ಮಾಡಿಸುವ ಒಂದು ಆದರ್ಶ ಹೊತ್ತಗೆ ಎಂದು 'ಮಹಾ ಭಾರತ'ವನ್ನು ಗೌರವಿಸಲಾಗುತ್ತದೆ. ಅಂತಹ ಈ ಹೊತ್ತಗೆಯಲ್ಲಿ ನಮ್ಮ ಸಂಸ್ಕೃತಿಗೆ ವಿಸಂಗತವಾದ ಹಾಗೂ ನಿಷಿದ್ಧವೆನ್ನಿಸಿದಂತಹ ಮದುವೆಗೆ ಮೊದಲಿನ, ಮದುವೆಯ ತರುವಾಯದಲ್ಲಿಯ, ಶರತ್ತಿನಿಂದ ಕೂಡಿದ ಹಾಗೂ ಅಲ್ಪಾವಧಿಯವರೆಗಿನ ಹೆಣ್ಣು-ಗಂಡಿನ ನಂಟುಗಳ ಹಲವು ಉಲ್ಲೇಖಗಳಿರುವುದೊಂದು ಅಚ್ಚರಿಯ ಮಾತಾಗಿದೆ. ನಲ್ಮೆ ಹಾಗೂ ನಿಷ್ಠೆಗಳು ವಿವಾಹದ ಬದುಕಿಗೆ ಅಧಿಷ್ಠಾನ. ಇದು ಶುರುವಾಗುವುದು ಮದುವೆಯ ಪವಿತ್ರವಾದ ಸಂಸ್ಕಾರದಿಂದಲೇ. ವೈವಾಹಿಕ ಜೀವನಕ್ಕೆ ಕೊನೆ ಉಂಟಾಗುವುದು ದಂಪತಿ ಗಳಲ್ಲಿಯ ಒಬ್ಬರ ಸಾವಿನಿಂದಾಗಿಯೇ. ಹಲವು ಸಲ ಸಾವು ಕೂಡ ರೇಶಿಮೆ ಎಳೆಯ ಈ ಬಂಧನವನ್ನು ಹರಿದೊಗೆಯಲು ಅಸಮರ್ಥವಾದುದು. ತಾನಿನ್ನೂ ತುಂಬುಯೌವನದ

ಹೊಸ್ತಿಲಲ್ಲಿ ಕಾಲಿರಿಸುತ್ತಿರುವಾಗಲೇ ತನ್ನ ಗಂಡನಾದವನ ಸಾವಿನ ಕೊಡಲಿಯು ಪೆಟ್ಟು ತಿಂದು, ಬಾಳು ಹಾಳಾಗಿಹೋದ ಹಲವು ಹೆಣ್ಣುಗಳು ಮಡಿದುಹೋದ ತಮ್ಮ ಗಂಡಂದಿರ ನೆನಪಿನಿಂದಲೇ ತಮ್ಮ ಬಾಳನ್ನು ವ್ರತಸ್ಥರಾಗಿ ಇದ್ದುಕೊಂಡು ಸವೆಯಿಸುತ್ತಾರೆ. ಸತಿ ಹೋಗುವ ರೂಢಿಯು ದುಷ್ಟವೂ, ಸಮಾಜಕ್ಕೆ ವಿಘಾತಕವಾದುದೂ ಸರಿಯೇ. ಆದರೆ 'ಸತಿ'ಯ ಪರಿಕಲ್ಪನೆ ಹುಟ್ಟಿಬಂದುದು ಗಂಡನನ್ನು ಕುರಿತಾದ ಅನನ್ಯವಾದ ನಿಷ್ಠೆಯಿಂದಲೇ ಎಂಬ ಸಂಗತಿಯನ್ನು ಕೂಡ ಕಡೆಗಣಿಸುವಂತಿಲ್ಲ. ಪಾಂಡುವಿನ ಮರಣಾನಂತರ ಕುಂತಿ, ಮಾದ್ರಿಯರಲ್ಲಿ ಸತಿಹೋಗುವುದನ್ನು ಕುರಿತು ಮೇಲಾಟಕ್ಕಿಟ್ಟುಕೊಂಡಿತು. ಅವರಿಬ್ಬರೂ 'ನಾ ಮೊದಲು, ತಾ ಮೊದಲು' ಎಂದು ವಾದ ಹೂಡಿದರು ಮಾದ್ರಿಯು ತನ್ನ ಕಾಮಾಂಧತೆಯ ತಪ್ಪನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡು ತನ್ನ ಗಂಡನೊಂದಿಗೆ ಸಹಗಮನವನ್ನು ಕೈಕೊಂಡಳು. ಉತ್ತರೆ ತೀರ ಎಳೆವಯಸ್ಸಿನವಳಿದ್ದಳು. ಅವಳು ತನ್ನ ಬಸಿರಿನ ಬಯಕೆಗಳನ್ನು ಈಡೇರಿಸಿಕೊಳ್ಳಬೇಕಿದ್ದ ಕಾಲಕ್ಕೇನೆ ವಿವಾಹಜೀವನದ ಅವಳ ರಮ್ಯವಾದ ಕನಸುಗಳು ಮಣ್ಣುಗೂಡಿದ್ದವು. ಅಭಿಮನ್ಯುವನ್ನು ಯುದ್ಧಕ್ಕಾಗಿ ಬೀಳ್ಕೊಡುವ ಕಾಲಕ್ಕೆ ಅವಳು ಯುದ್ಧದಲ್ಲಿ ಅವನಿಗೆ ವೀರಮರಣ ಬಂದರೆ ತಾನೂ ಅವನನ್ನು ಹಿಂಬಾಲಿಸುವ ನಿರ್ಧಾರವನ್ನು ಅವನೆದುರು ಆಡಿದ್ದಳು. ನಿರ್ವಂಶವಾಗಲಿದ್ದ ಕುರುಕುಲದ ಕುಡಿ ಅವಳ ಬಸಿರಲ್ಲಿತ್ತು. ಅದನ್ನುಳಿಸಿ, ಬೆಳೆಯಿಸುವುದು ಅವಳ ಕರ್ತವ್ಯ ವೆನ್ನಿಸಿತ್ತು. ಅದಕ್ಕಿಂತಲೂ ಹೆಚ್ಚಾಗಿ ಅದೊಂದು ಸಾಮಾಜಿಕ ಹೊಣೆ, ಅಗತ್ಯ ಹಾಗೂ ಕರ್ತವ್ಯ ಎನ್ನಿಸಿತ್ತು. ಹೀಗಾಗಿ ತನ್ನ ಮನಸ್ಸನ್ನು ಮುರಿದು, ಅವಳಿಗೆ 'ಸತಿ'ಹೋಗುವ ತನ್ನ ವಿಚಾರವನ್ನು ಕೈಬಿಡಬೇಕಾಯಿತು. ಅದರಿಂದಾಗಿ, ತಾನು ತನ್ನ ಗಂಡನನ್ನು ಮೋಸ ಮಾಡಿದೆನೆಂಬ ಹಾಗೂ ಅವನಿಗೆ ಕೊಟ್ಟ ಮಾತನ್ನು ಮುರಿದೆನೆಂಬ ಪಾಪಪ್ರಜ್ಞೆ ಈಟಿ ಯಂತೆ ಅವಳನ್ನು ಇರಿಯತೊಡಗಿತು.

'ಕಾಂಟ್ರ್ಯಾಕ್ಟ್ ಮ್ಯಾರೇಜ್' ಎನ್ನುವುದೊಂದು ಬಲುವಿಚಿತ್ರವಾದ ಪದ. ಭಾರತೀಯ ಸಂಸ್ಕೃತಿಗೆ ಸರಿಹೊಂದದ ಪದ. ಮದುವೆ ಒಂದು ಪವಿತ್ರವಾದ ಸಂಸ್ಕಾರವೆನ್ನಿಸಿದ್ದು 'ಕಾಂಟ್ರ್ಯಾಕ್ಟ್' ಎಂದರೆ ಕರಾರು. ಮದುವೆ ಹಾಗೂ ಕರಾರುಗಳಲ್ಲಿ ಸಮಾನಧರ್ಮ ಇರುವುದರ ಬದಲು ಎದುರಾಟವೇ ಇದೆ. ವಿಶ್ವದ ಹಲವು ಧರ್ಮಗಳು ಮದುವೆಯನ್ನು ಒಂದು ಒಳ್ಳೆಯ ಸಂಸ್ಕಾರವೆಂದು ಪರಿಗಣಿಸುತ್ತವೆ. ನಮ್ಮ ಧರ್ಮವು ಹೆಣ್ಣು-ಗಂಡು ಗಳ ಮದುವೆಯ ಮುನ್ನದ ಇಲ್ಲವೆ ಮದುವೆಯಾಚೆಗಿನ ನಂಟುಗಳನ್ನು ಅಧರ್ಮಕೃತ್ಯ ವೆಂದು ತಿಳಿಯುತ್ತದೆ. ಕಾನೂನು ಕೂಡ ಇಂಥ ನಂಟುಗಳನ್ನು ಒಪ್ಪದು. ಸಮಾಜವೂ ಇವುಗಳನ್ನು ಒಪ್ಪದು. ಪಾವಿತ್ರ್ಯವೇ ಸಂಸ್ಕಾರದ ತಿರುಳೆನ್ನಿಸಿದ್ದು ಕರಾರು ಮಾತ್ರ ವ್ಯವಹಾರದ ಅಗತ್ಯ, ಅನುಕೂಲತೆಗಳನ್ನು ಅವಲಂಬಿಸಿರುವಂಥದು. ಸಂಸ್ಕಾರ ಶಾಶ್ವತವೂ ಮರಣದವರೆಗೆ ಜೊತೆ ನೀಡುವಂಥದೂ ಆಗಿದ್ದು ಕರಾರಿನ ಅಸ್ತಿತ್ವ ಉಳಿಯುವುದು ಶರತ್ತುಗಳ ಪಾಲನೆ ಇಲ್ಲವೆ ಉಲ್ಲಂಘನೆಯವರೆಗೆ ಮಾತ್ರ. ಕರಾರಿನ ಅವಧಿ ಮುಗಿಯು ತ್ತಲೇ ಅದೂ ಕೂಡ ಮುಗಿದುಬಿಡುತ್ತದೆಯಾದರೆ ಸಂಸ್ಕಾರಗಳು ಸಾವಿನವರೆಗೂ ಸವೆಯದಂಥವುಗಳು, ಸಾವಿಗೂ ಹಣಿಯದಂಥವುಗಳು. ಕರಾರಿಗೆ ಶರತ್ತುಗಳು ಅಡಿಗಲ್ಲಾ ಗಿದ್ದು ಸಂಸ್ಕಾರ ಮಾತ್ರ ಯಾವುದೇ ಶರತ್ತಿಲ್ಲದುದು. ತಮ್ಮ ಅಗತ್ಯ ತೀರುತ್ತಲೇ

ಕರಾರನ್ನು ಮುರಿದೊಗೆಯಬಹುದಾಗಿದೆ. ಆದರೆ ಸಂಸ್ಕಾರಗಳು ಮಾತ್ರ ಅಭೇದ್ಯವಾದವುಗಳೂ, ಅಭಂಗವಾದವುಗಳೂ ಎನ್ನಿಸುತ್ತವೆ. ಕರಾರಿನ ನಂಟು ಕಾನೂನಿನೊಂದಿಗಿದ್ದು ಸಂಸ್ಕಾರದ ನಂಟು ಮನದೊಂದಿಗೆ. ಭಾವನೆಯೊಂದಿಗೆ, ಶ್ರದ್ಧೆಯೊಂದಿಗೆ, ನಿಷ್ಠೆಯೊಂದಿಗೆ. ಕರಾರಿನಲ್ಲಾದರೆ ಮನಸ್ಸು, ಭಾವನೆ, ಶ್ರದ್ಧೆ, ನಿಷ್ಠೆಗಳಿಗೆ ಸ್ಥಾನವಿಲ್ಲ. ಹೀಗಾಗಿ, 'ಕಾಂಟ್ರ್ಯಾಕ್ಟ್ ಮ್ಯಾರೇಜ್' ಭಾರತೀಯ ಸಂಸ್ಕೃತಿಯ ಚೌಕಟ್ಟಿಗೆ ಸರಿ ಹೊಂದದು.

ತಮ್ಮ ಅನುಕೂಲತೆಗಳಿಗೆ ತಕ್ಕಹಾಗೆ ಮದುವೆಯ ಸಂಸ್ಕಾರಗಳ ಕಟ್ಟುಪಾಡುಗಳನ್ನು ಸಡಿಲಿಸಿಯಾಗಲಿ ಇಲ್ಲವೆ ಹೊತ್ತುಬಂದಾಗ ಅವುಗಳನ್ನು ಕಿತ್ತೊಗೆದಾಗಲಿ ಉಂಟಾಗುವ ಹೆಣ್ಣು-ಗಂಡಿನ ನಂಟುಗಳು ದೇವತೆಗಳು, ಗಂಧರ್ವರು, ಅಪ್ಸರೆಯರ ಮಟ್ಟಿಗಷ್ಟೇ ಸೀಮಿತವಾಗಿರದೆ ಅವು ನಾಗರು, ಮಾನವರು ಹಾಗೂ ರಾಕ್ಷಸರೆನ್ನಿಸಿದ ಯೋನಿಗಳಲ್ಲೂ ಇರುವುದು ಕಂಡುಬರುತ್ತದೆ. ಇಂತಹ ನಂಟುಗಳು ಕರಾರುಗಳ ಮೇರೆಗೆ ಒಂದು ವಿಶಿಷ್ಟವಾದ ಅವಧಿ ಹಾಗೂ ಶರತ್ತುಗಳನ್ನು ಒಳಗೊಂಡಿರುತ್ತವೆ. ಕೆಲವು ನಂಟುಗಳು ಬರಿ ಕೂಟಕ್ಕಾಗಿಯೆಂದೇ ತಯಾರಾದವುಗಳು. ಕೆಲವು ನಂಟುಗಳು ಗಂಡು ಮಗುವನ್ನು ಪಡೆಯುವ ಮಟ್ಟಿಗೆ ಹುಟ್ಟಿಕೊಂಡವುಗಳು. ಇವುಗಳ ಮಿತಿಯು ಕೂಡ ಎಂಟು ಜನ ಗಂಡುಮಕ್ಕಳಿಗೆ ಸೀಮಿತವಾದುದು. ಇಂತಹ ನಂಟುಗಳಲ್ಲಿ ತಮ್ಮ ವಿಷಯವಾಸನೆಯನ್ನು ಸಮಾಧಾನಪಡಿಸಿಕೊಳ್ಳುವುದೇ ಮುಖ್ಯ ಹಾಗೂ ಸಮಾನಧರ್ಮ ಎನ್ನಿಸಿದ್ದರೂ ಇವುಗಳ ಬಗೆಗಳು ಹಲವು. ಉಲೂಪಿಯು ಅರ್ಜುನನ ಸಹವಾಸವನ್ನು ಒಂದು ಇರುಳಿನ ಮಟ್ಟಿಗೆ ಬಯಸಿದಳು. ಹಿಡಿಂಬೆ ಹಾಗೂ ಚಿತ್ರಾಂಗದೆಯರಿಗೆ ತಮಗೆ ಒಂದೊಂದು ಗಂಡುಮಗುವಾಗುವವರೆಗೆ ಮಾತ್ರ ಮದುವೆಯ ಸುಖ ಸಾಕಿತ್ತು. ಯಯಾತಿಯಿಂದ ದೇವಯಾನಿಗೆ ಎರಡು, ಶರ್ಮಿಷ್ಠೆಗೆ ಮೂರು ಗಂಡುಮಕ್ಕಳಾದವು. ಇಷ್ಟಾಗಿಯೂ ಅವನು ದೇವಯಾನಿಯಿಂದ ತನಗೆ ಇನ್ನಷ್ಟು ಸುಖ ಬೇಕೆಂದು ತನ್ನ ಮಾವನೆದುರು ತೋಡಿಕೊಳ್ಳುತ್ತಾನೆ. ಹೀಗಾಗಿ ಅವನಿಗೆ ಅಕಾಲಿಕವಾದ ಆ ಮುಪ್ಪು ಬೇಡವಾಗಿತ್ತು. ಶಂತನುವು ತನ್ನ ಕಾಮವಾಸನೆಯನ್ನು ತೃಪ್ತಿಪಡಿಸಲೆಂದು ತನ್ನ ಮಗನ ಪಾಲಿನ ಹೆಣ್ಣಿನ ಸುಖವನ್ನು ಕಸಿದುಕೊಂಡು ತಾನು ಇನ್ನೊಂದು ಮದುವೆಯಾಗುತ್ತಾನೆ. ಹೆಣ್ಣು-ಗಂಡಿನ ಇಂಥ ನಂಟುಗಳಲ್ಲಿ ಒಲುಮೆಗಿಂತ ಶರತ್ತಿಗೂ, ನಿಷ್ಠೆಗಿಂತ ಕಾಮುಕತೆಗೂ ಹೆಚ್ಚಿನ ಒತ್ತು ಇರುವುದನ್ನು ಕಾಣಬಹುದು. ಈ ಬಗೆಯ ನಂಟುಗಳಲ್ಲಿ ಒಂದೊಂದು ಎಡೆಯಲ್ಲಿ ಶಾಪ, ಶಾಪದ ಹೆದರಿಕೆ, ವರದ ಆಸೆ ಇಲ್ಲವೆ ಲಂಚರುಷುವತ್ತುಗಳು ತಲೆಹಾಕಿರುವುದನ್ನು ಕಾಣಬಹುದು. ಪ್ರಮಾದಗಳ ಮೇಲೆ ತೆರೆಯೆಳೆಯಲಾಗಲಿ, ಭ್ರಷ್ಟಾಚಾರಕ್ಕೆ ಶಿಷ್ಟಾಚಾರದ ಪ್ರತಿಷ್ಠೆಯನ್ನು ತಂದೊದಗಿಸುವಲ್ಲಿ ವರ/ಶಾಪಗಳು ನೆರವಾಗುತ್ತವೆ.

ಅರಸುಗುವರಿಯಿರಲಿ ಇಲ್ಲವೆ ಬೇಡನ ಮಗಳಿರಲಿ ತನ್ನ ಕೌಮಾರ್ಯ, ಪಾವಿತ್ರ್ಯಗಳು ಭಗ್ನವಾಗದಿರಲೆಂದು ತನ್ನಿಂದಾದುದನ್ನೆಲ್ಲ ಮಾಡುತ್ತಿರುತ್ತಾಳೆ. ಕುಂತಿಯು ಮಂತ್ರದ ಸಾಮರ್ಥ್ಯವನ್ನು ಕಂಡುಕೊಳ್ಳಲೆಂದು ಸೂರ್ಯನನ್ನು ಆವಾಹಿಸುತ್ತಾಳೆ. ಆಗ ಆವಳಿಗೆ ಅದರಿಂದಾಗಿ ಉಂಟಾಗಬಹುದಾದ ಪರಿಣಾಮಗಳ ಅಂದಾಜಿರಲಿಲ್ಲ. ಹೀಗಾಗಿ ಅವಳು ಬಂದೆರಗಿದ ಸಂಕಟವನ್ನು ಎದುರಿಸುವಂತಾಯಿತು. ಸೂರ್ಯ ಸಂದೇಹಕ್ಕೆ ಎಡೆಯಿಲ್ಲದಂತೆ

ಖಚಿತವಾದ ನುಡಿಯಲ್ಲಿ ಅವಳನ್ನು ಸಮಾಗಮಕ್ಕಾಗಿ ಕೇಳುತ್ತಾನೆ: 'ಸಾ ತ್ವಂ ಆತ್ಮ ಪ್ರದಾನಂ ವೈ ಕುರುಷ್ವ॥—ಹೀಗೆ ಮಾಡುವುದರಿಂದ ನೀನು ಬಯಸಿದ ಗಂಡುಮಗು ಹುಟ್ಟುವುದು.' ಕುಂತಿ ಪಾಪಭೀರುವಾಗಿದ್ದಳು. ಅವಳಿಗೆ ತನ್ನ ತಪ್ಪಿನ ಅರಿವಾಯಿತು. ಸೂರ್ಯನನ್ನು ಬಂದಹಾಗೆ ಹಿಂತಿರುಗಿ ಹೋಗುವಂತೆ ಬೇಡಿಕೊಳ್ಳುತ್ತಾಳೆ. ತಾನು ಕುಮಾರಿಯಾಗಿರುವಾಗಲೆ ಮಗುವನ್ನು ಹೆರುವುದು ಅವಳಿಗೆ ಧರ್ಮಬಾಹಿರ ನಡತೆಯಾಗಿ ಕಂಡಿತು. 'ನಾಹಂ ಧರ್ಮಂ ಲೋಪಯಿಷ್ಯಾಮಿ' ಎಂದು ಅವನಿಗೆ ಖಡಾಖಂಡಿತವಾಗಿ ಹೇಳಿಬಿಡುತ್ತಾಳೆ. ಅವನು ಮಾತ್ರ ಬಂದಹಾಗೆ ಹಿಂತಿರುಗಲು ಸಿದ್ಧನಿರಲಿಲ್ಲ. ಅವನು ಅವಳ ಆವಾಹನೆಯ ಕಟ್ಟಿಗೆ ಸಿಕ್ಕಿಹಾಕಿಕೊಂಡಿರುತ್ತಾನೆ. ಹೀಗಾಗಿ, 'ಗಚ್ಛಾಮ್ಯಹಂ ಭದ್ರೇ ತ್ವಯಾ ಸಂಗಮ್ಯ ಸುಸ್ಮಿತೇ ॥—ನಿನ್ನನ್ನು ಕೂಡಿದ ತರುವಾಯವೇ ನಾನಿಲ್ಲಿಂದ ತೆರಳುವುದು. ನೀನು ಒಪ್ಪಿಕೊಳ್ಳದಿದ್ದರ ಮಾತ್ರ—ಶಪಿಷ್ಯೇ ತ್ವಾಮಹಂ ಕ್ರುದ್ಧೋ ಬ್ರಾಹ್ಮಣಂ ಪಿತರಂ ಚ ತೇ । ತ್ವತ್ಕೃತೇ ತಾನ್ ಪ್ರಧಕ್ಷ್ಯಾಮಿ ಸರ್ವಾನಪಿ ನ ಸಂಶಯಃ ॥ —ನಿನ್ನನ್ನು, ನಿನ್ನ ತಂದೆಯನ್ನು ಹಾಗೂ ಮಂತ್ರವನ್ನಿತ್ತ ಬ್ರಾಹ್ಮಣನನ್ನು ಸುಟ್ಟು ಬೂದಿ ಯನ್ನಾಗಿ ಮಾಡುವೆ' ಎಂದು ಅವನು ಗುಡುಗಿದರೂ ಅವಳು ಒಪ್ಪಿಕೊಳ್ಳಲಿಲ್ಲ. 'ನನ್ನೀ ದೇಹದ ಮೇಲೆ ನನ್ನ ಅಧಿಕಾರವಿರದೆ ತಾಯಿ, ತಂದೆ, ಗುರು, ಹಿರಿಯರು ನಿರ್ಧರಿಸಿದುದೇ ನನಗೆ ಒಪ್ಪಿಗೆ. ನಿನ್ನೊಂದಿಗೆ ಕೂಡಿಕೊಂಡೆನಾದರ ನನ್ನ ಕುಲದ ಹೆಸರು ಕಲಂಕಿತ ವಾಗುವುದು. ಹೀಗೆಲ್ಲ ನಡೆದುಕೊಳ್ಳುವುದು 'ವಿಧಿವರ್ಜಿತ'. ಇದು ಧರ್ಮಕ್ಕೆ ಒಪ್ಪಿತ ವಾಗಿದ್ದರೆ ಮಾತ್ರ ನನ್ನಿಂದಾಗದ ಈ ಕರ್ಮವನ್ನೂ ಕೈಕೊಳ್ಳಲೇಬೇಕಲ್ಲ.' ಅವಳ ಈ ಒಪ್ಪಿಗ ಶರತ್ತಿನಿಂದ ಕೂಡಿದುದಾಗಿದೆ. ಸಮಾಗಮದ ತರುವಾಯದಲ್ಲೂ ತನ್ನ ಕೌಮಾರ್ಯಕ್ಕೆ ಕುಂದು ಉಂಟಾಗಕೂಡದು. ಅಲ್ಲದೆ ತನಗೊಬ್ಬ ಸೂರ್ಯನಂತಹ ಮಗ ಬೇಕೆಂದು ತನ್ನ ಬಯಕೆಯನ್ನು ತೋಡಿಕೊಳ್ಳುತ್ತಾಳೆ. ಆಗ ಸೂರ್ಯ ಅವಳಿಗೆ ಭರವಸೆ ಯನ್ನೀಯುವನು: 'ಸಾ ಮಯಾ ಸಹ ಸಂಗಮ್ಯ ಪುನಃ ಕನ್ಯಾ ಭವಿಷ್ಯಸಿ । ಹಾಗೂ, ಸಾ ತ್ವಂ ಮಯಾ ಸಮಾಗಚ್ಛ ಲಪ್ಸ್ಯಸೇ ಮಾದೃಶಂ ಸುತಮ್ ॥' ಹೀಗಾಗಿ ಸಮಾಗಮದ ತರುವಾಯವೂ ತನ್ನ ಕೌಮಾರ್ಯಕ್ಕೆ ಬಾಧೆ ತಟ್ಟದು ಹಾಗೂ ತನ್ನಿಚ್ಛೆಯಂತೆ ಒಬ್ಬ ಮಗನನ್ನು ಪಡೆಯಬಹುದೆಂದು ಮನಗಂಡ ತರುವಾಯವೇ ಕುಂತಿ ಸೂರ್ಯನ ಬೇಡಿಕೆ ಯನ್ನು ಪೂರೈಸುತ್ತಾಳೆ. ಇಷ್ಟಾಗಿಯೂ ಅವಳ ಮನಸ್ಸು ಅವಳನ್ನು ಇರಿಯುತ್ತಲೇ ಇತ್ತು. ಅವಳಿಗೆ ಜನನಿಂದನೆಯ ಹೆದರಿಕೆ. ಮನಸ್ಸನ್ನು ಕಲ್ಲಿನಂತೆ ಗಟ್ಟಿಮಾಡಿ ತನ್ನ ಮಗುವನ್ನು ಹೊಳೆಯಲ್ಲಿ ತೇಲಿಬಿಟ್ಟಳು.

ಮೀನುಗಾರ ಕನ್ಯೆಯ ಚೆಲುವು, ಅವಳ ಅರಳಿನಿಂತ ಯೌವನವನ್ನು ಅವಳು ನಾವಿನ ಹುಟ್ಟು ಕಡಿಯುತ್ತಿರುವಾಗ ಕಂಡು ಪರಾಶರನಲ್ಲಿ ಕಾಮವಾಸನೆ ಕೆರಳಿತು. ಅವಳೇನೂ ಅವನ ಗುರುತಿನವಳಾಗಿರಲಿಲ್ಲ. ಆದರೂ ಅವನು ನಾಚಿಕೆಯನ್ನು ಬಿಟ್ಟು, 'ಸಂಗಮಂ ಮಮ ಕಲ್ಯಾಣಿ ಕುರುಷ್ವ' ಎಂದು ಖಚಿತವಾದ ತನ್ನ ಬೇಡಿಕೆಯನ್ನು ಅವಳ ಮುಂದಿಡು ತ್ತಾನೆ. ಸತ್ಯವತಿ ಬಲುಚೆಲುವೆ. ಅವಳಿಗೆ ಈ ಋಷಿಯಿಂದ ತನ್ನ ಕೌಮಾರ್ಯವನ್ನು ಕಾಪಾಡಿಕೊಳ್ಳುವುದಷ್ಟೇ ಅಲ್ಲದೆ ಅವನ ಕೋಪದಿಂದ ತನ್ನನ್ನು ಕಾಯ್ದುಕೊಳ್ಳಬೇಕಿತ್ತು. ಹೀಗಾಗಿ ಅವಳು ಅವನ ಬೇಡಿಕೆಯನ್ನು ನೇರವಾಗಿ ತಳ್ಳಿಹಾಕದೆಯೇ ಅವನನ್ನು

'ಆಚೆಯ ದಡದ ಮೇಲೆ ಋಷಿಗಳು ಗುಂಪಾಗಿದ್ದಾರೆ. ಇದೀಗ ಹಗಲುಹೊತ್ತು ಬೇರೆ. ಹೀಗಿರುವಲ್ಲಿ ನಿಮ್ಮ ಬಯಕೆಯನ್ನು ಹೇಗೆ ಈಡೇರಿಸಲಿ?' ಎಂದು ಸೂಚ್ಯವಾಗಿ ಕೇಳಿದಳು. ಅವನು ನೋಡನೋಡುತ್ತಲೇ ಅಲ್ಲಿಲ್ಲ ಕತ್ತಲಾವರಿಸುವಂತೆ ಮಾಡಿ ಅವಳ ಆತಂಕವನ್ನು ದೂರಗೊಳಿಸಿದನು. ಅವಳೆದುರು ತನ್ನ ಸಾಮರ್ಥ್ಯವನ್ನು ಹೀಗೆ ಮೆರೆದನು. ಇನ್ನುಮೇಲೆ ಅದಾವ ನೆಪವನ್ನು ಮುಂದೊಡ್ಡಲು ಸಾಧ್ಯ?—ಎಂದುಕೊಂಡನು. ಆದರೆ ಕುಂತಿಯಂತೆ ಅವಳು ಕೂಡ, 'ಹೆಣ್ಣುಗಳಾದ ನಾವು ಪರಾಧೀನರು. ತಾಯಿ-ತಂದೆಗಳ ಮಾತು ಮೀರಿ ಏನನ್ನೂ ಮಾಡಲಾಗದವರು. ಅಲ್ಲದೆ, 'ತ್ವತ್ ಸಂಯೋಗಾಚ್ಚ ದೂಷ್ಯೇತ ಕನ್ಯಾಭಾವೋ ಮಮಾನಘ॥ ನನ್ನ ಕನ್ಯತ್ವ ಹಾಳಾದೀತು. ಯಾರಿಗೂ ನನ್ನ ಮೋರೆಯನ್ನು ತೋರಿಸದಂತಾದೀತಲ್ಲ?' ಎಂದು ಹೊಸ ನೆಪವನ್ನು ಮುಂದೊಡ್ಡು ತ್ತಾಳೆ. ಆಗ ಪರಾಶರನು, 'ಮತ್ಪ್ರಿಯಂ ಕೃತ್ವಾ ಕನ್ಯೈವ ತ್ವಂ ಭವಿಷ್ಯಸಿ॥' ನನ್ನ ಜೊತೆ ಸಮಾಗಮವನ್ನು ಮಾಡಿವರೂ ಕನ್ಯತ್ವಕ್ಕೆ ಪೆಟ್ಟು ತಗಲದು—ಎಂದು ಹೇಳುತ್ತಾನೆ. ಆಮೇಲೆ ಅವಳ ಮೈಗೆ ಅಂಟಿದ್ದ 'ಮತ್ಸ್ಯಗಂಧ'ವನ್ನು ತೊಲಗಿಸಿ ಅವಳನ್ನು 'ಯೋಜನ ಗಂಧೆ'ಯನ್ನಾಗಿ ಮಾಡುತ್ತಾನೆ, 'ಗಂಧವತಿ'ಯನ್ನಾಗಿ ಮಾಡುತ್ತಾನೆ. ಋಷಿಯ ಸಾಮರ್ಥ್ಯ ಅವಳಿಗೀಗ ಪೂರ್ತಿಯಾಗಿ ಅರ್ಥವಾಯಿತು. ಹೀಗಾಗಿ ಅವಳು ತನ್ನನ್ನು ಅವನಿಗೆ ಒಪ್ಪಿಸಿಕೊಂಡಳು. ತರುವಾಯದಲ್ಲಿ ಮಾತ್ರ ಹೆದರಿಕೊಳ್ಳಲಿಲ್ಲ. ರಾಜಾರೋಷ ವಾಗಿ ಒಂದು ಗಂಡುಮಗುವನ್ನು ಹೆತ್ತಳು. ಅದರ ಲಾಲನೆಪಾಲನೆಗಳನ್ನು ಕೈಕೊಂಡಳು. ಮುಂದೆ ವ್ಯಾಸನು ತಪಸ್ಸಿಗೆಂದು ತೆರಳುವ ಮುನ್ನ ಅವಳ ಅಪ್ಪಣೆಯನ್ನು ಪಡೆಯು ತ್ತಾನೆ. ತನ್ನನ್ನು ನೆನೆಸಿದಾಗಲೆಲ್ಲ ತಾನು ಬಂದು ಅವಳನ್ನು ಕಾಣುವುದಾಗಿ ಮಾತು ಕೊಟ್ಟನು. ಅವರಿಬ್ಬರಲ್ಲೂ ತಾಯಿ-ಮಗನ ನಂಟು ಉಳಿದುಕೊಂಡಿತು. ಕುಂತಿ, ಸತ್ಯವತಿ ಯರು ಕ್ರಮವಾಗಿ ಕರ್ಣ, ವ್ಯಾಸರನ್ನು ತಮ್ಮ ಮದುವೆಯ ಮೊದಲೇ ಹೆತ್ತುದರಿಂದ ಇವರಿಬ್ಬರೂ ಕಾನೀನಪುತ್ರರೆನ್ನಿಸಿದರು. ಮುಂದೆ ವ್ಯಾಸನು ಲೋಕೋತ್ತರಮಹರ್ಷಿ ಎನ್ನಿಸಿದನು. ಕರ್ಣನ ಬದುಕು ಮಾತ್ರ ಸುಳಿಗೆ ಸಿಕ್ಕಿಹಾಕಿಕೊಂಡಿತು.

ಕುಂತಿ, ಸತ್ಯವತಿಯರು ತಮ್ಮ ಮದುವೆಗಿಂತ ಮೊದಲೇ ಗಂಡಿನೊಂದಿಗೆ ಕೂಡಿದರೂ ಅದು ಅತ್ಯಾಚಾರ ಎನ್ನಿಸಲಿಲ್ಲ. ವಶೀಕರಣ ವಿದ್ಯೆಯಲ್ಲಿ ಸೂರ್ಯನಿಗಿಂತ ಪರಾಶರ ಹೆಚ್ಚು ಪಳಗಿದವನಾದ್ದರಿಂದ ಅವನು ಸತ್ಯವತಿಗೆ ಶಾಪದ ಬೆದರಿಕೆಯನ್ನು ಹಾಕದೆಯೇ ಸಹಜವಾಗಿ ಅವಳಿಂದ ಒಪ್ಪಿಗೆಯನ್ನು ಪಡೆದನು. ಇಷ್ಟಾಗಿಯೂ ಅವನು ಕೂಡ ವರದ ಲಂಚವನ್ನು ನೀಡಲೇಬೇಕಾಯಿತು. ಸೂರ್ಯನು ಕುಂತಿಗೆ ಶಾಪದ ಬೆದರಿಕೆಯನ್ನು ಒಡ್ಡದಿದ್ದರೆ ಅವಳು ಅವನಿಗೆ ದಕ್ಕದೆಯೂ ಹೋಗಬಹುದಿತ್ತು. ಅವನು ಶಾಪ, ವರ ಇವೆರಡೂ ಸಂಗತಿಗಳನ್ನು ಬಳಸಿಕೊಂಡನು. ಕುಂತಿ, ಸತ್ಯವತಿ ಇವರಿಬ್ಬರೂ ಹೊತ್ತು ಬಂದಾಗ ತಮ್ಮ ಕುಮಾರಿ ಅವಸ್ಥೆಯ ಇಂಥ ಸಮಾಗಮವನ್ನು ಕುರಿತು ಅನುಕ್ರಮವಾಗಿ ಮಾವ ಹಾಗೂ ಬಲಮಕ್ಕಳಿಗೆ ಏನನ್ನೂ ಬಚ್ಚಿಡದೆ ಹೇಳಿದ್ದಾರೆ. ವ್ಯಾಸನು ಕುಂತಿಯಿಂದ ಅವಳ ಕಥೆಯನ್ನು ಆಲಿಸಿದ ಬಳಿಕ ಅವಳಿಗೆ ಹೀಗೆಂದನು: 'ಅಪರಾಧಶ್ಚ ತೇ ನಾಸ್ತಿ ಕನ್ಯಾಭಾವಂ ಗತಾ ಹ್ಯಸಿ॥—ಇದರಲ್ಲಿ ನಿನ್ನ ತಪ್ಪೇನೂ ಇಲ್ಲ. (ಆಗ ನೀನಿನ್ನೂ) ತಿಳಿಗೇಡಿ

ಯಾದ ಕನ್ಯೆಯಾಗಿದ್ದೆ.' ಇದಲ್ಲದೆ 'ದೇವತೆಗಳು ಅಣಿಮಾ ಮುಂತಾದ ಐಸಿರಿಯಿಂದ ಸಮೃದ್ಧರಾದವರು. ಸಂಕಲ್ಪ, ವಾಣಿ, ದೃಷ್ಟಿ, ಸ್ಪರ್ಶ ಹಾಗೂ ಸಮಾಗಮ ಎಂಬ ಐದು ಬಗೆಗಳಿಂದ ಅವರು ಮಕ್ಕಳನ್ನು ಹುಟ್ಟುಹಾಕಬಲ್ಲರು. ಅವರು ಪರಕಾಯಪ್ರವೇಶ ವನ್ನು ಅರಿತವರು. ದೇವತೆಗಳ ಧರ್ಮದಿಂದಾಗಿ ಮಾನವರ ಧರ್ಮಕ್ಕೆ ಬಾಧೆತಟ್ಟದು. ಹೀಗಾಗಿ ನೀನು ಚಿಂತಿಸಬೇಕಿಲ್ಲ' ಎಂದು ಸಾರಿದರು. ಸೂರ್ಯ ಕುಂತಿಗೆ ಭರವಸೆಯ ನ್ನೀಯುವಲ್ಲಿ ವ್ಯಾಸರ ಹೇಳಿಕೆಗೆ ಪೂರಕವಾಗಿಯೇ ನಡೆದುಕೊಂಡಿದ್ದಾನೆ. ತನ್ನೊಂದಿಗೆ ಸಮಾಗಮಕ್ಕೆ ಒಪ್ಪಿಕೊಳ್ಳುವುದರಿಂದ ಧರ್ಮಕ್ಕೆ ಅದಾವ ಬಾಧೆಯೂ ತಟ್ಟದೆಂದು ಅವಳಿಗೆ ಹೇಳಿದ್ದಾನೆ. 'ನಾಧರ್ಮಶ್ಚರಿತಃ ಕಶ್ಚಿತ್ ತ್ವಯಾ ಭವತಿ ಭಾಮಿನೀ ‖ ಇಷ್ಟೇ ಅಲ್ಲದೆ, ಸರ್ವಸಾಕ್ಷಿಯಾದ ನಾನು ನಿನ್ನನ್ನು ಅಧರ್ಮದಿಂದ ನಡೆದುಕೊಳ್ಳಲು ಹೇಳಲು ಸಾಧ್ಯವೆ ? ಇದೂ ಅಲ್ಲದೆ, ಅನಾವೃತಾಃ ಸ್ತ್ರಿಯಃ ಸರ್ವನರಾಶ್ಚ ವರವರ್ಣಿನೀ ‖ ದೇವತೆ ಗಳಾದ ನಮಗೆ ಗಂಡು–ಹೆಣ್ಣುಗಳೆಲ್ಲ ಬೆತ್ತಲಾಗಿಯೇ ಇರುವಂಥವರು. ಸಾಮಾನ್ಯರಲ್ಲಿ ವಿಕಾರಗಳು ಇರುವುದುಂಟು, ನಮ್ಮಂಥವರಲ್ಲಲ್ಲ.' ಇದರಿಂದ ಕಟ್ಟಬಹುದಾದ ತರ್ಕ ಎಂದರೆ ಮದುವೆಯ ಮೊದಲೇ ನಡೆದ ಕುಂತಿ-ಸೂರ್ಯರ ಕೂಟ ಒಂದು ಹಾದರದ ಕೃತ್ಯವಾಗಿರಲಿಲ್ಲ ಎಂಬುದು. ಅದರಲ್ಲಿ ಅವರಿಬ್ಬರ ತಪ್ಪೂ ಇರಲಿಲ್ಲ. ಅಲ್ಲದೆ ಅದ ರಿಂದಾಗಿ ಅಧರ್ಮವನ್ನು ಎಸಗಲಾಗಲಿಲ್ಲ. ಕಾರಣ, ಸೂರ್ಯನು ಒಬ್ಬ ದೇವತೆ ಎಂದು ಎನ್ನಿಸಿದುದು.

ಸೂರ್ಯ ಒಬ್ಬ ದೇವತೆಯಾದ್ದರಿಂದ ಅವನ ನಡತೆ ಸರಿಯಾದುದೇ ಎನ್ನುವುದಿದ್ದರೆ ಪರಾಶರ-ಸತ್ಯವತಿಯರ ಸಂಬಂಧವನ್ನು ಅರ್ಥೈಸುವುದು ಹೇಗೆ ? ಪರಾಶರ ಒಬ್ಬ ಮಹಾ ಮುನಿ ಎನ್ನಿಸಿದ್ದರೂ ಅವನೊಬ್ಬ ಮಾನವನಾಗಿದ್ದನೆಂಬುದೂ ನಿಜ, ದೇವನಾಗಿರಲಿಲ್ಲ. ಹೀಗಾಗಿ ನೆಲದ ಮೇಲಿನ ಹೆಣ್ಣು-ಗಂಡುಗಳೆಲ್ಲ ಅವನಿಗೆ ಬೆತ್ತಲಾಗಿರಲಿಲ್ಲ. ರೈಭ್ಯನ ಸೊಸೆಯು ಪತಿಪಾರಾಯಣಗಳಾದ ಸಾಧ್ವಿ ಎನ್ನಿಸಿದ್ದಳು. ತನ್ನ ಪಾತಿವ್ರತ್ಯಕ್ಕೆ ಎಳ್ಳಷ್ಟೂ ಧಕ್ಕೆತಗಲದಂತೆ ಆಕೆ ನಡೆದುಕೊಂಡಿದ್ದಳು. ಯವಕ್ರೀತನು ತನ್ನೊಂದಿಗೆ ಸಮಾಗಮಕ್ಕೆ ಬರಬೇಕೆಂದು ಅವಳನ್ನು ಕೇಳುತ್ತಲೇ ಅವಳು ಯಾವುದೇ ಮುಲುಕ ಮಾಡದೆ ತೆಪ್ಪಗೆ ಒಪ್ಪಿಕೊಳ್ಳುತ್ತಾಳೆ. ಹೀಗಾಗಿ ಯವಕ್ರೀತನು ಶಾಪದ ಹೆದರಿಕೆ ಇಲ್ಲವೆ ವರದ ಲಂಚವನ್ನು ಮುಂದೊಡ್ಡುವ ಅಗತ್ಯ ಉಂಟಾಗಲಿಲ್ಲ. ಅವನನ್ನು ಕೂಡಿಕೊಳ್ಳಲು ಅವಳು ಒಪ್ಪಲು ಕಾರಣ 'ಸಾ ತಸ್ಯ ಶೀಲಮಾಜ್ಞಾಯ ತಸ್ಮಾಚ್ಛಾಪಾಚ್ಚ ಬಿಭ್ಯತಿ ‖' ಅವಳಿಗೆ ಅವನ ಸ್ವಭಾವ ಗೊತ್ತಿತ್ತು. ಹೀಗಾಗಿ ಅವನಿಂದ ದೊರೆಕಬಹುದಾದ ಶಾಪಕ್ಕೆ ಹೆದರಿದ್ದಳು. ಉಲೂಪಿ ಒಬ್ಬ ನಾಗಕನ್ಯೆಯಾಗಿದ್ದಳು. ಐರಾವತ ನಾಗನ ಮಗನೊಡನೆ ಅವಳ ಮದುವೆ ಆಗಿತ್ತು. ಕೆಲವು ದಿನಗಳ ತರುವಾಯದಲ್ಲಿಯೇ ಅವನು ಗರುಡನಿಗೆ ತುತ್ತಾದನು. ಹೀಗಾಗಿ ಅರ್ಜುನನನ್ನು ಕಂಡಾಕ್ಷಣ ಅವಳಲ್ಲಿ ಯೌವನಸುಲಭವಾದ ಕಾಮಭಾವನೆ ಕೆರಳುವುದು ಸ್ವಾಭಾವಿಕವೇ ಆಗಿತ್ತು. ತನಗೆ ಸುಖವನ್ನೀಯೆಂದು ಅವಳು ಬಿಚ್ಚುಮನದಿಂದ ಅರ್ಜುನ ನನ್ನು ಬೇಡಿಕೊಳ್ಳುತ್ತಾಳೆ. ಅವನೂ ಅವಳ ಚೆಲುವಿಗೆ ಮನಸೋಲದಿರಲಿಲ್ಲ. ಧರ್ಮ ರಾಯ ದ್ರೌಪದಿಯರ ಏಕಾಂತವನ್ನು ತಪ್ಪಿ ಕಂಡ ಕಾರಣಕ್ಕಾಗಿ ಅವನು ಆ ಕಾಲಕ್ಕೆ ತೀರ್ಥಯಾತ್ರೆಯ ಶಿಕ್ಷೆಯನ್ನು ಅನುಭವಿಸುತ್ತಲಿದ್ದನು. ಬ್ರಹ್ಮಚರ್ಯವ್ರತವನ್ನು

ಕೈಕೊಂಡಿದ್ದನು. ಹೀಗಾಗಿ ಅವನು ತನ್ನೀ ಆತಂಕವನ್ನು ಉಲೂಪಿಯೆದುರು ಹೀಗೆ ತೋಡಿಕೊಳ್ಳುತ್ತಾನೆ: 'ಸಮಾಗಮದ ನಿನ್ನೀ ಬೇಡಿಕೆಯೇನೋ ನನಗೆ ಒಪ್ಪಿತವೇ. ಆದರೂ ನಾನೀಗ ನಿನ್ನ ಬಯಕೆಯನ್ನು ಈಡೇರಿಸುವಂತಿಲ್ಲ. ನನ್ನ ವ್ರತಭಂಗ ನಡೆಯದಿದ್ದು, ನನ್ನ ನಡತೆ ಧರ್ಮದಂತೆಯೇ ಉಳಿಯಲು ಸಾಧ್ಯವಿಲ್ಲದ್ದರೆ ಮಾತ್ರ ನಿನ್ನ ಮಾತಿಗೆ ಒಪ್ಪಿಕೊಳ್ಳಬಲ್ಲೆ. ನೀನು ನನಗೆ ಬೇಕೇ ಬೇಕು. ಹೀಗಾಗಿ, ನಮ್ಮೀರ್ವರ ಬಯಕೆಗಳನ್ನು ಈಡೇರಿಸಿಕೊಳ್ಳಲು ಅನುಕೂಲವಾಗುವಂತಹ ಯಾವುದಾದರೂ ಒಂದು ಹಂಚಿಕೆಯನ್ನು ಹೇಳು.' ಉಲೂಪಿ ಬಲು ಚುರುಕುಬುದ್ಧಿಯವಳು. ಹೀಗಾಗಿ, ಅವನ ಬ್ರಹ್ಮಚರ್ಯೆ ದ್ರೌಪದಿಯ ಪಾಟ್ಟಿಗೆ ಮಾತ್ರ ಸಂಬಂಧಪಟ್ಟುದೆಂದೂ, ತನಗಲ್ಲವೆಂದೂ ಅವನನ್ನು ಮನಗಾಣಿಸುತ್ತಾಳೆ. ಅಲ್ಲದೆ ತನ್ನ ಬಯಕೆಯನ್ನು ಈಡೇರಿಸುವುದರಿಂದಾಗಿ ಅವನ ಬ್ರಹ್ಮಚರ್ಯೆ ಇಲ್ಲವೆ ಧರ್ಮಕ್ಕೆ ಆದಾವ ಬಾಧೆಯೂ ತಟ್ಟದೆಂದು ಭರವಸೆಯನ್ನೀಯುತ್ತಾಳೆ. ಅವಳು ಬಯಸಿದಂತೆ ಅರ್ಜುನ ಒಂದು ಇರುಳನ್ನು ಅವಳ ಜೊತೆಗೆ ಕಳೆದನು. ಅಷ್ಟರಿಂದಲೇ ಅವಳು ತೃಪ್ತಿವಟ್ಟಳು, ಸಮಾಧಾನವನ್ನು ಹೊಂದಿದಳು. ಬೀಳ್ಕೊಳ್ಳುವಾಗ ಅವನಿಗೊಂದು ವರವನ್ನಿತ್ತಳು. ಆದರೆ ಅದೊಂದು 'ಲಂಚ' ಇಲ್ಲವೆ ಸಮಾಗಮದ ಮುನ್ನ ತೋರೆಲಾದ. 'ಲಂಚ'ದ ಆನೆಯಾಗಿರಲಿಲ್ಲ. ತನ್ನ ಬಯಕೆ ಈಡೇರಿದ್ದರಿಂದ ಅವಳು ನೀಡಿದ ಯಥೋಚಿತವಾದ ವರವಾಗಿತ್ತದು; ಶರತ್ತಿನದಾಗಿರಲಿಲ್ಲ.

ಮಹಾಭಾರತದಲ್ಲಿ ಊರ್ವಶಿ-ಪುರೂರವರ ಕಥೆಯು ಮೊದಲಲ್ಲಿ ಬಲು ಮೊಟಕಾಗಿ ಬಂದಿದೆ. ಹೀಗಾಗಿ ಅದನ್ನು ಕುರಿತು ಹೆಚ್ಚಿನ ಯೋಚನೆಗೆ ಕಾರಣವಿಲ್ಲ. ಊರ್ವಶಿಯು ಪುರೂರವನನ್ನು ಒಂದು ಶರತ್ತಿನೊಂದಿಗೆ ಮದುವೆಯಾಗಿದ್ದಳು. ಅವನು ಆ ಶರತ್ತನ್ನು ಮುರಿಯುವವರೆಗೆ ಮಾತ್ರ ಅವಳು ಅವನೊಂದಿಗೆ ಬಾಳ್ವೆಯನ್ನು ಸಾಗಿಸಿದಳು. ಶರತ್ತನ್ನು ಮುರಿಯುತ್ತಲೇ ಅವರ ಮದುವೆಯು ಬಾಳ್ವೆ ಮುಗಿಯಿತು. ಅವಳು ಮಿತ್ರಾವರುಣರ ಶಾಪದಿಂದಾಗಿ ಸ್ವರ್ಗಕ್ಕೆ ಎರವಲಾಗಿದ್ದಳು. ಶಂತನು-ಗಂಗೆಯರಿಗೆ ಮರುಜನ್ಮದ ಶಾಪವಿತ್ತು. ಸ್ವರ್ಗಕ್ಕೆ ಎರವಾಗಿ ಅವರಿಬ್ಬರೂ ಭೂಮಿಗೆ ಬಂದಿಳಿದರು. ಒಂದು ವಿಶಿಷ್ಟವಾದ ಶರತ್ತಿನೊಂದಿಗೆ ಅವರಿಬ್ಬರೂ ಮದುವೆಯಾದರು. ಶಂತನುವು ಶರತ್ತನ್ನು ಮುರಿಯುತ್ತಲೆ ಅವರ ವೈವಾಹಿಕ ಜೀವನ ಕೊನೆಗೊಂಡಿತು. ಈ ಕಥೆಯಲ್ಲಿ ಶಾಪವಿರುವ ಹಾಗೆ ವರವೂ ಇದೆ. ಅದು ಮೊದಲ ಹುಟ್ಟಿಗೆ ಸಂಬಂಧಪಟ್ಟುದು. ಯಯಾತಿಯು ಶುಕ್ರಾಚಾರ್ಯರ ಅಪ್ಪಣೆಯನ್ನು ಪಾಲಿಸದ ಕಾರಣ ಅವನಿಗೆ ಅಕಾಲಿಕವಾಗಿ ವೃತ್ತ್ಯ ಬಂದು ಅಡರಿತು. ದೇವಯಾನಿಯೊಂದಿಗೆ ಸಾಕಷ್ಟು ಕಾಮಸುಖವನ್ನು ಪಡೆಯುವ ಮೊದಲೇ ಹೀಗಾದ್ದರಿಂದ ಅವರಿಬ್ಬರ ವೈವಾಹಿಕ ಜೀವನದಲ್ಲಿ ತಡೆಯುಂಟಾಯಿತು. ಶರ್ಮಿಷ್ಠೆಗೂ ಅದರ ಝಳ ತಲುಪದಿರಲಿಲ್ಲ. ಯಯಾತಿಯು ತನ್ನ ಮಗ ಪುರುವಿನಿಂದ ಯೌವನವನ್ನು ಪಡೆಯಲು ಶುಕ್ರಾಚಾರ್ಯರು ತಮ್ಮ ಒಪ್ಪಿಗೆಯನ್ನು ನೀಡಿದ್ದರಿಂದ ಈ ಸಮಸ್ಯೆಗೆ ಒಂದು ಪರಿಹಾರ ದೊರೆತಿತೆನ್ನುವುದೇನೋ ನಿಜ. ನಹುಷನು ಶಚಿಯನ್ನು ವಶಪಡಿಸಿಕೊಳ್ಳಲು ಹೆಣಗುತ್ತಿದ್ದನು. ಅದಕ್ಕಾಗಿ ಋಷಿಗಳು ಹೊತ್ತ ಪಲ್ಲಕ್ಕಿಯಲ್ಲಿ ಅವನು ಕುಳಿತು ಬರಬೇಕೆಂದು ಅವಳು ಶರತ್ತನ್ನಿತ್ತಳು. ಅವನು ಒಪ್ಪಿದನು. ಶಚಿಯ ಪಾವಿತ್ರ್ಯಕ್ಕೆ ಧಕ್ಕೆ

ತಗಲಬಾರದೆಂದಿದ್ದರೆ ಅದಕ್ಕಾಗಿ ಭೃಗುವಿನ ಶಾಪ ಅಗತ್ಯದ್ದಾಗಿತ್ತು. ಈ ಶಾಪ ದಿಂದಾಗಿಯೇ ನಹುಷನು ಹೆಣ್ಣಿನ ಸುಖಕ್ಕೆ ಎರವಾಗುವಂತಾಯಿತು.

ಊರ್ವಶಿ ತನ್ನ ಕಾಮುಪಾನನೆಯನ್ನು ತೃಪ್ತಿಪಡಿಸೆಂದು ಅರ್ಜುನನನ್ನು ಬೇಡಿಕೊಳ್ಳು ತ್ತಾಳೆ. ಅದಕ್ಕವನು ಒಪ್ಪಿಕೊಳ್ಳಲಿಲ್ಲ. ಅವನ ಕಣ್ಣಲ್ಲಿ ಅವಳು ಕುರುಕುಲಕ್ಕೆ ಮಾತೆ ಯಾಗಿದ್ದಳು. ಅವಳು ಕಾಣುತ್ತಲೂ ಅವನು ಕಣ್ಣರಳಿಸಿ ಅವಳತ್ತ ನೋಡಿದುದು ನಿಜವೇ. ಹಾಗೆಂದು ಅವನು ಒಪ್ಪಿಕೊಂಡುದೂ ನಿಜ.

> ಇಯಂ ಪೌರವವಂಶಸ್ಯ ಜನನೀ ಮುದಿತೇತಿಹ ।
> ತ್ವಾಮಹಂ ದೃಷ್ಟ್ವಾಂಸ್ತತ್ರ ವಿಜ್ಞಾಯೋತ್ಫುಲ್ಲಲೋಚನಃ ॥

ಊರ್ವಶಿ ಮಾತ್ರ ಅವನನ್ನು ತಪ್ಪಾಗಿ ಭಾವಿಸಿದಳು. ತನಗೆ ಅನುಕೂಲವಾದುದನ್ನೇ ಅರ್ಥಮಾಡಿಕೊಂಡಳು. ಅವನು ತನ್ನತ್ತ ಕಣ್ಣಿಟ್ಟು ನೋಡಿದುದನ್ನೇ ಒಂದು ಬಂಡವಾಳ ವನ್ನಾಗಿ ಮಾಡಿಕೊಂಡುಬಿಟ್ಟಳು. ಹೀಗಾಗಿ ಅವನನ್ನು ತನ್ನತ್ತ ಒಲಿಸಿಕೊಳ್ಳಲೆಂದು ಆಕೆ, 'ನಿನ್ನ ತಂದೆಯು ಅಪ್ಪಣೆಯ ಮೇರೆಗೆ ನಾನಿಲ್ಲಿಗೆ ಬಂದಿರುವೆ. ಬಂದವಳು ನಾನು ಎನ್ನುವುದನ್ನು ಮರೆಯದಿರು' ಎಂದು ನುಡಿಯುತ್ತಾಳೆ. ಆದರೆ ಅರ್ಜುನನ ನಿರ್ಧಾರ ಮಾತ್ರ ಗಟ್ಟಿಮುಟ್ಟಾಗಿತ್ತು. ಅವನು ವಿನಯದಿಂದಲೇ ಅವಳಿಗೆ ಹೀಗೆನ್ನುವನು: 'ನ ಮಾಮರ್ಹಸಿ ಕಲ್ಯಾಣಿ ಅನ್ಯಥಾ ಧ್ಯಾತುಮಪ್ಸರಃ।' ಅಲ್ಲದೆ, 'ಗುರೋರ್ಗುರು ತರಾಮೇತಂ ಮಮ ತ್ವಂ ವಂಶವರ್ಧಿನೀ।' ಎಂದು ಹೇಳಿ ಅವಳು ನಲ್ಲದ ಬಯಕೆ ಯನ್ನು ಪಡಕೂಡದೆಂದು ಅವಳನ್ನು ಬಲು ನಯವಾಗಿ ಕೇಳಿಕೊಳ್ಳುತ್ತಾನೆ. ಊರ್ವಶಿ ಕೆರಳುತ್ತಾಳೆ. ಅವನನ್ನು ಹೀಗೆ ಶಪಿಸುತ್ತಾಳೆ—

> ಯಸ್ಮಾನ್ಮಾಂ ನಾಭಿನಂದೇಥಾಃ ಕಾಮಬಾಣವಶಂಗತಾಮ್ ॥
> ತಸ್ಮಾತ್ ತ್ವಂ ನರ್ತನಃ ಪಾರ್ಥ ಸ್ತ್ರೀಮಧ್ಯೇ ಮಾನವರ್ಜಿತಃ ।
> ಅಪಮಾನಿತಿ ವಿಖ್ಯಾತಃ ಷಂಢವದ್ವಿಚರಿಷ್ಯಸಿ ॥

ನೀನು ನನ್ನನ್ನು ಹೀಗೆಲ್ಲ ನಿರಾಕರಿಸುತ್ತಿರುವೆ. ಹೀಗಾಗಿ ನೀನು (ಹೆಣ್ಣುಗಳ ನಡುವೆ) ಅವಮಾನಗೊಂಡು ನರ್ತಕನಾಗಿ ಬೆರೆಯಬೇಕಾದೀತು. ಅವರೆಲ್ಲ ನಿನ್ನನ್ನು 'ನಪುಂಸಕ' ನೆಂದು ಕರೆಯುವರು. ಅರ್ಜುನನಂತಹ ಕಡುಗಲಿಯು ಷಂಡನೆನ್ನಿಸುವುದೆಂದರೆ ಅವನಿಗೆ ಸಾವಿಗಿಂತಲೂ ಹೆಚ್ಚಿನ ಸಂಕಟವೇ ಸರಿ. ಅದೇನಿದ್ದರೂ ಈ ಶಾಪವನ್ನು ಬಲು ಯೋಜನಾಪೂರ್ವಕವಾಗಿ ಬೇಕೆಂದೇ ಹುಟ್ಟುಹಾಕಲಾಗಿದೆ. ಅರ್ಜುನನಿಗೆ ಅವನ ಅಜ್ಞಾತ ವಾಸದ ಕಾಲಕ್ಕೆ ಈ ಶಾಪವೇ ಆಸರೆಯನ್ನು ಒದಗಿಸಿಕೊಡಲೆಂಬ ಆಸೆ. ಊರ್ವಶಿ-ಅರ್ಜುನರ ಸಂಬಂಧ ಸೋಲನ್ನನುಭವಿಸಲಿ ಎಂದೇ ಅವಳನ್ನು ಅವನಲ್ಲಿಗೆ ಕಳುಹಿಸ ಲಾಗಿತ್ತು. ಈ ಹೆಣ್ಣು-ಗಂಡಿನ ನಂಟು ಕೂಡ ಶಚಿ-ನಹುಷರ ನಂಟಿನಂತೆಯೇ ಫಲಕಾರಿ ಯಾಗಲಿಲ್ಲ.

ಮಹಾಭಾರತದಲ್ಲಿ ಶಾಪಗಳಿಗೆ ಸಂಬಂಧಪಟ್ಟ ಈ ಹೆಣ್ಣು-ಗಂಡಿನ ಮದುವೆಯ ಮುನ್ನ, ಮದುವೆಯ ತರುವಾಯದ ಹಾಗೂ ಮದುವೆಯಾಚೆಗಿನ ನಂಟುಗಳ ಸ್ವರೂಪವು ಈ ಬಗೆಯದಾಗಿದೆ.

# ಮಹಾಭಾರತ : ಮಾನವನ ಕಥೆ

ಮಹಾಭಾರತ ಎಂದರೆ ಸಾಕ್ಷಾತ್ ವಿಶ್ವರೂಪದರ್ಶನವೇ ಸರಿ. ವಿಶ್ವದ ವಿವಿಧತೆ, ವಿಸ್ಮಯ ಹಾಗೂ ವಿಶಿಷ್ಟತೆಗಳನ್ನೊಳಗೊಂಡ ಮನೋಜ್ಞವಾದ ಈ ಯುದ್ಧವೆಂದರೆ ಮಹಾಭಾರತದ ಒಂದು ಮುಖ್ಯವಾದ ಭಾಗವೆನ್ನಿಸಿದೆ. ಅಂದಮಾತ್ರಕ್ಕೆ ಅದೊಂದು ಯುದ್ಧದ ಕಥೆ ಮಾತ್ರ—ಎಂದೆನ್ನಲಾಗದು. ಮಾನವನೇ ಮಹಾಭಾರತದ ಕೇಂದ್ರ ಬಿಂದುವೆನ್ನಿಸಿದ್ದಾನೆ. ಹೀಗಾಗಿ ಇದು ಮಾನವನ ಕಥೆಯೆನ್ನಿಸಿದೆ. ಮಹಾಭಾರತದಲ್ಲಿ ಮಾನವನ ಬಾಳಿನ ಹರಹು, ಅದರ ಹತ್ತುಹಲವಾರು ಬಗೆಯ ಬದಿಗಳು, ಅವನ ಮನಸ್ಸು, ಸ್ವಭಾವಗಳ ಅಸಂಖ್ಯವಾದ ಛಾಯೆಗಳು, ಅವನ ಸುಖ-ದುಃಖಗಳು, ಹಾಗೂ ಸೋಲುಗೆಲವುಗಳ ದರ್ಶನ ಎಲ್ಲೆಡೆಯಲ್ಲಿ ದೊರಕುತ್ತಲೇ ಇರುತ್ತದೆ. ಮಹಾಭಾರತದ ಹಲವಾರು ಘಟನೆಗಳು ಹಾಗೂ ಸನ್ನಿವೇಶಗಳ ಹುಟ್ಟು ಹಾಗೂ ಅವುಗಳ ನೇಯ್ಗೆ ಸಾಧ್ಯವಾದುದು ಶಾಪ/ವರಗಳು ಹಾಸುಹೊಕ್ಕಾಗಿರುವುದರಿಂದಲೇ. ಅಜ್ಞಾತದ ಒಂದು ವರ್ಷವನ್ನು ಕಳೆಯುವುದು ಪಾಂಡವರಿಗೆ ಬಲುಕಷ್ಟದ ಕಾಯಕವೆನ್ನಿಸಿತ್ತು. ಅರ್ಜುನ, ದ್ರೌಪದಿಗಂತೂ ಅದು ಇನ್ನಷ್ಟು ಕಷ್ಟದ್ದಾಗಿತ್ತು. ಸೈರಂಧ್ರಿಯಾಗಿ ಗಂಡುಗಳ ಕಣ್ಣಿಗೆ ಬೀಳದಂತೆ ಸುಧೇಷ್ಣಾಳ ಅಂತಃಪುರದಲ್ಲಿರುವುದು ದ್ರೌಪದಿಗೆ ಇದ್ದುದರಲ್ಲಿಯೇ ಹಗುರಾದ ಸಂಗತಿಯಾಗಿತ್ತು. ಅಜ್ಞಾತವಾಸದ ಕಾಲಕ್ಕೆ ಅವಳು ಆದಷ್ಟುಮಟ್ಟಿಗೆ ಗಂಡುಗಳ ಕಣ್ಣಿಗೆ ಬೀಳದಂತಿದ್ದ ಕಾರಣ ಅವಳ ನಿಜಸ್ವರೂಪ ಗುಟ್ಟಾಗಿ ಉಳಿದು ಕೊಳ್ಳಲು ನೆರವಾಗಿತ್ತು. ಅವಳು ಕೀಚಕನ ಕಣ್ಣಿಗ ಬೀಳುತ್ತಲೇ ತೊಂದರೆಗೀಡಾದಳು. ಭೀಮನ ಶಕ್ತಿ-ಯುಕ್ತಿಗಳಿಂದಾಗಿ ಈ ಸಂಕಟ ತಪ್ಪಿತಷ್ಟೆ. ಅರ್ಜುನನಂತಹ ತೇಜಸ್ಸಿನ ಕಲಿಯನ್ನು ಬಚ್ಚಿಡುವುದು ಅಸಾಧ್ಯವೆನ್ನಿಸಿತ್ತು. ನಪುಂಸಕತೆಯು ಅವನ ಶೌರ್ಯವನ್ನು ಮರೆಮಾಚಿತು. ಹೀಗಾಗಲೆಂದೇ ಊರ್ವಶಿಯ ಶಾಪವನ್ನು ಹುಟ್ಟುಹಾಕಲಾಗಿದೆ. ಅರ್ಜುನ ಹೆಣ್ಣುಗಳ ಬಗೆಗೆ ಮಡಿವಂತನಾಗಿದ್ದನೆನ್ನಲಾಗದು. ಅವನು ತನ್ನ ತೀರ್ಥ ಯಾತ್ರೆಯ ಶಿಕ್ಷೆಯ ಕಾಲಕ್ಕೆ ವ್ರತಸ್ಥನಾಗಿದ್ದು ಕೂಡ ಮೂರು ಹೆಣ್ಣುಗಳ ಬಳಿಸಾರ ದಿರಲಿಲ್ಲ. ಇಂದ್ರನ ಬಳಿ ಊರ್ವಶಿಯಲ್ಲದೆ ಇನ್ನೂ ಹಲವು ಜನ ಅಂದಗಾತಿಯರಾದ ಅಪ್ಸರೆಯರಿರಲಿಲ್ಲವೆಂದಲ್ಲ. ಆದರೂ ಅವನು ಬೇಕೆಂದೇ ಚಿತ್ರಸೇನೆಯ ಮೂಲಕ ಹೇಳಿಸಿ ಊರ್ವಶಿಯನ್ನೇ ಅರ್ಜುನನಲ್ಲಿಗೆ ಕಳುಹಿಸುವುದು ಒಂದು ಗಮನಾರ್ಹವಾದ ಸಂಗತಿ ಯಾಗಿದೆ. ಪುರೂರವ, ಊರ್ವಶಿ ಹಾಗೂ ಅರ್ಜುನ ಇವರ ನಂಟುಗಳನ್ನು ಗಮನ ದಲ್ಲಿಟ್ಟುಕೊಂಡೇ ಅವನು ಹಾಗೆ ಮಾಡಿದ್ದುದು. ಅರ್ಜುನನಿಗೆ ಆತನ ಅಜ್ಞಾತವಾಸದ ಕಾಲಕ್ಕೆ ರಕ್ಷಣೆಯನ್ನು ಒದಗಿಸಲು ಒಂದು ಶಾಪದ ಆವಶ್ಯಕತೆ ಕಂಡುಬಂದಿತು. ಅರ್ಜುನ ಊರ್ವಶಿಯ ಕೋರಿಕೆಯನ್ನು ಒಪ್ಪಿಕೊಳ್ಳುವುದು ಅಸಾಧ್ಯ. ಆದರಿಂದಾಗಿ ಅವಳು ಕುಪಿತಳಾಗಿ ಅವನನ್ನು ಶಪಿಸದಿರಲಾರಳು. ಇಂದ್ರನ ಈ ಲೆಕ್ಕ ಹುಸಿಹೋಗಲಿಲ್ಲ. ಹೀಗಾಗಿ ಅರ್ಜುನನ ಬಿಕ್ಕಟ್ಟಿಗೊಂದು ಪರಿಹಾರ ಕಂಡುಬಂದುದು. ಶ್ರೀಕೃಷ್ಣನ ನೆರವು ತನ್ನ ಬೆನ್ನಿಗಿದ್ದರೂ ತಾನು ಕರ್ಣನನ್ನು ಸೋಲಿಸಲಾರೆನೆಂಬುದನ್ನು ಅರ್ಜುನ ಮನಗಂಡಿ ದ್ದನು. ಅರ್ಜುನನಿಗೆ ಗೆಲವು ದೊರಕುವಂತಾಗಲೆಂದೇ ಕರ್ಣನಿಗೆ ಪರಶುರಾಮ ಹಾಗೂ

ಬ್ರಾಹ್ಮಣರಿಂದ ಶಾಪಗಳನ್ನು ಕೊಡಿಸಲಾಯಿತು. ಭೀಷ್ಮನ ಬಲು ದೀರ್ಘವಾದ ಆಯುಸ್ಸಿಗೆ ಶಾಪವೇ ಕಾರಣ. ಭೀಷ್ಮ ರಾಜನೆನ್ನಿಸದಿದ್ದರೂ ಅವನ ಬಾಳಿನ ಬಹುಪಾಲು ವೇಳೆಯೆಲ್ಲ ರಾಜ್ಯದಾಡಳಿತೆಯ ಚುಕ್ಕಾಣಿಯನ್ನು ಹಿಡಿದಿಟ್ಟುಕೊಳ್ಳುವಲ್ಲಿಯೇ ಕಳೆಯಿತು. ಅದರಿಂದಾಗಿ ಅವನಲ್ಲಿ ರಾಜ್ಯಪಟುತೆ ಮೂಡಿದ್ದು ನಿಜ. ಯುದ್ಧದ ಕಾಲಕ್ಕೆ ಅವನ ಕಲಿತನಕ್ಕೆ ಒಳ್ಳೆಯ ಅವಕಾಶ ದೊರೆತುದೂ ನಿಜ. ಆದರೆ ಇದೇ ಅವಧಿಯಲ್ಲಿ ತನ್ನಲ್ಲಿದ್ದ ಧರ್ಮ, ಸಮಾಜ, ರಾಜಕೀಯಗಳ ಬಲುಸೂಕ್ಷ್ಮವಾದ ಅರಿವನ್ನು ವ್ಯಕ್ತಗೊಳಿಸುವ ಅವಕಾಶ ಅವನಿಗೆ ದಕ್ಕದೇಹೋಯಿತು. ಯುದ್ಧದಲ್ಲಿ ಅವನ ಪತನವಾಗುತ್ತಲೇ ಉಳಿದವರಂತೆ ಅವನೂ ಅಸುನೀಗಿದ್ದರೆ ಅವನಲ್ಲಿಯ ಪ್ರಜ್ಞೆಯೆಲ್ಲ ಮಣ್ಣುಗೂಡುತ್ತಿತ್ತು. ಹಾಗಾಗಕೂಡದು, ಅದನ್ನೆಲ್ಲ ವ್ಯಕ್ತಪಡಿಸುವ ಮಟ್ಟಿಗಿನ ಆರೋಗ್ಯ ಹಾಗೂ ಹೊತ್ತು ಅವನಿಗೆ ದೊರಕಲೆಂದೇ ಅವನಿಗೆ ಇಚ್ಛಾಮರಣದ ವರವನ್ನು ದಯಪಾಲಿಸಲಾಯಿತು. ಅವನ ಅಂತ್ಯದವರೆಗೂ ನೆನಪು ಹಾಗೂ ಮಾತನಾಡುವ ಸಾಮರ್ಥ್ಯ ಅವನಲ್ಲಿ ಉಳಿದುಕೊಂಡ ಕಾರಣ ಅವನಿಂದ ಶಾಂತಿ ಹಾಗೂ ಅನುಶಾಸನಪರ್ವಗಳ ರೂಪದ ಜ್ಞಾನಗಂಗೆ ಹರಿದುಬರುವಂತಾದಳು. ಭೀಷ್ಮನ ದೃಷ್ಟಿಯಿಂದ ನೋಡಿದರೆ ಇಚ್ಛಾಮರಣ ಅವನಿಗೊಂದು ಶಾಪವೆನ್ನಿಸಿತ್ತು. ಆದರೆ ವಿಶ್ವಕ್ಕೆ ಮಾತ್ರ ಅದೊಂದು ವರದಾನವಾಯಿತು.

ಪರೀಕ್ಷಿತನ ಸಾವು ಏಳು ದಿನಗಳಲ್ಲಿ, ಕೌರವರ ನಾಶ ಹದಿನಾಲ್ಕು ವರುಷಗಳ ತರುವಾಯ ಹಾಗೂ ಯಾದವರ ಸಂಹಾರ ಮೂವತ್ತಾರು ವರುಷಗಳ ತರುವಾಯದಲ್ಲಿ ಎಂಬುದು ಬರಿ ಒಂದು ಕಣಿಹೇಳಿಕೆಯಾಗಿರಲಿಲ್ಲ. ಅವು ಅನುಕ್ರಮವಾಗಿ ಶೃಂಗಿ, ದ್ರೌಪದಿ ಹಾಗೂ ಗಾಂಧಾರಿಯ ಶಾಪದ ಪರಿಣಾಮಗಳಾಗಿವೆ. ಶಾಪವಾಣಿ ಅಮೋಘವಾದುದರಿಂದ ಆಯಾ ನಿರ್ದಿಷ್ಟಕಾಲಕ್ಕೆ ಅವರವರ ನಾಶ ಖಂಡಿತವಾಗಿಯೇ ನಡೆಯಲಿತ್ತು. ಶಚಿಯ ಪಾವಿತ್ರ್ಯ ಹಾಳಾಗದಿರಲೆಂದು ನಹುಷನಿಗೆ ಭೃಗುವಿನ ಶಾಪ ತಟ್ಟಿದುದು. ಇಲ್ಲದಿದ್ದರೆ ಶಚಿ ತನ್ನ ಶೀಲವನ್ನು ಕಾಪಾಡಿಕೊಳ್ಳುವುದು ಅಸಾಧ್ಯವಾಗಿತ್ತು. ನಲಕೂಬರ ಹಾಗೂ ಬ್ರಹ್ಮದೇವನ ಶಾಪಗಳಿಂದಾಗಿ ರಾವಣನು ಸೀತೆಯನ್ನು ಮುಟ್ಟುವ ಸಾಹಸಕ್ಕಿಳಿಯಲಿಲ್ಲ. ಶಾಪವಿಲ್ಲದ್ದರಿಂದಲೇ ಬೃಹಸ್ಪತಿಯು ತನ್ನ ಅತ್ತಿಗೆಯ ಮೇಲೆ ಅತ್ಯಾಚಾರ ಎಸಗಿದನು. ರೈಭ್ಯನ ಸೊಸೆ ಪತಿಪರಾಯಣಳೆನ್ನಿಸಿಯೂ ಯವಕ್ರೀತನ ಸಮಾಗಮದ ಬೇಡಿಕೆಯನ್ನು ತಳ್ಳಿಹಾಕಲಾಗಲಿಲ್ಲ. ಮುಪ್ಪಿನ ಶಾಪದಿಂದಾಗಿ ಯಯಾತಿಯ ಅಳತೆ ಮೀರಿದ್ದ ಕಾಮವಾಸನೆಗೆ ಕಡಿವಾಣವನ್ನು ಹಾಕಿದಂತಾಯಿತು. ಗಂಗೆಯ ವಿಚಿತ್ರವಾದ ಶರತ್ತುಗಳನ್ನು ಕಾಯ್ದುಕೊಳ್ಳಲೆಂದು ಶಂತನುವು ಬಹಳ ಬೆಲೆಯನ್ನು ತೆರಬೇಕಾಗಿ ಬಂದಿತು. ವಿದುರನಲ್ಲಿ ಒಬ್ಬ ರಾಜ್ಯಕರ್ತನಲ್ಲಿರಬೇಕಿದ್ದ ಸದ್ಗುಣಗಳೆಲ್ಲ ಇರುವಾಗಲೂ ಯಾವಾಗಲೂ ಎಲ್ಲರ ಉದಾಸೀನಕ್ಕೀಡಾಗಿಯೇ ಅವನು ತನ್ನ ಬಾಳನ್ನು ಸವೆಸುವಂತಾಯಿತು. ಇದಕ್ಕೆ ಕಾರಣ ಆವನ ಹಿಂದಣ ಜನ್ಮದಲ್ಲಿ ಅಣಿಮಾಂಡವ್ಯನು ಅವನಿಗಿತ್ತ ಶಾಪ. ಸೌದಾಸರಾಜನ ಬಾಳಂತೂ ಶಾಪಗಳಿಂದ ತುಂಬಿದುದು. ಅವನು ವಸಿಷ್ಠನನ್ನು ಶಪಿಸಲೆಂದು ಕೈಗೆತ್ತಿ ಅಭಿಮಂತ್ರಿತವಾದ ನೀರನ್ನು ತನ್ನ ಕಾಲುಗಳ ಮೇಲೆಯೇ ಚೆಲ್ಲಿಕೊಂಡ ಕಾರಣ ತನ್ನನ್ನೇ ಶಪಿಸಿಕೊಂಡು ಕಲ್ಮಾಷಪಾದನೆನ್ನಿಸಿದನು. ಅವನಿಗೆ ಬ್ರಾಹ್ಮಣ ಹಾಗೂ

ಮಗ ಶಕ್ತಿಯಿಂದ ಶಾಪಗಳು ದೊರೆತು ಅವನೊಬ್ಬ ನರಭಕ್ಷಕನಾದ ರಾಕ್ಷಸನಾದನು. ಬ್ರಾಹ್ಮಣಸ್ತ್ರೀಯ ಶಾಪಕ್ಕೀಡಾಗಿ ತನ್ನ ಕುಲವೇ ಮುಂದುವರಿಯದೆನ್ನಿಸುತ್ತಲೇ ಅವನು ಗಂಡುಮಗುವನ್ನು ಪಡೆಯಲೆಂದು ತನ್ನ ಮಡದಿಯಾದ ದಮಯಂತಿಯನ್ನೇ ವಸಿಷ್ಠನ ಬಳಿಗೆ ಕಳಿಸಿಕೊಡುವಂತಾಯಿತು. ಆವನ ಬಾಳಿನಲ್ಲಿಯ ಹಲವಾರು ಘಟನೆ, ಸನ್ನಿವೇಶ ಗಳಿಗೆ ಶಾಪವೇ ಆಧಾರವೆನ್ನೊದಗಿಸಿದೆ. ದೇವರುಗಳು ಜನಮೇಜಯನ ಸರ್ಪಯಜ್ಞ ದಲ್ಲಿ ವಿಘ್ನವನ್ನು ತಂದೊಡ್ಡಲೆಂದೇ ಸರಮೆಯ ಶಾಪವನ್ನು ಯೋಜಿಸಲಾಗಿದೆಯೆಂದು ಕಾಣುತ್ತದೆ. ಭೀಮನು ದುರ್ಯೋಧನನ ಊರುಭಂಗವನ್ನು ಕೈಗೊಳ್ಳಲೆಂದು ತೊಟ್ಟ ಪಣ ಮೈತ್ರೇಯನ ಶಾಪದಿಂದಾಗಿ ಇನ್ನಷ್ಟು ಗಟ್ಟಿಗೊಂಡಿತು.

ಮಹಾಭಾರತದಲ್ಲಿ ಶಾಪಗಳಿಗೆ ಬಲು ಮುಖ್ಯವಾದ ಸ್ಥಾನವಿದೆ. ಶಾಪಗಳಿಲ್ಲದಿದ್ದರೆ ಅವೆಷ್ಟೋ ಘಟನೆಗಳು, ಸನ್ನಿವೇಶಗಳು ಹಾಗೂ ಉದಾಹರಣೆಗಳನ್ನು ಅರ್ಥೈಸುವುದು ಸಾಧ್ಯವಾಗದ ಮಾತೆನ್ನಿಸುತ್ತಿತ್ತು. ಕಥೆಗಳು ಹಾಗೂ ಸ್ವಭಾವಗಳಲ್ಲಿಯ ಎಳೆಗಳನ್ನು ಹೊಂದಿಸಲು ಶಾಪಗಳಿಂದಾಗಿ ತುಂಬ ನೆರವು ದೊರೆತಿದೆ. 'ಶಾಪ'ವು ಮಹಾಭಾರತದ ಅಂದದ ಮುಖ್ಯವೆನ್ನಿಸಿದ ಹಾಗೂ ಬಲು ವಿಲೋಭನೀಯವೂ ಆದ ಒಂದು ಬದಿ ಎಂಬುದನ್ನು ಎತ್ತಿತೋರಲೆಂವೇ 'ಶಾಪಸಂಭ್ರಮ' ಎಂಬ ಈ ಬರವಣಿಗೆಯನ್ನು ಕೈಕೊಳ್ಳಲಾಗಿದೆ.

**ಶ್ರೀ. ರ. ಭಿಡೆ**

ಪುಣೆ
ಚೈತ್ರ ಶುದ್ಧ ಪ್ರತಿಪದೆ, ಶಕೆ ೧೯೦೩
೦೭ ಮಾರ್ಚ್, ೧೯೯೦

ಜನಮೇಜಯನ ಸರ್ಪಯಜ್ಞಕ್ಕಾಗಿ ನೃಪಶ್ರೇಷ್ಠರೆಲ್ಲ ಕಲೆತಿದ್ದಾರೆ. ಅವರೆಲ್ಲರಿಗೆ ಭಾರತ ಎಂಬ ಇತಿಹಾಸವನ್ನು ಹೇಳುವಂತೆ ವ್ಯಾಸಮಹರ್ಷಿಗಳು ತಮ್ಮ ಶಿಷ್ಯನಾದ ವೈಶಂಪಾಯನನಿಗೆ ಅಪ್ಪಣೆ ನೀಡುತ್ತಾರೆ. ಆಗ ಅವನು ಹೇಳಿದ ೨೪೦೦೦ ಶ್ಲೋಕಗಳನ್ನು ಒಳಗೊಂಡ ಭಾರತದ ಕಥೆಯನ್ನು ಆಲಿಸಿದವರಲ್ಲಿ ಸೌತಿಯೂ ಒಬ್ಬನು. ಮುಂದೆ ಸೌತಿಯು ನೈಮಿಷಾರಣ್ಯದಲ್ಲಿದ್ದ ಬ್ರಹ್ಮರ್ಷಿಯ ಅಪ್ಪಣೆಯ ಮೇರೆಗೆ ಈ ಭಾರತವನ್ನು ದೊಡ್ಡದು ಮಾಡಿ ಅವರಿಗೆ ಅರುಹುತ್ತಾನೆ.

ಪರಾಕ್ರಮಿಯಾದ ಪಾಂಡುರಾಜ ಒಂದು ಸಲ ಬೇಟೆಗೆಂದು ಕಾಡಿಗೆ ತೆರಳುತ್ತಾನೆ. ಒಂದೆಡೆಯಲ್ಲಿ ಹೆಣ್ಣು-ಗಂಡು ಹುಲ್ಲೆಗಳ ಒಂದು ಜೊತೆಯು ಪ್ರಣಯಕ್ರೀಡೆಯಲ್ಲಿ ತೊಡಗಿರುವುದನ್ನು ಕಾಣುತ್ತಾನೆ. ಅವನೆಸೆದ ಬಾಣವು ಗಂಡಿಗೆ ತಗಲಿಬಿಡುತ್ತದೆ. ಹುಲ್ಲೆಗಳ ಆ ಜೊತೆ ಬೇರಾರೂ ಆಗಿರದೆ ಕಿಂದಮ ಋಷಿ ಹಾಗೂ ಅವನ ಮಡದಿಯಾಗಿರುತ್ತಾರೆ. ಅವರ ಈ ಹುಲ್ಲೆಗಳ ರೂಪಗಳನ್ನು ಗುರುತಿಸದೆ ಬಾಣವನ್ನೆಸೆದುದರಿಂದಾಗಿ ಪಾಂಡು ಸಂಕಟದಲ್ಲಿ ಸಿಲುಕಿಕೊಳ್ಳುತ್ತಾನೆ.

ಮೃಗವ್ಯವಾಯನಿಧನಾತ್ ಕೃಚ್ಛ್ರಾಂ ಪ್ರಾಪ ಸ ಆಪದಮ್ ॥ ೧೧೩ ॥

ಈ ಸಂಕಟವೆಂದರೆ ಆ ಋಷಿಯು ಪಾಂಡುವಿಗೆ ನೀಡಿದ ಶಾಪ. ಇಲ್ಲಿ ಋಷಿಯು ಶಾಪೋದ್ಧಾರಗಳನ್ನು ನೀಡಲಾಗಿಲ್ಲ. ಆದರೆ, 'ನೀನು ನಿನ್ನ ಹೆಂಡತಿಯನ್ನು ಕೂಡಿಕೊಳ್ಳುವ ಕಾಲಕ್ಕೇನೆ ಸಾವನ್ನಪ್ಪಲಿರುವೆ. ಇನ್ನು ನಿನಗೆ ಮಕ್ಕಳಾಗವು' ಎಂಬುದಾಗಿ ಆ ಶಾಪವಿದ್ದಿರಲು ಸಾಕು.

ಆದಿ/೯೫

ರತಿಕ್ರೀಡೆಯಲ್ಲಿ ತೊಡಗಿರುವಾಗಲೇ ಪಾಂಡುವಿನ ಬಾಣತಗಲಿ ಸಾವಿನ ದವಡೆಯಲ್ಲಿದ್ದ ಆ ಋಷಿ ಪಾಂಡುವಿಗೆ ಹೀಗನ್ನುವನು—

......ಚರತಾ ಧರ್ಮಮಿಮಂ ಯೇನ ತ್ವಯಾಭಿಜ್ಞೇನ ಕಾಮರಮಸ್ಯಾಹಮನಪಾಪ್ತಕಾರನೋ ನಿಹತಸ್ತಸ್ಮಾತ್ ತ್ವಮಪ್ಯೇತಾಮವಸ್ಥಾಸಾದ್ಯಾನವಾಪ್ತಕಾಮರಸಃ ಪಂಚತ್ವಮಾಪ್ಸ್ಯಸಿ ಕ್ಷಿಪ್ರಮೇವೇತಿ। ಸ ವಿವರ್ಣರೂಪಸ್ತಥಾ ಪಾಂಡುಃ ಶಾಪಂ ಪರಿಹರಮಾಣೋ ನೋಪಾಸರ್ಪತ ಭಾರ್ಯೇ ॥ ೬೦ ॥

'ನೀನು ರತಿಸುಖವನ್ನು ಚೆನ್ನಾಗಿ ಬಲ್ಲವನು. ಹೀಗಿದ್ದೂ ನೀನು ಕಾಮಾಸಕ್ತನಾದ ನನ್ನನ್ನು ನನ್ನ ರತಿಕ್ರೀಡೆ ಪೂರ್ತಿಗೊಳ್ಳುವ ಮೊದಲೇನೆ ನಿನ್ನ ಬಾಣದಿಂದ ಗಾಯಗೊಳಿಸಿರುವೆ. ಇಷ್ಟೇ ಅಲ್ಲದೆ ನನ್ನನ್ನು ಸಾವಿನ ಕರಾಳ ದವಡೆಯಲ್ಲಿ ನೂಕಿರುವೆ. ಅಂದ ಬಳಿಕ ನಿನಗೂ ಕೂಡ ನನ್ನಂತೆಯೇ ಕಾಮಕ್ರೀಡೆಯಲ್ಲಿ ತೊಡಗಿರುವಾಗಲೇ ಸಾವು ಬರಲಿ.'—ಋಷಿಯ ಈ ಶಾಪೋದ್ಧಾರವನ್ನು ಕೇಳಿ ಪಾಂಡು ಜರ್‍ರನೆ ಇಳಿದುಹೋದನು. ಸಾವನ್ನು ತಪ್ಪಿಸಲೆಂದು ಮಡದಿಯರೊಂದಿಗಿನ ಸಮಾಗಮವನ್ನು ತಪ್ಪಿಸತೊಡಗಿದನು.

**ಆದಿ/೧೧೪**

ಜನಮೇಜಯನು ವೈಶಂಪಾಯನನನ್ನು, ಪಾಂಡುವಿನ ಕುರಿತು ಮುಂದಿನ ಪ್ರಶ್ನೆಯನ್ನು ಕೇಳಿದನು—

ಕಥಂ ಚ ಶಪ್ತಸ್ಯ ಸತಃ ಪಾಂಡೋಸ್ತೇನ ಮಹಾತ್ಮನಾ ॥ ೫ ॥
ಸಮುತ್ಪನ್ನಾ ದೈವತೇಭ್ಯಃ ಪುತ್ರಾಃ ಪಂಚ ಮಹಾರಥಾಃ ॥ ೬ ॥

ಮಹಾತ್ಮನಾದ ಆ ಋಷಿಯು ಪಾಂಡುವಿಗೆ ಶಾಪವನ್ನಿತ್ತ ತರುವಾಯವೂ ಅವನಿಗೆ ಮಹಾರಥಿಗಳಾದ ಐವರು ಗಂಡುಮಕ್ಕಳಾದುದು ಹೇಗೆ ?

**ಆದಿ/೧೧೭**

ಆಗ ವೈಶಂಪಾಯನನು ಜನಮೇಜಯನಿಗೆ ಪಾಂಡುವಿನ ಶಾಪವನ್ನು ಕುರಿತಾದ ವೃತ್ತಾಂತವನ್ನು ಸವಿಸ್ತರವಾಗಿ ಹೇಳಿದನು—

ತ್ವಯಾಹಂ ಹಿಂಸಿತೋ ಯಸ್ಮಾತ್ ತ್ವಾಮಪ್ಯಹಂ ಶಪೇ ॥ ೨೬ ॥

'ನೀನು ನನ್ನನ್ನು ಕೊಲ್ಲುತ್ತಿರುವೆಯಾದಕಾರಣ ನಿನ್ನನ್ನು ಶಪಿಸುವೆನು '

ದ್ವಯೋರ್ನೃಶಂಸಕರ್ತಾರಮವಶಂ ಕಾಮಮೋಹಿತಮ್ ।
ಜೀವಿತಾಂತಕರೋ ಭಾವ ಏವಮೇವಾಗಮಿಷ್ಯತಿ ॥ ೨೭ ॥
ಅಹಂ ಹಿ ಕಿಂದಮೋ ನಾಮ ತಪಸಾ ಭಾವಿತೋ ಮುನಿಃ ।
ವ್ಯಪತ್ರಪನ್ಮನುಷ್ಯಾಣಾಂ ಮೃಗ್ಯಾಂ ಮೈಥುನಮಾಚರಮ್ ॥ ೨೮ ॥
ಮೃಗೋ ಭೂತ್ವಾ ಮೃಗೈಃ ಸಾರ್ಧಂ ಚರಾಮಿ ಗಹನೇ ವನೇ ।
ನ ತು ತೇ ಬ್ರಹ್ಮಹತ್ಯೇಯಂ ಭವಿಷ್ಯತ್ಯವಿಜಾನತಃ ॥ ೨೯ ॥
ಮೃಗರೂಪಧರಂ ಹತ್ವಾ ಮಾಮೇವಂ ಕಾಮಮೋಹಿತಮ್ ।
ಅಸ್ಯ ತು ತ್ವಂ ಫಲಂ ಮೂಢ ಪ್ರಾಪ್ಸ್ಯಸೀದೃಶಮೇವ ಹಿ ॥ ೩೦ ॥
ಪ್ರಿಯಯಾ ಸಹ ಸಂವಾಸಂ ಪ್ರಾಪ್ಯ ಕಾಮವಿಮೋಹಿತಃ ।
ತ್ವಮಪ್ಯಸ್ಯಾಮವಸ್ಥಾಯಾಂ ಪ್ರೇತಲೋಕಂ ಗಮಿಷ್ಯಸಿ ॥ ೩೧ ॥
ಅಂತಕಾಲೇ ಹಿ ಸಂವಾಸಂ ಯಯಾ ಗಂತಾಸಿ ಕಾಂತಯಾ ।
ಪ್ರೇತರಾಜಪುರಂ ಪ್ರಾಪ್ತಂ ಸರ್ವಭೂತದುರತ್ಯಯಮ್ ।
ಭಕ್ತ್ಯಾ ಮತಿಮತಾಂ ಶ್ರೇಷ್ಠ ಸೈವ ತ್ವಾಮನುಗಮಿಷ್ಯತಿ ॥ ೩೨ ॥
ವರ್ತಮಾನಃ ಸುಖೇ ದುಃಖಂ ಯಥಾಹಂ ಪ್ರಾಪಿತಸ್ತ್ವಯಾ ।
ತಥಾ ತ್ವಾಂ ಚ ಸುಖಂ ಪ್ರಾಪ್ತಂ ದುಃಖಮಭ್ಯಾಗಮಿಷ್ಯತಿ ॥ ೩೩ ॥

'ಗಂಡು-ಹೆಣ್ಣುಗಳು ಕಾಮಕೇಳಿಯಲ್ಲಿ ಮೈಮರೆತಾಗ ಅವರನ್ನು ಕೊಲೆಗೈಯುವಂತಹ ಕ್ರೂರವಾದ ಕೃತ್ಯ ನಿನ್ನಿಂದಾಯಿತು ಹೀಗಾಗಿ ನೀನು ರತಿಕ್ರೀಡೆಯಲ್ಲಿ ಮೈಮರೆತಾಗ ನಿನ್ನಮೇಲೂ ಇದೇ ಬಗೆಯ ಘೋರವಾದ ವಿಪತ್ತು ಬಂದು ಒದಗಲಿ ನಾನು ಕಿಂದಮ ನೆಂಬ ಒಬ್ಬ ಋಷಿ. ನಾಚಿಕೆಯಿಂದಾಗಿ ಜಿಗರೆಯ ರೂಪವನ್ನು ಧರಿಸಿದ್ದೆ, ನನ್ನ ಮಡದಿ ಯನ್ನೂ ಹುಲ್ಲೆಯನ್ನಾಗಿ ಮಾಡಿದೆ. ತರುವಾಯವೇ ಅವಳನ್ನು ಕೂಡಿಕೊಂಡೆ ಉಳಿದ ಕಾಡುಪ್ರಾಣಿಗಳ ಹಾಗೆಯೇ ನಾನೂ ಕೂಡ ಈ ದಟ್ಟವಾದ ಕಾಡಿನಲ್ಲಿ ವಿಹರಿಸುತ್ತಲಿದ್ದೆ

ಜಿಗರೆಯ ರೂಪವನ್ನು ಧರಿಸಿದ ಮುನಿ ನಾನೆಂಬುದನ್ನು ನೀನು ಅರಿಯಲಿಲ್ಲ. ಹೀಗಾಗಿ (ನಮ್ಮನ್ನು ಕೊಂದು ಕೂಡ) ನಿನಗೆ ಬ್ರಹ್ಮಹತ್ಯೆಯ ಶಾಪ ತಟ್ಟದು. ಆದರೂ, ಪಶು ಮೂಢನಾದ ರಾಜನೇ, ಜಿಂಕೆಯ ರೂಪದಲ್ಲಿ ರತಿಮಗ್ನನಾದ ನನ್ನನ್ನು ನೀನು ಕೊಂದಿರುವೆ. ನೀನು ಈ ದುಷ್ಕರ್ಮದ ಫಲವನ್ನು ಭೋಗಿಸಬೇಕಾಗುತ್ತದೆ. ನೀನು ಕಾಮೋದ್ದೀಪಿತನಾಗಿ ನಿನ್ನ ಹೆಂಡತಿಯನ್ನು ಕೂಡಿಕೊಂಡು ಸಂಭೋಗಕ್ರಿಯೆ ಸಾಗಿರು ವಾಗಲೇ ನಿನಗೆ ಸಾವು ಬಂದೀತು. ನಿನ್ನೊಂದಿಗೆ ಸಂಭೋಗದಲ್ಲಿ ಪಾಲ್ಗೊಳ್ಳುವ ನಿನ್ನ ಮಡದಿಯೂ ಕೂಡ ನಿನ್ನ ಬೆನ್ನಿಗೇನೆ ಸತಿಹೋಗಿ ತಪ್ಪಿಸಲಾಗದ ಯಮರಾಜ್ಯವನ್ನು ಹೊಕ್ಕಾಳು. ನಾನು ಸುಖದಲ್ಲಿ ಮೈಮರೆತಿರುವಾಗ ನೀನು ನನ್ನನ್ನು ದುಃಖದ ಮಡುವಿ ನಲ್ಲಿ ತಳ್ಳಿದೆ. ಹೀಗಾಗಿ ನೀನು ಕೂಡ ಸುಖದಲ್ಲಿ ಮೈಮರೆತಾಗಲೇ ನಿನಗೂ ಇದೇ ರೀತಿ ಯಾಗಿ ದುಃಖವನ್ನನುಭವಿಸುವ ಹೊತ್ತು ಬರಲಿ.'

ಆದಿ/೧೧೯

ಋಷಿಯ ಶಾಪದಿಂದಾಗಿ ಇನ್ನು ತನಗೆ ಮಕ್ಕಳಾಗವೆಂಬ ಚಿಂತೆ ಪಾಂಡುವನ್ನು ಇರಿಯತೊಡಗಿತು.

ಆತ್ಮನೋ ಮೃಗಶಾಪೇನ ಜಾನನ್ನುಪಹತಾಂ ಕ್ರಿಯಾಮ್ ॥ ೨೭ ॥

ತರುವಾಯ ಕುಂತಿಯೊಂದಿಗೆ ಏಕಾಂತದಲ್ಲಿರುವಾಗ ಅವನು ಅವಳಿಗೆ ಹೀಗೆಂದನು— 'ಬಂದೆರಗಿದ ಸಂಕಟವನ್ನೆದುರಿಸಲೆಂದು ಬೇರೆ ವಿಧಿವತ್ತಾದ ದಾರಿಗಳಿಂದ ಮಕ್ಕಳನ್ನು ಪಡೆಯಲು ನೀನು ಸಿದ್ಧಳಾಗಿರು.' ಈ ಸಂದರ್ಭದಲ್ಲಿ ಅವನು ಹೀಗೂ ಅನ್ನುತ್ತಾನೆ—

ಮೃಗಾಭಿಶಾಪಾನ್ನಷ್ಟಂ ಮೇ ಜನನಂ ಹ್ಯಕೃತಾತ್ಮನಃ ।
ನೃಶಂಸಕಾರಿಣೋ ಭೀರು ಯಥೈವೋಪಹತಂ ಪುರಾ ॥ ೩೧ ॥

ನನ್ನ ಅವಿಚಾರ್ಯದಿಂದಾಗಿಯೇ ನನ್ನ ಕೈಲಿ ಮೃಗರೂಪಿಯಾದ ಋಷಿಯ ರತಿಕ್ರೀಡೆ ಯಲ್ಲಿ ವಿಘ್ನ ಉಂಟಾಯಿತು. ಅವನ ಶಾಪದಿಂದಾಗಿ ನಾನು ಪ್ರಜೋತ್ಪತ್ತಿಯ ಕೆಲಸಕ್ಕೆ ಅಸಮರ್ಥನಾದೆ

ಆದಿ/೧೨೪

ವೈಶಂಪಾಯನನು ಜನಮೇಜಯನಿಗೆ ಪಾಂಡವರ ಹುಟ್ಟು ಹಾಗೂ ಪಾಂಡುವಿನ ಸಾವನ್ನು ಕುರಿತು ಹೀಗೆ ಹೇಳುತ್ತಾನೆ—

ಸ ತು ಕಾಮಪರೀತಾತ್ಮಾ ತಂ ಶಾಪಂ ನಾನ್ವಬುಧ್ಯತ ।
ಮಾದ್ರೀಂ ಮೈಥುನಧರ್ಮೇಣ ಸೋಽನ್ವಗಚ್ಛದ್ ಬಲಾದಿವ ॥ ೯ ॥
ಜೀವಿತಾಂತಾಯ ಕೌರವ್ಯ ಮನ್ಮಥಸ್ಯ ವಶಂ ಗತಃ ।
ಶಾಪಜಂ ಭಯಮುತ್ಸೃಜ್ಯ ವಿಧಿನಾ ಸಂಪ್ರಚೋದಿತಃ ॥ ೧೦ ॥

(ಮಾದ್ರಿಯ ಚೆಲುವಿನಿಂದಾಗಿ ಒಂದು ಸಲ ಪಾಂಡುವಿನ ಕಾಮಭಾವನೆ ಕೆರಳಿ ನಿಂತಿತು. ತನ್ನ ಮನದ ಮೇಲಿನ ಅವನ ಹಿಡಿತ ಸಡಿಲಾಯಿತು.) ಋಷಿಯಿತ್ತ ಶಾಪ ವನ್ನು ಮರೆತನು. ಮಾದ್ರಿಯ ವಿರೋಧವನ್ನು ಲೆಕ್ಕಿಸದೆಯೇ ಅವನು ಅವಳನ್ನು ಒತ್ತಾಯದಿಂದ ಕೂಡಿಕೊಂಡನು. ಸಾವು ಹತ್ತಿರ ಬಂದ ಕಾರಣದಿಂದಾಗಿಯೇ ಅವನು

ಕಾಮಾಸಕ್ತನಾದನು. ಶಾಪದ ಪರಿಣಾಮದ ಹೆದರಿಕೆ ಅವನಲ್ಲುಳಿಯಲಿಲ್ಲವೆಂಬುದೊಂದು ದೈವೀ ದುರ್ವಿಲಾಸವೇ ಸರಿ.

ಪಾಂಡುವಿನ ಸಾವಿನಿಂದಾಗಿ ಶೋಕದಗ್ಧಳಾದ ಕುಂತಿಯು ಮಾದ್ರಿಗೆ ಹೀಗನ್ನುತ್ತಾಳೆ—

ರಕ್ಷ್ಯಮಾಣೋ ಮಯಾ ನಿತ್ಯಂ ವೀರಃ ಸತತಮಾತ್ಮವಾನ್ ।
ಕಥಂ ತ್ವಾಮತ್ಯತಿಕ್ರಾಂತಃ ಶಾಪಂ ಜಾನನ್ ವನೌಕಸಃ ॥ ೧೮ ॥

'ಪಾಂಡುವು ಯಾವಾಗಲೂ ತನ್ನ ಮನಸ್ಸನ್ನು ತನ್ನ ಹಿಡಿತದಲ್ಲಿಟ್ಟುಕೊಂಡವನೇ. ಅಲ್ಲದೆ ನಾನು (ಕುಂತಿ) ಕೂಡ ಯಾವಾಗಲೂ ಅವರನ್ನು ಕಾಪಾಡುತ್ತಲೇ ಬಂದವಳು. ಋಷಿಯ ಶಾಪದ (ಘೋರವಾದ) ಪರಿಣಾಮವನ್ನು ಅರಿತೂ ಕೂಡ ಅವರು ನಿನ್ನ ಮೇಲೆ ಬಲವಂತವನ್ನೇಕೆ ಮಾಡಿದರೋ (ನಾ ಕಾಣೆ).'

ಕಥಂ ದೀನಸ್ಯ ಸತತಂ ತ್ವಾಮಾಸಾದ್ಯ ರಹೋಗತಾಮ್ ।
ತಂ ವಿಚಿಂತಯತಃ ಶಾಪಂ ಪ್ರಹರ್ಷಃ ಸಮಜಾಯತ ॥ ೨೦ ॥

'ಅವರು (ಪಾಂಡು) ಶಾಪದ ಹೆದರಿಕೆಯಿಂದಾಗಿ ಯಾವಾಗಲೂ ದೀನರೂ ಉದಾಸರೂ ಆಗಿರುತ್ತಿದ್ದರು. ಹೀಗಿದ್ದೂ ನಿನ್ನೊಂದಿಗೆ ಏಕಾಂತದಲ್ಲಿರುವಾಗ ಅವರ (ಪಾಂಡುವಿನ) ಕಾಮವಾಸನೆ ಕೆರಳಿ ನಿಂತುದು ಹೇಗೋ ? ಇದೊಂದು ದುರದೃಷ್ಟವೇ ಸರಿ !'

ವಿದುರನು ಪಾಂಡವರ ಹುಟ್ಟನ್ನು ಕುರಿತು ಧೃತರಾಷ್ಟ್ರನೆದುರು ಮಾತನಾಡುವಾಗ ಈ ಶಾಪವನ್ನು ಕುರಿತು ಹೇಳುತ್ತಾನೆ.

ವನೇ ಜಾತಾಃ ಶಾಪದಗ್ಧಸ್ಯ ರಾಜ್ಞಃ ಪಾಂಡೋಃ ಪುತ್ರಾಃ
ಪಂಚಪಂಚೇಂದ್ರಕಲ್ಪಾಃ ॥ ೧೨ ॥

ಶಾಪದಗ್ಧನಾದ ಪಾಂಡುರಾಜನ ಈ ಐವರು ಗಂಡುಮಕ್ಕಳು ಕಾಡಿನಲ್ಲಿ ಹುಟ್ಟಿದವ ರಾದರೂ ಇಂದ್ರನಂತೆಯೇ ಸಾಮರ್ಥ್ಯವುಳ್ಳವರು.

## ೨. ವ್ಯಾಸ (ದ್ವೈಪಾಯನ) > ಅಶ್ವತ್ಥಾಮ ಆದಿ/೧

ದುರ್ಯೋಧನ, ಕರ್ಣ, ಶಕುನಿ ಇವರು ಪಾಂಡವರಿಗೆ ರಾಜ್ಯದ ತುಸು ಭಾಗವನ್ನು ಕೂಡ ಬಿಟ್ಟುಕೊಡದಿರಲು ನಿರ್ಧರಿಸಿದ್ದರು. ಪಾಂಡವರ ಗೆಲುವಿನ ವಾರ್ತೆಗಳು ಬರುತ್ತ ನಡೆದಂತೆ ಧೃತರಾಷ್ಟ್ರ ಮಾತ್ರ ಕೌರವರ ಗೆಲುವಿನ ಬಗೆಗೆ ಸಂದೇಹ ತಳೆದನಲ್ಲದೆ ಅವನ ಆಸೆಯೂ ಮಣ್ಣುಗೂಡಿತು. ಧೃತರಾಷ್ಟ್ರ ತನ್ನೀ ವ್ಯಥೆಯನ್ನು ಸಂಜಯನೆದುರು ತೋಡಿ ಕೊಳ್ಳುತ್ತಲಿದ್ದಾನೆ. ಅವನು ನೀಡಿದ ಹಲವು ಕಾರಣಗಳಲ್ಲಿ ಈ ಮುಂದಿನದೂ ಒಂದು—

ಯದಾಶ್ರೌಷಂ ದ್ರೋಣಪುತ್ರೇಣ ಗರ್ಭೇ ವೈರಾಟ್ಯಾ ವೈ ಪಾತ್ಯಮಾನೇ ಮಹಾಸ್ತ್ರೈಃ।
ದ್ವೈಪಾಯನಃ ಕೇಶವೋ ದ್ರೋಣಪುತ್ರಂ ಪರಸ್ಪರೇಣಾಭಿಶಾಪೈಃ ಶಶಾಪ ॥ ೨೦೫ ॥

ದ್ರೋಣನ ಮಗ ಅಶ್ವತ್ಥಾಮನು ವಿರಾಟ್‌ರಾಜನ ಮಗಳು ಉತ್ತರೆಯ ಬಸಿರನ್ನು ನಾಶಗೊಳಿಸಲೆಳಸುತ್ತಲೇ ದ್ವೈಪಾಯನ ಹಾಗೂ ಶ್ರೀಕೃಷ್ಣರು ತಮ್ಮತಮ್ಮಲ್ಲಿ ಚರ್ಚಿಸಿ ಅವನಿಗೆ ಘೋರವಾದ ಶಾಪವನ್ನಿತ್ತ ಸಂಗತಿಯು ನನಗೆ ತಿಳಿದುಬಂದಂದಿನಿಂದಲೇ ನನ್ನಲ್ಲಿ ನಿರಾಶೆ ತುಂಬಿಕೊಂಡಿದೆ.

ಆದಿ/೨

ದ್ರೌಣೇಶ್ಚ ದ್ರೋಹಬುದ್ಧಿತ್ವಂ ವೀಕ್ಷ್ಯ ಪಾಪಾತ್ಮನಸ್ತದಾ ।
ದ್ರೌಣಿದ್ವೈಪಾಯನಾದೀನಾಂ ಶಾಪಾಶ್ಚಾನ್ಯೋನ್ಯಕಾರಿತಾಃ ॥ ೩೦೮ ॥

ಪಾಪಿಹೃದಯದ ಅಶ್ವತ್ಥಾಮನ ದ್ರೋಹಬುದ್ಧಿಯನ್ನು ಕಂಡು ಮಹರ್ಷಿಗಳಾದ ದ್ವೈಪಾಯನ ವ್ಯಾಸ ಮೊದಲಾದವರು ಅವನಿಗಿತ್ತ ಶಾಪಗಳು ಹಾಗೂ ಅದೇ ರೀತಿಯಾಗಿ ಅಶ್ವತ್ಥಾಮನು ಅವರೆಲ್ಲರಿಗಿತ್ತ ಶಾಪಗಳು (ಮೊದಲಾದವುಗಳ ಬಣ್ಣನೆ ಸೌಪ್ತಿಕ ಪರ್ವದಲ್ಲಿ ಬಂದಿದೆ.)*

## ೩. ಶ್ರೀಕೃಷ್ಣ > ಅಶ್ವತ್ಥಾಮ

ಆದಿ/೧

ವ್ಯಾಸ (ದ್ವೈಪಾಯನ) > ಅಶ್ವತ್ಥಾಮನ ಶಾಪದಂತೆ.

ಪಾಂಡವರನ್ನು ನಾಶಪಡಿಸುವ ದುರುಳೋದ್ದೇಶದಿಂದ ಅಶ್ವತ್ಥಾಮನು ಬ್ರಹ್ಮಾಸ್ತ್ರವನ್ನು ಒಂದು ಹುಲ್ಲುಕಡ್ಡಿಯ ಮೇಲೆ ಅಭಿಮಂತ್ರಿಸಿ, ಅದನ್ನು ಅವರ ಮೇಲೆ ಎಸೆದನು. ಅದನ್ನು ಕಂಡು ಶ್ರೀಕೃಷ್ಣನು ಅಂಥದೇ ಅಸ್ತ್ರವನ್ನು ಅವನ ಮೇಲೆಸೆಯೆಂದು ಅರ್ಜುನನಿಗೆ ಹೇಳಿದನು. ಅರ್ಜುನ ಗುರುಜನರನ್ನು ಅಭಿವಂದಿಸಿ ದಿವ್ಯಾಸ್ತ್ರವನ್ನು ಎಸೆದನು. ಅದು ಪ್ರಜ್ವಲಿತವಾದುದರಿಂದಾಗಿ ಪೃಥ್ವಿಯಮೇಲೆ ಹಲವು ಬಗೆಯ ನಾಶಗಳಾಗಹತ್ತಿದುವು. ವಿನಾಶವನ್ನು ತಪ್ಪಿಸಲೆಂದು ಅರ್ಜುನ ಹಾಗೂ ಅಶ್ವತ್ಥಾಮರನ್ನು ಸಮಾಧಾನಪಡಿಸುವುದು ಅಗತ್ಯದ್ದಾಗಿತ್ತು. ಹೀಗಾಗಿ ವ್ಯಾಸಮಹರ್ಷಿಗಳು ಹಾಗೂ ನಾರದರು ಒಂದೇ ಕಾಲಕ್ಕೆ ಅಲ್ಲಿಗೆ ಬಂದರು. ಅವರಿಬ್ಬರೂ ಇವರಿಬ್ಬರಿಗೂ ಉಪದೇಶವನ್ನು ನೀಡಿ ರಾಷ್ಟ್ರಹಿತಕ್ಕಾಗಿ ತಮ್ಮ ತಮ್ಮ ಅಸ್ತ್ರಗಳನ್ನು ಹಿಂತೆಗೆದುಕೊಳ್ಳಲು ಹೇಳಿದರು. ಅರ್ಜುನ ತನ್ನ ಅಸ್ತ್ರವನ್ನು ಹಿಂತಿರುಗಿಸಿದನು. ಅಶ್ವತ್ಥಾಮನಿಗೆ ಮಾತ್ರ ತನ್ನ ಅಸ್ತ್ರವನ್ನು ಹಿಂತೆಗೆದುಕೊಳ್ಳಲಾಗಲಿಲ್ಲ. ಆಗ ವ್ಯಾಸರು ಮಧ್ಯಸ್ಥರಾಗಿ ಮುಂದೆ ಬಂದು ಅಶ್ವತ್ಥಾಮ ಜೀವದಿಂದ ಬದುಕಿ ಉಳಿಯಬಯಸುತ್ತಿದ್ದರೆ ತನ್ನ ಹಣೆಯಲ್ಲಿಯ ಮಣಿಯನ್ನು ತೆಗೆದು ಕೊಡಬೇಕೆಂದು ಹೇಳಿದರು. ಹೀಗಾಗಿ ಅವನು ವ್ಯಾಸರ ಇಚ್ಛೆಗೆ ತಲೆಬಾಗಿ ಒಲ್ಲದ ಮನಸ್ಸಿನಿಂದಲೇ ತನ್ನ ಹಣೆಯ ಮಣಿಯನ್ನು ಪಾಂಡವರಿಗೆ ಇತ್ತನು. ಇಷ್ಟಾಗಿಯೂ ಬ್ರಹ್ಮಾಸ್ತ್ರದ ಪರಿಣಾಮವು ಅಮೋಘವಾಗಿದ್ದು ಅದನ್ನು ತಪ್ಪಿಸಲಾಗದೆಂದೂ, ಮಂತ್ರಿಸಿದ ಆ ಹುಲ್ಲುಕಡ್ಡಿ ಉತ್ತರೆಯ ಬಸಿರಿನ ಮೇಲೆ ಬೀಳದಿರದೆಂದೂ ಅವನು ಹೇಳಿದನು. ಆಗ ಶ್ರೀಕೃಷ್ಣನು ಅವನನ್ನುದ್ದೇಶಿಸಿ ಈ ಬಗೆಯಾಗಿ ಶಾಪವಾಣಿಯನ್ನು ನುಡಿದನು—

ತ್ವಾಂ ತು ಕಾಪುರುಷಂ ಪಾಪಂ ವಿದುಃ ಸರ್ವೇ ಮನೀಷಿಣಃ ।
ಅಸಕೃತ್ಪಾಪಕರ್ಮಾಣಂ ಬಾಲಜೀವಿತಘಾತಕಮ್ ॥ ೯ ॥

* ಸೌಪ್ತಿಕಪರ್ವ, ಅಧ್ಯಾಯ ೧೬, ಶ್ಲೋಕ ೯ರಿಂದ ೧೩ರಲ್ಲಿ (ನೋಡಿ : ಶಾಪ—ಶ್ರೀಕೃಷ್ಣ > ಅಶ್ವತ್ಥಾಮ) ಹೊರಡಿಸಲಾದ ಶಾಪದಂತಹ ಉದ್ಗಾರಗಳು ಸರಿಯಾದವುಗಳೇ—ಎಂದು ವ್ಯಾಸರು ಶ್ಲೋಕ ೧೬-೧೮ಗಳಲ್ಲಿ ಹೇಳಿದ್ದಾರೆ. ಆದರೆ ವ್ಯಾಸರ ಶಾಪದ ಪುನರುಲ್ಲೇಖ ಇಲ್ಲ.

ತಸ್ಮಾತ್ತ್ವಮಸ್ಯ ಪಾಪಸ್ಯ ಕರ್ಮಣಃ ಫಲಮಾಪ್ನುಹಿ ।
ತ್ರೀಣಿ ವರ್ಷಸಹಸ್ರಾಣಿ ಚರಿಷ್ಯಸಿ ಮಹೀಮಿಮಾಮ್ ॥ ೧೦ ॥
ಅಪ್ರಾಪ್ನುವನ್ ಕ್ವಚಿತ್ ಕಾಂಚಿತ್ ಸಂವಿದಂ ಜಾತು ಕೇನಚಿತ್ ।
ನಿರ್ಜನಾನಸಹಾಯಸ್ತ್ವಂ ದೇಶಾನ್ ಪ್ರವಿಚರಿಷ್ಯಸಿ ॥ ೧೧ ॥
ಭವಿತ್ರೀ ನ ಹಿ ತೇ ಕ್ಷುದ್ರ ಜನಮಧ್ಯೇಷು ಸಂಸ್ಥಿತಿಃ ।
ಪೂಯಶೋಣಿತಗಂಧೀ ಚ ದುರ್ಗಕಾಂತಾರಸಂಶ್ರಯಃ ॥ ೧೨ ॥
ವಿಚರಿಷ್ಯಸಿ ಪಾಪಾತ್ಮನ್ ಸರ್ವವ್ಯಾಧಿಸಮನ್ವಿತಃ ॥ ೧೩ ॥

'ನೀನು ಪಾಪಿಯು, ನೀಚ ಮನುಷ್ಯನು, ಮತ್ತೆಮತ್ತೆ ಪಾಪಕೃತ್ಯಗಳನ್ನು ಎಸಗುವವನಲ್ಲದೆ ಮಕ್ಕಳನ್ನು ಕೊಲ್ಲುವವನೆಂದು ಎಲ್ಲ ಜ್ಞಾನಿಗಳು ನಿನ್ನನ್ನು ತಿಳಿಯುತ್ತಾರೆ. ಈ ಪಾಪಕರ್ಮದ ಫಲವನ್ನು ಉಣ್ಣದೆ ಇರಲಾರೆ. ಇಂದಿನಿಂದ ಮೂರು ಸಾವಿರ ವರ್ಷಗಳ ಕಾಲ ನೀನು ಈ ಭೂಮಿಯ ಮೇಲೆ ಅಲೆದಾಡುತ್ತಿರುವೆ ಅಂಡಲೆಯುವಿ. ನೀನು ಎಂದಿಗೂ, ಯಾರೊಂದಿಗೂ ಮಾತನಾಡಲಾರೆ. ಒಂಟಿಯಾಗಿ ನಿರ್ಜನ ನಾಡಿನಲ್ಲಿ ವಾಸಮಾಡುವೆ. ಎಲೈ ನೀಚನೇ, ನೀನು ಮಾನವಜನಾಂಗದಲ್ಲಿ ಕೂಡಿಕೊಂಡು ವಾಸಿಸಲಾರೆ. ಕೀವು, ನೆತ್ತರ, ಹೊಲಸು ವಾಸನೆಗಳಿಗೆ ನಿನ್ನ ದೇಹ ಈಡಾಗಿ ನೀನು ಹಲವು ಬಗೆಯ ರೋಗಗಳ ಪೀಡೆಗಳನ್ನು ಅನುಭವಿಸುತ್ತ ಕಾಡಿನಲ್ಲಿಯೇ ಕಾಲಕಳೆಯಲಿರುವೆ.'

ಸ್ತ್ರೀ/೧

ಜನಮೇಜಯನು ವೈಶಂಪಾಯನನಿಗೆ ಹೀಗೆನ್ನುತ್ತಾನೆ—

ಅಶ್ವತ್ಥಾಮ್ನಃ ಶ್ರುತಂ ಕರ್ಮ ಶಾಪಾದನ್ಯೋನ್ಯಕಾರಿತಾತ್ ॥ ೩ ॥

*'ಅಶ್ವತ್ಥಾಮನ ಆ ಘೋರಕೃತ್ಯವನ್ನು ಕುರಿತೂ, ಅವನು ಹಾಗೂ ಶ್ರೀಕೃಷ್ಣನು ಒಬ್ಬರಿಗೊಬ್ಬರಿತ್ತ ಶಾಪಗಳನ್ನು ಕುರಿತಾಗಿಯೂ ನಾನು ಆಲಿಸಿದ್ದೇನೆ ಇನ್ನು, ಮುಂದಿನ ವೃತ್ತಾಂತವನ್ನು ಹೇಳುವಂಥವನಾಗು.'

ಇದೇ ಶ್ಲೋಕವನ್ನು ಇದ್ದಕ್ಕಿದ್ದಹಾಗೆಯೇ ಸ್ತ್ರೀ/೯/೩ರಲ್ಲಿ ನೀಡಲಾಗಿದೆ. ಅಲ್ಲಿರುವ ವ್ಯತ್ಯಾಸವೆಂದರೆ ಶಾಪಾದನ್ಯೋನ್ಯಕಾರಿತಾತ್ ಎಂಬುದರ ಬದಲು ಶಾಪಶ್ಚಾನ್ಯೋನ್ಯ ಕಾರಿತಃ ಎಂಬುದಾಗಿ ಮಾರ್ಪಾಟಾಗಿರುವುದು ಮಾತ್ರ.

## ೪. ಅಶ್ವತ್ಥಾಮ > ವ್ಯಾಸ (ದ್ವೈಪಾಯನ) ಆದಿ/೨

ಅಶ್ವತ್ಥಾಮನು ಪಾಂಡವರನ್ನು ನಾಶಪಡಿಸಲೆಂದು ಅವರೆಲ್ಲರ ಮೇಲೆ ದಿವ್ಯಾಸ್ತ್ರವನ್ನು ಎಸೆದನು. ಆಗ ಅವನ ಈ ಯತ್ನವನ್ನು ಹಾಳುಗೊಳಿಸಲೆಂದು ಶ್ರೀಕೃಷ್ಣನು ಅರ್ಜುನನಿಗೆ ಅಶ್ವತ್ಥಾಮನ ಮೇಲೆ ಬ್ರಹ್ಮಾಸ್ತ್ರವನ್ನೆಸೆಯಲು ಹೇಳುತ್ತಾನೆ. ಅಲ್ಲದೆ ವ್ಯಾಸ, ಶ್ರೀಕೃಷ್ಣರು ಅವನನ್ನು ಶಪಿಸುತ್ತಾರೆ ಕೂಡ. ಆಗ ಅಶ್ವತ್ಥಾಮನೂ ಕೂಡ ಅವರಿಬ್ಬ

---

* ನೀಲಕಂಠರ ಟೀಕೆ :

ಅನ್ಯೋನ್ಯಕಾರಿತಾತ್ಪಾಂಡವಾನಾಂ ಗರ್ಭೇ ಬ್ರಹ್ಮಶಿರೋಽಸ್ತ್ರಂ ಪತತ್ವಿತಿ ಅಶ್ವತ್ಥಾಮ್ನಾ ಶಾಪೋ ದತ್ತಃ ಸಹಸ್ರವರ್ಷಾಣಿ ಗಲತ್ಕುಷ್ಠೋ ಭವಿಷ್ಯಸೀತ್ಯಶ್ವತ್ಥಾಮ್ನಃ ಕೃಷ್ಣೇನ ಶಾಪೋ ದತ್ತ ಇತ್ಯರ್ಥಃ ।

ರನ್ನು ಮರುಶಪಿಸುತ್ತಾನೆ. ಅದನ್ನು ಆದಿ/೨/೩೦೮ರಲ್ಲಿ ಉಲ್ಲೇಖಿಸಲಾಗಿದೆ.

ನೋಡಿ : ಶಾಪ–ವ್ಯಾಸ (ದ್ವೈಪಾಯನ) > ಅಶ್ವತ್ಥಾಮ
+ ಮರುಶಾಪ.

## ೫. ಬ್ರಾಹ್ಮಣ > ವೃಷ್ಣಿವೀರ ಆದಿ/೨

ಸೌತಿಯು ಶೌನಕ ಮೊದಲಾದ ಋಷಿಗಳಿಗೆ (ಮಹಾ)ಭಾರತದ ಬೇರೆಬೇರೆ ಪರ್ವಗಳಲ್ಲಿ ಯಾವ ಯಾವ ಸಂಗತಿಗಳಿವೆ ಎಂಬುದನ್ನು ಸಂಕ್ಷಿಪ್ತವಾಗಿ ಹೇಳುತ್ತಲಿದ್ದಾನೆ. ವೃಷ್ಣಿ ವೀರರ ಮಾತು ಹೊರಟಾಗ ಬ್ರಹ್ಮಶಾಪದ ಉಲ್ಲೇಖವು ಮುಂದಿನಂತೆ ಬಂದಿದೆ—

ಯತ್ರ ತೇ ಪುರುಷವ್ಯಾಘ್ರಾಃ ಶಸ್ತ್ರಸ್ಪರ್ಶಹತಾ ಯುಧಿ ।
ಬ್ರಹ್ಮದಂಡವಿನಿಷ್ಪಿಷ್ಟಾಃ ಸಮೀಪೇ ಲವಣಾಂಭಸಃ ॥ ೩೫೪ ॥

ರಣಾಂಗಣದಲ್ಲಿ ಯಾರ ದೇಹಗಳ ಮೇಲೆ ಶಸ್ತ್ರಗಳಿಂದ ಆಘಾತಗಳಾದವೋ ಹಾಗೂ ಬ್ರಹ್ಮಶಾಪದಿಂದಾಗಿ ಯಾರು ಇಡಿಯಾಗಿ ನಾಶಹೊಂದಿದರೋ (ಅಂಥ ಪುರುಷ ಪುಂಗವರು ಮದಿರಾಸಕ್ತರಾಗಿ ತಮ್ಮತಮ್ಮಲ್ಲಿಯೇ ಕಾದಾಡಿ ದುರದೃಷ್ಟದಿಂದಾಗಿ ಮರಣಾಸನ್ನರಾದರು.)

+ ಇಲ್ಲಿ ಬ್ರಹ್ಮಶಾಪದ ಉಲ್ಲೇಖ ಮಾತ್ರ ಇದೆ. ಪ್ರತ್ಯಕ್ಷದಲ್ಲಿ ಶಾಪವನ್ನು ಈಯ ಲಾಗಿಲ್ಲ. ಅದು ಮೌಸಲಪರ್ವದಲ್ಲಿ ವಿಸ್ತಾರಪೂರ್ವಕವಾಗಿ ಬಂದಿದೆ.

ಮೌಸಲ/೧

ವೃಷ್ಣಿವೀರರ ಸಾವಿನ ವಾರ್ತೆಯನ್ನು ಕೇಳಿ ಪಾಂಡವರು ವ್ಯಥಿತರಾದರೆಂಬುದನ್ನು ಹೇಳುವಾಗ ಬ್ರಹ್ಮಶಾಪದ ಉಲ್ಲೇಖ ಬಂದಿದೆಯಷ್ಟೆ.

ಪರಸ್ಪರಂ ಸಮಾಸಾದ್ಯ ಬ್ರಹ್ಮದಂಡಬಲಾತ್ ಕೃತಾನ್ ॥ ೯ ॥

ಬ್ರಹ್ಮಶಾಪದಿಂದಾಗಿ (ವೃಷ್ಣಿವೀರರು) ತಮ್ಮತಮ್ಮಲ್ಲಿ ಕಾದಾಡಿ ನಾಶಹೊಂದಿದರು. ವೈಶಂಪಾಯನನು ಈ ರೀತಿ ಹೇಳುತ್ತಲೇ ಜನಮೇಜಯ ಅವನನ್ನು ಕೇಳುತ್ತಾನೆ—

ಕೇನಾನುಶಪ್ತಾಸ್ತೇ ವೀರಾಃ ಕ್ಷಯಂ ವೃಷ್ಣ್ಯಂಧಕಾ ಗತಾಃ ।
ಭೋಜಾಶ್ಚ ದ್ವಿಜವರ್ಯ ತ್ವಂ ವಿಸ್ತರೇಣ ವದಸ್ವ ಮೇ ॥ ೧೪ ॥

'ಎಲೈ ದ್ವಿಜಶ್ರೇಷ್ಠನೇ ! ವೃಷ್ಣಿ, ಅಂಧಕ ಹಾಗೂ ಭೋಜಕುಲಗಳಲ್ಲಿ ಹುಟ್ಟಿದ ವೀರರನ್ನು ಶಪಿಸಿದವರಾರು ? ಆದರಿಂದಾಗಿ ಅವರು ನಾಶಹೊಂದಿದರು. ಇವೆಲ್ಲ ಸಂಗತಿ ಕುರಿತು ನನಗೆ ವಿವರವಾಗಿ ಹೇಳುವಂಥವರಾಗಿರಿ.'

ಜನಮೇಜಯನ ಕೋರಿಕೆಯ ಮೇರೆಗೆ ವೈಶಂಪಾಯನ ಅವನಿಗೆ ಬ್ರಹ್ಮಶಾಪದ ಕಥೆಯನ್ನು ಹೇಳುತ್ತಾನೆ. ಒಂದು ಸಲ ವಿಶ್ವಾಮಿತ್ರ, ಕಣ್ವ, ನಾರದ ಮೊದಲಾದ ಮಹರ್ಷಿಗಳು ದ್ವಾರಕೆಗೆ ಹೋಗುತ್ತಾರೆ. ಆಗ ಸಾರಣ ಮೊದಲಾದ ಯಾದವರು ಸಾಂಬನಿಗೆ ಸೀರೆಯನ್ನು ಉಡಿಸಿ ಹೆಣ್ಣಿನಂತೆ ಸೋಗುಹಾಕಿಸಿ ಅವನನ್ನು ಅವರ ಬಳಿಗೆ ಕರೆದೊಯ್ಯುತ್ತಾರೆ. ಅವರು ಋಷಿಗಳನ್ನು ವಂದಿಸಿ ಹೀಗೆನ್ನುತ್ತಾರೆ: 'ಇವಳು ಬಭ್ರುವಿನ ಮಡದಿ. ತನಗೆ ಗಂಡುಮಗು ಬೇಕೆಂದು ಬಯಸಿದ್ದಾಳೆ. ನೀವೆಲ್ಲ ತಿಳಿದವರು. ಇವಳಿಗೆ

ಗಂಡಾಗಲಿದೆಯೋ. ಹೆಣ್ಣಾಗಲಿದೆಯೋ ಎಂಬುದನ್ನು ನೀವೇ ಹೇಳಬಲ್ಲಿರಿ.' ಯಾದವರು ಹೂಡಿದ ವಂಚನೆಯನ್ನು ಋಷಿಗಳು ತಕ್ಷಣ ಗುರುತಿಸಿದರು. ಅವರ ಕೋಪ ನೆತ್ತಿಗೆ ಏರಿತು. ಅವರು ಕೂಡಲೆ ದುರುಳರಾದ ಯಾದವರಿಗೆ ಇಂತೆಂದರು—

ವೃಷ್ಣ್ಯಂಧಕವಿನಾಶಾಯ ಮುಸಲಂ ಘೋರಮಾಯಸಮ್ ।
ವಾಸುದೇವಸ್ಯ ದಾಯಾದಃ ಸಾಂಬೋಽಯಂ ಜನಯಿಷ್ಯತಿ ॥ ೧೯ ॥
ಯೇನ ಯೂಯಂ ಸುದುರ್ವೃತ್ತಾ ನೃಶಂಸಾ ಜಾತಮನ್ಯವಃ ।
ಉಚ್ಛೇತ್ತಾರಃ ಕುಲಂ ಕೃತ್ಸ್ನಮೃತೇ ರಾಮಜನಾರ್ದನೌ ॥ ೨೦ ॥
ಸಮುದ್ರಂ ಯಾಸ್ಯತಿ ಶ್ರೀಮಾಂಸ್ತ್ಯಕ್ತ್ವಾ ದೇಹಂ ಹಲಾಯುಧಃ ।
ಜರಾ ಕೃಷ್ಣಂ ಮಹಾತ್ಮಾನಂ ಶಯಾನಂ ಭುವಿ ಭೇತ್ಸ್ಯತಿ ॥ ೨೧ ॥

'ಭಗವಾನ್ ಶ್ರೀಕೃಷ್ಣನ ಮಗನಾದ ಈ ಸಾಂಬ ಒಂದು ಕಬ್ಬಿಣದ ಒನಕೆಯನ್ನು ಹಡೆಯಲಿದ್ದಾನೆ. ಅದರಿಂದಾಗಿ ವೃಷ್ಣಿ, ಅಂಧಕ ಮೊದಲಾದವರು ನಾಶಹೊಂದಲಿದ್ದಾರೆ. ಬಲರಾಮ ಹಾಗೂ ಶ್ರೀಕೃಷ್ಣನನ್ನುಳಿದು ನೀವೆಲ್ಲ (ಪರಸ್ಪರರಲ್ಲಿ ಕಾದಾಡಿ) ನಿಮ್ಮ ಕುಲವನ್ನು ನಾಶಪಡಿಸಲಿರುವಿರಿ. ಹಲಧರನಾದ ಬಲರಾಮ ತನ್ನ ದೇಹವನ್ನು ಕಡಲಿಗೆ ಒಪ್ಪಿಸಲಿದ್ದಾನೆ. ಭಗವಾನ್ ಶ್ರೀಕೃಷ್ಣ ನೆಲದ ಮೇಲೆ ಮಲಗಿ ನಿದ್ದೆಹೋದಾಗ ಜರಾ ಎಂಬ ಬೇಡನು ತನ್ನ ಬಾಣವನ್ನು ಅವನಿಗೆ ಗುರಿ ಇಟ್ಟು ಎಸೆಯಲಿದ್ದಾನೆ.'

ಬ್ರಾಹ್ಮಣರು ನಡೆದ ಸಂಗತಿಯನ್ನೆಲ್ಲ ಶ್ರೀಕೃಷ್ಣನಿಗೆ ಅರೆಹುತ್ತಾರೆ. ಅದನ್ನು ಕೇಳಿ ಶ್ರೀಕೃಷ್ಣನು ವೃಷ್ಣಿಗಳಿಗೆ, 'ಋಷಿಗಳ ಮಾತು ನಿಜವಾಗಲಿದೆ' ಎಂದಂದನು.

ಅಸೂತ ಶಾಪಜಂ ಘೋರಂ ತಚ್ಚ ರಾಜ್ಞೇ ನ್ಯವೇದಯನ್ ।
ವಿಷಣ್ಣರೂಪಸ್ತದ್ ರಾಜಾ ಸೂಕ್ಷ್ಮಂ ಚೂರ್ಣಕಾರಯತ್ ॥ ೨೭ ॥

ಸಾಂಬನು ಶಾಪದಿಂದಾಗಿ ಒನಕೆಯನ್ನು ಹೆರುತ್ತಲೇ ಯಾದವರು ಅದನ್ನೊಯ್ದು (ಉಗ್ರಸೇನ) ಅರಸನಿಗೆ ಕೊಟ್ಟರು. ಅದನ್ನು ಕಂಡು ರಾಜ ಬಲು ನೊಂದುಕೊಂಡನು. ಆ ಒನಕೆಯನ್ನು ಜಜ್ಜಿ ಹುಡಿಮಾಡಲಾಯಿತು.

**ಮೌಸಲ/೩**

ಶ್ರೀಕೃಷ್ಣನ ಕಣ್ಣೆದುರಿನಲ್ಲಿಯೇ ಸಾತ್ಯಕಿ ಹಾಗೂ ಅವನ ಮಗ ಪ್ರದ್ಯುಮ್ನರು ಸಾವನ್ನಪ್ಪಿದರೆಂದು ವೈಶಂಪಾಯನನು ಜನಮೇಜಯನಿಗೆ ಹೇಳಿದನು. ಆಗ ಅವನು ತುಂಬ ಕೆರಳಿಬಿಟ್ಟನು. ಒಂದು ಹಿಡಿ ಹುಲ್ಲನ್ನು ಕಿತ್ತಿ ತೆಗೆದನು. (ನೋಡಿದರೆ) ಅದರಿಂದ ವಜ್ರದಷ್ಟು ಬಿರುಸಾದ ಒಂದು ಕಬ್ಬಿಣದ ಒನಕೆ ತಯಾರಾಯಿತು. ಎದುರಿಗೆ ಬಂದವರನ್ನೆಲ್ಲ ಅದು ಸಂಹಾರಗೊಳಿಸಿತು. ಅಂಧಕ, ಭೋಜ, ಶಿನಿ ಹಾಗೂ ಉಳಿದ ವೃಷ್ಣಿಯರು ತಮ್ಮತಮ್ಮಲ್ಲಿಯೇ ಒನಕೆಗಳಿಂದ ಕಾದಾಡಹತ್ತಿದರು.

ಯಸ್ತೇಷಾಮೇರಕಾಂ ಕಶ್ಚಿಜ್ಜಗ್ರಾಹ ಕುಪಿತೋ ನೃಪ ॥ ೩೮ ॥
ವಜ್ರಭೂತೇವ ಸಾ ರಾಜನ್ನದೃಶ್ಯತೇ ತದಾ ವಿಭೋ ।
ತೃಣಂ ಚ ಮುಸಲೀಭೂತಮಪಿ ತತ್ರ ವ್ಯದೃಶ್ಯತ ॥ ೩೯ ॥
ಬ್ರಹ್ಮದಂಡಕೃತಂ ಸರ್ವಮಿತಿ ತದ್ ವಿದ್ಧಿ ಪಾರ್ಥಿವ ॥ ೪೦ ॥

'ಯಾವನಾದರೂ ಕೋಪದಿಂದ ಒಂದು ಹುಲ್ಲುಕಡ್ಡಿಯನ್ನು ಕಿತ್ತಿದರೂ ಅವನ ಕೈಯಲ್ಲಿ ಅದು ವಜ್ರದಂತೆ ಬಿರುಸಾಗುತ್ತಿತ್ತು. ಎಲೈ ರಾಜನೆ, ಒಂದು ಹುಲ್ಲುಕಡ್ಡಿ ಕೂಡ ಒನಕೆಯಂತೆ ಕಾಣುತ್ತಿತ್ತು. ಇದೆಲ್ಲ ಆ ಬ್ರಾಹ್ಮಣರ ಶಾಪದ ಫಲವಾಗಿತ್ತು.'

**ಮೌಸಲ/೪**

ಬಲರಾಮನು ಒಂದು ಮರದಡಿ ಚಿಂತನೆಯಲ್ಲಿ ಕುಳಿತುದನ್ನು ಕಂಡು ಶ್ರೀಕೃಷ್ಣನು ದಾರುಕನಿಗೆ ಇಂತೆಂದನು: 'ನೀನು ಕೂಡಲೇ ಹಸ್ತಿನಾಪುರಕ್ಕೆ ಹೋಗಿ ಯಾದವರ ಸಂಹಾರವನ್ನು ಕುರಿತು ಅರ್ಜುನನಿಗೆ ಹೇಳು.' ಅಂದರೆ,

'ತತೋಽರ್ಜುನಃ ಕ್ಷಿಪ್ರಮಿಹೋಪಯಾತು ಶ್ರುತ್ವಾ ಮೃತಾನ್
ಯಾದವಾನ್ ಬ್ರಹ್ಮಶಾಪಾತ್ ॥ ೩ ॥

'ಬ್ರಹ್ಮಶಾಪದಿಂದಾಗಿ ಉಂಟಾದ ಯಾದವರ ಸಾವುಗಳ ವಾರ್ತೆಯನ್ನು ಕೇಳಿ ಅರ್ಜುನ ಕ್ಷಿಪ್ರವಾಗಿ (ದ್ವಾರಕೆಗೆ) ಬರುವನು.'

ದಾರುಕನು ಶ್ರೀಕೃಷ್ಣನ ಅಪ್ಪಣೆಯ ಮೇರೆಗೆ ಹಸ್ತಿನಾಪುರಕ್ಕೆ ಹೋದನು. ಶ್ರೀಕೃಷ್ಣನು ತನ್ನ ಪಕ್ಕದಲ್ಲಿಯೇ ನಿಂತಿದ್ದ ಬಭ್ರುವನ್ನು ಹೆಂಗಳೆಯರನ್ನು ಕಾಪಾಡಲೆಂದು ದ್ವಾರಕೆಗೆ ಕಳುಹಿಸಿದನು. ಬಭ್ರುವು ಕೂಡ ಮದಿರೆಯನ್ನು ಕುಡಿದು ಮತ್ತನಾಗಿದ್ದನು. ತನ್ನ ಬಂಧುಬಳಗದವರ ಸಾವುಗಳಿಂದಾಗಿ ಬಹುಪೀಡಿತನಾಗಿದ್ದನು. ಅವನು ಕೊಂಚ ವಿಶ್ರಾಂತಿಯನ್ನು ಪಡೆಯುವ ಹೊತ್ತಿಗೆಂದರೆ, ಅಕಸ್ಮಾತ್ತಾಗಿ—

......ದುರಂತಮೇಕಂ ಸಹಸೈವ ಬಭ್ರುಮ್ ॥ ೫ ॥
ಬ್ರಹ್ಮಾನುಶಪ್ತಮವಧೀನ್ಮಹದ್ ವೈ ಕೂಟೇ ಯುಕ್ತಂ
ಮುಸಲಂ ಲುಬ್ಧಕಸ್ಯ ॥ ೬ ॥

'ಬ್ರಹ್ಮಶಾಪದಿಂದಾಗಿ ತಯಾರಾದ ಒಂದು ಹಿರಿದಾದ ಒನಕೆಯು ಒಂದು ಬಾಣದಂತೆ ಬಂದು ಬಭ್ರುವಿನ ಮೈಮೇಲೆ ಅಪ್ಪಳಿಸಿತು (ಅದರಿಂದಾಗಿ ಅವನ ಜೀವ ಹೋಯಿತು).'

**ಮೌಸಲ/೬**

ಅರ್ಜುನನು ವಸುದೇವನನ್ನು ಕಾಣಲೆಂದು ಬಂದಾಗ ಅವನು ತನ್ನ ಮಗನ ಸಾವಿನಿಂದಾಗಿ ವಿಹ್ವಲನಾಗಿ ನೆಲದ ಮೇಲೆ ಬಿದ್ದಿದ್ದನು. ತೀರ ದಾರುಣವಾದ ದುಃಖವನ್ನನುಭವಿಸುತ್ತಿದ್ದರೂ ಅವನು ಅರ್ಜುನನಿಗೆ ಹೀಗೆಂದನು—

ನ ತು ಗರ್ಹಾಮಿ ಶೈನೇಯಂ ಹಾರ್ದಿಕ್ಯಂ ಚಾಹಮರ್ಜುನ ॥ ೯ ॥
ಅಕ್ರೂರಂ ರೌಕ್ಮಿಣೇಯಂ ಚ ಶಾಪೋ ಹ್ಯೇವಾತ್ರ ಕಾರಣಮ್ ॥ ೧೦ ॥

'ನಾನು ಸಾತ್ಯಕಿ, ಕೃತವರ್ಮ, ಅಕ್ರೂರ. ಪ್ರದ್ಯುಮ್ನರನ್ನು ತಪ್ಪಿತಸ್ಥರೆನ್ನಲಾರೆ. ಬ್ರಾಹ್ಮಣರ ಶಾಪಗಳೇ ಅವರ ನಾಶಕ್ಕೆ ಕಾರಣ.' ಇಷ್ಟೇ ಅಲ್ಲದೆ, ಅವನು ಮತ್ತೆ, 'ಶ್ರೀಕೃಷ್ಣ ಯಾದವರ ಸಂಹಾರವನ್ನು ಶಾಂತ ರೀತಿಯಿಂದ ಕಾಣುತ್ತಲಿದ್ದನು. (ಈ ಸಂಹಾರವನ್ನು ತಡೆಯುವುದು ಅವನಿಗೆ ಅಸಾಧ್ಯವಾದುದೇನೂ ಆಗಿರಲಿಲ್ಲ. ಆದರೆ—)' ಎಂದನು.

ಗಾಂಧಾರ್ಯಾ ವಚನಂ ಯತ್ ತದೃಷೀಣಾಂ ಚ ಪರಂತಪ ॥ ೧೫ ॥
ತನ್ನೂನಮನ್ಯಥಾ ಕರ್ತುಂ ನೈಚ್ಛತ್ ನ ಜಗತಃ ಪ್ರಭುಃ ॥ ೧೬ ॥

'ನನ್ನ ಹೊಟ್ಟೆಯಲ್ಲಿ ಮಗನೆಂದು ಹುಟ್ಟಿಬಂದ ಜಗದೀಶ್ವರ ಕೃಷ್ಣನು ಗಾಂಧಾರಿ ಹಾಗೂ ಬ್ರಾಹ್ಮಣರ ಶಾಪಗಳನ್ನು ತಡೆಯಬಯಸಲಿಲ್ಲ. ಹೀಗಾಗಿ ಅವನು ಈ ಸಂಕಟ ದತ್ತ ಗಮನವನ್ನೀಯಲಿಲ್ಲ.'

**ಮೌಲಸ/೭**

ಮೃತರಾದ ಯಾದವ ವೀರರ ಅಂತ್ಯಸಂಸ್ಕಾರಗಳನ್ನು ಕುರಿತು ವೈಶಂಪಾಯನ ಜನಮೇಜಯನಿಗೆ ಹೀಗೆ ಹೇಳುತ್ತಾನೆ—

ಯಥಾ ಪ್ರಧಾನತಶ್ಚೈವ ಚಕ್ರೇ ಸರ್ವಾಸ್ತಥಾ ಕ್ರಿಯಾ ।
ಯೇ ಹತಾ ಬ್ರಹ್ಮಶಾಪೇನ ಮುಸಲೈರೇರಕೋದ್ಭವೈಃ ॥ ೩೦ ॥

'(ಅರ್ಜುನನಿಂದ ಅದೆಂದಿಗೂ ಧರ್ಮಲೋಪ ನಡೆದಿರಲಿಲ್ಲ. ಅವನು ಯಾದವ ವೀರರು ಮೃತರಾಗಿ ಬಿದ್ದ ತಾಣಕ್ಕೆ ಹೋದನು.) ಆ ಭಯಂಕರವಾದ ರಣಕದನದಲ್ಲಿ ಸಾವನ್ನಪ್ಪಿ ನೆಲಕ್ಕುರುಳಿದ ಯಾದವರನ್ನು ಕಂಡು ಅವನು ಬಲು ಪೀಡಿತನಾದನು. ಹುಲ್ಲುಕಡ್ಡಿಗಳಿಂದ ತಯಾರಾದ ಒನಕೆಗಳಿಂದಾಗಿ ಸಾವನ್ನಪ್ಪಿದ ಯಾದವರ ಅಂತ್ಯ ಕ್ರಿಯೆಗಳನ್ನು ಅರ್ಜುನನು ಅವರ ಹಿರಿತನಕ್ಕನುಸಾರವಾಗಿ ನೆರವೇರಿಸಿದನು.'

**ಮೌಲಸ/೮**

ಭಗವಾನ್ ಶ್ರೀಕೃಷ್ಣನು ಬಲರಾಮನ ದೇಹತ್ಯಾಗದ ಬಳಿಕ ತಾನೂ ಪರಮಪದವನ್ನು ಐದಿದನು. ಇದನ್ನು ಕುರಿತು ಅರ್ಜುನನು ಬಣ್ಣಿಸಿದಂತೆ ಬ್ರಹ್ಮಶಾಪದ ಉಲ್ಲೇಖ ಈ ರೀತಿಯಾಗಿದೆ—

ಮೌಸಲೇ ವೃಷ್ಣಿವೀರಾಣಾಂ ವಿನಾಶೋ ಬ್ರಹ್ಮಶಾಪಜಃ ॥ ೮ ॥

'ಬ್ರಾಹ್ಮಣರ ಶಾಪಗಳಿಂದಾಗಿ ನಡೆದ ಒನಕೆಗಳ ಕಾಳಗದಲ್ಲಿ ವೃಷ್ಣಿವೀರರು ನಾಶ ಹೊಂದಿದರು.'

ವ್ಯಾಸರು ಅರ್ಜುನನಿಗೆ ಸಮಾಧಾನ ತಾಳಲು ಹೇಳುತ್ತಾರೆ. ಆ ಶ್ಲೋಕಗಳ ಸಾಲುಗಳು ಮುಂದಿನಂತಿವೆ—

ಬ್ರಹ್ಮಶಾಪವಿನಿರ್ದಗ್ಧಾ ವೃಷ್ಣ್ಯಂಧಕಮಹಾರಥಾಃ ॥ ೨೫ ॥
ವಿನಷ್ಟಾಃ ಕುರುಶಾರ್ದೂಲ ನ ತಾಂ ಶೋಚಿತುಮರ್ಹಸಿ ।
ಭವಿತವ್ಯಂ ತಥಾ ತಚ್ಚ ದಿಷ್ಟಮೇತನ್ಮಹಾತ್ಮನಾಮ್ ॥ ೨೬ ॥
ಉಪೇಕ್ಷಿತಂ ಚ ಕೃಷ್ಣೇನ ಶಕ್ತೇನಾಪಿ ವ್ಯಪೋಹಿತುಮ್ ।
ತ್ರೈಲೋಕ್ಯಮಪಿ ಗೋವಿಂದಃ ಕೃತ್ಸ್ನಂ ಸ್ಥಾವರಜಂಗಮಮ್ ॥ ೨೭ ॥
ಪ್ರಸಹೇದನ್ಯಥಾ ಕರ್ತುಂ ಕುತಃ ಶಾಪಂ ಮಹಾತ್ಮನಾಮ್ ॥ ೨೮ ॥

'ಎಲೈ ಅರ್ಜುನನೆ ! ವೃಷ್ಣಿ ಹಾಗೂ ಅಂಧಕ ವಂಶಗಳ ಮಹಾರಥರೆಲ್ಲ ಬ್ರಾಹ್ಮಣರ ಶಾಪಗಳಿಂದಾಗಿಯೇ ಸುಟ್ಟು ಬೂದಿಯಾದರು. ಹೀಗಾಗಿ ಅವರನ್ನು ಕುರಿತು ದುಃಖಿಸು

ವುದು ತರವಲ್ಲ. ಮನಬಂದಂತೆ ನಡೆದುಕೊಳ್ಳುತ್ತಲಿದ್ದ ಆ ವೀರರ ಭವಿಷ್ಯವೇ ಆ ಬಗೆಯದಾಗಿತ್ತು. ಅವರ ಹಣೆಬರಹಕ್ಕೆ ತಕ್ಕಂತೆಯೇ ಅದೆಲ್ಲ ನಡೆಯಿತು. ಶ್ರೀಕೃಷ್ಣ ಈ ಸಂಕಟವನ್ನು ಪರಿಹರಿಸಬಲ್ಲವನಾಗಿದ್ದರೂ (ಬೇಕೆಂದೇ) ಅವನು ಅದರತ್ತ ಅಲಕ್ಷ್ಯತೋರಿದನು. ಚರಾಚರರಿಂದ ಕೂಡಿದ ಈ ತ್ರೈಲೋಕ್ಯದ ಗತಿಯನ್ನು ಮಾರ್ಪಡಿಸುವುದು ಶ್ರೀಕೃಷ್ಣನಿಗೆ ಕಷ್ಟದ ಮಾತೇನೂ ಆಗಿರಲಿಲ್ಲ. ಹೀಗಿರುವಲ್ಲಿ ಇಂಥ ಕಡುಗಲಿಗಳ ಶಾಪವನ್ನು ಮಾರ್ಪಡಿಸಹಚ್ಚುವುದು ಅವನಿಗೊಂದು ದೊಡ್ಡ ಕಾಯಕವಾಗಿತ್ತೆ ?'

## ೬. ಅಣಿಮಾಂಡವ್ಯ > ಯಮಧರ್ಮ (ವಿದುರ) ಆದಿ/೨

ಸೌತಿಯು (ಮಹಾ)ಭಾರತದಲ್ಲಿಯ ಬೇರೆ ಬೇರೆ ಪರ್ವಗಳಲ್ಲಿ ಯಾವ ಯಾವ ಸಂಗತಿಗಳಿವೆ ಎಂಬುದನ್ನು ಕುರಿತು ಶೌನಕ ಮೊದಲಾದ ಋಷಿಗಳಿಗೆ ಸಂಕ್ಷಿಪ್ತವಾಗಿ ಹೇಳುತ್ತಾನೆ. ಯಮಧರ್ಮನಿಗೆ ವಿದುರನ ರೂಪದಲ್ಲಿ ಮಾನವಜನ್ಮ ಬಂದುದು ಹೇಗೆಂಬುದನ್ನು ಕುರಿತು ಮುಂದಿನಂತೆ ಹೇಳುತ್ತಾನೆ—

ಧರ್ಮಸ್ಯ ನೃಷು ಸಂಭೂತಿರಣೀಮಾಂಡವ್ಯಶಾಪಜಾ ॥ ೧೦೦ ॥

'ಅಣಿಮಾಂಡವ್ಯ ಋಷಿಯ ಶಾಪದಿಂದಾಗಿ ಯಮಧರ್ಮನಿಗೆ ಮಾನವ ಜನ್ಮ ಬಂದಿತು.'

+ ಇಲ್ಲಿ ಶಾಪದ ಉಲ್ಲೇಖ ಮಾತ್ರವಿದೆ, ಪ್ರತ್ಯಕ್ಷದಲ್ಲಿ ಶಾಪವನ್ನೀಯಲಾಗಿಲ್ಲ.

ಆದಿ/೬೩

ವೈಶಂಪಾಯನನು ಜನಮೇಜಯನಿಗೆ ಉಪರಿಚರವಸು ರಾಜನ ಚರಿತ್ರೆಯನ್ನು ಹೇಳುತ್ತಲಿದ್ದಾನೆ. ಅದರಲ್ಲಿಯೇ ವಿದುರನ ಹುಟ್ಟಿನ ಕಥೆಯನ್ನೂ ಹೇಳಿಯಾಗಿದೆ.

ಅಣಿಮಾಂಡವ್ಯ ಮಹರ್ಷಿಯು ವೇದಾರ್ಥಗಳನ್ನು ಅರಿತವನೂ, ಬಲು ಕೀರ್ತಿವಂತನೂ ಆಗಿದ್ದನು. ಒಂದು ಸಲ ಅವನ ಮೇಲೆ ಕಳವಿನ ಆರೋಪವನ್ನು ಹೊರಿಸಲಾಯಿತು. ಅವನನ್ನು ಶೂಲಕ್ಕೇರಿಸಬೇಕೆಂದು ಶಿಕ್ಷೆಯನ್ನು ವಿಧಿಸಲಾಯಿತು. ಆಗ ಅವನು ಯಮಧರ್ಮನಿಗೆ ಹೀಗೆಂದನು—

ಇಷೀಕಯಾ ಮಯಾ ಬಾಲ್ಯಾದ್ ವಿದ್ಧಾ ಹ್ಯೇಕಾ ಶಕುಂತಿಕಾ ।
ತತ್ ಕಿಲ್ಬಿಷಂ ಸ್ಮರೇ ಧರ್ಮ ನಾನ್ಯತ್ ಪಾಪಮಹಂ ಸ್ಮರೇ ॥ ೯೪ ॥
ತನ್ಮೇ ಸಹಸ್ರಮಮಿತಂ ಕಸ್ಮಾನ್ನೇಹಾಜಯತ್ ತಪಃ ।
ಗರೀಯಾನ್ ಬ್ರಾಹ್ಮಣವಧಃ ಸರ್ವಭೂತವಧಾದ್ ಯತಃ ॥ ೯೫ ॥
ತಸ್ಮಾತ್ ತ್ವಂ ಕಿಲ್ಬಿಷೀ ಧರ್ಮ ಶೂದ್ರಯೋನೌ ಜನಿಷ್ಯಸಿ ।
ತೇನ ಶಾಪೇನ ಧರ್ಮೋಽಪಿ ಶೂದ್ರಯೋನಾವಜಾಯತ ॥ ೯೬ ॥
ವಿದ್ವಾನ್ ವಿದುರರೂಪೇಣ ಧಾರ್ಮೀ ತನುರಕಿಲ್ಬಿಷೀ ॥ ೯೭ ॥

'ನನ್ನ ಬಾಲ್ಯದಲ್ಲಿ ತಪ್ಪಿ ನಾನೊಂದು ಚಿಕ್ಕ ಹಕ್ಕಿಯನ್ನು ಕಡ್ಡಿಯಿಂದ ಚುಚ್ಚಿದ್ದೆ. ನನ್ನ ಕೈಯಿಂದ ನಡೆದಿರಬಹುದಾದ ಇದೊಂದು ಪಾಪ ನನಗೆ ನೆನಪಿದೆ. ಇದನ್ನುಳಿದು ಬೇರಿನ್ನಾವ ಪಾಪವನ್ನು ಕೈಕೊಂಡಂತೆ ನನಗೆ ನೆನಪಿಲ್ಲ. ನಡೆದುಹೋದ ಆ ಪಾಪದ

ಸಾವಿರಾರು ಪಟ್ಟು ಹೆಚ್ಚಿನ ತಪಸ್ಸನ್ನು ಆಚರಿಸಿದ್ದೇನೆ. ಅಂಥ ತಪಸ್ಸಿನಿಂದಲೂ ನನ್ನ ಅಪರಾಧ ಸುಟ್ಟುಹೋಗದೆ ಉಳಿಯಿತೆ? ಯಾವುದೇ ಪಾಪಕ್ಕಿಂತಲೂ ಬ್ರಾಹ್ಮಣನ ವಧೆಯು ಬಲು (ನಿಂದನೀಯ) ಹೆಚ್ಚಿನದು. (ನೀನು ನನ್ನನ್ನು ಕೊಲ್ಲುವೆ ಎಂದಬಳಿಕ) ಎಲೈ ಯಮಧರ್ಮನೆ! ನೀನು ಶೂದ್ರಯೋನಿಯಲ್ಲಿ ಜನ್ಮತಳೆಯುವೆ.' ಅಣಿಮಾಂಡವ್ಯ ಋಷಿಯಿಂದಾಗಿ ಯಮಧರ್ಮನೂ ಶೂದ್ರಯೋನಿಯಲ್ಲಿ ಜನ್ಮತಳೆಯುವಂತಾಯಿತು. ಈ ಶೂದ್ರನೆಂದರೇನೆ ಪುಣ್ಯಶೀಲನೂ ಧಾರ್ಮಿಕಮನೋವೃತ್ತಿಯುಳ್ಳವನೂ ವಿದ್ವಾಂಸನೂ ಆದ ವಿದುರನು.

**ಆದಿ/೧೦೫**

ವೈಶಂಪಾಯನ ವಿದುರನ ಹುಟ್ಟಿನ ಕಥೆಯನ್ನು ಹೇಳುತ್ತಲಿದ್ದಾನೆ—

ಅಂಬಿಕೆಯ ಹೊಟ್ಟೆಯಿಂದ ಕುರುಡನಾದ ಧೃತರಾಷ್ಟ್ರ ಹಾಗೂ ಅಂಬಾಲಿಕೆಯ ಹೊಟ್ಟೆಯಿಂದ ಬಿಳಿಬಣ್ಣದ ಪಾಂಡು ಹುಟ್ಟಿದರು. ಆದರಿಂದಾಗಿ ಸತ್ಯವತಿಗೆ ಚಿಂತೆಗಿಟ್ಟು ಕೊಂಡಿತು. ಅಂಬಿಕೆಯು ಎರೆದುಕೊಂಡು ಬಂದ ದಿನ ಸತ್ಯವತಿಯು ಗಂಡುಮಗುವನ್ನು ಪಡೆಯಲೆಂದು ನಿಯೋಗವನ್ನು ಕೈಕೊಳ್ಳಲು ಕೇಳಿದಳು. ಅಂಬಿಕೆ ಮೇಲೆ ಮೇಲೆ ತನ್ನ ಅತ್ತೆಯ ಕೋರಿಕೆಯನ್ನು ಮನ್ನಿಸಿದಳೇನೋ ನಿಜ. ಧೃತರಾಷ್ಟ್ರನ ಕಾಲಕ್ಕೆ ಬಸಿರಾಗುವ ಕ್ರಿಯೆ ಅವಳಲ್ಲಿ ಹೆದರಿಕೆಯನ್ನು ಹುಟ್ಟಿಸಿತ್ತು. ಹೀಗಾಗಿ ಅವಳು ತನ್ನ ಬದಲು ಒಬ್ಬಳು ದಾಸಿಯನ್ನು ಸಿಂಗರಿಸಿ ವ್ಯಾಸರ ಬಳಿಗೆ ಕಳುಹಿದಳು. ಮಲಗುವ ಕೋಣೆಯಲ್ಲಿ ಅವಳ ಅಂದವಾದ ನಡತೆಯನ್ನು ಕಂಡು ವ್ಯಾಸರು, 'ನಿನ್ನ ದಾಸ್ಯತ್ವ ಮುಗಿದೀತು. ನಿನ್ನ ಹೊಟ್ಟೆಯಿಂದ ಧರ್ಮವನ್ನರಿತವನು, ಬುದ್ಧಿವಂತನು ಹಾಗೂ ಜ್ಞಾನಿಯಾದ ಮಗ ಹುಟ್ಟಿಬರಲಿದ್ದಾನೆ' ಎಂದು ಅವಳನ್ನು ಹರಸಿದರು. ಈ (ಕೃಷ್ಣದ್ವೈಪಾಯನ) ವ್ಯಾಸನ ಮಗನೆಂದರೆ ವಿದುರ.

> ಧರ್ಮೋ ವಿದುರರೂಪೇಣ ಶಾಪಾತ್ ತಸ್ಯ ಮಹಾತ್ಮನಃ ।
> ಮಾಂಡವ್ಯಸ್ಯಾರ್ಥತತ್ತ್ವಜ್ಞಃ ಕಾಮಕ್ರೋಧವಿವರ್ಜಿತಃ ॥ ೨೮ ॥

'ಮಹಾತ್ಮನಾದ ಮಾಂಡವ್ಯಋಷಿಯ ಶಾಪದಿಂದಾಗಿ ಸಾಕ್ಷಾತ್ ಧರ್ಮರಾಜನೇ ವಿದುರನಾಗಿ ಹುಟ್ಟಿಬಂದನು. ಅವನು ಅರ್ಥತತ್ತ್ವಜ್ಞನೂ. ಕಾಮಕ್ರೋಧಗಳಿಲ್ಲದವನೂ ಆಗಿದ್ದನು.'

**ಆದಿ/೧೦೬**

ಜನಮೇಜಯನು ಈ ಸಂಗತಿಯನ್ನು ಆಲಿಸಿ ವೈಶಂಪಾಯನನಿಗೆ ಮುಂದಿನ ಪ್ರಶ್ನೆಯನ್ನು ಕೇಳಿದನು—

> ಕಿಂ ಕೃತಂ ಕರ್ಮ ಧರ್ಮೇಣ ಯೇನ ಶಾಪಮುಪೇಯಿವಾನ್ ।
> ಕಸ್ಯ ಶಾಪಾಚ್ಚ ಬ್ರಹ್ಮರ್ಷೇಃ ಶೂದ್ರಯೋನಾವಜಾಯತ ॥ ೧ ॥

'ಧರ್ಮನಿಂದಾದ ಅದಾವ ಪಾಪಕ್ಕಾಗಿ ಅವನಿಗೆ ಈ ಶಾಪ ಬಂದಿತು? ಯಾವ ಬ್ರಹ್ಮರ್ಷಿಶಾಪದಿಂದಾಗಿ ಅವನು ಶೂದ್ರಯೋನಿಯಲ್ಲಿ ಜನ್ಮತಳೆಯುವಂತಾಯಿತು?'

## ೭. ಬ್ರಾಹ್ಮಣ > ಐವರು ಅಪ್ಸರೆಯರು

**ಆದಿ/೨**

ಸೌತಿಯು ಶೌನಕಾದಿ ಋಷಿಗಳಿಗೆ (ಮಹಾ)ಭಾರತದಲ್ಲಿಯ ಬೇರೆ ಬೇರೆ ಪರ್ವಗಳಲ್ಲಿ ಯಾವ ಯಾವ ಸಂಗತಿಗಳಿವೆ ಎಂಬುದನ್ನು ಸಂಕ್ಷಿಪ್ತವಾಗಿ ಹೇಳುತ್ತಲಿದ್ದಾನೆ. ಅರ್ಜುನನು ಮೊಸಳೆಗಳ ರೂಪಗಳಲ್ಲಿದ್ದ ಅಪ್ಸರೆಯರನ್ನು ಬಿಡುಗಡೆಗೊಳಿಸಿದ ಸಂದರ್ಭದಲ್ಲಿ ಮುಂದಿನ ಉಲ್ಲೇಖ ಇದೆ—

ತತ್ರೈವ ಮೋಕ್ಷಯಾಮಾಸ ಪಂಚ ಸೋಽಪ್ಸರಸಃ ಶುಭಾಃ ॥ ೧೨೩ ॥
ಶಾಪಾದ್ ಗ್ರಾಹತ್ವಮಾಪನ್ನಾ ಬ್ರಾಹ್ಮಣಸ್ಯ ತಪಸ್ವಿನಃ ॥ ೧೨೪ ॥

'ಒಬ್ಬ ತಪಸ್ವಿಯಾದ ಬ್ರಾಹ್ಮಣನ ಶಾಪದಿಂದಾಗಿ ಐವರು ಅಂದಗಾತಿಯರಾದ ಅಪ್ಸರೆಯರಿಗೆ ಮೊಸಳೆಗಳ ದೇಹ ಬಂದಿತ್ತು. ಅರ್ಜುನನು ಅವರನ್ನು ಅವರ ಆ ರೂಪ ದಿಂದ ಬಿಡಿಸಿದನು.'

+ ಇಲ್ಲಿ ಶಾಪದ ಉಲ್ಲೇಖ ಮಾತ್ರವಿದೆ. ಪ್ರತ್ಯಕ್ಷದಲ್ಲಿ ಶಾಪವನ್ನು ಈಯಲಾಗಿಲ್ಲ. ಅದು ಸವಿಸ್ತರವಾಗಿ ಬಂದುದು ಆದಿಪರ್ವದ ಅಧ್ಯಾಯ ೨೧೫ರಿಂದ ೨೧೭ರವರೆಗೆ.

**ಆದಿ/೨೧೫**

ವೈಶಂಪಾಯನ ಜನಮೇಜಯನಿಗೆ ಐವರು ಅಪ್ಸರೆಯರ ಶಾಪ ಹಾಗೂ ಅದರಿಂದ ಅವರ ಬಿಡುಗಡೆಯ ಕಥೆಯನ್ನು ಹೇಳುತ್ತಲಿದ್ದಾನೆ—

ಅರ್ಜುನ ಸ್ನಾನ ಮಾಡಲೆಂದು ಸೌಭದ್ರತೀರ್ಥದಲ್ಲಿ ನೆಗೆಯುತ್ತಾನೆ. ಕೂಡಲೆ ಒಂದು ಹೆಮ್ಮೊಸಳೆ ಅವನ ಕಾಲುಗಳನ್ನು ಭದ್ರವಾಗಿ ಹಿಡಿದುಕೊಳ್ಳುತ್ತದೆ. ಅದರ ಹಿಡಿತ ದಿಂದ ತನ್ನನ್ನು ಬಿಡಿಸಿಕೊಳ್ಳುವ ಅವನ ತೊಳಲಾಟ ವ್ಯರ್ಥವಾಯಿತು. ಆ ಮೊಸಳೆ ನೀರಿನ ಹೊರಕ್ಕೆ ಬರುತ್ತಲೆ ಅದು ಒಬ್ಬ ಚೆಲುವೆಯಾದ ಅಪ್ಸರೆಯಾಗಿ ಮಾರ್ಪಟ್ಟಿತು. ಅವಳನ್ನು ಕಂಡು ಅರ್ಜುನ ಅಚ್ಚರಿಪಟ್ಟನು. ಅವನು ಅವಳನ್ನು, 'ನೀನಾರು ? ಮೊಸಳೆ ಯಾಗಿ ನೀರಲ್ಲಿರಲು ಕಾರಣವೇನು ?' ಎಂದು ಕೇಳಿದನು. ಅದಕ್ಕವಳು ತನ್ನ ಹೆಸರು ವರ್ಗಾ ಎಂಬುದಾಗಿಯೂ ತಾನು ಸೌರಮೇಯಿ, ಸಮೀಚಿ, ಬುದ್‌ಬುದಾ ಹಾಗೂ ಲತಾ ಎಂಬ ಇನ್ನು ನಾಲ್ವರು ಅಪ್ಸರೆಯರ ಗೆಳತಿಯೆಂದು ಅವನಿಗೆ ಅರುಹಿದಳು. ಅವರೆಲ್ಲ ಬೇಕಿದ್ದೆಡೆಗಳಲ್ಲೆಲ್ಲ ಸಂಚರಿಸಬಲ್ಲವರಾಗಿದ್ದರು. ಒಂದು ಸಲ ಆ ಐವರೂ ಕೂಡಿಕೊಂಡು ಕುಬೇರನಲ್ಲಿಗೆ ಹೊರಟಿದ್ದರು. ದಾರಿಯಲ್ಲಿ ಅವರಿಗೊಬ್ಬ ಸುಂದರನಾದ ತಪಸ್ವಿಯು ಕಂಡನು. ಅವನು ತಪಸ್ಸಿನಲ್ಲಿ ಮೈಮರೆತಿದ್ದನು. ಅವರು ಅವನ ತಪಸ್ಸಿನಲ್ಲಿ ತಡೆಯ ನ್ನುಂಟುಮಾಡಲು ಯತ್ನಿಸಿದರು. ಅವರು ಅವನ ಗಮನವನ್ನು ತಮ್ಮತ್ತ ಸೆಳೆದುಕೊಳ್ಳು ವಲ್ಲಿ ಸೋಲನ್ನಪ್ಪಿದರು. ಅವನು ತಪ್ಪಿಯೂ ಅವರತ್ತ ಕಣ್ಣೆತ್ತಿ ನೋಡಲಿಲ್ಲ. ಆದರೆ,

ಸೋಽಶಪತ್ ಕುಪಿತೋಽಸ್ಮಾನು ಬ್ರಾಹ್ಮಣಃ ಕ್ಷತ್ರಿಯರ್ಷಭ ।
ಗ್ರಾಹಭೂತಾ ಜಲೇ ಯೂಯಂ ಚರಿಷ್ಯಥ ಶತಂ ಸಮಾಃ ॥ ೨೩ ॥

'ನಮ್ಮ ಸೊಕ್ಕಿನ ನಡತೆಯಿಂದಾಗಿ ಕೆರಳಿ ಸಂತಪ್ತನಾಗಿ ಆ ಬ್ರಾಹ್ಮಣ ನಮಗೆ ಶಾಪವನ್ನಿತ್ತನು—ನೀವು ಮೊಸಳೆಗಳಾಗಿ ನೂರು ವರ್ಷಗಳ ಕಾಲ ನೀರಲ್ಲಿರಿ.'

**ಆದಿ/೨೧೬**

ಆ ತಪಸ್ವಿಯ ಶಾಪವನ್ನು ಕೇಳಿ ನಾವೆಲ್ಲ ಬಲುದುಃಖಿತರಾದೆವು. ನಾವು ನಮ್ಮ ತಪ್ಪನ್ನೊಪ್ಪಿಕೊಂಡು ಅವನಿಗೆ ಶರಣುಹೋದೆವು. ಕ್ಷಮೆಗಾಗಿ ಕೋರುತ್ತಲೇ ಅವನು ಅದನ್ನು ಮನ್ನಿಸಿದನು.

ಬ್ರಾಹ್ಮಣ ಉವಾಚ—

ಶತಂ ಶತಸಹಸ್ರಂ ತು ಸರ್ವಮಕ್ಷಯ್ಯವಾಚಕಮ್ ।
ಪರಿಮಾಣಂ ಶತಂ ತ್ವೇತನ್ನೇದಮಕ್ಷಯ್ಯವಾಚಕಮ್ ॥ ೮ ॥
ಯದಾ ಚ ವೋ ಗ್ರಾಹಭೂತಾ ಗೃಹ್ಣಂತೀಃ ಪುರುಷಾಂಜಲೇ ।
ಉತ್ಕರ್ಷತಿ ಜಲಾತ್ ತಸ್ಮಾತ್ ಸ್ಥಲಂ ಪುರುಷಸತ್ತಮಃ ॥ ೯ ॥
ತದಾ ಯೂಯಂ ಪುನಃ ಸರ್ವಾಃ ಸ್ವಂ ರೂಪಂ ಪ್ರತಿಪತ್ಸ್ಯಥ ।
ಅನೃತಂ ನೋಕ್ತಪೂರ್ವಂ ಮೇ ಹಸತಾಪಿ ಕದಾಚನ ॥ ೧೦ ॥
ತಾನಿ ಸರ್ವಾಣಿ ತೀರ್ಥಾನಿ ತತಃ ಪ್ರಭೃತಿ ಚೈವ ಹಿ ।
ನಾರೀತೀರ್ಥಾನಿ ನಾಮ್ನೇಹ ಖ್ಯಾತಿಂ ಯಾಸ್ಯಂತಿ ಸರ್ವಶಃ ।
ಪುಣ್ಯಾನಿ ಚ ಭವಿಷ್ಯಂತಿ ಪಾವನಾನಿ ಮನೀಷಿಣಾಮ್ ॥ ೧೧ ॥

(ಮುಂದೆ) ಬ್ರಾಹ್ಮಣ ಅವರಿಗೆ ಹೀಗೆ ಹೇಳಿದನು—"ನೂರು, ಲಕ್ಷ ಮೊದಲಾದ ಸಂಖ್ಯಾವಾಚಕ ಪದಗಳನ್ನು ನಿತ್ಯದ ಬಳಕೆಯಲ್ಲಿ ಅಸಂಖ್ಯ, ಅಪರಿಮಿತ, ಅನಂತ ಎಂಬಿತ್ಯಾದಿ ಅರ್ಥಗಳಲ್ಲಿ ಉಪಯೋಗಿಸಲಾಗುತ್ತದೆ. ಆದರೆ ನಿಮ್ಮ ಸಂದರ್ಭದಲ್ಲಿ ಮಾತ್ರ ನಾನು 'ಶತ' ಎಂಬ ಈ ಪದವನ್ನು 'ನೂರು' ಎಂಬ ಖಂಡಿತಾರ್ಥದಿಂದಲೇ ಬಳಸಿದ್ದೆ. ನಾನು ಅದನ್ನು 'ಅನಂತಕಾಲ' ಎಂಬುದಾಗಿ ಭಾವಿಸಿರಲಿಲ್ಲ. ನಿಮಗೆ ಮೊಸಳೆಯ ಜನ್ಮ ಬಂದೀತು. ಆಗ ನೀವು ಮಾನವರನ್ನು ನೀರಿನೊಳಕ್ಕೆ ಎಳೆದೊಯ್ಯುವಿರಿ. ಆದರೆ ನಿಮ್ಮನ್ನೆತ್ತಿ ದಡಕ್ಕೆ ತರಬಲ್ಲವನಾದ ಒಬ್ಬ ಶೂರನು ಒಂದು ಸಲ ಬಂದಾನು. ಆಗ ನಿಮಗೆ ಮೊದಲ ಸ್ವರೂಪವು ಪ್ರಾಪ್ತವಾದೀತು. ನಾನೆಂದಿಗೂ ಚೇಷ್ಟೆಗಾಗಿ ಕೂಡ ಸುಳ್ಳಾಡಿದವನಲ್ಲ. ನೀವು (ಮೊಸಳೆಗಳಾಗಿ) ವಾಸಿಸಿದ ಈ ಜಲಾಶಯ 'ನಾರೀತೀರ್ಥ' ವೆಂದು ಹೆಸರುವಾಸಿಯಾಗಲಿ. ಈ ತೀರ್ಥಗಳು ಪುಣ್ಯಪ್ರದವೆಂದೂ ಪಾವನತೀರ್ಥ ಗಳೆಂದೂ ಭಾವಿಸಲ್ಪಟ್ಟಾವು."

+ ಬ್ರಾಹ್ಮಣನು ನೀಡಿದ ಉಃಶಾಪವು ಯಥಾಚಿತವಾದುದು.

ವರ್ಗಾ ಇವಳ ಕೋರಿಕೆಯ ಮೇರೆಗೆ ಅರ್ಜುನನು ಅವಳ ಉಳಿದ ನಾಲ್ಕು ಜನ ಸ್ನೇಹಿತೆಯರನ್ನು ಜಲಾಶಯದಿಂದ ಹೊರತೆಗೆದನು.

ತತಸ್ತಾಃ ಪಾಂಡವಶ್ರೇಷ್ಠಃ ಸರ್ವಾ ಏವ ವಿಶಾಂಪತೇ ।
ತಸ್ಮಾಚ್ಛಾಪಾದದೀನಾತ್ಮಾ ಮೋಕ್ಷಯಾಮಾಸ ವೀರ್ಯವಾನ್ ॥ ೨೦ ॥

ಪಾಂಡವಶ್ರೇಷ್ಠನಾದ ಅರ್ಜುನನು ನಾಲ್ಕು ಜನ ಅಪ್ಸರೆಯರನ್ನು ಶಾಪದಿಂದ ಬಿಡುಗಡೆಗೊಳಿಸಿದನು. ಅದರಿಂದಾಗಿ ಅವರು ತಮ್ಮ ಮೊದಲಿನ ಅಂದವನ್ನು ಮರಳಿ ಪಡೆದರು.

## ೮. ಮೈತ್ರೇಯ > ದುರ್ಯೋಧನ ಆದಿ/೨

ಸೌತಿಯು ಶೌನಕ ಮೊದಲಾದ ಋಷಿಗಳಿಗೆ (ಮಹಾ)ಭಾರತದ ಬೇರೆಬೇರೆ ಪರ್ವಗಳಲ್ಲಿ ಯಾವ ಯಾವ ಸಂಗತಿಗಳಿವೆ ಎಂಬುದನ್ನು ಕುರಿತು ಸಂಕ್ಷಿಪ್ತವಾಗಿ ಹೇಳುತ್ತಿದ್ದಾನೆ. ಅವರಿಗೆ ವನಪರ್ವದ ಸಂಗತಿಗಳನ್ನು ಕುರಿತು ಪರಿಚಯವನ್ನು ಮಾಡಿಕೊಡುತ್ತಾನೆ. ಅದರಲ್ಲಿ, ದುರ್ಯೋಧನನು ಕರ್ಣನ ನೆರವಿನಿಂದ ಕಾಡಿನಲ್ಲಿ ವಾಸವಾಗಿದ್ದ ಪಾಂಡವರನ್ನು ನಾಶಪಡಿಸುವ ಹಂಚಿಕೆಯನ್ನು ಹೇಗೆ ಹೂಡಿದನು, ವ್ಯಾಸಋಷಿಗೆ ಈ ಸಂಗತಿಯ ಸುಳಿವು ಸಿಕ್ಕುತ್ತಲೇ ಅವನು ಧೃತರಾಷ್ಟ್ರನಲ್ಲಿಗೆ ಹೋಗಿ ಅವನಿಗೆ ಏನೆಂದು ಉಪದೇಶವನ್ನು ಮಾಡಿದನು, ಮೈತ್ರೇಯನು ದುರ್ಯೋಧನನಿಗೆ ಏಕೆ ಹಾಗೂ ಏನೆಂದು ಶಾಪವನ್ನಿತ್ತನು ಎಂಬುದನ್ನು ಕುರಿತಾದ ಹೇಳಿಕೆಯಿದೆ—

> ಮೈತ್ರೇಯಾಗಮನಂ ಚಾತ್ರ ರಾಜ್ಞಶ್ಚೈವಾನುಶಾಸನಮ್ ।
> ಶಾಪೋತ್ಸರ್ಗಶ್ಚ ತೇನೈವ ರಾಜ್ಞೋ ದುರ್ಯೋಧನಸ್ಯ ಚ ॥ ೧೪೯ ॥

'ಮೈತ್ರೇಯ ಋಷಿಯ ಆಗಮನವಾಯಿತು. ಅವನು ಧೃತರಾಷ್ಟ್ರನಿಗೆ ಉಪದೇಶವನ್ನು ನೀಡಿದನು. ಮತ್ತೆ ರಾಜನು ದುರ್ಯೋಧನಗೆ ಶಾಪವನ್ನಿತ್ತನು.'

+ ಇಲ್ಲಿ ಶಾಪವನ್ನಿತ್ತ ಉಲ್ಲೇಖ ಮಾತ್ರ ಇದೆ. ಪ್ರತ್ಯಕ್ಷವಾಗಿ ಶಾಪವನ್ನಿತ್ತಿಲ್ಲ ಈ ಸಂಗತಿ ವನಪರ್ವದಲ್ಲಿ ಹೆಚ್ಚಿನ ವಿಸ್ತಾರದಿಂದ ಬಂದಿದೆ.

**ವನ/೧೦**

ಪಾಂಡವರನ್ನು ಕೊಲ್ಲಬೇಕೆಂಬ ದುರ್ಯೋಧನನ ಸಂಚು ತಿಳಿದುಬರುತ್ತಲೇ ವ್ಯಾಸ ಋಷಿಯು ಧೃತರಾಷ್ಟ್ರನನ್ನು ಕಂಡು ಅವನಿಗೆ ಪಾಂಡವರೊಡನೆ ಗೆಳೆತನವನ್ನು ಬೆಳೆಯಿಸುವಂತೆ ಉಪದೇಶವನ್ನು ನೀಡಿದನು. ಕುರುವಂಶದ ಮೇಲೆ ಬಂದೆರಗಲಿದ್ದ ವಿಪತ್ತನ್ನು ನಿವಾರಿಸಲೆಂದು ಧೃತರಾಷ್ಟ್ರನು ದುರ್ಯೋಧನನನ್ನು ಶಿಕ್ಷಿಸುವಂತೆ ಆ ಋಷಿಯನ್ನು ಕೇಳಿಕೊಂಡನು. ಅದೇ ಹೊತ್ತಿಗೆ ಮೈತ್ರೇಯಋಷಿಯು ಅತ್ತಕಡೆಗೇನೆ ಬರುತ್ತಿರುವುದು ಕಂಡಿತು. ಆಗ ವ್ಯಾಸನು ಧೃತರಾಷ್ಟ್ರನಿಗೆ, 'ಮೈತ್ರೇಯನೇ ನಿನ್ನ ಮಗನನ್ನು ಶಿಕ್ಷಿಸಲು ಎಲ್ಲ ನೀತಿಯಿಂದಲೂ ಸಮರ್ಥನು. ಆದುದರಿಂದ ಅವನು ಹೇಳಿದಂತೆ ಶಂಕೆಯನ್ನು ತೊರೆದು ನಡೆದುಕೊಳ್ಳತಕ್ಕದ್ದು. ಆದರೆ,

> ಅಕ್ರಿಯಾಯಾಂ ತು ಕಾರ್ಯಸ್ಯ ಪುತ್ರಂ ತೇ ಶಪ್ಸ್ಯತೇ ರುಷಾ ॥ ೬ ॥

'ಅವನು ನುಡಿದಂತೆ ಸರಿಯಾಗಿ ನಡೆದುಕೊಳ್ಳದಿದ್ದರೆ ಅವನು ಕೆರಳಿ ನಿನ್ನ ಮಗನನ್ನು ಶಪಿಸುವನು' ಎಂದು ಎಚ್ಚರಿಕೆಯನ್ನು ನೀಡಿದನು.

ಧೃತರಾಷ್ಟ್ರನು ಮೈತ್ರೇಯಿಯನ್ನು ಯಥೋಚಿತವಾಗಿ ಸತ್ಕರಿಸಿದನು. ಮೈತ್ರೇಯಿಯು ಅವನಿಗೆ ಉಪದೇಶವನ್ನಿತ್ತನು. ಪಾಂಡವರೊಂದಿಗೆ ಗೆಳೆತನವನ್ನು ಬೆಳೆಸುವಂತೆ ದುರ್ಯೋಧನನಿಗೆ ಹೇಳಿದನು. ಆದರೆ ದುರ್ಯೋಧನ ಅವನ ಮಾತಿಗೆ ಕಿವಿಗೊಡಲಿಲ್ಲ. ತೊಡೆಯ ಮೇಲೆ ಸೆಡ್ಡುಹೊಡೆದನು. ಕಾಲಿನಿಂದ ನೆಲವನ್ನು ಕೆದರಹತ್ತಿದನು. ಇದನ್ನು ಕಂಡು ಮೈತ್ರೇಯಿ ಕೆರಳಿ ಕೆಂಡವಾದನು.

ವಿಧಿನಾ ಸಂಪ್ರಣುದಿತಃ ಶಾಪಾಯಾಸ್ಯ ಮನೋ ದಧೇ ।
ತತಃ ಸ ವಾರ್ಯುಪಸ್ಪೃಶ್ಯ ಕೋಪಸಂರಕ್ತಲೋಚನಃ ।
ಮೈತ್ರೇಯೋ ಧಾರ್ತರಾಷ್ಟ್ರಂ ತಮಶಪದ್ ದುಷ್ಟಚೇತಸಮ್ ॥ ೩೨ ॥

'ಬ್ರಹ್ಮದೇವನ ಪ್ರೇರಣೆಯಿಂದಾಗಿಯೇ ಅವನ ಮನದಲ್ಲಿ ದುರ್ಯೋಧನನಿಗೆ ಶಾಪವನ್ನೀಯಬೇಕೆಂಬ ಆಲೋಚನೆ ಹುಟ್ಟಿತು. ಕೋಪದಿಂದ ಅವನ ಕಣ್ಣುಗಳು ಕಿಡಿಕಾರಹತ್ತಿದವು. ಅವನು ಆಚಮನವನ್ನು ಮಾಡಿ ದುರುಳನಾದ ದುರ್ಯೋಧನನಿಗೆ ಇಂತು ಶಾಪವನ್ನಿತ್ತನು.—

ಯಸ್ಮಾತ್ ತ್ವಂ ಮಾಮನಾದೃತ್ಯ ನೇಮಾಂ ವಾಚಂ ಚಿಕೀರ್ಷಸಿ ।
ತಸ್ಮಾದಸ್ಯಾಭಿಮಾನಸ್ಯ ಸದ್ಯಃ ಫಲಮವಾಪ್ನುಹಿ ॥ ೩೩ ॥
ತ್ವದಭಿದ್ರೋಹಸಂಯುಕ್ತಂ ಯುದ್ಧಮುತ್ಪತ್ಸ್ಯತೇ ಮಹತ್ ।
ತತ್ರ ಭೀಮೋ ಗದಾಘಾತೈಸ್ತವೋರುಂ ಭೇತ್ಸ್ಯತೇ ಬಲೀ ॥ ೩೪ ॥

ನೀನು ಈ ಬಗೆಯಾಗಿ ನನ್ನ ಮಾತಿನತ್ತ ಅಲಕ್ಷ್ಯವನ್ನು ತೋರುತ್ತಿರುವೆ ಎಂದಬಳಿಕ ಬಲುಶೀಘ್ರದಲ್ಲಿಯೇ ಇದರ ಫಲವನ್ನು ಅನುಭವಿಸದಿರಲಾರೆ. ನೀನು ಬಗೆಯುತ್ತಿರುವ ಈ ಹಗೆಯಿಂದಾಗಿ ಒಂದು ದೊಡ್ಡ ಯುದ್ಧ ಹೊತ್ತಿಕೊಂಡೀತು. ಆಗ ಬಲಶಾಲಿಯಾದ ಭೀಮನ ಗದೆಯ ಪ್ರಹಾರದಿಂದಾಗಿ ನಿನ್ನ ತೊಡೆ ಒಡೆದುಬಿಟ್ಟೀತು.'

ಈ ಶಾಪವಾಣಿಯನ್ನು ಕೇಳಿ ಧೃತರಾಷ್ಟ್ರ ಹೆದರಿ ಹೌಹಾರಿದನು. 'ಹೀಗಾಗದಿರಲಿ' ಎಂದು ಒಂದೇ ಸವನೆ ಬೇಡಿಕೊಳ್ಳತೊಡಗಿದನು. ಆಗ ಮೈತ್ರೇಯನು ಅವನಿಗಂದನು—

ಶಮಂ ಯಾಸ್ಯತಿ ಚೇತ್ ಪುತ್ರಸ್ತವ ರಾಜನ್ ಯದಾ ತದಾ ।
ಶಾಪೋ ನ ಭವಿತಾ ತಾತ ವಿಪರೀತೇ ಭವಿಷ್ಯತಿ ॥ ೩೬ ॥

'ಎಲೈ ರಾಜನೆ, ನಿನ್ನ ಮಗನು (ಮನದಲ್ಲಿ ಹಗೆಯನ್ನು ತಳೆಯದೆ) ಶಾಂತಿಯನ್ನು ಕೈಕೊಳ್ಳುವನಾದರೆ ಶಾಪ ತನ್ನ ಪರಿಣಾಮವನ್ನು ಬೀರದು. ಹಾಗೆ ನಡೆದುಕೊಳ್ಳದಿದ್ದರೆ ಮಾತ್ರ ಶಾಪದ ಪರಿಣಾಮವನ್ನು ಅನುಭವಿಸಲೇಬೇಕು.'

**ಶಲ್ಯ/೬೦**

ಭೀಮನು ದುರ್ಯೋಧನನ ಊರುಭಂಗವನ್ನು ಕೈಕೊಂಡಿದ್ದನ್ನು ಕಂಡು ಬಲರಾಮ ಭೀಮನ ಮೇಲೆ ಏರಿಹೋದನು. ಆಗ ಕೃಷ್ಣನು ಅವನನ್ನು ತಡೆಹಿಡಿದನು. ಕೈಕೊಂಡ ಪ್ರತಿಜ್ಞೆಯಂತೆ ನಡೆದುಕೊಳ್ಳುವುದು ಕ್ಷತ್ರಿಯರ ಧರ್ಮವಾಗಿದ್ದು ಭೀಮನ ನಡೆತೆ ಅದಕ್ಕೆ ತಕ್ಕಂತೆಯೇ ಇದೆಯೆಂದು ಹೇಳಿದನು. ಮೈತ್ರೇಯನು ದುರ್ಯೋಧನನಿಗಿತ್ತ ಶಾಪವನ್ನು (ಈ ರೀತಿಯಾಗಿ) ಅವನಿಗೆ ನೆನಪು ಮಾಡಿಕೊಡುತ್ತಾನೆ—

ಮೈತ್ರೇಯೇಣಾಭಿಶಪ್ತಶ್ಚ ಪೂರ್ವಮೇವ ಮಹರ್ಷಿಣಾ ।
ಊರೂ ತೇ ಭೇತ್ಸ್ಯತೇ ಭೀಮೋ ಗದಯೇತಿ ಪರಂತಪ ॥ ೧೮ ॥

'ಶತ್ರುಗಳನ್ನು ಕೆರಳಿಸುವವನಾದ ಮೈತ್ರೇಯನು (ದುರ್ಯೋಧನನಿಗೆ) ಮೊದಲೇ ಶಾಪವನ್ನಿತ್ತಿದ್ದಾನೆ.' (ಅದು ಹೀಗಿದೆ—) 'ಭೀಮನು ಯುದ್ಧಕಾಲಕ್ಕೆ ತನ್ನ ಗದೆಯಿಂದ ನಿನ್ನ (ದುರ್ಯೋಧನನ) ಊರುಭಂಗವನ್ನು ಕೈಕೊಳ್ಳಲಿರುವನು.'

+ ವನಪರ್ವ ೧೦/೩೬ರಲ್ಲಿಯ ಉಃಶಾಪವು ಯಾಚಿತವಾದುದೂ, ಶರತ್ತಿನದೂ ಆಗಿದೆ. ಉಃಶಾಪವನ್ನು ಕೇಳಿಕೊಂಡವನು ಶಾಪಿತನಾದ ದುರ್ಯೋಧನನಾಗಿರದೆ ಅವನಿಗಾಗಿ ಧೃತರಾಷ್ಟ್ರ ಕೇಳಿಕೊಂಡಿರುವನು. ಅಲ್ಲದೆ, ಮೈತ್ರೇಯ ಋಷಿಯು ಅದನ್ನೊಪ್ಪಿಕೊಂಡೂ ಇದ್ದಾನೆ. ಶರತ್ತನ್ನು ಸರಿಯಾಗಿ ಪಾಲಿಸಿದರೆ ಮಾತ್ರ ಶಾಪದ ಪರಿಣಾಮಗಳಿಂದ ಬಿಡುಗಡೆಯೇ ಹೊರತು ಇಲ್ಲದಿದ್ದರೆ ಇಲ್ಲ.

## ೯. ಸರಮಾ (ದೇವಶುನಿ) > ಜನಮೇಜಯ ಆದಿ/೩

ಸೌತಿಯು ಶೌನಕಾದಿ ಋಷಿಗಳಿಗೆ ಸರಮೆಯು ಜನಮೇಜಯನಿಗಿತ್ತ ಶಾಪದ ಕಥೆಯನ್ನು ಹೇಳುತ್ತಲಿದ್ದಾನೆ—

ಜನಮೇಜಯ ಸರ್ಪಯಜ್ಞವನ್ನು ಕೈಕೊಂಡಿದ್ದನು. ಆಗ ಸರಮೆಯ ಮಗನಾದ ಸಾರಮೇಯ ಅಲ್ಲಿಗೆ ಹೋಗುತ್ತಾನೆ. ಅವನು ಅದಾವ ತಪ್ಪನ್ನು ಮಾಡಿರದಿರುವಾಗಲೂ ಜನಮೇಜಯ ಹಾಗೂ ಅವನ ಒಡಹುಟ್ಟಿದವರು ಅವನನ್ನು ಚೆನ್ನಾಗಿ ಥಳಿಸುತ್ತಾರೆ. ಅವನು ಈ ಸಂಗತಿಯನ್ನು ತನ್ನ ತಾಯಿ ಸರಮೆಗೆ ಅರುಹುತ್ತಾನೆ. ಹೀಗಾಗಿ ಅವಳು ಜನಮೇಜಯನ ಬಳಿ ನಡೆದುದನ್ನು ಕುರಿತು ಕೇಳಲೆಂದು ಹೋಗುತ್ತಾಳೆ. ಜನಮೇಜಯನಾಗಲಿ, ಅವನ ಒಡಹುಟ್ಟಿದವರಾದ ಶ್ರುತಸೇನ, ಉಗ್ರಸೇನ, ಇಲ್ಲವೆ ಭೀಮಸೇನನಾಗಲಿ ಯಾವುದೇ ಬಗೆಯಾಗಿ ಉತ್ತರಿಸಲು ಅಸಮರ್ಥರಾದರು. ಆಗ ಅವಳು ಅವರಿಗೆ ಹೀಗೆಂದಳು—

> ......ಯಸ್ಮಾದಯಮಭಿಹತೋಽನಪಕಾರೀ ತಸ್ಮಾದದೃಷ್ಟಂ ತ್ವಾಂ
> ಭಯಮಾಗಮಿಷ್ಯತಿ ॥ ೯ ॥

'ನಿರಪರಾಧಿಯಾದ ನನ್ನ ಮಗನನ್ನು ಹೊಡೆದಿರುವಿರೆಂದಬಳಿಕ ನಿನ್ನ ಈ ಸತ್ರಕ್ಕೆ ಅಕಲ್ಪಿತವಾದ ವಿಘ್ನ ಬಾರದಿರದು.'

ಸತ್ರ ಮುಗಿದ ತರುವಾಯ ಜನಮೇಜಯನು ಹಸ್ತಿನಾಪುರದತ್ತ ತೆರಳಿದನು. ಸರಮೆಯ ಶಾಪವನ್ನು ಪರಿಮಾರ್ಜನಗೊಳಿಸಲೆಂದು ಅವನು ಒಬ್ಬ ಯೋಗ್ಯವಾದ ಪುರೋಹಿತನನ್ನು ಹುಡುಕಹತ್ತಿದನು. ಶ್ರುತಶ್ರವನ ಮಗನಾದ ಸೋಮಶ್ರವನು ಪೌರೋಹಿತ್ಯವನ್ನು ಸ್ವೀಕರಿಸುವನೇ—ಎಂದು ಕೇಳಲು ಅವನ ಬಳಿಗೆ ಹೋದನು. ಆಗ ಶ್ರುತಶ್ರವನು ಅವನಿಗೆ ಹೀಗೆಂದನು—

> ಸಮರ್ಥೋಽಯಂ ಭವತಃ ಸರ್ವಾಃ ಪಾಪಕೃತ್ಯಾಃ ಶಮಯಿತುಮಂತರೇಣ
> ಮಹಾದೇವಕೃತ್ಯಾಮ್ ॥ ೧೭ ॥

'ಈತನು ಶಾಪಗಳಿಂದಾಗಿ ಹುಟ್ಟಿಬಂದ ಪಾಪಕೃತ್ಯಗಳನ್ನೇನೋ ಪರಿಹರಿಸಬಲ್ಲವನು. ಆದರೆ ಶಂಕರನು ನಿನಗಿತ್ತ ಶಾಪವನ್ನು ಮಾತ್ರ ಈತ ಪರಿಹರಿಸಲಾರನು.'

**ಆದಿ/೫೭**

ಸೌತಿಯು ಶೌನಕಾದಿ ಋಷಿಗಳಿಗೆ ಸರ್ಪಯಜ್ಞವನ್ನು ಕುರಿತು ಹೇಳುವಾಗ ಈ ಶಾಪವನ್ನು ಉಲ್ಲೇಖಿಸಿದ್ದಾನೆ.

## ೧೦. ಶಂಕರ (ಮಹಾದೇವ) > ಜನಮೇಜಯ ಆದಿ/೩

ಶಂಕರನು ಜನಮೇಜಯನಿಗಿತ್ತ ಶಾಪದ ಬರಿ ಒಂದು ಉಲ್ಲೇಖ.

. . . . .ಶಮಯಿತುಮಂತರೇಣ ಮಹಾದೇವಕೃತ್ಯಾಮ್ ॥ ೧೭ ॥

+ ಶ್ರೀ ಅಪ್ಪಾಶಾಸ್ತ್ರಿ ರಾಶಿವಡೇಕರ, ಪ್ರೊ॥ ಚಿಂ. ಗ. ಭಾನು, ಶ್ರೀ ರಾ. ಭಿ. ದಾತಾರ, ಶ್ರೀ ಕೃ. ನಾ. ಆರಲ್ಯೆ ಅವರು ಮುಂದಿನಂತೆ ಅನುವಾದಿಸಿದ್ದಾರೆ.—'ಭಗವಂತನಾದ ಶಂಕರನೇ ಯಾವುದಾದರೂ ಒಂದು ಅರಿಷ್ಟವನ್ನು ತಯಾರಿಸಿದ್ದಿದ್ದರೆ ಮಾತ್ರ ಈತನ ಉಪಾಯ ಕೈಗೂಡದು.' ಗೋರಖಪುರದ ಗೀತಾ ಪ್ರೆಸ್ಸಿನ ಪ್ರತಿಯಲ್ಲಿ 'ಕೇವಲ ಭಗವಾನ್ ಶಂಕರಹೀ ಕೃತ್ಯಾಕೋ ಯಹ ನಹೀಂ ಟಾಲ ಸಕತಾ' ಎಂಬುದಾಗಿ ಭಾಷಾಂತರಿಸಲಾಗಿದೆ. ಡಾ॥ ರಾ. ಶಂ. ವಾಳಿಂಬೆ ಅವರು 'ಆದರೆ ಅವನು, ಮಹಾದೇವನು ನಿನಗಿತ್ತ ಶಾಪವನ್ನು ಮಾತ್ರ ತೊಡೆದುಹಾಕಲಾರನು' ಎಂದಿದ್ದಾರೆ.

ಶಾಪದ ಕಾರಣ ಹಾಗೂ ಸ್ವರೂಪ ನಿಚ್ಚಳವಾಗಿಲ್ಲ. ಇದೊಂದು ಘೋರವಾದ ಶಾಪವೆಂಬುದು ಮಾತ್ರ ಅರಿವಾಗುತ್ತದೆ. ಶಾಪ ವಹಾತ್ರ ಆಗಿರಲು ಸಾಕು.

ಮಹಾಭಾರತದಲ್ಲಿ ಉಳಿದೆಡೆಗಳಲ್ಲಿ ಈ ಶಾಪದ ಉಲ್ಲೇಖವಿಲ್ಲ.

ನೋಡಿ : ಶಾಪ : ಸರಮಾ (ದೇವಶುನಿ) > ಜನಮೇಜಯ.

## ೧೧. ಉತ್ತಂಕ > ಪೌಷ್ಯ ಆದಿ/೩

ಸೌತಿಯು ಶೌನಕಾದಿ ಋಷಿಗಳಿಗೆ ಉತ್ತಂಕನ ಕಥೆಯನ್ನು ಹೇಳುತ್ತಲಿದ್ದಾನೆ—

ಉತ್ತಂಕ ದೇವಮುನಿಯ ಶಿಷ್ಯ. ಗುರುವಿನ ಅಪ್ಪಣೆಯಂತೆ ಅವನು ಅಗ್ನಿಯನ್ನು ಚೆನ್ನಾಗಿ ಕಾಯ್ದುಕೊಳ್ಳುತ್ತಿದ್ದನು. ಒಂದು ಸಲ ಗುರುಪತ್ನಿ ಗುರುದಕ್ಷಿಣೆಯನ್ನು ತರುವಂತೆ ಉತ್ತಂಕನನ್ನು ಕೇಳುತ್ತಾಳೆ. ಅದಕ್ಕಾಗಿ ಪೌಷ್ಯರಾಜನ ಮಡದಿಯ ಕುಂಡಲಗಳನ್ನು ಶೀಘ್ರವಾಗಿ ತನಗೆ ತಂದುಕೊಂಡೆಂದು ಅಪ್ಪಣೆ ಮಾಡಿದಳು. ಅವನು ಹೋಗಿ ರಾಣಿಯನ್ನು ಕೇಳಿದನು. ರಾಣಿಯು ಅವನಿಗೆ ಅವುಗಳನ್ನು ನೀಡಿದಳು. ಅವುಗಳನ್ನು ಸರಿಯಾಗಿ ಜಪ್ಪಿಸಿಕೊಳ್ಳಲು ಅವನಿಗೆ ಹೇಳಿದಳು. ತನಗೆ ಬೇಕಿದ್ದ ಒಡವೆಗಳು ಸಿಗುತ್ತಲೇ ಅವನು ತನ್ನ ಕೃತಜ್ಞತೆಗಳನ್ನು ಅರುಹಲೆಂದು ಪೌಷ್ಯರಾಜನ ಬಳಿಗೆ ಹೋದನು. ರಾಜನು ಒಂದು ಶ್ರಾದ್ಧವನ್ನು ಮಾಡಿಸಿಕೊಟ್ಟು ಹೋಗೆಂದು ಅವನಿಗೆ ಹೇಳಿದನು. ಉತ್ತಂಕನು ಒಪ್ಪಿಕೊಂಡನು. ಗುರುಪತ್ನಿಗಾದರೋ ಆದಷ್ಟು ಶೀಘ್ರವಾಗಿ ಕುಂಡಲಗಳನ್ನು ಒಯ್ದು ಒಪ್ಪಿಸಬೇಕಿತ್ತು. ಹೀಗಾಗಿ ಅವನಿಗೆ ಹಿಂತಿರುಗಿ ಹೋಗುವ ಗಡಿಬಿಡಿಯಿತ್ತು. ಆದ್ದರಿಂದ ಅವನು ಮಾಡಿಟ್ಟ ಅಡಿಗೆಯನ್ನೇ ಉಣಬಡಿಸುವಂತೆ ರಾಜನನ್ನು ಕೋರಿದನು. ರಾಜನ ಅಪ್ಪಣೆಯ ಮೇರೆಗೆ ಅವನಿಗೆ ತಯಾರಿದ್ದ ಅನ್ನವನ್ನೇ ನೀಡಲಾಯಿತು. ಅದು ಆರಿ ತಣ್ಣಗಾಗಿತ್ತು. ಅಲ್ಲದೆ ಅದರಲ್ಲಿ ತಲೆಗೂದಲುಗಳ ಗುಂಜು ಸೇರಿತ್ತು. ತನಗೆ ನೀಡಲಾದ ಈ ಅಪವಿತ್ರವಾದ ಅನ್ನವನ್ನು ಕಂಡು ಉತ್ತಂಕನು ಪೌಷ್ಯರಾಜನಿಗೆ ಹೀಗೆಂದನು—

. . . . . .ಯಸ್ಮಾನ್ಮೇಽಶುಚ್ಯನ್ನಂ ದದಾಸಿ ತಸ್ಮಾದಂಧೋ ಭವಿಷ್ಯಸೀತಿ ॥ ೧೧೬ ॥

'(ಎಲೈ ರಾಜನೇ,) ನೀನು ನನಗೆ ಅಪವಿತ್ರವಾದ ಅನ್ನವನ್ನಿಕ್ಕಿರುವೆಯಾದಕಾರಣ ನೀನು ಕುರುಡನಾಗಲಿರುವೆ.' ಉತ್ತಂಕನ ದೂರು ನಿಜವಾದುದು ಆಗಿದ್ದರೂ ಪೌಷ್ಯ ರಾಜನು ಅವನಿಗೆ ಮರುಶಾಪವನ್ನು ಇತ್ತನು. ಉತ್ತಂಕನು ಅನ್ನವನ್ನು ಸರಿಯಾಗಿ ಪರೀಕ್ಷಿಸಿಕೊಳ್ಳಲು ಅವನಿಗೆ ಹೇಳಿದನು. ಉತ್ತಂಕನಿಗೆ ನೀಡಲಾದ ಅನ್ನ ಅಪವಿತ್ರ ವಾಗಿತ್ತು ಎಂಬುದು ರಾಜನಿಗೆ ಮನದಟ್ಟಾಯಿತು. ಹೀಗಾಗಿ ಅವನು ಕ್ಷಮೆ ಕೋರಿದನು. ಉತ್ತಂಕನು ಉಃಶಾಪವನ್ನಿತ್ತು ಶಾಪದ ಅವಧಿಯನ್ನು ಮೊಟಕುಗೊಳಿಸಿದನು.

ನ ಮೃಷಾ ಬ್ರವೀಮಿ ಭೂತ್ವಾ ತ್ವಮಂಧೋ ನ ಚಿರಾದನಂಧೋ
ಭವಿಷ್ಯಸೀತಿ ॥ ೧೨೦ ॥

'ನನ್ನ ಮಾತು ಅದೆಂದಿಗೂ ಸುಳ್ಳಾಗಲಾರದು. ಆದರೆ (ನನ್ನ ಶಾಪದಿಂದಾಗಿ ನಿನಗೆ ಬರಲಿರುವ) ಕುರುಡು ಹೆಚ್ಚುಕಾಲ ಉಳಿಯಲಾರದು. ಕಳೆದುಹೋದ ನಿನ್ನ ಕಣ್ಣು ಮತ್ತೆ ನಿನಗೆ ದೊರೆತೀತು.'

ಪೌಷ್ಯನು ತನಗಿತ್ತ ಶಾಪವನ್ನು ಹಿಂತೆಗೆದುಕೊಳ್ಳುವಂತೆ ಉತ್ತಂಕನೂ ಅವನಿಗೆ ಹೇಳುತ್ತಾನೆ—

ಮಮಾಪಿ ಶಾಪೋ ಭವತಾ ದತ್ತೋ ನ ಭವೇದಿತಿ ॥ ೧೨೦ ॥

ಪೌಷ್ಯನು ಮಾತ್ರ ಈ ಬಗೆಗಿನ ತನ್ನ ಅಸಮರ್ಥತೆಯನ್ನು ತೋಡಿಕೊಳ್ಳುತ್ತಾನೆ. ಆಗ ಉತ್ತಂಕನು ಅವನಿಗೆ ಹೀಗೆಂದನು : 'ನೀನು ನನಗೆ ಅನ್ನವನ್ನಿಕ್ಕಲು ಅಪ್ಪಣೆ ನೀಡಿದಾಗ ಅದು ಹೇಗಿತ್ತೆಂಬುದು ನಿನಗೆ ಗೊತ್ತಿರಲಿಲ್ಲ. ಅನ್ನವನ್ನು ಪರೀಕ್ಷಿಸಿ ನೋಡಿದ ಬಳಿಕ ಮಾತ್ರ ಅದು ಅಪವಿತ್ರವಾಗಿದ್ದುದನ್ನು ನೀನು ಕಂಡುಕೊಂಡೆ. ಅದಕ್ಕಾಗಿ ನನ್ನನ್ನು ಕ್ಷಮೆ ಕೋರಿದೆ. ನೀನು ನನಗಿತ್ತ ಮರುಶಾಪವೂ ಒಂದು ಅವಿಚಾರದ ಕೃತಿಯಾಗಿದೆ— ಎಂಬುದೂ ನಿನಗೆ ಮನದಟ್ಟಾಗಿದೆ. ಇಷ್ಟಾಗಿಯೂ ನೀನು ನಿನ್ನ ಶಾಪವನ್ನು ಹಿಂತೆಗೆದು ಕೊಳ್ಳಲು ಸಿದ್ಧನಿಲ್ಲವಲ್ಲ.

......ದುಷ್ಟೇ ಚಾನ್ನೇ ನೃಷ ಮಮ ಶಾಪೋ ಭವತಾ ದತ್ತೋ ನ
ಭವಿಷ್ಯತೀತಿ ॥ ೧೨೫ ॥

'(ನನಗೆ ನೀಡಲಾದ) ಅನ್ನವು ಅಪವಿತ್ರವಾದುದೇ ಆದುದರಿಂದ ನೀನು ನನಗಿತ್ತ ಶಾಪವು ಫಲ ನೀಡಲಾರದು.'

+ ಉಃಶಾಪವು ಯಾಚಿತವಾದುದು.

## ೧೨. ಪೌಷ್ಯ > ಉತ್ತಂಕ ಆದಿ/೩

ಪೂರ್ವಸಂದರ್ಭ. ನೋಡಿ : ಶಾಪ—ಉತ್ತಂಕ > ಪೌಷ್ಯ.

ಉತ್ತಂಕನು ಅಕಾರಣವಾಗಿ ತನಗೆ ಶಾಪವನ್ನಿತ್ತನೆಂದು ಪೌಷ್ಯನು ತಪ್ಪುತಿಳಿದದ್ದರಿಂದ ಅವನು ಉತ್ತಂಕನಿಗೆ ಹೀಗೆ ಶಾಪವನ್ನಿತ್ತನು—

......ಯಸ್ಮಾತ್ತ್ವಮಪ್ಯದುಷ್ಟಮನ್ನಂ ದೂಷಯಸಿ ತಸ್ಮಾತ್ತ್ವಮನಪತ್ಯೋ
ಭವಿಷ್ಯತೀತಿ ॥ ೧೧೬ ॥

......ನಾಗಚ್ಛತೀತಿ ಶಾಪಾಯಾಸ್ಯ ಮನೋ ದಧೇ ॥ ೧೫೭ ॥

'ಅವನು ವೇಳೆಗೆ ಸರಿಯಾಗಿ ಬಾರದ್ದರಿಂದ ಅವಳು ಅವನನ್ನು ಶಪಿಸಬೇಕೆಂದು ಕೊಂಡಳು.' ಅಷ್ಟರಲ್ಲಿಯೇ ಅವನು ಬಂದುದನ್ನು ಕಂಡು ಅವಳೆಂದಳು—

......ಸ್ವಾಗತಂ ತೇ ವತ್ಸ ತ್ವಮನಾಗಸಿ ಮಯಾ ನ ಶಪ್ತಃ
ಶ್ರೇಯಸ್ತ್ವಮೋಪಸ್ಥಿತಂ ಸಿದ್ಧಿಮಾಪ್ನುಹೀತಿ ॥ ೧೫೯ ॥

'ಮಗು ! ನಿನಗೆ ಸ್ವಾಗತ ! (ನೀನು ತೀರ ಸರಿಯಾದ ವೇಳೆಗೆ ಬಂದೆ) ಇಲ್ಲದಿದ್ದರೆ, ನಿರಪರಾಧಿಯಾದ ನಿನ್ನನ್ನು ಶಪಿಸುವವಳಿದ್ದೆ. ನಿನ್ನ ಸುಕೃತದಿಂದಾಗಿಯೇ ಈ ಅನಾಹುತ ತಪ್ಪಿತು. ದೈವ ನಿನಗೆ ಅನುಕೂಲವಾಗಿತ್ತಷ್ಟೆ. ನಿನಗೆ ಯಶಸ್ಸು ಸಿಗಲಿ.'

+ ಅನುಚ್ಚಾರಿತ ಶಾಪ.

## ೧೪. ಭೃಗು > ಅಗ್ನಿ ಆದಿ/೫

ಸೌತಿಯು ಶೌನಕಾದಿಗಳಿಗೆ ಭೃಗುವಂಶದ ಕಥೆಯನ್ನು ಹೇಳುತ್ತಲಿದ್ದಾನೆ—

ಭೃಗುಋಷಿಯ ಮಡದಿ ಪುಲೋಮಾ ತುಂಬ ಚೆಲುವೆ. ಬಲು ಪತಿಪರಾಯಣಳು. ಒಂದು ಸಲ ಋಷಿಯು ಸ್ನಾನಕ್ಕೆಂದು ಹೋದಾಗ ಪುಲೋಮನೆಂಬ ರಾಕ್ಷಸನು ಆಶ್ರಮಕ್ಕೆ ಬಂದನು. ಋಷಿಯ ಮಡದಿಯನ್ನು ಕಂಡು ಅವನು ಕಾಮಮೋಹಿತನಾದನು. ಆ ಕಾಲಕ್ಕೆ ಅವಳು ಬಸುರಿಯಾಗಿದ್ದಳು. ಅತಿಥಿಗಳನ್ನು ಸ್ವಾಗತಿಸುವುದು ಗೃಹಿಣಿಯ ಕರ್ತವ್ಯ ಎಂಬುದರಿಂದಾಗಿ ಅವಳು ರಾಕ್ಷಸನನ್ನು ಸರಿಯಾಗಿ ನೋಡಿಕೊಂಡಳು. ಅದರಿಂದಾಗಿ ಅವನು ಇನ್ನಷ್ಟು ಕಾಮಾತುರನಾದನು. ಅವಳು ಒಂಟಿಯಾಗಿರುವುದನ್ನು ಕಂಡು ಅವಳನ್ನು ಹಾರಿಸಿಕೊಂಡು ಹೋಗಿಬಿಡಲು ಯೋಚಿಸಿದನು. ಹಾಗೆ ಅವನು ಮೊದಲಿನಿಂದಲೇ ಅವಳಿಗೆ ಮನಸೋತಿದ್ದನು. ಅವಳ ತಂದೆಯೂ ಕೂಡ ಅವಳನ್ನು ರಾಕ್ಷಸನಿಗೆ ಮದುವೆ ಮಾಡಿಕೊಡಲು ಒಪ್ಪಿದ್ದನು. ತರುವಾಯದಲ್ಲಿ ಮಾತ್ರ ತನಗಾಗಿ ವರವನ್ನು ಪಡೆಯುವ ಆಸೆಯಿಂದ ಅವನು ಅವಳನ್ನು ಭೃಗುವಿನೊಂದಿಗೆ ಮದುವೆ ಮಾಡಿ ಕೊಟ್ಟನು. ರಾಕ್ಷಸನು ಅವಳನ್ನು ಅಪಹರಿಸಬೇಕೆನ್ನುವಷ್ಟರಲ್ಲಿಯೇ ಅವನಿಗೆ ಅಗ್ನಿ ಕಂಡಿತು. ಅದು ಹೋಮಶಾಲೆಯಲ್ಲಿ ಪ್ರಜ್ವಲಿತವಾಗಿತ್ತು. ರಾಕ್ಷಸನು ಅಗ್ನಿಯನ್ನು ಕೇಳಿದನು : 'ಎಲೈ ಅಗ್ನಿಯೇ ! ನೀನು ದೇವತೆಗಳ ಬಾಯಿ. ನಾನೀ ಚೆಂದದ ಹೆಣ್ಣನ್ನು ಈ ಮೊದಲೇ ಬಯಸಿದ್ದೆ. ಆದರೆ ಇವಳ ತಂದೆಯು ಇವಳನ್ನು ಭೃಗುವಿಗೆ ಕೊಟ್ಟನು. ಅಂದಬಳಿಕ ಈ ಹೆಣ್ಣು ನಿಜವಾಗಿಯೂ ಯಾರ ಹೆಂಡತಿ ಎಂಬುದನ್ನು ನೀನು ಹೇಳು. ನನ್ನ ಅಭಿಪ್ರಾಯದಲ್ಲಂತೂ ಭೃಗುವು ಪರಸ್ತ್ರೀಯನ್ನು ಅಪಹರಿಸಿದ್ದಾನೆ.' ರಾಕ್ಷಸನ ಈ ಪ್ರಶ್ನೆಯಿಂದಾಗಿ ಅಗ್ನಿಗೆ ಪೇಚಿಗಿಟ್ಟುಕೊಂಡಿತು.

ತಸ್ಯೈತದ್ ವಚನಂ ಶ್ರುತ್ವಾ ಸಪ್ತಾರ್ಚಿರ್ದುಃಖಿತೋಽಭವತ್ ।
ಭೀತೋಽನೃತಾಚ್ಚ ಶಾಪಾಚ್ಚ ಭೃಗೋರಿತ್ಯಬ್ರವೀಚ್ಛನೈಃ ॥ ೩೦ ॥

(ಸೌತಿ ಅಂದನು) 'ಆ ರಾಕ್ಷಸನ ಮಾತನ್ನು ಕೇಳಿ ಅಗ್ನಿಯು ದುಃಖಿತನಾದನು. ಒಂದೆಡೆ ಅವನಿಗೆ ಸುಳ್ಳಾಡುವ ಭಯವಿದ್ದರೆ ಇನ್ನೊಂದೆಡೆ ಅವನು ಭೃಗುವಿನ ಶಾಪಕ್ಕಾಗಿ ಹೆದರುತ್ತಿದ್ದನು.'

ಆದಿ/೬

ಅಗ್ನಿ ಅನ್ನುತ್ತಾನೆ : 'ಹಿಂದಕ್ಕೆ ನೀನು ಮನಸೋತದ್ದು ನಿಜ. ಆದರೆ ಮಂತ್ರೋಚ್ಚಾರಣೆಯಾಗಿ ಅವಳು ನಿನ್ನ ಮದುವೆಯ ಮಡದಿಯಾಗಿಲ್ಲ. ಅವಳ ಮದುವೆ ಭೃಗುವಿನೊಡನೆ ವಿಧಿವತ್ತಾಗಿ ನಡೆದಿದೆ. ನಾನು ಇಷ್ಟನ್ನು ಮಾತ್ರ ಹೇಳಬಲ್ಲೆ, ನಿಜ. ಸುಳ್ಳನ್ನು ಹೇಳಲಾರೆ.' ಅಗ್ನಿಯ ನುಡಿಯನ್ನು ಕೇಳಿದ ರಾಕ್ಷಸನು ಪುಲೋಮಾಳನ್ನು ಅವಳ ಇಚ್ಛೆಯ ವಿರುದ್ಧವಾಗಿ ಅಪಹರಿಸುತ್ತಾನೆ. ಅವಳು ತುಂಬ ಕೆರಳುತ್ತಾಳೆ. ಅದರಿಂದಾಗಿ ಅವಳ ಬಸಿರು ಬಿದ್ದುಹೋಗುತ್ತದೆ. ಈ ಬಸಿರೆಂದರೇನೆ ಚ್ಯವನಭಾರ್ಗವ. ಅವನ ತೇಜಸ್ಸು ಸೂರ್ಯನಂತಹದು. ಅವನನ್ನು ಕಂಡು ರಾಕ್ಷಸ ಹೆದರಿಬಿಟ್ಟನು. ಅವರನ್ನು ಅಲ್ಲೇ ಬಿಟ್ಟು ಹೊರಟನು. ಆದರೆ ಚ್ಯವನನ ತೇಜಸ್ಸಿನಿಂದಾಗಿ ಅವನು ನೆಲಕ್ಕುರುಳಿ ಸುಟ್ಟು ಬೂದಿಯಾದನು.

ಭೃಗುವಿನ ಮಡದಿಯು ಚ್ಯವನನನ್ನು ಎತ್ತಿಕೊಂಡು ಆಶ್ರಮಕ್ಕೆ ಹಿಂತಿರುಗಿ ಬಂದಳು. ಭೃಗು ಅವಳನ್ನು ಕಂಡನು. ಅವನ ಕೋಪ ನೆತ್ತಿಗೇರಿತು. ಅವನು ಅವಳಿಗೆಂದನು : 'ಆ ರಾಕ್ಷಸನಿಗೆ ನಿನ್ನ ಬಗೆಗೆ ಹೇಳಿದವರಾರು ? ಅವನಿಗೆ ನಮ್ಮ ಮದುವೆಯ ಗುಟ್ಟು ತಿಳಿದಿರಲಿಲ್ಲ. ಇದನ್ನು ಅವನಿಗೆ ಹೇಳಿದವರಾರು ?—ಎಂಬುದನ್ನು ನಿಜ ಹೇಳು. ಏಕೆಂದರೆ—

ತತ್ತ್ವಮಾಖ್ಯಾಹಿ ತಂ ಹ್ಯದ್ಯ ಶಪ್ತುಮಿಚ್ಛಾಮ್ಯಹಂ ರೂಷಾ ।
ಬಿಭೇತಿ ಕೋ ನ ಶಾಪಾನ್ಮೇ ಕಸ್ಯ ಚಾಯಂ ವ್ಯತಿಕ್ರಮಃ ॥ ೧೧ ॥

'ನಾನೀಗ ಕೆರಳಿದ್ದರಿಂದ ಇದನ್ನು ಹೇಳಿದವನನ್ನು ಶಪಿಸಲಿದ್ದೇನೆ. ನನ್ನ ಶಾಪಕ್ಕೆ ಹೆದರದಂಥವನು ಯಾವಾನಾದರೂ ಈ ಭೂಮಿಯ ಮೇಲಿರುವನೆ ? ಯಾರ ಅಪರಾಧ ಇದು ?' ಅದಕ್ಕೆ ಅವಳು, 'ಅಗ್ನಿಯು ರಾಕ್ಷಸನಿಗೆ ಇದನ್ನು ಹೇಳಿದನು. ಮಗುವಿನ ಅಸಾಮಾನ್ಯವಾದ ತೇಜಸ್ಸಿನಿಂದಾಗಿಯೇ ನಾನು ರಾಕ್ಷಸನ ಹಿಡಿತದಿಂದ ಬಿಡಿಸಿಕೊಂಡೆ' ಎಂದಳು.

ಇತಿ ಶ್ರುತ್ವಾ ಪುಲೋಮಾಯಾ ಭೃಗುಃ ಪರಮಮನ್ಯುಮಾನ್ ।
ಶಶಾಪಾಗ್ನಿಮತಿಕ್ರುದ್ಧಃ ಸರ್ವಭಕ್ಷೋ ಭವಿಷ್ಯಸಿ ॥ ೧೪ ॥

''ಪುಲೋಮಾಳ ಮಾತು ಕೇಳಿ ಶೀಘ್ರಕೋಪಿಯಾದ ಆ ಋಷಿಯು ತುಂಬ ಕೆರಳಿ ಅಗ್ನಿಗೆ, 'ನೀನು ಸರ್ವಭಕ್ಷಕನಾಗಲಿರುವೆ' ಎಂದು ಶಾಪವನ್ನಿತ್ತನು.''

ಆದಿ/೭

ಭೃಗುವಿನ ಮಾತಿನಿಂದ ಅಗ್ನಿಯೂ ಕೆರಳಿ ಕೆಂಡವಾದನು. ಅವನು ಭೃಗುವಿಗೆ, 'ನನಗೆ ಶಾಪವನ್ನೀಯುವ ಬಲುದೊಡ್ಡ ಸಾಹಸವನ್ನೇ ನೀನು ಮಾಡಿರುವೆ. ನಾನಂತೂ ನಿರಪರಾಧಿ. ನಿಜವಿದ್ದುದಷ್ಟನ್ನೇ ನುಡಿದೆ' ಎಂದನು.

ಶಕ್ತೋऽಹಮಪಿ ಶಪ್ತುಂ ತ್ವಾಂ ಮಾನ್ಯಾಸ್ತು ಬ್ರಾಹ್ಮಣಾ ಮಮ ॥ ೫ ॥

'ನಾನೂ ಕೂಡ ನಿನ್ನನ್ನು ಶಪಿಸಬಲ್ಲೆ. ಆದರೆ (ಹಾಗೆ ಮಾಡದಿರಲು ಕಾರಣ) ಬ್ರಾಹ್ಮಣರು ನನಗೆ ಪೂಜ್ಯರಾಗಿದ್ದಾರೆ.' ಮತ್ತೆ ಅವನು ಹೀಗೆಂದನು : 'ನೀನು ನನಗೆ ಶಾಪವನ್ನಿತ್ತು ದೇವತೆಗಳು ಹಾಗೂ ಪಿತೃಗಳಿಗೆ ದೊಡ್ಡ ಸಮಸ್ಯೆಯನ್ನು ತಂದೊಡ್ಡಿ

'ನಿನಗೆ ನೀಡಲಾದ ಅನ್ನವು ನಿರ್ದೋಷವಾಗಿರುವಾಗಲೂ, ನೀನು ನನಗೆ ಅದು ಅಪವಿತ್ರವಾಗಿದೆ (ಎಂದು ತಿಳಿದು ನನ್ನನ್ನು ವಿನಾಕಾರಣ ಶಪಿಸಿರುವೆ. ಹೀಗಾಗಿ) ನಿನಗೆ ಮಕ್ಕಳಾಗದಿರಲಿ (ಎಂದು ನಾನೂ ಶಾಪವನ್ನೀಯುತ್ತೇನೆ).'

ಉತ್ತಂಕನು (ಪೌಷ್ಯ)ರಾಜನಿಗೆ ಅನ್ನವನ್ನು ಪರೀಕ್ಷಿಸಿ ನೋಡಲು ಹೇಳಿದನು. ಆಗ ಅದು ದೋಷಯುಕ್ತವಾಗಿರುವದು ರಾಜನಿಗೆ ಕಂಡುಬಂದಿತು. ಅವನು ಉತ್ತಂಕನನ್ನು ಕ್ಷಮೆ ಕೋರಿದನು. ಅವನು ರಾಜನಿಗೆ ಉಃಶಾಪವನ್ನು ನೀಡಿದನು. ಶಾಪದ ಅವಧಿಯನ್ನು ಮೊಟಕುಗೊಳಿಸಿದನು. ಅವನು ರಾಜನಿಗೆ ತನ್ನ ಶಾಪವನ್ನು ಹಿಂತೆಗೆದುಕೊಳ್ಳಲು ಹೇಳಿದನು. ಆಗ ರಾಜನು ಈ ಕಾರಣವನ್ನು ಮುಂದೊಡ್ಡಿ ತನ್ನ ಶಾಪವನ್ನು ಹಿಂತೆಗೆದುಕೊಳ್ಳಲು ನಿರಾಕರಿಸಿದನು.

.....ನ ಚಾಹಂ ಶಕ್ತಃ ಶಾಪಂ ಪ್ರತ್ಯಾದಾತುಂ ನ ಹಿ ಮೇ
ಮನ್ಯುರದ್ಯಾಪ್ಯುಪಶಮಂ ಗಚ್ಛತಿ ಕಿಂ ಚೈತದ್ ಭವತಾ ನ ಜ್ಞಾಯತೇ
ಯಥಾ ॥ ೧೨೨ ॥

ನವನೀತಂ ಹೃದಯಂ ಬ್ರಾಹ್ಮಣಸ್ಯ ವಾಚಿ ಕ್ಷುರೋ ನಿಹಿತಸ್ತೀಕ್ಷ್ಣಧಾರಃ ।
ತದುಭಯಮೇತದ್ ವಿಪರೀತಂ ಕ್ಷತ್ರಿಯಸ್ಯ ವಾಙ್ನವನೀತಂ ಹೃದಯಂ
ತೀಕ್ಷ್ಣಧಾರಮ್ । ಇತಿ ॥ ೧೨೩ ॥

'ಇತ್ತ ಶಾಪವನ್ನು ಮರಳಿ ಪಡೆಯಲು ನಾನು ಅಸಮರ್ಥನಾಗಿದ್ದೇನೆ. ಅಲ್ಲದೆ ಈಗಲೂ ನನ್ನ ಕೋಪ ಕಡಿಮೆಯಾಗಿಲ್ಲ. ಬ್ರಾಹ್ಮಣನ ಹೃದಯವು ಬೆಣ್ಣೆಯಂತೆ ಮೆತ್ತಗಾಗಿದ್ದರೂ ಅವನ ಮಾತು ಚೂರಿಯಂತೆ ಹರಿತಾದುದೂ, ತೀಕ್ಷ್ಣವಾದುದೂ ಆಗಿರುತ್ತದೆ. ಇದೇ ಸಂಗತಿ ಕ್ಷತ್ರಿಯರ ಬಗೆಗೆ ತಿರುವುಮುರುವಾಗಿರುತ್ತದೆ. ಕ್ಷತ್ರಿಯರ ಮಾತು ಬೆಣ್ಣೆಯಂತೆ ಮೆತ್ತಗಾಗಿದ್ದರೂ ಅವರ ಹೃದಯ ಮಾತ್ರ ಹರಿತಾದುದೂ, ತೀಕ್ಷ್ಣವಾದುದೂ ಆಗಿರುತ್ತದೆ (ಎಂಬುದನ್ನು ನೀನು ಬಲ್ಲೆ).'

ಈ ಮಾತಿಗೆ ಉತ್ತಂಕನು 'ನಿನ್ನ ಶಾಪ ಫಲದ್ರೂಪವಾಗಲಾರದು' ಎಂದು ಮಾರುತ್ತರಿಸಿದನು.

+ ಮರುಶಾಪ.

## ೧೩. ಗುರುಪತ್ನಿ > ಉತ್ತಂಕ ಆದಿ/೩

ಸೌತಿಯು ಶೌನಕಾದಿ ಋಷಿಗಳಿಗೆ ಉತ್ತಂಕನ ಕಥೆಯನ್ನು ಹೇಳುತ್ತಲಿದ್ದಾನೆ—

ದೇವಋಷಿಯ ಮಡದಿ, ಗುರುಪತ್ನಿಯು ಕೇಳಿದ ಬಲು ಅಲಭ್ಯವಾದ ಗುರುದಕ್ಷಿಣೆಯನ್ನು ಬಲುಕಷ್ಟದಿಂದ ಗಳಿಸಿದ ಉತ್ತಂಕನು ಗುರುವಿನ ಮನೆಗೆ ಬಂದನು. ಬಂದವನೇ ಗುರುಪತ್ನಿಯನ್ನು ಅಭಿವಾದಿಸಿ ಅವಳಿಗೆ ಬೇಕಿದ್ದ ಕುಂಡಲಗಳನ್ನು ಅವಳಿಗೆ ಅರ್ಪಿಸಿದನು. ಅವಳು ಉತ್ತಂಕನ ಬರುವಿಗಾಗಿ ಕಾದು ಕುಳಿತಿದ್ದಳು. ಅದೇ ದಿನ ಅವಳ ಪುಣ್ಯಕ ವ್ರತ ಜರುಗಲಿತ್ತು. ಅದಕ್ಕಾಗಿ ಅವಳಿಗೆ ಕುಂಡಲಗಳು ಬೇಕಾಗಿದ್ದವು. ಉತ್ತಂಕ ಮರಳಿ ಬರಲು ತಡವಾದಂತೆ ಅವಳ ಸಹನೆ ಮೀರತೊಡಗಿತ್ತು.

**ಆದಿ/೬**

ಅಗ್ನಿ ಅನ್ನುತ್ತಾನೆ : 'ಹಿಂದಕ್ಕೆ ನೀನು ಮನಸೋತದ್ದು ನಿಜ. ಆದರೆ ಮಂತ್ರೋಚ್ಚಾರಣೆಯಾಗಿ ಅವಳು ನಿನ್ನ ಮದುವೆಯ ಮಡದಿಯಾಗಿಲ್ಲ. ಅವಳ ಮದುವೆ ಭೃಗುವಿನೊಡನೆ ವಿಧಿವತ್ತಾಗಿ ನಡೆದಿದೆ. ನಾನು ಇಷ್ಟನ್ನು ಮಾತ್ರ ಹೇಳಬಲ್ಲೆ, ನಿಜ. ಸುಳ್ಳನ್ನು ಹೇಳಲಾರೆ.' ಅಗ್ನಿಯ ನುಡಿಯನ್ನು ಕೇಳಿದ ರಾಕ್ಷಸನು ಪುಲೋಮಾಳನ್ನು ಅವಳ ಇಚ್ಛೆಯ ವಿರುದ್ಧವಾಗಿ ಅಪಹರಿಸುತ್ತಾನೆ. ಅವಳು ತುಂಬ ಕೆರಳುತ್ತಾಳೆ. ಅದರಿಂದಾಗಿ ಅವಳ ಬಸಿರು ಬಿದ್ದುಹೋಗುತ್ತದೆ. ಈ ಬಸಿರೆಂದರೇನೆ ಚ್ಯವನಭಾರ್ಗವ. ಅವನ ತೇಜಸ್ಸು ಸೂರ್ಯನಂತಹದು. ಅವನನ್ನು ಕಂಡು ರಾಕ್ಷಸ ಹೆದರಿಬಿಟ್ಟನು. ಅವರೆನ್ನು ಅಲ್ಲೇ ಬಿಟ್ಟು ಹೊರಟನು. ಆದರೆ ಚ್ಯವನನ ತೇಜಸ್ಸಿನಿಂದಾಗಿ ಅವನು ನೆಲಕ್ಕುರುಳಿ ಸುಟ್ಟು ಬೂದಿಯಾದನು.

ಭೃಗುವಿನ ಮಡದಿಯು ಚ್ಯವನನನ್ನು ಎತ್ತಿಕೊಂಡು ಆಶ್ರಮಕ್ಕೆ ಹಿಂತಿರುಗಿ ಬಂದಳು. ಭೃಗು ಅವಳನ್ನು ಕಂಡನು. ಅವನ ಕೋಪ ನೆತ್ತಿಗೇರಿತು. ಅವನು ಅವಳಿಗೆಂದನು : 'ಆ ರಾಕ್ಷಸನಿಗೆ ನಿನ್ನ ಬಗೆಗೆ ಹೇಳಿದವರಾರು ? ಅವನಿಗೆ ನಮ್ಮ ಮದುವೆಯ ಗುಟ್ಟು ತಿಳಿದಿರಲಿಲ್ಲ. ಇದನ್ನು ಅವನಿಗೆ ಹೇಳಿದವರಾರು ?—ಎಂಬುದನ್ನು ನಿಜ ಹೇಳು. ಏಕೆಂದರೆ—

ತತ್ತ್ವಮಾಖ್ಯಾಹಿ ತಂ ಹ್ಯದ್ಯ ಶಪ್ತುಮಿಚ್ಛಾಮ್ಯಹಂ ರೋಷಾ ।
ಬಿಭೇತಿ ಕೋ ನ ಶಾಪಾನ್ಮೇ ಕಸ್ಯ ಚಾಯಂ ವ್ಯತಿಕ್ರಮಃ ॥ ೧೧ ॥

'ನಾನೀಗ ಕೆರಳಿದ್ದರಿಂದ ಇದನ್ನು ಹೇಳಿದವನನ್ನು ಶಪಿಸಲಿದ್ದೇನೆ. ನನ್ನ ಶಾಪಕ್ಕೆ ಹೆದರದಂಥವನು ಯಾವಾನಾದರೂ ಈ ಭೂಮಿಯ ಮೇಲಿರುವನೆ ? ಯಾರ ಅಪರಾಧ ಇದು ?' ಅದಕ್ಕೆ ಅವಳು, 'ಅಗ್ನಿಯು ರಾಕ್ಷಸನಿಗೆ ಇದನ್ನು ಹೇಳಿದನು. ಮಗುವಿನ ಅಸಾಮಾನ್ಯವಾದ ತೇಜಸ್ಸಿನಿಂದಾಗಿಯೇ ನಾನು ರಾಕ್ಷಸನ ಹಿಡಿತದಿಂದ ಬಿಡಿಸಿಕೊಂಡೆ' ಎಂದಳು.

ಇತಿ ಶ್ರುತ್ವಾ ಪುಲೋಮಾಯಾ ಭೃಗುಃ ಪರಮಮನ್ಯುಮಾನ್ ।
ಶಶಾಪಾಗ್ನಿಮತಿಕ್ರುದ್ಧಃ ಸರ್ವಭಕ್ಷೋ ಭವಿಷ್ಯಸಿ ॥ ೧೪ ॥

''ಪುಲೋಮಾಳ ಮಾತು ಕೇಳಿ ಶೀಘ್ರಕೋಪಿಯಾದ ಆ ಋಷಿಯು ತುಂಬ ಕೆರಳಿ ಅಗ್ನಿಗೆ, 'ನೀನು ಸರ್ವಭಕ್ಷಕನಾಗಲಿರುವೆ' ಎಂದು ಶಾಪವನ್ನಿತ್ತನು.''

**ಆದಿ/೭**

ಭೃಗುವಿನ ಮಾತಿನಿಂದ ಅಗ್ನಿಯೂ ಕೆರಳಿ ಕೆಂಡವಾದನು. ಅವನು ಭೃಗುವಿಗೆ, 'ನನಗೆ ಶಾಪವನ್ನೀಯುವ ಬಲುದೊಡ್ಡ ಸಾಹಸವನ್ನೇ ನೀನು ಮಾಡಿರುವೆ. ನಾನಂತೂ ನಿರಪರಾಧಿ. ನಿಜವಿದ್ದುದನ್ನಷ್ಟೇ ನುಡಿದೆ' ಎಂದನು.

ಶಕ್ತೋಽಹಮಪಿ ಶಪ್ತುಂ ತ್ವಾಂ ಮಾನ್ಯಾಸ್ತು ಬ್ರಾಹ್ಮಣಾ ಮಮ ॥ ೫ ॥

'ನಾನೂ ಕೂಡ ನಿನ್ನನ್ನು ಶಪಿಸಬಲ್ಲೆ. ಆದರೆ (ಹಾಗೆ ಮಾಡದಿರಲು ಕಾರಣ) ಬ್ರಾಹ್ಮಣರು ನನಗೆ ಪೂಜ್ಯರಾಗಿದ್ದಾರೆ.' ಮತ್ತೆ ಅವನು ಹೀಗೆಂದನು : 'ನೀನು ನನಗೆ ಶಾಪವನ್ನಿತ್ತು ದೇವತೆಗಳು ಹಾಗೂ ಪಿತೃಗಳಿಗೆ ದೊಡ್ಡ ಸಮಸ್ಯೆಯನ್ನು ತಂದೊಡ್ಡಿ

ರುವೆ. ನನ್ನ ಬಾಯಿಯ ಮೂಲಕವೇ ಅವರಿಗೆ ಹವಿರ್ಭಾಗ ಸಿಗುತ್ತವೆ. ನಾನು ಸರ್ವ ಭಕ್ಷಕನಾಗಿದ್ದ ಕಾರಣ ಇನ್ನುಮೇಲೆ ಅದು ಅವರಿಗೆ ಹೇಗೆ ದೊರಕಲು ಸಾಧ್ಯ ?''

ತನ್ನ ಯೋಗಸಾಮರ್ಥ್ಯದಿಂದಾಗಿ ಅಗ್ನಿಯು ಹಲವು ರೂಪುಗಳನ್ನು ಪಡೆಯ ಬಲ್ಲವನಾಗಿದ್ದನು. ಶಾಪ ಸಿಗುತ್ತಲೇ ಅವನು ತನ್ನ ರೂಪವನ್ನು ಗುಪ್ತವಾಗಿಟ್ಟನು. ಅದರಿಂದಾಗಿ ಅಗ್ನಿಹೋತ್ರ, ಯಜ್ಞಯಾಗಾದಿ ಕ್ರಿಯೆಗಳು, ಸ್ವಾಹಾಕಾರಗಳೆಲ್ಲ ಒಂದಾ ದವು. ಅಗ್ನಿ ಇಲ್ಲದ್ದರಿಂದಾಗಿ ಪ್ರಜೆಗಳ ಚಟುವಟಿಕೆಗಳೆಲ್ಲ ನಿಂತುಹೋಗಿ ಅವರು ದುಃಖಿತರಾದರು. ಋಷಿಗಳು ತಮ್ಮ ಭವಣೆಗಳನ್ನು ದೇವತೆಗಳೆದುರು ತೋಡಿಕೊಂಡರು. ಅವರು ಅದನ್ನು ಕೇಳಿ ಋಷಿಗಳನ್ನು ಬ್ರಹ್ಮದೇವನ ಬಳಿಗೆ ಕರೆದೊಯ್ದರು. ಮತ್ತೆ—

ಅಗ್ನೇರಾವೇದಯಂಥಾಪಂ ಕ್ರಿಯಾಸಂಹಾರಮೇವ ಚ ॥ ೧೬ ॥
ಭೃಗುಣಾ ವೈ ಮಹಾಭಾಗ ಶಪ್ತೋಽಗ್ನಿಃ ಕಾರಣಾಂತರೇ ।
ಕಥಂ ದೇವಮುಖೋ ಭೂತ್ವಾ ಯಜ್ಞಭಾಗಾಗ್ರಭುಕ್ ತಥಾ ॥ ೧೭ ॥

(ಅಗ್ನಿಗೆ ದೊರೆತ ಶಾಪದಿಂದಾಗಿ ಹುಟ್ಟಿಕೊಂಡ ಸಂಕಟವನ್ನು ಕುರಿತು ಬ್ರಹ್ಮದೇವ ನಿಗೆ ಹೇಳಿ) ಅವರೆಂದರು—'ಎಲೆ ಭಗವಂತನೆ ! ಭೃಗುವು ಅಗ್ನಿಗೆ ಸುಮ್ಮನೆ ಶಾಪವನ್ನಿ ತ್ತನು. ಅಗ್ನಿಯು ದೇವತೆಗಳಿಗೆ ಬಾಯಿಯಾದ್ದರಿಂದ ಮೊದಲು ಅವನಿಗೆ ಹವಿರ್ಭಾಗ ದೊರಕುತ್ತದೆ. ಎಲ್ಲೆಡೆಯಲ್ಲೂ ಹವನೀಯವಾದ ದ್ರವ್ಯಕ್ಕೆ ಅವನೇ ಅಧಿಕಾರಿಯಾಗಿರುವ ಕಾರಣ ಅವನೇ ಸರ್ವಭಕ್ಷಕನಾಗಲು ಹೇಗೆ ಸಾಧ್ಯ ?'

ಈ ಸಂಗತಿಯನ್ನು ಕೇಳಿ ಬ್ರಹ್ಮದೇವನು ಅಗ್ನಿಯನ್ನು ಕರೆಕಳುಹಿಸಿದನು. ನವಿಯಾದ ಮಾತುಗಳಲ್ಲಿ ಅವನಿಗೆ ಹೀಗೆಂದನು : 'ಎಲೈ ಅಗ್ನಿಯೆ ! ಎಲ್ಲಕ್ಕೂ ನೀನೇ ಉತ್ಪಾದಕ, ರಕ್ಷಣಕರ್ತ ಹಾಗೂ ಸಂಹಾರಕನು. ನೀನು ಅವಿನಾಶಿ. ಹಾಗೆಂದೇ ಯಜ್ಞಯಾಗಾದಿಗಳು ನಡೆಯಲು ಸಾಧ್ಯ. ಅದರಿಂದಾಗಿ ಪ್ರಜೆಗಳ ಯೋಗಕ್ಷೇಮ ಸಾಗುತ್ತದೆ. ಆದುದರಿಂದ ಪ್ರಜೆಗಳ ಎಲ್ಲ ಬಗೆಯ ಕ್ರಿಯೆಗಳು (ಯಜ್ಞ, ಯಾಗ ಮುಂ.) ತಡೆಯಿಲ್ಲದೆ ಸಾಗುವಂತೆ ನೀನು ಹೇಗಾದರೂ ಮಾಡು.'

ನ ತ್ವಂ ಸರ್ವಶರೀರೇಣ ಸರ್ವಭಕ್ಷತ್ವಮೇಷ್ಯಸಿ ।
ಅಪಾನೇ ಹ್ಯರ್ಚಿಷೋ ಯಾಸ್ತೇ ಸರ್ವಂ ಭಕ್ಷ್ಯಂತಿ ತಾಃ ಶಿಖಿನ್ ॥ ೨೨ ॥
ಯಥಾ ಸೂರ್ಯಾಂಶುಭಿಃ ಸ್ಪೃಷ್ಟಂ ಸರ್ವಂ ಶುಚಿ ವಿಭಾವ್ಯತೇ ॥ ೨೩ ॥
ತಥಾ ತ್ವದರ್ಚಿರ್ನಿರ್ದಗ್ಧಂ ಸರ್ವಂ ಶುಚಿ ಭವಿಷ್ಯತಿ ।
ತ್ವಮಗ್ನೇ ಪರಮಂ ತೇಜಃ ಸ್ವಪ್ರಭಾವಾದ್ ವಿನಿರ್ಗತಮ್ ॥ ೨೪ ॥
ಸ್ವತೇಜಸೈವ ತಂ ಶಾಪಂ ಕುರು ಸತ್ಯಮೃಷೇರ್ವಿಭೋ ।
ದೇವಾನಾಂ ಚಾತ್ಮನೋ ಭಾಗಂ ಗೃಹಾಣ ತ್ವಂ ಮುಖೇ ಹುತಮ್ ॥ ೨೫ ॥

'(ಭೃಗುಋಷಿಯು ನೀಡಿದ ಶಾಪದಿಂದಾಗಿ) ನೀನು ಸರ್ವಭಕ್ಷಕನಾಗದೆ ಕೇವಲ ನಿನ್ನ ಕೆಳಭಾಗದಲ್ಲಿ (ಅಪಾನದ್ವಾರದಲ್ಲಿ) ಇರುವ ಜ್ವಾಲೆಗಳು ಮಾತ್ರ ಸರ್ವಭಕ್ಷಕ ಆಗಲಿವೆ. ಕ್ರವ್ಯಾದ ರೂಪವುಳ್ಳ (ದೂಷಿತವೂ ಅಪವಿತ್ರವೂ ಆದ ಹಸಿ ಇಲ್ಲವೆ ಸತ್ತ ಮಾಂಸ)

ನಿನ್ನ ದೇಹದ ಭಾಗವು ಮಾತ್ರ ಸರ್ವಭಕ್ಷಕವಾಗಿ ಉಳಿದೀತು. ನೇಸರನ ಕಿರಣಗಳಿಂದ ಸ್ಪರ್ಶಿಸಲ್ಪಟ್ಟ ವಸ್ತುಮಾತ್ರಗಳೆಲ್ಲ ಪವಿತ್ರವಾದವುಗಳೆಂದು ಬಗೆಯಲ್ಪಡುತ್ತವೆ. ಅದೇ ರೀತಿಯಾಗಿ ನಿನ್ನ ಜ್ವಾಲೆಗಳಿಂದ ಭಕ್ಷಿಸಲ್ಪಡುವ ಸಂಗತಿಗಳೆಲ್ಲ ಪವಿತ್ರವಾದವುಗಳೆಂದೇ ಬಗೆಯಲ್ಪಟ್ಟಾವು. ನೀನು ಮೂರ್ತಿಮಂತನಾದ ತೇಜಸ್ಸು. ಹೀಗಾಗಿ ನೀನು ನಿನ್ನ ತೇಜಸ್ಸಿನಿಂದಲೇ ಭೃಗುವಿನ ಶಾಪವನ್ನು ನಿಜ ಮಾಡಿ ತೋರಿಸು. ನಿನ್ನ ಬಾಯಿಗೆ ಬೀಳುವ ದೇವತೆಗಳ ಹಾಗೂ ನಿನ್ನ ಹವಿರ್ಭಾಗವನ್ನು ನೀನು ಸ್ವೀಕರಿಸು.'

+ ಬ್ರಹ್ಮದೇವನ ಮಾತು ಉಃಶಾಪದಂತೆ ಕಂಡರೂ ಅದು ಉಃಶಾಪವಲ್ಲ. ಹಾಗೆಂದು ಇನ್ನೊಂದು ವರವೂ ಅಲ್ಲ. ಬ್ರಹ್ಮದೇವನು ಅಗ್ನಿಗೆ ಅವನ ಸಾಮರ್ಥ್ಯದ ಅರಿವನ್ನು ಮಾಡಿಕೊಟ್ಟಿರುವನಲ್ಲದೆ ಅಗ್ನಿಯು ತನ್ನ ಕೃತ್ಯದಿಂದಲೇ ಭೃಗುವಿನ ಶಾಪದ ತೀವ್ರತೆಯನ್ನು ಕಡಿಮೆ ಮಾಡಿ ತೋರಿಸಬೇಕೆಂದು ಹೇಳಿದ್ದಾನೆ. ಅಗ್ನಿಯು ಬ್ರಹ್ಮದೇವನ ಬಳಿ ಉಃಶಾಪವನ್ನಾಗಲಿ ಇಲ್ಲವೆ ನೆರವನ್ನಾಗಲಿ ಕೇಳಿಲ್ಲ. ಹಾಗೆಂದು ಎಲ್ಲಿಯೂ ಉಲ್ಲೇಖ ಸಿಕ್ಕುವುದಿಲ್ಲ.

**ಶಲ್ಯ/೪೭**

ಜನಮೇಜಯನ ಪ್ರಶ್ನೆಯಿಂದಾಗಿ ವೈಶಂಪಾಯನನು ಅಗ್ನಿ ಕಾಣದಂತಾದುದು ಏಕೆ ಹಾಗೂ ದೇವತೆಗಳು ಅವನನ್ನು ಕಂಡುಹಿಡಿದುದು ಹೇಗೆ ? ಎಂಬುದನ್ನು ಕುರಿತು ಹೇಳುತ್ತಿದ್ದಾನೆ—

ಭೃಗೋಃ ಶಾಪಾದ್ ಭೃಶಂ ಭೀತೋ ಜಾತವೇದಾಃ ಪ್ರತಾಪವಾನ್ ॥ ೧೭ ॥
ಶಮೀಗರ್ಭಮಥಾಸಾದ್ಯ ನನಾಶ ಭಗವಾಂಸ್ತತಃ ॥ ೧೮ ॥

'ಮಹರ್ಷಿ ಭೃಗುವಿನ ಶಾಪದಿಂದಾಗಿ ತೀರ ಹೆದರಿ ಕಂಗಾಲಾಗಿ ಹೋಗಿ ಭಗವಾನ್ ಅಗ್ನಿಯು ಬನ್ನಿಯ ಮರದ ಬಸಿರಲ್ಲಿ ಅಡಗಿ ಕುಳಿತನು. ಇಂದ್ರ ಮೊದಲಾದ ದೇವತೆಗಳು ಅವನನ್ನು ಕಂಡುಹಿಡಿದರು. ಅವನು ಅವರಿಗೆ ಬನ್ನಿಯ ಮರದಲ್ಲಿ ಸಿಕ್ಕನು.'

......ಸರ್ವಭಕ್ಷಶ್ಚ ನೋಽಭವತ್ ॥ ೨೧ ॥
ಭೃಗೋಃ ಶಾಪಾನ್ಮಹಾಭಾಗ ಯದುಕ್ತಂ ಬ್ರಹ್ಮವಾದಿನಾ ॥ ೨೨ ॥

'ಭೃಗುವಿನ ಶಾಪದಿಂದಾಗಿ ಅಗ್ನಿಯು ಸರ್ವಭಕ್ಷಕನಾದನು. ಬ್ರಹ್ಮವಾದಿಯಾದ ಆ ಋಷಿಯು (ಭೃಗುವು) ನುಡಿದಂತೆಯೇ ಎಲ್ಲವೂ ನಡೆಯಿತು.'

**ಶಾಂತಿ/೩೪೨**

ಬರಿಯ ಒಂದು ಉಲ್ಲೇಖ—

ಭೃಗುಣಾ ಮಹರ್ಷಿಣಾ ಶಪ್ತೋಽಗ್ನಿಃ । ಸರ್ವಭಕ್ಷತ್ವಮುಪಾನೀತಃ ॥ ೫೫ ॥

'ಮಹರ್ಷಿ ಭೃಗುವಿನ ಶಾಪದಿಂದಾಗಿ ಅಗ್ನಿಯು ಸರ್ವಭಕ್ಷಕನಾದನು' ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ ಸಂಗತಿಯನ್ನೇ ವೈಶಂಪಾಯನನು ಜನಮೇಜಯನಿಗೆ ಹೇಳಿದನು.

## ೧೫. ಅಗ್ನಿ > ಭೃಗು ಆದಿ/೧೦

ಸೌತಿಯು ಶೌನಕಾದಿ ಋಷಿಗಳಿಗೆ ಭೃಗುವಂಶದ ಕಥೆಯನ್ನು ಹೇಳುತ್ತಲಿದ್ದನು. ಆಗ ಭೃಗುವು ಅಗ್ನಿಗಿತ್ತ ಶಾಪವು ಅಕಾರಣವಾಗಿತ್ತು. ಮರುಶಾಪವನ್ನೀಯುವ ಸಾಮರ್ಥ್ಯ ಅಗ್ನಿಯ ಬಳಿ ಇತ್ತು. ಆದರೆ ತನಗೆ ಬ್ರಾಹ್ಮಣ ಪೂಜ್ಯನಾದ್ದರಿಂದ ಅಗ್ನಿಯು ಹಾಗೆ ಮಾಡಲಿಲ್ಲ.

+ ಇದೇನೂ ಅನುಚ್ಚಾರಿತವಾದ ಮರುಶಾಪವಲ್ಲ. ಮರುಶಾಪವನ್ನೀಯಬೇಕೆಂಬ ಯೋಚನೆ ಕೂಡ ಅಗ್ನಿಯ ಮನದಲ್ಲಿ ಹುಟ್ಟಲ್ಲ.

ನೋಡಿ : ಶಾಪ—ಭೃಗು > ಅಗ್ನಿ.

## ೧೬. ಖಗಮಋಷಿ > ಸಹಸ್ರಪಾತ (ನೀರಹಾವು) ಆದಿ/೧೦

ಸೌತಿಯು ಶೌನಕಾದಿ ಋಷಿಗಳಿಗೆ ಭೃಗುವಂಶದ ಕಥೆಯನ್ನು ಹೇಳುತ್ತಲಿದ್ದಾನೆ—

ಪ್ರಮದ್ವರೆಯು ವಿಶ್ವಾವಸು ಗಂಧರ್ವ ಹಾಗೂ ಅಪ್ಸರೆಯಾದ ಮೇನಕೆಯರಿಗೆ ಹುಟ್ಟಿದ ರೂಪವತಿಯಾದ ಮಗಳು. ಒಂದು ಸಲ ಅವಳು ಚ್ಯವನಭಾರ್ಗವನ ಮೊಮ್ಮಗನಾದ ರುರುವಿನ ಕಣ್ಣಿಗೆ ಬೀಳುತ್ತಾಳೆ. ಅವಳನ್ನು ಕಂಡು ಅವನು ಕಾಮಮೋಹಿತನಾದನು. ತಾನು ಅವಳನ್ನು ಮದುವೆಯಾಗಬಯಸುತ್ತೇನೆಂದು ತನ್ನ ಗೆಳೆಯರ ಮೂಲಕ ತನ್ನ ತಂದೆಯ ಕಿವಿಗೆ ಈ ವಾರ್ತೆಯನ್ನು ಹಾಕಿಸಿದನು. ಸಂಪ್ರದಾಯದಂತೆ ಬೇಡಿಕೆಯನ್ನು ಹಾಕಿ ಉತ್ತರಾ-ಫಾಲ್ಗುನಿ ನಕ್ಷತ್ರದಲ್ಲಿ ಅವರ ಮದುವೆಯನ್ನು ನೆರವೇರಿಸಲು ನಿರ್ಧರಿಸಲಾಯಿತು. ಆದರೆ ಮದುವೆಗೆ ಮೊದಲು ಪ್ರಮದ್ವರೆಯು ತನ್ನ ಗೆಳತಿಯರೊಂದಿಗೆ ಆಡುತ್ತಿರುವಾಗ ಹಾವು ಕಡಿದು ತತ್ಕ್ಷಣ ಮರಣಹೊಂದಿದಳು. ತನ್ನ ಮದುಮಗಳು ಈ ರೀತಿ ಸಾವಿಗೀಡಾದುದನ್ನು ಕಂಡು ರುರು ಬಲು ದುಃಖಿತನಾದನು. ಅವಳು ಜೀವ ತಳೆಯಲೆಂದು ಅವನು ಒಂದು ಸತ್ಯಕ್ರಿಯೆಯನ್ನು ಕೈಕೊಂಡನು. ಅವಳು ಜೀವತಳೆಯುವಂತಾದರೆ ತಾನು ತನ್ನರ್ಧ ಆಯುಸ್ಸನ್ನು ಅವಳಿಗೆ ಕೊಡಮಾಡುವುದಾಗಿ ಬೇಡಿಕೊಂಡನು. ಯಮಧರ್ಮನ ಕೃಪೆಯಿಂದ ಪ್ರಮದ್ವರಾ ಜೀವಂತಳಾದಳು. ರುರುವಿನ ಮನದಲ್ಲಿ ಮಾತ್ರ ಆ ಹಾವಿನ ಬಗೆಗೆ ಎಲ್ಲಿಲ್ಲದ ಸಿಟ್ಟು ಹುಟ್ಟಿಕೊಂಡಿತು. ಆದರಿಂದಾಗಿ ಅವನು ಕಂಡ ಹಾವುಗಳನ್ನೆಲ್ಲ ಚಚ್ಚಲು ವ್ರತ ತೊಟ್ಟನು. ಒಂದು ಸಲ ಕಾಡಿನಲ್ಲಿ ಅವನಿಗೆ ಎರಡು ತಲೆಗಳುಳ್ಳ ಒಂದು ಹಾವು ಕಂಡುಬಂದಿತು. ಅವನು ಅದನ್ನು ಚಚ್ಚುವುದರಲ್ಲಿದ್ದನು. ಅಷ್ಟರಲ್ಲಿ ಅದು ಮನುಷ್ಯನ ದನಿಯಲ್ಲಿ ಅವನಿಗೆ ಹೀಗೆ ಅಂದಿತು : 'ನನ್ನನ್ನೇಕೆ ಕೊಲ್ಲುವೆ ? ನಾನೇನು ತಪ್ಪುಮಾಡಿರುವೆ ? ನಾನಂತೂ ವಿಷವಿಲ್ಲದ ನಿರುಪದ್ರವಿ.' ಅದರ ಮಾತನ್ನು ಕೇಳಿ ರುರುವಿಗೆ ಅಚ್ಚರಿಯಾಯಿತು. ಅದನ್ನು ನೀನಾರೆಂದು ಕೇಳಿದನು. ಹಾವು ಹೀಗೆಂದಿತು—

ಅಹಂ ಪುರಾ ರುರೋ ನಾಮ್ನಾ ಋಷಿರಾಸಂ ಸಹಸ್ರಪಾತ್ ।
ಸೋಽಹಂ ಶಾಪೇನ ವಿಪ್ರಸ್ಯ ಭುಜಗತ್ವಮುಪಾಗತಃ ॥ ೭ ॥

**'ಎಲೈ ರುರುವೆ ! ಹಿಂದೆ ನಾನು ಸಹಸ್ರಪಾತನೆಂಬ ಋಷಿಯಾಗಿದ್ದೆನು. ಒಬ್ಬ**

ಬ್ರಾಹ್ಮಣನ ಶಾಪದಿಂದಾಗಿ ಹಾವಾದೆನು.' ಆಗ ರುರುವು ಅವನನ್ನು ಕೇಳಿದನು—

ಕಿಮರ್ಥಂ ಶಪ್ತವಾನ್ ಕ್ರುದ್ಧೋ ದ್ವಿಜಸ್ತ್ವಾಂ ಭುಜಗೋತ್ತಮ ।
ಕಿಯಂತಂ ಚೈವ ಕಾಲಂ ತೇ ವಪುರೇತದ್ ಭವಿಷ್ಯತಿ ॥ ೮ ॥

'ಎಲೈ ಭುಜಗಶ್ರೇಷ್ಠನೇ! ಯಾವ ಕಾರಣದಿಂದಾಗಿ ಬ್ರಾಹ್ಮಣನು ಕೆರಳಿ ನಿನ್ನನ್ನು ಶಪಿಸಿದನು? ಅಲ್ಲದೆ ಇನ್ನೆಷ್ಟು ಕಾಲ ನೀನು ಇದೇ ಯೋನಿಯಲ್ಲಿ ಕಾಲಕಳೆಯಬೇಕು?'

ಆದಿ/೧೧

ಇದನ್ನು ಕೇಳಿ ಹಾವು ರುರೂವಿಗೆ ಹೀಗೆಂದಿತು: 'ಖಗಮನೆಂಬ ಒಬ್ಬ ತಪೋನಿಧಿಯು ಅಗ್ನಿಹೋತ್ರದಲ್ಲಿ ವ್ಯಮರೆತಿದ್ದನು. ಆಗ ನಾನಿನ್ನೂ ಚಿಕ್ಕವನಾಗಿದ್ದೆ. ಹುಡುಗಾಟಿಕೆಯೆಂದು ಹುಲ್ಲಿನ ಒಂದು ಹಾವನ್ನು ಮಾಡಿ ಅವನ ಮೈಮೇಲೆ ಎಸೆದೆ. ಅವನು ಬೆಚ್ಚಿ ಬೀಳುವಂತೆ ಮಾಡಿದೆ. ಅವನು ಹೆದರಿ ಎಚ್ಚರತಪ್ಪಿ ಬಿದ್ದನು'. ತುಸು ಹೊತ್ತಿನ ಮೇಲೆ ಎಚ್ಚರಗೊಂಡು ಕೆರಳಿ ಕೆಂಡವಾಗಿ ಅವನೆಂದನು—

ಯಥಾವೀರ್ಯಸ್ತ್ವಯಾ ಸರ್ಪಃ ಕೃತೋऽಯಂ ಮದ್ವಿಭೀಷಯಾ ।
ತಥಾವೀರ್ಯೋ ಭುಜಂಗಸ್ತ್ವಂ ಮಮ ಶಾಪಾದ್ ಭವಿಷ್ಯಸಿ ॥ ೪ ॥

'ನೀನು ನನ್ನನ್ನು ಹೆದರಿಸಲೆಂದು ಪುಕ್ಕನಂತೆ ಹಾವನ್ನೆಸೆದೆ. ಅದೇ ಬಗೆಯಾದ ದುರ್ಬಲ-ವಿಷವಿಲ್ಲದ-ಹಾವು ನೀನಾಗೆಂದು ನಿನ್ನನ್ನು ಶಪಿಸುತ್ತೇನೆ.'

ಋಷಿಯ ಶಾಪವಾಣಿಯನ್ನು ಕೇಳಿ ಕಂಗಾಲಾದೆ. ಅವನ ಕ್ಷಮೆ ಕೋರಿದೆ. ಶಾಪವನ್ನು ಹಿಂತೆಗೆದುಕೊಳ್ಳುವಂತೆ ಪರಿಪರಿಯಾಗಿ ಬೇಡಿಕೊಂಡೆ. ಆಗ ಅವನು ಹೀಗೆಂದನು—

ನಾನೃತಂ ವೈ ಮಯಾ ಪ್ರೋಕ್ತಂ ಭವಿತೇದಂ ಕಥಂಚನ ॥ ೮ ॥

'ನನ್ನ ಮಾತು ಅದೆಂದಿಗೂ ಸುಳ್ಳಾಗಲಾರದು.' ಆದರೂ—

ಉತ್ಪತ್ಸ್ಯತಿ ರುರುರ್ನಾಮ ಪ್ರಮತೇರಾತ್ಮಜಃ ಶುಚಿಃ ।
ತಂ ದೃಷ್ಟ್ವಾ ಶಾಪಮೋಕ್ಷಸ್ತೇ ಭವಿತಾ ನ ಚಿರಾದಿವ ॥ ೧೦ ॥

'ಮಹರ್ಷಿಗಳಾದ ಪ್ರಮತಿ ಇವರ ಮಗನಾದ ರುರೂವಿನ ದರ್ಶನ ಆಗುತ್ತಲೇ ತುಸು ಹೊತ್ತಿನಲ್ಲಿಯೇ ನೀನು ಶಾಪಮುಕ್ತನಾಗಲಿರುವೆ.'

ರುರೂವಿನ ದರ್ಶನದಿಂದಾಗಿ ಹಾವಿಗೆ ತನ್ನ ಮೊದಲ ಸ್ವರೂಪ ಬಂದಿತು.

+ ಯಾಚಿತವಾದ ಉಃಶಾಪ.

## ೧೭. ಕದ್ರು > ಹಾವು

ಆದಿ/೧೫

ಶೌನಕಾದಿ ಋಷಿಗಳ ಕೋರಿಕೆಯ ಮೇರೆಗೆ ಸೌತಿಯು ಅವರಿಗೆ ಆಸ್ತಿಕನ ಆಖ್ಯಾನವನ್ನು ಹೇಳಿದನು. ಅದರಲ್ಲಿ ತಾಯಿಯು ಮಕ್ಕಳಿಗೆ (ಕದ್ರುವು > ಹಾವಿಗೆ) ಇತ್ತ ಶಾಪದ ಕಥೆಯಿದೆ. ಅದೇ ರೀತಿಯಾಗಿ ಮಗನು ತಾಯಿಗಿತ್ತ (ಅರುಣ > ವಿನತಾ) ಶಾಪದ ಕಥೆಯೂ ಇದೆ. ಋಷಿಗಳ ಮಡದಿಯರಾದ ಕದ್ರು ಹಾಗೂ ವಿನತಾ ಇವರು ದಕ್ಷ

ಪ್ರಜಾಪತಿಯ ಮಕ್ಕಳು. ಕದ್ರುವು ತನ್ನ ಗಂಡನ ವರದಾನದಿಂದಾಗಿ ಒಂದು ಸಾವಿರ ಹಾವುಗಳನ್ನು ಹೆತ್ತಳು.

ಮಾತ್ರಾ ಹಿ ಭುಜಗಾಃ ಶಪ್ತಾಃ ಪೂರ್ವಂ ಬ್ರಹ್ಮವಿದಾಂ ವರ ।
ಜನಮೇಜಯಸ್ಯ ವೋ ಯಜ್ಞೇ ಧಕ್ಷತ್ಯನಿಲಸಾರಥಿಃ ॥ ೧ ॥
ತಸ್ಯ ಶಾಪಸ್ಯ ಶಾಂತ್ಯರ್ಥಂ ಪ್ರದದೌ ಪನ್ನಗೋತ್ತಮಃ ।
ಸ್ವಸಾರಮೃಷಯೇ ತಸ್ಮೈ ಸುವ್ರತಾಯ ಮಹಾತ್ಮನೇ ॥ ೨ ॥

'ಜನಮೇಜಯನ ಸರ್ಪಸತ್ರದ ಕಾಲಕ್ಕೆ ಅಗ್ನಿಯು ನಿಮ್ಮನ್ನು ಸುಟ್ಟು ಬೂದಿಯನ್ನಾಗಿ ಮಾಡುವನು' ಎಂದು ಕದ್ರುವು ತನ್ನ ಮಕ್ಕಳಾದ ಹಾವುಗಳಿಗೆ ಶಾಪವನ್ನಿತ್ತಳು. ಹೀಗಾಗಿ ಅದರ ಉಪಶಮನಕ್ಕಾಗಿ ಎಂದು ಸರ್ಪರಾಜನಾದ ವಾಸುಕಿಯು ತನ್ನ ತಂಗಿಯನ್ನು ಜರತ್ಕಾರುವೆಂಬ ಮಹರ್ಷಿಗೆ ಕೊಟ್ಟು ಮದುವೆ ಮಾಡಿದನು.'

**ಆದಿ/೨೦**

ಉಚ್ಚೈಃಶ್ರವ ಎಂಬ ಕುದುರೆಯ ಬಣ್ಣವನ್ನು ಕುರಿತು ಕದ್ರು ಹಾಗೂ ವಿನತಾ ಎಂಬ ಈ ಸವತಿಯರಲ್ಲಿ ವಾದಕ್ಕಿಟ್ಟುಕೊಂಡಿತು. ಉಚ್ಚೈಃಶ್ರವವು ಬೆಳ್ಳಗಿದ್ದುದು ನಿಜ. ವಿನತೆ ಇವನ್ನೇ ಹೇಳುತ್ತಲಿದ್ದಳು. ಸೋತವಳು ಗೆದ್ದವಳ ದಾಸಿಯಾಗಬೇಕೆಂಬ ಶರತ್ತನ್ನು ಒಪ್ಪಿಕೊಳ್ಳಲಾಯಿತು. ಮಾರನೆಯ ದಿನ ಕಣ್ಣಿಂದ ಅದನ್ನು ಕಂಡೇ ನಿರ್ಧರಿಸುವುದೆಂದೂ ಗೊತ್ತಾಯಿತು. ಆದರೆ ಕದ್ರುವಿನ ಮನದಲ್ಲಿ ಕಪಟ ಹುಟ್ಟಿಕೊಂಡಿತು. ಉಚ್ಚೈಃಶ್ರವದ ಬಾಲ ಕಪ್ಪಾಗಿಲ್ಲ ಎನ್ನುವುದು ಅವಳಿಗೂ ತಿಳಿದಿತ್ತು. ಹಾಗೆಂದು ತನ್ನ ಸವತಿಗೆ ದಾಸಿಯಾಗಲು ಮನ ಒಪ್ಪದಂತಾಗಿತ್ತು. ಅದನ್ನು ತಪ್ಪಿಸಲು ಒಂದು ಹಂಚಿಕೆಯನ್ನು ಹೂಡಿದಳು. ಅವಳು ತನ್ನ ಮಕ್ಕಳಾದ ಹಾವುಗಳಿಗೆ ಕರ್ರಗಿನ ಕೂದಲುಗಳಂತಾಗಿ ಆ ಕುದುರೆಯ ಬಾಲಕ್ಕೆ ಅಂಟಿ ಸುತ್ತಿಕೊಂಡು ಕುಳಿತಿರಲು ಹೇಳಿದಳು.

ನಾವಪದ್ಯಂತ ಯೇ ವಾಕ್ಯಂ ತಾಂಛಶಾಪ ಭುಜಂಗಮಾನ್ ॥ ೭ ॥
ಸರ್ಪಸತ್ರೇ ವರ್ತಮಾನೇ ಪಾವಕೋ ವಃ ಪ್ರಧಕ್ಷ್ಯತಿ ।
ಜನಮೇಜಯಸ್ಯ ರಾಜರ್ಷೇಃ ಪಾಂಡವೇಯಸ್ಯ ಧೀಮತಃ ॥ ೮ ॥

ಆದರೆ ಆ ಮಕ್ಕಳು ಅವಳ ಮಾತನ್ನು ತಳ್ಳಿಹಾಕಿದವು. ಆಗ ಕದ್ರುವು 'ಪಾಂಡವರ ಕುಲದ ರಾಜರ್ಷಿಯಾದ ಜನಮೇಜಯನು ಸರ್ಪಸತ್ರವನ್ನು ಹೂಡಿದಾಗ ಅಗ್ನಿಯು ನಿಮ್ಮನ್ನು ಸುಟ್ಟು ಬೂದಿಯನ್ನಾಗಿ ಮಾಡಲಿದ್ದಾನೆ' ಎಂದು ಆ ಹಾವುಗಳಿಗೆ ಶಾಪವನ್ನಿತ್ತಳು.

ಶಾಪಮೇನಂ ತು ಶುಶ್ರಾವ ಸ್ವಯಮೇವ ಪಿತಾಮಹಃ ।
ಅತಿಕ್ರೂರಂ ಸಮುತ್ಸೃಷ್ಟಂ ಕದ್ರ್ವಾ ದೈವಾದತೀವ ಹಿ ॥ ೯ ॥

ಸ್ವತಃ ಬ್ರಹ್ಮದೇವನು ದೈವಯೋಗದಿಂದ, ಕದ್ರುವು ತನ್ನ ಮಕ್ಕಳಿಗಿತ್ತ ಶಾಪವನ್ನು ಆಲಿಸಿ ತುಂಬ ಸಂತೋಷಪಟ್ಟನು. ಹಾವುಗಳ ಸಾಮರ್ಥ್ಯ ಬಹಳ ಬೆಳೆದಿತ್ತು. ಅವುಗಳ ಉಗ್ರವಾದ ನಂಜಿನಿಂದಾಗಿ ಭೂಮಿಯ ಮೇಲಿನ ಬದುಕು ಅಸಹ್ಯವಾಗಿತ್ತು. ಕದ್ರುವಿನ

ಶಾಪದಿಂದಾಗಿ ಹಾವುಗಳ ಪೀಡೆ ತಾನಾಗಿಯೇ ಪರಿಹರಿಸಲ್ಪಡಲಿತ್ತು. ಹೀಗಾಗಿ ದೇವತೆಗಳೂ ಸಂತುಷ್ಟರಾಗಿದ್ದರು. ಹಾವುಗಳಿಗೆ ಶಿಕ್ಷೆಯಾಗಲೇಬೇಕಿತ್ತು. ಬ್ರಹ್ಮದೇವನು ಕದ್ರುವನ್ನು ಕೊಂಡಾಡಿದನು. ಆಮೇಲೆ ಕಶ್ಯಪನನ್ನು ಕರೆದು ಅವನಿಗೆ ಹೀಗೆಂದನು—

ಯದೇತೇ ದಂದಶೂಕಾಶ್ಚ ಸರ್ಪಾ ಜಾತಾಸ್ತ್ವಯಾನಘ ॥ ೧೪ ॥
ವಿಷೋಲ್ಬಣಾ ಮಹಾಭೋಗಾ ಮಾತ್ರಾ ಶಪ್ತಾಃ ಪರಂತಪ ।
ತತ್ರ ಮನ್ಯುಸ್ತ್ವಯಾ ತಾತ ನ ಕರ್ತವ್ಯಃ ಕಥಂಚನ ॥ ೧೫ ॥

'ಎಲೈ ಕಶ್ಯಪನೇ! ನಿನ್ನ ಮಕ್ಕಳಾದ ಹಾವುಗಳ ನಂಜು ಬಲು ತೀಕ್ಷ್ಣವಾಗಿದ್ದು ಅವುಗಳ ಹೆಡೆಗಳೂ ತುಂಬ ಹೆದರಿಕೆಯನ್ನು ಹುಟ್ಟಿಸುವಂಥಗಳು. ಆದುದರಿಂದ ಅವರ ಅಮ್ಮನು ಅವರಿಗಿತ್ತ ಶಾಪಕ್ಕಾಗಿ ನೀನು ಸಿಟ್ಟಿಗೇಳಬೇಡ.' ಹಾವುಗಳನ್ನು ಕೊಲ್ಲುವ ಈ ರೂಢಿ ಬಲು ಹಿಂದಿನಿಂದಲೇ ನಡೆದುಬಂದಿದೆ.

ಆದಿ/೨೨

ತಮ್ಮ ತಾಯಿಯಿತ್ತ ಶಾಪವನ್ನು ಕೇಳಿ ನಾಗರೆಹಾವುಗಳು ತಮ್ಮತಮ್ಮಲ್ಲಿಯೇ ಯೋಚಿಸಿದವು,

ನಾಗಾಶ್ಚ ಸಂವಿದಂ ಕೃತ್ವಾ ಕರ್ತವ್ಯಮಿತಿ ತದ್ವಚಃ ।
ನಿಃಸ್ನೇಹಾ ವೈ ದಹೇನ್ಮಾತಾ ಅಸಂಪ್ರಾಪ್ತಮನೋರಥಾ ॥ ೧ ॥
ಪ್ರಸನ್ನಾ ಮೋಕ್ಷಯೇದಸ್ಮಾಂಸ್ತಸ್ಮಾಚ್ಛಾಪಾಚ್ಚ ಭಾಮಿನೀ ॥ ೨ ॥

'ತಾಯಿಯ ಅಪ್ಪಣೆಯಂತೆ ನಡೆದುಕೊಳ್ಳುವುದು ನಮ್ಮ ಕರ್ತವ್ಯವೇ ಆಗಿದೆ. ನಾವು ಅವಳ ಅಪ್ಪಣೆಯಂತೆ ನಡೆದುಕೊಳ್ಳದಿದ್ದರೆ ಮಾತ್ರ ಅವಳು ಎಳ್ಳಷ್ಟೂ ದಯೆಯನ್ನು ತೋರಳು. ಅದರಿಂದಾಗಿ ನಾವು ಬೆಂಕಿಗೆ ಬೀಳದೆ ಬೇರೆ ವಿಧಿಯೇ ಇಲ್ಲ. ಬದಲು ಅವಳ ಬಯಕೆಯಂತೆ ನಡೆದುಕೊಂಡರೆ ದೃಢನಿಶ್ಚಯದವಳಾದರೂ ಅವಳು ನಮ್ಮ ನಡತೆಯಿಂದಾಗಿ ಖುಷಿಪಡುವಳು.'

ಆದಿ/೩೫

ಶೌನಕನು ಸೌತಿಗೆ ಹೀಗೆಂದನು—

ಭುಜಂಗಮಾನಾಂ ಶಾಪಸ್ಯ ಮಾತ್ರಾ ಚೈವ...... ॥ ೧ ॥

ಹಾವುಗಳಿಗೆ ಅವುಗಳ ತಾಯಿಯಿತ್ತ ಶಾಪದ ಕಾರಣವು ನಿನ್ನಿಂದಾಗಿ ನನಗೆ ತಿಳಿಯಿತು.

+ ಶಾಪದ ಬರಿಯ ಒಂದು ಉಲ್ಲೇಖ ಮಾತ್ರ.

ಆದಿ/೩೯

ಶೌನಕನು ಸೌತಿಗೆ ಒಂದು ಪ್ರಶ್ನೆಯನ್ನು ಕೇಳುತ್ತಾನೆ—ನೀನು ನನಗೆ ಕದ್ರುವಿನ ಹೊಟ್ಟೆಯಿಂದ ಹುಟ್ಟಿಬಂದ ಹಾವುಗಳ ಹೆಸರುಗಳನ್ನೇನೋ ಹೇಳಿದೆ. ಆದರೆ,

ಶಾಪಂ ತಂ ತೇಽಭಿವಿಜ್ಞಾಯ ಕೃತವಂತಃ ಕಿಮುತ್ತರಮ್ ॥ ೧ ॥

ಕದ್ರುವು ಇತ್ತ ಶಾಪವನ್ನು ಆಲಿಸಿದ ಬಳಿಕ ಹಾವುಗಳು ಏನು ಮಾಡಿದವು? (ಎಂಬುದನ್ನು ನಾನು ಅರಿತುಕೊಳ್ಳಬಯಸುವೆ.)

+ ಶಾಪದ ಬರಿ ಒಂದು ಉಲ್ಲೇಖ ಮಾತ್ರ.

**ಆದಿ/೩೭**

ಕದ್ರುವು ಹಾವುಗಳಿಗಿತ್ತ ಶಾಪವನ್ನು ಕೇಳಿ ಹಾವುಗಳ ಅರಸನಾದ ವಾಸುಕಿಯು ಅದನ್ನು ಪರಿಣಾಮಕಾರಿಯಾಗದಂತೆ ಮಾಡಲು ಯೋಚಿಸತೊಡಗಿದನು.

> ಮಾತುಃ ಸಕಾಶಾತ್ ತಂ ಶಾಪಂ ಶ್ರುತ್ವಾ ವೈ ಪನ್ನಗೋತ್ತಮಃ ।
> ವಾಸುಕಿಶ್ಚಿಂತಯಾಮಾಸ ಶಾಪೋಽಯಂ ನ ಭವೇತ್ ಕಥಮ್ ॥ ೧ ॥

ವಾಸುಕಿಯು ಬೇರೆ ಹಾವುಗಳಿಗೆ ಹೀಗೆಂದನು—

> ಅಯಂ ಶಾಪೋ ಯಥೋದ್ದಿಷ್ಟೋ ವಿದಿತಂ ವಸ್ತಥಾನಘಾಃ ।
> ತಸ್ಯ ಶಾಪಸ್ಯ ಮೋಕ್ಷಾರ್ಥಂ ಮಂತ್ರಯಿತ್ವಾ ಯತಾಮಹೇ ॥ ೩ ॥
> ಸರ್ವೇಷಾಮೇವ ಶಾಪಾನಾಂ ಪ್ರತಿಘಾತೋ ಹಿ ವಿದ್ಯತೇ ।
> ನ ತು ಮಾತ್ರಾಭಿಶಪ್ತಾನಾಂ ಮೋಕ್ಷಃ ಕ್ವಚನ ವಿದ್ಯತೇ ॥ ೪ ॥
> ಅವ್ಯಯಸ್ಯಾಪ್ರಮೇಯಸ್ಯ ಸತ್ಯಸ್ಯ ಚ ತಥಾಗ್ರತಃ ।
> ಶಪ್ತಾ ಇತ್ಯೇವ ಮೇ ಶ್ರುತ್ವಾ ಜಾಯತೇ ಹೃದಿ ವೇಪಥುಃ ॥ ೫ ॥
> ನೂನಂ ಸರ್ವವಿನಾಶೋಽಯಮಸ್ಮಾಕಂ ಸಮುಪಾಗತಃ ।
> ನ ಹ್ಯೇತಾಂ ಸೋಽವ್ಯಯೋ ದೇವಃ ಶಪಂತೀಂ ಪ್ರತ್ಯಷೇಧಯತ್ ॥ ೬ ॥

'ಎಲೈ ನಿಷ್ಪಾಪಿಗಳಾದ ಬಂಧುಗಳೇ ! ಈ ಶಾಪಕ್ಕೆ ಕಾರಣ ನಿಮಗೆಲ್ಲ ತಿಳಿದೇ ಇದೆ. ಆದುದರಿಂದ ಅದನ್ನು ತೊಲಗಿಸುವ ಬಗೆಗೆ ಯೋಚಿಸಿ ಕೃತಿಗೆ ಇಳಿಯೋಣ. ಬೇರೆ ಯಾವ ಬಗೆಯ ಶಾಪವಿದ್ದರೂ ಅದನ್ನು ಪರಿಹರಿಸಿಕೊಳ್ಳಬಹುದೇನೋ. ಆದರೆ ತಾಯಿ ಯಿತ್ತ ಶಾಪದಿಂದ ಬಿಡುಗಡೆಯಿಲ್ಲ. ತಾನು ಅವ್ಯಯನು, ಅಪ್ರಮೇಯನು ಹಾಗೂ ಸತ್ಯವೆನ್ನಿಸಿದ ಸಾಕ್ಷಾತ್ ಬ್ರಹ್ಮದೇವನೆದುರಿನಲ್ಲಿಯೇ ನಿಮ್ಮನ್ನು ಶಪಿಸಿರುವೆನೆಂದು (ನಿಮ್ಮ ತಾಯಿ ನುಡಿದು)ದನ್ನು ಕೇಳಿದಾಗಿನಿಂದ ನನ್ನ ಎದೆ ಡವಗುಟ್ಟುತ್ತಲಿದೆ. ತಾಯಿಯು ಶಾಪವನ್ನೀಯುವಾಗ ಬ್ರಹ್ಮದೇವನೂ ಕೂಡ ಯಾವುದೇ ಬಗೆಯ ವಿರೋಧವನ್ನು ತೋರಲಿಲ್ಲ. ಹೀಗಾಗಿ ನಮ್ಮೆಲ್ಲರ ಸರ್ವನಾಶದ ಹೊತ್ತು ತೀರ ಹತ್ತಿರಕ್ಕೆ ಬಂದಿದೆ—ಎಂಬುದು ಖಂಡಿತ.'

**ಆದಿ/೩೮**

ಹಲವು ಹಾವುಗಳು ವಾಸುಕಿಗೆ ತಮ್ಮ ಅಭಿಪ್ರಾಯಗಳನ್ನು ಹೇಳಿದವು. ಸರ್ಪಯಜ್ಞ ನಡೆಯದ ಹಾಗೆ ಮಾಡಲು ಯಾವುದಾದರೂ ಉಪಾಯ ದೊರೆತರೆ ತಮ್ಮ ಸಂಕಟ ತಾನಾಗಿಯೇ ತಪ್ಪುವುದೆಂದು ಕೆಲವು ಹಾವುಗಳು ಹೇಳಿದವು. ಅದಕ್ಕೆ ಏಲಾಪತ್ರನೆಂಬ ನಾಗರಹಾವು ಹೀಗೆಂದಿತು ; 'ಹಾಗಾಗುವುದು ಅಸಾಧ್ಯವೇ ಸರಿ. ಯಜ್ಞ ನಡೆದೇ ತೀರು ವುದು. ಹೀಗಾಗಿ ಸಲ್ಲದ ಆಸೆ ಬೇಡ. ದೈವಕ್ಕೆ ನಮ್ಮನ್ನು ಒಪ್ಪಿಸಿಕೊಳ್ಳುವುದೊಂದೇ ನಮ್ಮೆದುರು ಈಗ ಇರುವ ಉಪಾಯ. ಹೆಣ್ಣುಗಳು ಬಲು ನಿರ್ದಯರೆಂದು ದೇವತೆಗಳು ಬ್ರಹ್ಮದೇವನ ಬಳಿ ಹೇಳುತ್ತಿರುವುದನ್ನು ಕೇಳಿದ್ದೇನೆ.'

ಅವನ ಮಾತು—

ಅಹಂ ಶಾಪೇ ಸಮುತ್ಸೃಷ್ಟೇ ಸಮಶ್ರೌಷಂ ವಚಸ್ತದಾ ।
ಮಾತುರುತ್ಸಂಗಮಾರೂಢೋ ಭಯಾತ್ ಪನ್ನಗಸತ್ತಮಾಃ ॥ ೫ ॥

ದೇವತೆಗಳು ಬ್ರಹ್ಮದೇವರಿಗೆ ಹೀಗೆಂದರು—

ಕಾ ಹಿ ಲಬ್ಧ್ವಾ ಪ್ರಿಯಾನ್ ಪುತ್ರಾಂಛಪೇದೇವಂ ಪಿತಾಮಹ ।
ಋತೇ ಕದ್ರೂಂ ತೀಕ್ಷ್ಣರೂಪಾಂ ದೇವದೇವ ತವಾಗ್ರತಃ ॥ ೭ ॥
ತಥೇತಿ ಚ ವಚಸ್ತಸ್ಯಾಸ್ತ್ವಯಾಪ್ಯುಕ್ತಂ ಪಿತಾಮಹ ॥ ೮ ॥

'ಪಿತಾಮಹನೇ, ತನ್ನ ಮಕ್ಕಳು ಮಮತೆಯುವರೊ, ಒಳ್ಳೆಯವರೂ ಆಗಿದ್ದರೂ ಕೂಡ ನಿನ್ನೆದುರಿನಲ್ಲಿಯೇ ಅವರನ್ನು ಶಪಿಸುವುದು ಕದ್ರುವಿನಂತಹ ನಿರ್ದಯಳಾದ ಹೆಣ್ಣಿಗಲ್ಲದೆ ಇನ್ನಾರಿಗೆ ಸಾಧ್ಯ! ಇಷ್ಟೇ ಅಲ್ಲದೆ ಅವಳ ಶಾಪವಾಣಿಯನ್ನು ಕೇಳಿ ನಿಮ್ಮ ಬಾಯಿಯಿಂದ ಕೂಡ 'ತಥಾಸ್ತು' ಎಂಬ ಉದ್ಗಾರ ಹೊರಬಂದಿತು. ನೀವು ಯಾವುದೇ ಬಗೆಯ ತಡೆಯನ್ನು ಮುಂದೊಡ್ಡಲಿಲ್ಲ. ಹೀಗೇಕೆ?—ಎಂಬುದು ನಮಗೂ ಅರ್ಥವಾಗಲಿ. ಆ ಮಾತನ್ನು ಕೇಳಿ ಬ್ರಹ್ಮದೇವನು ಹೀಗೆಂದನು : 'ಪ್ರಜೆಗಳ ಹಿತವನ್ನು ಕಾಪಾಡುವುದು ನನ್ನ ಕರ್ತವ್ಯ. ಈ ಹಾವುಗಳು ಬಲುತೀಕ್ಷ್ಣವಾದ ನಂಜಿನಿಂದ ಕೂಡಿದವುಗಳು. ಅವುಗಳಿಂದಾಗಿ ಎಲ್ಲರಿಗೂ ಬಲು ಪೀಡೆಯಾಗುತ್ತಿತ್ತು. ಹೀಗಾಗಿ ಈಗಾದುದು ಒಳ್ಳೆಯದೇ ಆಯಿತೆಂದು ಬಗೆದೆ. ಆದುದರಿಂದ 'ತಥಾಸ್ತು' ಎಂದು ಉದ್ಗರಿಸಿದೆನು. ಅಧರ್ಮದಿಂದಲೂ ಅಕಾರಣವಾಗಿಯೂ ಪ್ರಾಣಿಮಾತ್ರರನ್ನು ಹಿಂಸಿಸುವ ಹಾವುಗಳು ನಾಶ ಹೊಂದಲಿವೆ. ಸರಳವೂ, ಧಾರ್ಮಿಕಮನೋಧರ್ಮದವೂ ಆದ ಹಾವುಗಳಿಗೆ ಮಾತ್ರ ಕದ್ರುವಿನ ಶಾಪದಿಂದ ಬಾಧೆ ತಟ್ಟದು.' ಆಗ ದೇವತೆಗಳು ಅವನಿಗೆ ಮರುಪ್ರಶ್ನೆಯನ್ನು ಕೇಳಿದರು : 'ಧಾರ್ಮಿಕಮನೋವೃತ್ತಿಯ ಹಾವುಗಳು ಇದರಿಂದ ಹೇಗೆ ಪಾರಾಗಲಿವೆ?' ಅದಕ್ಕೆ ಬ್ರಹ್ಮದೇವನು ಹೀಗೆಂದನು : 'ಜರತ್ಕಾರುವು ವಾಸುಕಿಯ ಸೋದರಿ.

ಸ ತಸ್ಯಾಂ ಭವಿತಾ ಪುತ್ರಃ ಶಾಪಾನ್ನಾಗಾಂಶ್ಚ ಮೋಕ್ಷ್ಯತಿ ॥ ೧೬ ॥

ಅವಳಿಂದ ಹುಟ್ಟಿ ಬರಲಿರುವ ಆಸ್ತಿಕನು ಹಾವುಗಳನ್ನು ಕದ್ರುವಿನ ಶಾಪದಿಂದ ಬಿಡುಗಡೆಗೊಳಿಸಲಿರುವನು.' ಈ ಮಾತನ್ನು ಕೇಳಿ ದೇವತೆಗಳು ಸಂತುಷ್ಟರಾದರು,

**ಆದಿ/೩೯**

ಸಮುದ್ರಮಂಥನದ ಕಾಲಕ್ಕೆ ವಾಸುಕಿಯು ಹಗ್ಗವಾಗಿ ಒಳ್ಳೆಯ ಕೆಲಸವನ್ನು ನೀಡಿದ್ದರಿಂದ ದೇವತೆಗಳು ಅವನನ್ನು ಬ್ರಹ್ಮದೇವನ ಬಳಿಗೆ ಕರೆದೊಯ್ದು ಹೀಗೆಂದರು—

ಭಗವಂಛಾಪಭೀತೋಽಯಂ ವಾಸುಕಿಸ್ತಪ್ಯತೇ ಭೃಶಮ್ ॥ ೫ ॥
ಅಸ್ಯೈತನ್ಮಾನಸಂ ಶಲ್ಯಂ ಸಮುದ್ಧರ್ತುಂ ತ್ವಮರ್ಹಸಿ ।
ಜನನ್ಯಾಃ ಶಾಪಜಂ ದೇವ ಜ್ಞಾತೀನಾಂ ಹಿತಮಿಚ್ಛತಃ ॥ ೬ ॥

'ಎಲೈ ಭಗವಂತನೇ! ವಾಸುಕಿ ತನ್ನ ತಾಯಿಯ ಶಾಪದಿಂದಾಗಿ ತುಂಬ ಹೆದರಿಕೊಂಡಿದ್ದಾನೆ. ಹೀಗಾಗಿ ಬಲು ದುಃಖಿತನಾಗಿದ್ದಾನೆ. ಅವನು ಹಾವಿನ ಜಾತಿಯ ಹಿತಕ್ಕಾಗಿ ಕಳವಳಗೊಂಡಿದ್ದಾನೆ. ಆದುದರಿಂದ ನೀವೇ ಅವನ ಮನದಲ್ಲಿಯ ಈ ದುಗುಡವನ್ನು

ದೂರಗೊಳಿಸಬೇಕು.' ಆಗ ಬ್ರಹ್ಮದೇವನು, 'ಧರ್ಮದಿಂದ ನಡೆದುಕೊಳ್ಳುವ ನಾಗಗಳಿಗೆ ಈ ಶಾಪ ಬಾಧೆಯನ್ನು ಉಂಟುಮಾಡಲಾರದು ಎಂದು ಈ ಮೊದಲೇ ಹೇಳಿದ್ದೇನೆ. ಏಲಾಪುತ್ರನು ನನ್ನಿಂದಾಗಿಯೇ ಈ ಸಂಗತಿಯನ್ನು ವಾಸುಕಿಗೆ ಈಗಾಗಲೇ ಹೇಳಿದ್ದಾನೆ' ಎಂದನು.

ಸಂದಿಶ್ಯ ಪನ್ನಗಾನ್ ಸರ್ವಾನ್ ವಾಸುಕಿಃ ಶಾಪಮೋಹಿತಃ ॥ ೧೨ ॥

ಇದನ್ನು ಕೇಳಿದ ವಾಸುಕಿಯು ಎಲ್ಲವನ್ನೂ ತನ್ನ ಬಂಧುಗಳಿಗೆ ತಿಳಿಸಿ ಹೇಳಿದನು.

**ಆದಿ/೪೭**

ಜರತ್ಕಾರುವು ವಾಸುಕಿಯ ಸೋದರಿಯನ್ನು ಮದುವೆಯಾಗುವಾಗ ಮೂರು ಶರತ್ತುಗಳನ್ನು ಮುಂದೊಡ್ಡಿದನು. ಅವೆಂದರೆ, (೧) ತನ್ನ ಹೆಸರೂ ತನ್ನ ಮಡದಿಯ ಹೆಸರೂ ಒಂದೇ ಆಗಿರತಕ್ಕದ್ದು, (೨) ಮದುವೆಯಾದಬಳಿಕ ಮಡದಿಯ ಹೊಣೆ ಬೇಡ ಹಾಗೂ (೩) ಮಡದಿಯಾದವಳು ತಪ್ಪಿಯೂ ಗಂಡನ ಮಾತು ಮೀರಕೂಡದು. ಇವುಗಳಲ್ಲಿ ಒಂದಾದರೂ ಶರತ್ತನ್ನು ಮುರಿದರೆ ಮಡದಿಯನ್ನು ಬಿಟ್ಟುಕೊಡಲಾಗುವುದು—ಎಂದು ಕೂಡ ಅವನು ಖಡಾಖಂಡಿತವಾಗಿ ಹೇಳಿಬಿಟ್ಟನು. ವಾಸುಕಿಯು ಇವೆಲ್ಲ ಶರತ್ತುಗಳನ್ನು ಒಪ್ಪಿಕೊಂಡೇ ತನ್ನ ಸೋದರಿಯನ್ನು ಆ ಋಷಿಗೆ ಮದುವೆ ಮಾಡಿಕೊಟ್ಟನು. ಅವಳೂ ಕೂಡ ಬಲು ಎಚ್ಚರದಿಂದ ಅವನ ಇವೆಲ್ಲ ಶರತ್ತುಗಳನ್ನು ಪಾಲಿಸಿಕೊಂಡು ಬಂದಳು. ಒಂದು ಸಲ ಜರತ್ಕಾರು ಋಷಿಯು ತನ್ನ ಮಡದಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿದ್ದನು. ಸಂಜೆಯ ಹೊತ್ತು. ಸಂಧ್ಯಾವಂದನೆಯ ಹೊತ್ತು ಮೀರುತ್ತಬಂದಿತ್ತು. ಅವನ ನಿತ್ಯಕರ್ಮಗಳು ಉಳಿದುಹೋಗದಿರಲೆಂದು ಅವಳು ಅವನನ್ನು ಎಚ್ಚರಿಸಿದಳು. ಎದ್ದವನೇ ಅವನು ಕೋಪದಿಂದ ಕಿಡಿಕಿಡಿಯಾದನು. ತಾನು ಅವಳನ್ನು ಬಿಟ್ಟುಕೊಡುವುದಾಗಿ ನಿರ್ಧರಿಸಿರುವುದನ್ನು ಅವಳಿಗೆ ಹೇಳಿದನು. ಅವಳು ಬಸುರಿಯಾಗಿದ್ದಳು. ಹೆರಿಗೆಗೆ ಇನ್ನೂ ಕಾಲಾವಕಾಶ ಇತ್ತು. ಅವಳು ತುಂಬ ಹೆದರಿಕೊಂಡಳು. ಅವನಂತಹ ಧರ್ಮವನ್ನರಿತವನು ಹೀಗೆ ತನ್ನ ಮಡದಿಯನ್ನು (ಬಸಿರಾಗಿರುವಾಗಲಾದರೂ) ಬಿಟ್ಟುಬಿಡುವುದು ಸರಿಯಲ್ಲವೆಂದು ಬಲುವಿನಯದಿಂದಲೇ ಕೋರಿಕೊಂಡಳು. ಪಿತೃಗಳನ್ನು ಉದ್ಧರಿಸುವವನಾದ ಮಗ ಇನ್ನೂ ಹುಟ್ಟಿಲ್ಲವೆಂಬುದನ್ನು ಅವನ ಗಮನಕ್ಕೆ ತಂದು ಕೊಟ್ಟಳು.

ಪ್ರದಾನೇ ಕಾರಣಂ ಯಚ್ಚ ಮಮ ತುಭ್ಯಂ ದ್ವಿಜೋತ್ತಮ ॥ ೩೬ ॥
ತದಲಬ್ಧವತೀ ಮಂದಾಂ ಕಿಂ ಮಾಂ ವಕ್ಷ್ಯತಿ ವಾಸುಕಿಃ ।
ಮಾತೃಶಾಪಾಭಿಭೂತಾನಾಂ ಜ್ಞಾತೀನಾಂ ಮಮ ಸತ್ತಮ ॥ ೩೭ ॥
ಅಪತ್ಯಮೀಪ್ಸಿತಂ ತ್ವತ್ತಸ್ತಚ್ಚ ತಾವನ್ನ ದೃಶ್ಯತೇ ।
ತ್ವತ್ತೋ ಹ್ಯಪತ್ಯಲಾಭೇನ ಜ್ಞಾತೀನಾಂ ಮೇ ಶಿವಂ ಭವೇತ್ ॥ ೩೮ ॥

'ನನ್ನ ಸೋದರನು ಒಂದು ಉದ್ದೇಶವನ್ನು ಪೂರೈಸಲೆಂದೇ ನನ್ನನ್ನು ನಿಮಗೆ ಕೊಟ್ಟಿದ್ದಾನೆ. ಆ ಗುರಿ ಈಗಲೂ ಕೈಗೂಡಿಲ್ಲ. ಹೀಗಿರುವಲ್ಲಿ (ನೀವು ನನ್ನನ್ನು ಬಿಟ್ಟುಕೊಟ್ಟರೆ) ಅವನು ಏನೆಂದಾನು ? ಹಾವುಗಳು ತಮ್ಮ ತಾಯಿಯ ಶಾಪದಿಂದ ಬಿಡುಗಡೆ

ಯನ್ನು ಹೊಂದಬೇಕಿದೆ. ನನಗಂತೂ ಇನ್ನೂ ಮಗುವಾಗಿಲ್ಲ. ನಿಮ್ಮಿಂದ ನನ್ನಲ್ಲಿ ಹುಟ್ಟಿ ಬರುವ ಮಗನಿಂದಲೇ ನಮ್ಮ ಜಾತಿಬಾಂಧವರು ಕಲ್ಯಾಣಹೊಂದಲು ಸಾಧ್ಯ.'

ಆದುದರಿಂದ ಋಷಿಯು ತನ್ನನ್ನು ಬಿಡಕೂಡದೆಂದು ಅವಳು ಅವನನ್ನು ಮರುಕಕ್ಕಾಗಿ ಕೋರಿದಳು, ಆದರೆ ಅವಳ ಕೋರಿಕೆ ಕೈಗೂಡಲಿಲ್ಲ. 'ನಿನ್ನ ಕೆಲಸ ಫಲ ನೀಡೀತು. ನಿನ್ನ ಹೊಟ್ಟೆಯಿಂದ ಹುಟ್ಟಿಬರುವ ಮಗ ಬಲು ತೇಜಸ್ಸಿನವನು' ಎಂದು ಮಾತ್ರ ಅವನು ಆವಳಿಗೆ ಆಶ್ವಾಸನೆಯನ್ನು ನೀಡಿದನು.

ಆದಿ/೫೨

ಸೌತಿಯು ಶೌನಕಾದಿಗಳಿಗೆ ಹೇಳಿದನು—

ಜನಮೇಜಯನ ಸರ್ಪಯಜ್ಞವು ಶುರುವಾಗುತ್ತಲೇ ಅಗ್ನಿಗೆ ಆಹುತಿಯನ್ನು ನೀಡಲೆಂದು ಸಾವಿರಾರು ಹಾವುಗಳನ್ನು ಮಂತ್ರಸಾಮರ್ಥ್ಯದಿಂದ ಅಲ್ಲಿಗೆ ಎಳೆತರಲಾಯಿತು.

ಉಚ್ಚಾವಚಾಶ್ಚ ಬಹವೋ ನಾನಾವರ್ಣಾ ವಿಷೋಲ್ಬಣಾಃ ।
ಘೋರಾಶ್ಚ ಪರಿಘಪ್ರಖ್ಯಾ ದಂದಶೂಕಾ ಮಹಾಬಲಾಃ ।
ಪ್ರಪೇತುರಗ್ನಾವುರಗಾ ಮಾತೃವಾಗ್ದಂಡಪೀಡಿತಾಃ ॥ ೧೦ ॥

'(ಆ ಹಾವುಗಳು) ಬಗೆಬಗೆಯ ಬಣ್ಣಗಳವು. ಬಲುತೀಕ್ಷ್ಣವಾದ ನಂಜಿನವು. ಹಿರಿಕಿರಿಯ ಆಕಾರಗಳವು. ಬಲುಭಯಂಕರವಾದವುಗಳು ಕೂಡ. ಕೆಲವಂತೂ ಪರಿಘದಂತೆ ವಿಶಾಲವಾಗಿದ್ದವು. ಕೆಲವಂತೂ ಕಚ್ಚುವ ಪ್ರಚಂಡಗಳೆನ್ನಿಸಿದ್ದವು. ಅವೆಲ್ಲ ತಮ್ಮ ತಾಯಿಯ ಶಾಪಕ್ಕೀಡಾಗಿ ಸರ್ಪಯಜ್ಞದ ಅಗ್ನಿಗೆ ಬಂದು ಬೀಳತೊಡಗಿದ್ದವು.'

ಆದಿ/೫೩

ಇಂದ್ರನು ಬ್ರಹ್ಮದೇವನನ್ನು ಮೊದಲೇ ಪ್ರಸನ್ನಗೊಳಿಸಿಕೊಂಡು ತಕ್ಷಕನನ್ನು ಕಾಪಾಡಿಕೊಳ್ಳುವ ಯೋಜನೆಯನ್ನು ಹೂಡಿದ್ದನು. ವಾಸುಕಿ ಮಾತ್ರ ತುಂಬ ಹೆದರಿ ಹೋಗಿದ್ದನು. ಅಗ್ನಿಯ ಬಾಯಿಗೆ ಬಂದು ಬೀಳುವ ನೂರಾರು, ಸಾವಿರಾರು ಹಾವುಗಳನ್ನು ಕಂಡು ತಾನೂ ಇಷ್ಟರಲ್ಲಿಯೇ ಆಹುತಿಯಾಗಲಿರುವೆ ಎಂದುಕೊಂಡನು. ಅವನು ಈ ಸಂಗತಿಯನ್ನು ತನ್ನ ಸೋದರಿ ಜರತ್ಕಾರುವಿನ ಎದುರು ತೋಡಿಕೊಂಡನು. ತನ್ನ ಜಾತಿಬಾಂಧವರಿಗಾಗಿಯೆಂದು ಅವನು ಅವಳಿಗೆ, 'ನಿನ್ನನ್ನು ಜರತ್ಕಾರು ಋಷಿಯೊಂದಿಗೆ ಮದುವೆ ಮಾಡಿಕೊಡುವ ಹಿಂದೆ ಇರುವ ಉದ್ದೇಶ ಕೈಗೂಡುವ ಹೊತ್ತು ಈಗ ಬಂದಿದೆ' ಎಂದನು.

ಆಸ್ತೀಕಃ ಕಿಲ ಯಜ್ಞಂ ತಂ ವರ್ತಂತಂ ಭುಜಗೋತ್ತಮೇ ।
ಪ್ರತಿಷೇತ್ಸ್ಯತಿ ಮಾಂ ಪೂರ್ವಂ ಸ್ವಯಮಾಹ ಪಿತಾಮಹಃ ॥ ೨೫ ॥

'ಎಲೈ ಶ್ರೇಷ್ಠಳಾದ ನಾಗಕನ್ಯೆಯೇ ! ನಿನ್ನ ಮಗನಾದ ಆಸ್ತಿಕನು ಜನಮೇಜಯನ ಯಜ್ಞವನ್ನು ಪೂರ್ತಿಗೊಳ್ಳಲು ಬಿಡಲಾರನೆಂದು ಪಿತಾಮಹನಾದ ಬ್ರಹ್ಮದೇವನು ಹಿಂದೆಯೇ ನನಗೆ ಹೇಳಿದ್ದಾನೆ. ಆದುದರಿಂದ ಹಾವುಗಳನ್ನು ಬಿಡಿಸಲು ಯತ್ನಿಸುವಂತೆ ನಿನ್ನ ಮಗನಿಗೆ ಹೇಳು.'

ಆದಿ/೫೪

ವಾಸುಕಿಯ ಕೋರಿಕೆಯ ಮೇರೆಗೆ ಜರತ್ಕಾರುವು ಆಸ್ತಿಕನಿಗೆ ಆವನ ತಂದೆಯ ಉದ್ದೇಶವನ್ನು ಸಫಲಗೊಳಿಸುವ ಹೊತ್ತು ಬಂದಿರುವುದಾಗಿ ಹೇಳಿದಳು. ಆಸ್ತಿಕನು ಅದಾವ ಉದ್ದೇಶವೆಂದು ಕೇಳುತ್ತಲೇ ಅವಳು ಹೀಗೆಂದು ಉತ್ತರಿಸಿದಳು—

ಪನ್ನಗಾನಾಮಶೇಷಾಣಾಂ ಮಾತಾ ಕದ್ರೂರಿತಿ ಶ್ರುತಾ ।
ತಯಾ ಶಪ್ತಾ ರುಷಿತಯಾ ಸುತಾ ಯಸ್ಮಾನ್ನಿಬೋಧ ತತ್ ॥ ೫ ॥

'ನಾಗಮಾತೆಯು ಕದ್ರು ಹೆಸರಿನಿಂದ ಪ್ರಸಿದ್ಧಳು. ಒಂದು ಸಲ ಅವಳು ತುಂಬ ಕೆರಳಿ ತನ್ನ ಮಕ್ಕಳಿಗೆ ಶಾಪವನ್ನಿತ್ತಳು. ಅವಳು ತನ್ನ ಶಾಪದ ಕಾರಣವನ್ನು ವಿಸ್ತಾರದಿಂದ ಹೇಳಿದಳು. ಜನಮೇಜಯನ ಯಜ್ಞದ ಕಾಲಕ್ಕೆ ಅಗ್ನಿಯು ನಿಮ್ಮನ್ನು ಸುಟ್ಟು ಬೂದಿಯನ್ನಾಗಿ ಮಾಡಲಿರುವನೆಂದು ಅವರಿಗೆ ಘೋರವಾದ ಶಾಪವನ್ನಿತ್ತಳು.'

ತಾಂ ಚ ಶಪ್ತವತೀಂ ದೇವಃ ಸಾಕ್ಷಾಲ್ಲೋಕಪಿತಾಮಹಃ ।
ಏವಮಸ್ತ್ವಿತಿ ತದ್ವಾಕ್ಯಂ ಪ್ರೋವಾಚಾನುಮುಮೋದ ಚ ॥ ೮ ॥

'ಕದ್ರುವು ಈ ರೀತಿಯಾಗಿ ನಿಷ್ಕರುಣೆಯ ಶಾಪವನ್ನೀಯುತ್ತಲೇ ಸಾಕ್ಷಾತ್ ಬ್ರಹ್ಮದೇವನೇ 'ತಥಾಸ್ತು' ಎಂದು ನುಡಿದು ಆ ಶಾಪಕ್ಕೆ ತನ್ನ ಒಪ್ಪಿಗೆಯನ್ನು ನೀಡಿದನು. ಈ ಮಾತನ್ನು ಕೇಳಿ ವಾಸುಕಿಯು ಬ್ರಹ್ಮದೇವನ ಬಳಿಗೆ ಹೋಗಿ ಆವನಿಗೆ ಹೀಗೆಂದನು—

......ಶಾಪೋಽಸೌ ನ ಭವೇದಿತಿ ॥ ೧೦ ॥

'ಈ ಶಾಪವು ಫಲವನ್ನು ನೀಡದಿರಲಿ.'

ಅಭಿಶಾಪಃ ಸ ಮಾತುಸ್ತು ಭಗವನ್ ನ ಭವೇತ್ ಕಥಮ್ ॥ ೧೨ ॥

ಶಾಪವು ಯಶಸ್ವಿಯಾಗದಿರಲೆಂದು ಏನನ್ನಾದರೂ ಮಾಡುವಂತೆ ದೇವತೆಗಳು ಪಿತಾಮಹನನ್ನು ಕೋರಿದರು. ಅದನ್ನು ಕೇಳಿ ಬ್ರಹ್ಮದೇವನು ಹೀಗೆಂದನು—

ಜರತ್ಕಾರುರ್ಜರತ್ಕಾರುಂ ಯಾಂ ಭಾರ್ಯಾಂ ಸಮವಾಪ್ಸ್ಯತಿ ।
ತತ್ರ ಜಾತೋ ದ್ವಿಜಃ ಶಾಪನ್ಮೋಕ್ಷಯಿಷ್ಯತಿ ಪನ್ನಗಾನ್ ॥ ೧೩ ॥

'ಜರತ್ಕಾರುವು (ಋಷಿ) ಜರತ್ಕಾರುವನ್ನು (ವಾಸುಕಿಯ ಸೋದರಿ) ಮದುವೆಯಾಗುವನು. ಅವರಿಂದ ಹುಟ್ಟುವ ಮಗನು ಹಾವುಗಳನ್ನು ಅವುಗಳ ತಾಯಿಯ ಶಾಪದಿಂದ ಬಿಡುಗಡೆಗೊಳಿಸುವನು.'

ಆಸ್ತಿಕನು ತನ್ನ ತಾಯಿಯಿಂದ ಶಾಪದ ವಾರ್ತೆಯನ್ನು ಕೇಳಿ ವಾಸುಕಿಗೆ ಹೀಗೆಂದನು—

ಅಹಂ ತ್ವಾಂ ಮೋಕ್ಷಯಿಷ್ಯಾಮಿ ವಾಸುಕೇ ಪನ್ನಗೋತ್ತಮ ।
ತಸ್ಮಾಚ್ಛಾಪಾನ್ಮಹಾಸತ್ತ್ವ ಸತ್ಯಮೇತದ್ ಬ್ರವೀಮಿ ತೇ ॥ ೧೮ ॥

'ಎಲೈ ನಾಗರಾಜನೇ! ನಾನು ನಿನ್ನನ್ನು ನಿನ್ನ ತಾಯಿಯ ಶಾಪದಿಂದ ಬಿಡುಗಡೆ ಮಾಡುವೆನು. ನಾನು ಹೇಳುತ್ತಿರುವುದು ನಿಜವನ್ನು ಮಾತ್ರ! ನನ್ನ ಮಾತು ಸುಳ್ಳಾಗಲಾರದು' ಎಂದು ಅವನು ಆಶ್ವಾಸನೆಯನ್ನಿತ್ತನು.

ತಾನು ಜನಮೇಜಯನ ಯಜ್ಞ ಪೂರ್ತಿಯಾಗದಂತೆ ನೋಡಿಕೊಳ್ಳುವುದಾಗಿ ಆಸ್ತಿಕನು ವಾಸುಕಿಗೆ ಹೇಳಿ ಅವನ ಹೆದರಿಕೆಯನ್ನು ತೆಗೆದುಹಾಕಿದನು.

ಅವಶಾನ್ ಮಾತೃವಾಗ್ದಂಡಪೀಡಿತಾನ್ ಕೃಪಣಾನ್ ಹುತಾನ್ ॥ ೫ ॥

'ಪಾಪ ! ತಮ್ಮ ತಾಯಿಯಿಂದ ಶಾಪಿತವಾದ ಆ ಹಾವುಗಳು ಅಗ್ನಿಯ ಬಾಯಿಗೆ ಬಿದ್ದಿದ್ದವು.'

ಇಂಥದೇ ಇನ್ನೊಂದು ಉಲ್ಲೇಖ—

ದಗ್ಧಾಸ್ತತ್ರ ಮಹಾಸತ್ರೇ ಬ್ರಹ್ಮದಂಡನಿಪೀಡಿತಾಃ ॥ ೨೪ ॥

(ಜನಮೇಜಯನ) ಮಹಾಸತ್ರದಲ್ಲಿ ತಾಯಿಯ ಶಾಪವೇ ಒಂದು ಬ್ರಹ್ಮದಂಡವೆನ್ನಿಸಿ ಅದರಿಂದ ಪೀಡಿತರಾಗಿ ಅವು ಅಗ್ನಿಗೆ ತುತ್ತಾದವು.

## ೧೮. ಅರುಣ > ವಿನತಾ  ಆದಿ/೧೬

ಸೌತಿಯು ಶೌನಕಾದಿ ಋಷಿಗಳಿಗೆ ಆಸ್ತಿಕಾಖ್ಯಾನವನ್ನು ಹೇಳುತ್ತಲಿದ್ದಾನೆ.—

ದಕ್ಷಪ್ರಜಾಪತಿಯ ಲಾವಣ್ಯಸಂಪನ್ನಳಾದ ಕನ್ಯೆ ಕದ್ರು ಹಾಗೂ ಕಶ್ಯಪ ಋಷಿಯ ಮಡದಿ ವಿನತಾ. ಕದ್ರುವು ತನ್ನ ಗಂಡನ ವರದಾನದಿಂದಾಗಿ ಸಾವಿರ ಮೊಟ್ಟೆಗಳನ್ನಿಟ್ಟಳು. ವಿನತೆಯಾದರೆ ಎರಡೇ ಎರಡನ್ನಿಟ್ಟಳು. ಕಶ್ಯಪನ ಅಪ್ಪಣೆಯ ಮೇರೆಗೆ ದಾಸಿಯರು ಮೊಟ್ಟೆಗಳನ್ನು ಕಾಪಾಡಿದರು. ಐದು ನೂರು ವರ್ಷಗಳ ತರುವಾಯ ಕದ್ರುವಿನ ಮೊಟ್ಟೆಗಳಿಂದ ಒಂದು ಸಾವಿರ ಹಾವಿನ ಮರಿಗಳು ಹೊರಬಂದವು. ವಿನತೆಯ ಮೊಟ್ಟೆಗಳು ಮಾತ್ರ ಹಾಗೆಯೇ ಉಳಿದವು. ಆಗ ಅವಳು ಒಂದನ್ನು ಒಡೆದಳು. ಅದರೊಳಗಿನ ಬದಿ ಆಗಲೂ ಪೂರ್ತಿಯಾಗಿ ಬೆಳೆದಿರಲಿಲ್ಲ. ಮೊಟ್ಟೆ ಈ ರೀತಿಯಾಗಿ ಅರೆ ಅವಸ್ಥೆಯಲ್ಲಿದ್ದ ಕಾರಣ—

ಸ ಪುತ್ರಃ ಕ್ರೋಧಸಂರಬ್ಧಃ ಶಶಾಪೈನಾಮಿತಿ ಶ್ರುತಿಃ ।
ಯೋಽಹಮೇವಂ ಕೃತೋ ಮಾತಸ್ತ್ವಯಾ ಲೋಭಪರೀತಯಾ ॥ ೧೮ ॥
ಶರೀರೇಣಾಸಮಗ್ರೇಣ ತಸ್ಮಾದ್ ದಾಸೀ ಭವಿಷ್ಯಸಿ ।
ಪಂಚವರ್ಷಶತಾನ್ಯಸ್ಯಾ ಯಯಾ ವಿಸ್ಪರ್ಧಸೇ ಸಹ ॥ ೧೯ ॥

ಕೆರಳಿ ಕಿಡಿಕಿಡಿಯಾದ ಆ ಮಗನು ಮುಂದಿನಂತೆ ಶಾಪವನ್ನಿತ್ತನು—'ಅಮ್ಮ, ನನ್ನ ದೇಹ ಪೂರ್ತಿಯಾಗಿ ಬೆಳವಣಿಗೆಯನ್ನು ಹೊಂದುವ ಮೊದಲೇ ಮಗನನ್ನು ಪಡೆಯಬೇಕೆಂಬ ಆಸೆಯಿಂದ ನೀನು ನನ್ನನ್ನು ಹೆತ್ತೆ. ಈ ಕಾರಣಕ್ಕಾಗಿಯೇ, ಕಳೆದ ಐದುನೂರು ವರ್ಷಗಳಿಂದ ನೀನು ಅಸೂಯೆಪಡುತ್ತಬಂದಿರುವ ಕದ್ರುವಿನ ದಾಸಿಯಾಗಲಿರುವೆ. ಆದರೆ,

ಏಷ ಚ ತ್ವಾಂ ಸುತೋ ಮಾತರ್ದಾಸೀತ್ವಾನ್ಮೋಚಯಿಷ್ಯತಿ ।
ಯದ್ಯೇನಮಪಿ ಮಾತಸ್ತ್ವಂ ಮಾಮಿವಾಂಡವಿಭೇದನಾತ್ ॥ ೨೦ ॥

'ನೀನು ಎರಡನೆಯ ಮೊಟ್ಟೆಯನ್ನು (ಬೆಳೆಯುವ ಮೊದಲೇ) ಒಡೆದು ಇನ್ನೊಬ್ಬ ಮಗನನ್ನು ಪಡೆಯದಿದ್ದರೆ (ಮೊಟ್ಟೆ ತಾನಾಗಿಯೇ ಬಿರಿಯುವವರೆಗೆ ಕಾದೆಯಾದರೆ) ಆತನಿಂದ ನಿನ್ನ ದಾಸ್ಯತ್ವ ಕೊನೆಗೊಂಡೀತು.

ನೀನು ಅವಸರಿಸದಿರು. ಇನ್ನೊಬ್ಬ ಮಗನು ಬಲಶಾಲಿಯಾಗಲಿ ಎಂದು ಬಯಸುತ್ತ ಅವನ ಹುಟ್ಟಿಗಾಗಿ ಕಾದಿರು.'

ಏವಂ ಶಪ್ತ್ವಾ ತತಃ ಪುತ್ರೋ ವಿನತಾಮಂತರಿಕ್ಷಗಃ ॥ ೨೨ ॥

ಆ ಮಗನು ವಿನತೆಯನ್ನು ಈ ರೀತಿಯಾಗಿ ಶಪಿಸಿ ಅಂತರಿಕ್ಷದಲ್ಲಿ ಹೊರಟುಹೋದನು.

ಆದಿ/೩೫

ಈ ಶಾಪವನ್ನು ಕುರಿತಾದ ಇನ್ನೊಂದು ಉಲ್ಲೇಖ ಹೀಗಿದೆ. ಶೌನಕ ಸೌತಿಗೆ—

(ಭುಜಂಗಮಾನಾಂ ಶಾಪಸ್ಯ ಮಾತ್ರಾ ಚೈವ) ಸುತೇನ ಚ ।
ವಿನತಾಯಾಸ್ತ್ವಯಾ ಪ್ರೋಕ್ತಂ ಕಾರಣಂ ಸೂತನಂದನ ॥ ೧ ॥

'ಎಲೈ ಸೂತಪುತ್ರನೇ ! ಇದೇ ರೀತಿಯಾಗಿ ಅರುಣನು ತನ್ನ ತಾಯಿಯಾದ ವಿನತೆಗೆ ಇತ್ತ ಶಾಪದ ಕಾರಣವನ್ನು ಹೇಳಿರುವಿ.'

+ ವಿನತೆಯು ಕದ್ರುವಿನ ದಾಸ್ಯವನ್ನು ಹೊಂದಲು ಕಾರಣವೇನು ? ಅರುಣನು ವಿನತೆಗಿತ್ತ ಶಾಪವೋ ಇಲ್ಲವೆ ಅವಳು ಪಣವನ್ನು ಸೋತದ್ದೋ ? ಉಚ್ಚೈಃಶ್ರವ ಕುದುರೆಯ ಬಣ್ಣವನ್ನು ಕುರಿತು ವಿನತಾ ಹಾಗೂ ಕದ್ರು ಇವರಲ್ಲಿ ಪಣ ಏರ್ಪಟ್ಟು ಅದರ ಶರತ್ತು ಅವರಿಬ್ಬರಿಗೂ ಒಪ್ಪಿತವಾಗಿತ್ತು.

ಏಹಿ ಸಾರ್ಧಂ ಮಯಾ ದೀವ್ಯ ದಾಸೀಭಾವಾಯ ಭಾಮಿನಿ ॥ ೨೦ ॥ /೪
ಏವಂ ತೇ ಸಮಯಂ ಕೃತ್ವಾ ದಾಸೀಭಾವಾಯ ವೈ ಮಿಥಃ ॥ ೨೦ ॥ /೫

'ಎಲೈ ಭಾಮಿನಿಯೇ ! ನಾವು ದಾಸಿಯಾಗುವ ಶರತ್ತಿನಿಂದಲೇ ಈ ಪಣವನ್ನು ಇಟ್ಟು ಕೊಳ್ಳುವಾ.' ಈ ರೀತಿಯಾಗಿ ಸೋತವಳು ಇನ್ನೊಬ್ಬಳಿಗೆ ದಾಸಿಯಾಗುವ ಶರತ್ತಿನಿಂದಲೇ ಅವರಿಬ್ಬರೂ ಪಣ ಹೂಡಿದರು. ವಿನತಾ ಸೋತಳು. ಹೀಗಾಗಿ ಅವಳು ದಾಸಿಯಾದಳು.

ಅರುಣನು ವಿನತೆಗಿತ್ತ ಶಾಪದಲ್ಲಿ ಪಣ ಹಾಗೂ ಅವರ ಶರತ್ತಿನ ಉಲ್ಲೇಖವಿಲ್ಲ.

+ ಅಯಾಚಿತವಾದ ಶರತ್ತಿನ ಉಃಶಾಪ.

## ೧೯. ವಿಭಾವಸು > ಸುಪ್ರತೀಕ ಆದಿ/೨೯

ಸೌತಿಯು ಶೌನಕಾದಿ ಋಷಿಗಳಿಗೆ ಒಂದು ಸರೋವರದಲ್ಲಿರುವ ಆನೆ ಹಾಗೂ ಆಮೆಯ ಕಡುಹಗೆತನದ ಕಥೆಯನ್ನು ಹೇಳುತ್ತಲಿದ್ದಾನೆ.—

ವಿಭಾವಸು ಹಾಗೂ ಸುಪ್ರತೀಕರು ಮಹಾತಪಸ್ವಿಗಳಾದ ಅಣ್ಣತಮ್ಮಂದಿರಾಗಿದ್ದರು. ವಿಭಾವಸುವಿಗೆ ಸಂಪತ್ತನ್ನು ಪಾಲುಮಾಡುವುದು ಹಿಡಿಸಲಿಲ್ಲ. ಆದರೂ ಸುಪ್ರತೀಕ ತನ್ನ ಪಾಲಿಗಾಗಿ ಹಟ ತೊಟ್ಟನು. ವಿಭಾವಸುವು ತಮ್ಮನಿಗೆ ತಿಳಿಹೇಳಲು ಯತ್ನಿಸಿದನು. ಅಣ್ಣತಮ್ಮಂದಿರ ಜಗಳದ ಲಾಭವನ್ನೆತ್ತಲು ಹೊಂಚುಹಾಕುವ ಜನ ಇದ್ದೇ ಇರುತ್ತಾರೆ. ಪರಸ್ಪರರ ನಂಬಿಗೆಗೆ ಪೆಟ್ಟು ತಗಲಿದರೆ ಇಬ್ಬರೂ ಹಾಳಾಗುವುದು ಖಂಡಿತ. ಅವನು ಇವೇ ಮಾತುಗಳನ್ನು ತನ್ನ ತಮ್ಮನಿಗೆ ತಿಳಿಹೇಳಿದನು. ಆದರೆ ಈ ಮಾತುಗಳಿಂದ ಸುಪ್ರತೀಕನ ಮೇಲಾದ ಪರಿಣಾಮ ಸೊನ್ನೆ. ಹೀಗಾಗಿ—

ನಿಯಂತುಂ ನ ಹಿ ಶಕ್ಯಸ್ತ್ವಂ ಭೇದತೋ ಧನಮಿಚ್ಛಸಿ ।
ಯಸ್ಮಾತ್ ತಸ್ಮಾತ್ ಸುಪ್ರತೀಕ ಹಸ್ತಿತ್ವಂ ಸಮವಾಪ್ಸ್ಯಸಿ ॥ ೨೨ ॥

'ನಾನು ನಿನ್ನನ್ನು ನಿಯಂತ್ರಿಸಲಾರೆ. ಯಾರದೋ ಮಾತಿನಿಂದಾಗಿ ನೀನು (ನಮ್ಮಿಬ್ಬರಲ್ಲಿ ಹಗೆಯನ್ನು ಹುಟ್ಟಿಸಲೆಂದೇ) ಪಾಲಿಗಾಗಿ ಕೇಳುತ್ತಿರುವೆ. (ಇದು ಅವಿಚಾರದ ಕೃತ್ಯವಾದ್ದರಿಂದ) ನೀನು ಆನೆಯಾಗುವೆ (ಎಂದು ನಿನ್ನನ್ನು ಶಪಿಸುತ್ತೇನೆ).

## ೨೦. ಸುಪ್ರತೀಕ > ವಿಭಾವಸು ಆದಿ/೨೯

ನೋಡಿ : ಶಾಪ—ವಿಭಾವಸು > ಸುಪ್ರತೀಕ.

ಶಪಸ್ತ್ವೇತಂ ಸುಪ್ರತೀಕೋ ವಿಭಾವಸುಮಥಾಬ್ರವೀತ್ ।
ತ್ವಮಪ್ಯಂತರ್ಜಲಚರಃ ಕಚ್ಛಪಃ ಸಂಭವಿಷ್ಯಸಿ ॥ ೨೩ ॥
ಏವಮನ್ಯೋನ್ಯಶಾಪಾತ್ ತೌ ಸುಪ್ರತೀಕವಿಭಾವಸೂ ।
ಗಜಕಚ್ಛಪತಾಂ ಪ್ರಾಪ್ತಾವರ್ಥಾರ್ಥಂ ಮೂಢಚೇತಸೌ ॥ ೨೪ ॥

'ವಿಭಾವಸುವು (ಆನೆಯಾಗೆಂದು ಸುಪ್ರತೀಕನನ್ನು) ಶಪಿಸಿದ ಬಳಿಕ ಸುಪ್ರತೀಕನು ಅವನಿಗೆ ಮರಳಿ ಹೀಗೆಂದನು : 'ನೀನೂ ಕೂಡ ಯಾವಾಗಲೂ ನೀರಲ್ಲಿರುವ ಆಮೆಯಾಗು.' ಈ ರೀತಿಯಾಗಿ ಅವರಿಬ್ಬರೂ ದುಡ್ಡಿಗಾಗಿ ಬುದ್ಧಿಗೇಡಿಗಳಂತೆ ನಡೆದುಕೊಂಡು (ಮಾನವನಿಗಿಂತ ಕೀಳುಯೋನಿಯಲ್ಲಿ) ಆನೆ ಹಾಗೂ ಆಮೆಗಳಾಗಿ ಜನ್ಮವೆತ್ತಿದರು.'

+ ಎದುರು ಶಾಪ.

## ೨೧. ಶೃಂಗಿ > ಪರೀಕ್ಷಿತ ಆದಿ/೪೧

ಸೌತಿಯು ಶೌನಕನ ಪ್ರಶ್ನೆಯ ಮೇರೆಗೆ ಅವನಿಗೆ ಆಸ್ತಿಕ ಪದದ ವ್ಯುತ್ಪತ್ತಿಯನ್ನು ಹೇಳಿದನು. ಮುಂದೆ ಶೃಂಗಿಯು ಪರೀಕ್ಷಿತನಿಗಿತ್ತ ಶಾಪವನ್ನು ಕುರಿತು ಅವನಿಗೆ ಈ ರೀತಿಯಾಗಿ ಹೇಳಿದನು—

ಅಭಿಮನ್ಯುವಿನ ಮಗನಾದ ಪರೀಕ್ಷಿತನು ಒಂದು ಸಲ ಬೇಟೆಗಾಗಿ ಕಾಡಿಗೆ ಹೋದನು. ಅವನೊಂದು ಜಿಂಕೆಗೆ ಗುರಿಯಿಟ್ಟು ಅದನ್ನು ಬೆನ್ನಟ್ಟಿ ಒಬ್ಬನೇ ಓಡುತ್ತಲಿದ್ದನು. ಜಿಂಕೆ ಕಣ್ಮರೆಯಾಯಿತು. ಬದಲು ಧ್ಯಾನಮಗ್ನನಾದ ಒಬ್ಬ ಋಷಿ ಕಂಡನು. ಅವನು ಮೌನವ್ರತವನ್ನು ಕೈಕೊಂಡಿದ್ದನು. ಹೀಗಾಗಿ ಅರಸನು ಅವನನ್ನು ಜಿಂಕೆಯ ಬಗೆಗೆ ಕೇಳಿದ ಪ್ರಶ್ನೆಗೆ ಆತ ಉತ್ತರವನ್ನು ನೀಡಲಿಲ್ಲ. ಅದರಿಂದಾಗಿ ಕೆರಳಿದ ಅರಸು ಅವನ ಮೈಮೇಲೆ ಒಂದು ಸತ್ತ ಹಾವನ್ನು ಎಸೆದನು. ಆದರೂ ಆ ಋಷಿ ತುಟಿಪಿಟ್ಟೆನ್ನಲಿಲ್ಲ. ಕೃಶನೆಂಬ ಒಬ್ಬ ಋಷಿಕುಮಾರನು ನಡೆದ ಸಂಗತಿಯನ್ನು ಧ್ಯಾನಮಗ್ನನಾದ ಶಮೀಕ ಋಷಿಯ ಮಗನಿಗೆ ಹೇಳಿದನು. ಇದನ್ನು ಕೇಳಿ ಅವನು ಕೋಪದಿಂದ ಕಿಡಿಕಿಡಿಯಾದನು.

ಆವಿಷ್ಟಃ ಸ ಹಿ ಕೋಪೇನ ಶಶಾಪ ನೃಪತಿಂ ತದಾ ।
ವಾರ್ಯುಪಸ್ಪೃಶ್ಯ ತೇಜಸ್ವೀ ಕ್ರೋಧವೇಗಬಲಾತ್ಕೃತಃ ॥ ೧೧ ॥

ಕೋಪವನ್ನು ತಡೆಯಲಾಗದೆ ಅವನು ಕೈಯಲ್ಲಿ ನೀರು ತೆಗೆದುಕೊಂಡು ಆಚಮನವನ್ನು ಮಾಡಿ ಪರೀಕ್ಷಿತನನ್ನು ಈ ರೀತಿ ಶಪಿಸಿದನು—

ಶೃಂಗ್ಯುವಾಚ :—

ಯೋಽಸೌ ವೃದ್ಧಸ್ಯ ತಾತಸ್ಯ ತಥಾ ಕೃಚ್ಛ್ರಗತಸ್ಯ ಹ ।
ಸ್ಕಂಧೇ ಮೃತಂ ಸಮಾಸ್ರಾಕ್ಷೀತ್ ಪನ್ನಗಂ ರಾಜಕಿಲ್ಬಿಷೀ ॥ ೧೨ ॥
ತಂ ಪಾಪಮತಿಸಂಕ್ರುದ್ಧಸ್ತಕ್ಷಕಃ ಪನ್ನಗೇಶ್ವರಃ ।
ಆಶೀವಿಷಸ್ತಿಗ್ಮತೇಜಾ ಮದ್ವಾಕ್ಯಬಲಚೋದಿತಃ ॥ ೧೩ ॥
ಸಪ್ತರಾತ್ರಾದಿತೋ ನೇತಾ ಯಮಸ್ಯ ಸದನಂ ಪ್ರತಿ ।
ದ್ವಿಜಾನಾಮವಮಂತಾರಂ ಕುರೂಣಾಮಯಶಸ್ಕರಮ್ ॥ ೧೪ ॥

'ನನ್ನ ಮುಪ್ಪಿನ ತಂದೆ ಮೌನವನ್ನು ಆಚರಿಸುತ್ತಿರುವಾಗ ನೀನು ಅವನ ಹೆಗಲ ಮೇಲೆ ಹಾವಿನ ಹೆಣವನ್ನಿಸೆದೆ. ಶ್ರೇಷ್ಠ ಕುಲದಲ್ಲಿ ಹುಟ್ಟಿದವನಾಗಿಯೂ ನೀನಿಂಥ ನೀಚ ಕೆಲಸವನ್ನು ಮಾಡಿರುವೆ. ನೀನು ಕುರುಕುಲಕ್ಕೆ ಕಲಂಕನಾಗಿದ್ದು ಬ್ರಾಹ್ಮಣರನ್ನು ಅವಮರ್ಯಾದೆಯಿಂದ ಕಾಣುತ್ತಿರುವೆ. ಇಂದಿನಿಂದ ಏಳು ದಿನಗಳ ತರುವಾಯ ತೀಕ್ಷ್ಣನು, ನಂಜಿನವನು, ಕ್ರೋಧಿತನು ಹಾಗೂ ತೇಜಸ್ವಿನವನಾದ ನಾಗೇಂದ್ರತಕ್ಷಕನು ನಿನ್ನನ್ನು ಯಮಲೋಕಕ್ಕೆ ಕಳಿಸುವನೆಂಬುದು ನನ್ನ ಶಾಪವಾಗಿದೆ.'

ಇಷ್ಟು ನುಡಿದು ಶೃಂಗಿ ತನ್ನ ತಂದೆಯತ್ತ ತೆರಳಿದನು. ಸತ್ತ ಹಾವು ಅವನ ಮೈಮೇಲಿದ್ದುದನ್ನು ಕಣ್ಣಾರೆ ಕಂಡನು. ಹೀಗಾಗಿ ಅವನು ಇನ್ನಷ್ಟು ಕೆರಳಿದನು. ದುಃಖ ದಿಂದ ಅವನ ಕಣ್ಣಾಲಿಗಳು ತುಂಬಿಬಂದವು. ಅವನು ತನ್ನ ತಂದೆಗೆ ಹೀಗೆಂದನು—

ರಾಜ್ಞಾ ಪರೀಕ್ಷಿತಾ ಕೋಪಾದಶಪಂ ತಮಹಂ ನೃಪಮ್ ।
ಯಥಾರ್ಹತಿ ಸ ಏವೋಗ್ರಂ ಶಾಪಂ ಕುರುಕುಲಾಧಮಃ ।
ಸಪ್ತಮೇಽಹನಿ ತಂ ಪಾಪಂ ತಕ್ಷಕಃ ಪನ್ನಗೋತ್ತಮಃ ॥ ೧೮ ॥
ವೈವಸ್ವತಸ್ಯ ಸದನಂ ನೇತಾ ಪರಮದಾರುಣಮ್ ॥ ೧೯ ॥

'(ಪರೀಕ್ಷಿತನು ನಿಮ್ಮನ್ನು ಅವಮಾನಗೊಳಿಸಿದ್ದನ್ನು ಕೇಳಿ) ಕೆರಳಿ ಹೋಗಿ ಅವನನ್ನು ಶಪಿಸಿದೆ. ಆ ಕುರುಕುಲಾಧಮನನ್ನು ಹೀಗೆ ಶಪಿಸಲೇಬೇಕಿತ್ತು. ನಾಗರಾಜನಾದ ತಕ್ಷಕ ಇಂದಿನಿಂದ ಏಳು ದಿನಗಳೊಳಗಾಗಿ ಅವನನ್ನು ಯಮಲೋಕಕ್ಕೆ ಕಳುಹಿಸುವನು.'

ಶೃಂಗಿಯು ರಾಜನಿಗಿತ್ತ ಶಾಪ ಶಮೀಕನಿಗೆ ಇಷ್ಟವಾಗಲಿಲ್ಲ. ತಪಸ್ವಿಗಳು ಹೀಗೆ ಮಾಡುವುದು ಸರಿಕಾಣದು. ರಾಜನು ಅಪರಾಧವನ್ನು ಮಾಡಿದ್ದರೂ ಕೂಡ ಅವನು ತನ್ನ ಪ್ರಜೆಗಳ ಪರಿಪಾಲನೆಯನ್ನು ಮಾಡಿದವನೂ ಆಗಿರುತ್ತಾನೆ. ಅವನೊಂದಿಗೆ ಹಗೆ ಸಲ್ಲದು. ನಾವು ಕ್ಷಮಾಶೀಲರೇ ಆಗಿರಬೇಕು—ಎಂದೆಲ್ಲ ಅವನು ತನ್ನ ಮಗನಿಗೆ ಉಪದೇಶ ವನ್ನು ನೀಡಿದನು.

ಕಸ್ಮಾದಿದಂ ತ್ವಯಾ ಬಾಲ್ಯಾತ್ ಸಹಸಾ ದುಷ್ಕೃತಂ ಕೃತಮ್ ।
ನ ಹ್ಯರ್ಹತಿ ನೃಪಃ ಶಾಪಮಸ್ಮತ್ತಃ ಪುತ್ರ ಸರ್ವಥಾ ॥ ೩೩ ॥

'ಎಲೈ ಮಗು! (ಪರೀಕ್ಷಿತ)ರಾಜನಿಗೆ ಶಾಪವನ್ನೀಯುವ ಕೆಟ್ಟ ಕೆಲಸ ನಿನ್ನಿಂದಾ ಯಿತು. (ಏನಿದ್ದರೂ) ರಾಜನನ್ನು ಶಪಿಸುವುದು ತಪ್ಪು' ಎಂದು ಅವನು ಖಂಡಿತವಾಗಿ ಹೇಳಿದನು.

**ಆದಿ/೪೨**

ಶೃಂಗಿಯು ತನ್ನ ತಂದೆಯ ಮಾತುಗಳನ್ನು ಆಲಿಸಿ ಅವನಿಗೆ ಮತ್ತೆ ಹೀಗೆಂದನು—

ಯದ್ಯೇತತ್ ಸಾಹಸಂ ತಾತ ಯದಿ ವಾ ದುಷ್ಕೃತಂ ಕೃತಮ್ ।
ಪ್ರಿಯಂ ವಾಪ್ಯಪ್ರಿಯಂ ವಾ ತೇ ವಾಗುಕ್ತಾ ನ ಮೃಷಾ ಭವೇತ್ ॥ ೧ ॥
ನೈವಾನ್ಯಥೇದಂ ಭವಿತಾ ಪಿತರೇಷ ಬ್ರವೀಮಿ ತೇ ।
ನಾಹಂ ಮೃಷಾ ಬ್ರವೀಮ್ಯೇವಂ ಸ್ವೈರೇಷ್ವಪಿ ಕುತಃ ಶಪನ್ ॥ ೨ ॥

'ತಾತ! ನನ್ನ ಕೃತ್ಯ ಅವಿಚಾರಿತನದ್ದು ಎನ್ನಿನಬಹುದು ಇಲ್ಲವೆ ಅದೊಂದು ದುಷ್ಕೃತ(ವೂ) ಆಗಿರಲು ಸಾಕು. ಪ್ರಿಯವಾಗಿರಬಹುದು ಇಲ್ಲವೆ ಅಪ್ರಿಯವಾಗಿರ(ಲೂ) ಸಾಕು ಏನಿದ್ದರೂ ನನ್ನ ಬಾಯಿಂದ ಹೊರಟ ಮಾತು ನಿಜವಾಗಿಯೇ ಆಗುವುದು, ಸುಳ್ಳಾಗಲಾರದು ಏಕೆಂದರೆ ಹಾಸ್ಯಕ್ಕಾಗಿಯೂ ನಾನು ಸುಳ್ಳಾಡಿದವನಲ್ಲ. ಅಂದ ಬಳಿಕ ಶಾಪವನ್ನೀಯುವಾಗ ಸುಳ್ಳಾಡುವೆನೆ?'

ತನ್ನ ಮಗನ ಶಬ್ದಸಾಮರ್ಥ್ಯ ಹಾಗೂ ಅದರ ಅಮೋಘವಾದ ಪರಿಣಾಮ ಶಮೀಕನಿಗೆ (ಅದೆಂದಿಗೂ) ಚೆನ್ನಾಗಿ ಗೊತ್ತಿದ್ದವುಗಳೇ ಹೀಗಾಗಿ ಅವನು ಹೀಗೆಂದನು—

ಮಮ ಪುತ್ರೇಣ ಶಪ್ತೋಽಸಿ ಬಾಲೇನ ಕೃಶಬುದ್ಧಿನಾ ॥ ೧೨ ॥

'(ನಿನ್ನಿಂದ ನನಗೆ ಅಪಮರ್ಯಾದೆ ಆದಕಾರಣ) ಹುಡುಗುಬುದ್ಧಿಯಿಂದಾಗಿ ನನ್ನ ಮಗನು ಕೋಪದಿಂದ ಕೆರಳಿ ನಿನ್ನನ್ನು ಶಪಿಸಿದನು' ಎಂದು ರಾಜನಿಗೆ ತಿಳಿಸುವವನಿದ್ದೇನೆ

ಶೃಂಗಿಯು ಉಗ್ರತಪಸ್ವಿಯಾಗಿದ್ದರೂ ಅವನು ರಾಜನನ್ನು ಶಪಿಸಬೇಕಿರಲಿಲ್ಲ—ಎಂದು ಶಮೀಕನಿಗೆ ಮನದಲ್ಲಿ ಅನ್ನಿಸುತ್ತಿತ್ತು ಆದುದರಿಂದ ಅವನು ಗೌರಮುಖನೆಂಬ ತನ್ನೊಬ್ಬ ಶಿಷ್ಯನನ್ನು ರಾಜನ ಬಳಿಗೆ ಕಳಿಸಿದನು ನಡೆದುದನ್ನೆಲ್ಲ ವಿವರಿಸಿದನು ಶಮೀಕನು ಅವಿಚಲನಾಗಿದ್ದರೂ ಅವನಿಗೆ ಕೆರಳಿದ ತನ್ನ ಮಗನನ್ನು ಹದ್ದುಬಸ್ತಿನಲ್ಲಿ ಇಡಲಾಗಲಿಲ್ಲ ವೆಂದು ಗೌರಮುಖನು ರಾಜನಿಗೆ ಅರುಹಿದನು

ತೇನ ಶಪ್ತೋಽಸಿ ರಾಜೇಂದ್ರ ಪಿತುರಜ್ಞಾತಮದ್ಯ ವೈ ।
ತಕ್ಷಕಃ ಸಪ್ತರಾತ್ರೇಣ ಮೃತ್ಯುಸ್ತೇವ ಭವಿಷ್ಯತಿ ॥ ೨೦ ॥

'ಇಂದಿನಿಂದ ಏಳನೆಯ ದಿನ ತಕ್ಷಕನಿಂದ ನಿನಗೆ ಸಾವು ಬರಲಿದೆಯೆಂದು ಶೃಂಗಿಯು ನಿನ್ನನ್ನು ಶಪಿಸಿದ್ದರಿಂದ ನಿನಗೆ ತೋಚಿದಂತಹ ಉಪಾಯದಿಂದ ನಿನ್ನನ್ನು ರಕ್ಷಿಸಿಕೋ' ಎಂದು ಶಮೀಕನ ಸಂದೇಶವನ್ನು ಗೌರಮುಖನು ಪರೀಕ್ಷಿತರಾಜನಿಗೆ ಹೇಳಿದನು. ಅದನ್ನು ಕೇಳಿ ರಾಜನು ತುಂಬ ದುಃಖಿತನಾದನು ಅವನಿಗೆ ತನ್ನ ಘೋರವಾದ ತಪ್ಪಿನ ಜೊತೆಗೆ ಶೃಂಗಿಯ ಶಾಪವನ್ನು ಮಾರ್ಪಡಿಸಲಾಗದೆಂಬುದರ ಅರಿವು ಉಂಟಾಯಿತು.

ಗೊತ್ತಾದ ದಿನ ರಾಜನನ್ನು ಕಚ್ಚಲೆಂದು ತಕ್ಷಕನು ಮುದುಕ ಬ್ರಾಹ್ಮಣನ ರೂಪವನ್ನು ಧರಿಸಿ ಅರಮನೆಯತ್ತ ಹೊರಟನು ದಾರಿಯಲ್ಲಿ ಅವನಿಗೆ ಇನ್ನೊಬ್ಬ ಬ್ರಾಹ್ಮಣ ಭೆಟ್ಟಿ ಯಾದನು. ಅವನ ಹೆಸರು ಕಾಶ್ಯಪ. ಅವನಲ್ಲಿ ನಂಜನ್ನಿಳಿಸುವ ಸಾಮರ್ಥ್ಯವಿತ್ತು ಅವನಿಗೆ ಈ ಶಾಪದ ಸುದ್ದಿಯೂ ತಿಳಿದಿತ್ತು. ಹೀಗಾಗಿ ಅವನು ಹಣವನ್ನು ಗಳಿಸಲೆಂದು ರಾಜನಲ್ಲಿಗೆ ಹೊರಟಿದ್ದನು ಹಾಗೆಂದು ಅವನು ಮುಪ್ಪಿನ ಬ್ರಾಹ್ಮಣನಾದ ತಕ್ಷಕನಿಗೆ

ಹೇಳಿದನು. ತಕ್ಷಕನು ಅವನಿಗೆ ಒಂದು ಮರವನ್ನು ಕಚ್ಚಿ ಅದರ ನಂಜನ್ನು ಇಳಿಸಲು ಹೇಳಿ ಅವನ ವೈದ್ಯವಿದ್ಯೆಯನ್ನು ಪರೀಕ್ಷಿಸಿದನು. ಅವನ ಈ ಸಾಮರ್ಥ್ಯವನ್ನು ಗಮನಿಸಿ ಅವನಿಗೆ ಕೈತುಂಬ ದುಡ್ಡು ಕೊಟ್ಟು ರಾಜನಲ್ಲಿಗೆ ಹೋಗಗೊಡದೆ ಅವನನ್ನು ಅಲ್ಲಿಂದಲೇ ಹಿಂದಕ್ಕೆ ಕಳುಹಿಸಿದನು.

ಆದಿ/೪೩

ಅರಮನೆಯಲ್ಲಿ ಯಾರೂ ಕಾಲಿಡದಂತೆ ರಾಜನು ಕಟ್ಟುನಿಟ್ಟಾದ ಕಾವಲನ್ನಿಟ್ಟಿದ್ದನು. ಇದನ್ನು ಕಂಡು ತಕ್ಷಕನು ಕೆಲವು ನಾಗರಹಾವುಗಳಿಗೆ ಬ್ರಾಹ್ಮಣರ ರೂಪವನ್ನು ಧರಿಸಿ ಹಣ್ಣುಗಳೊಂದಿಗೆ ಅರಮನೆಗೆ ಹೋಗಲು ಹೇಳಿಕಳುಹಿಸಿದನು. ಹಣ್ಣುಗಳನ್ನು ಕಂಡು ರಾಜನಿಗೆ ಅವುಗಳನ್ನು ತಿನ್ನುವ ಬಯಕೆಯಾಯಿತು. ತಕ್ಷಕ ಒಂದು ಹಣ್ಣಿನಲ್ಲಿ ಬಾಲ ಹುಳದ ರೂಪದಲ್ಲಿ ಇದ್ದನು.

ವಿಧಿನಾ ಸಂಪ್ರಯುಕ್ತೋ ವೈ ಋಷಿವಾಕ್ಯೇನ ತೇನ ತು ।
ಯಸ್ಮಿನ್ನೇವ ಫಲೇ ನಾಗಸ್ತಮೇವಾಭಕ್ಷಯತ್ ಸ್ವಯಮ್ ॥ ೩೦ ॥

'ಶೃಂಗಿಯ ಶಾಪದ ಸಾಮರ್ಥ್ಯದಿಂದಾಗಿ ರಾಜನು ತನ್ನ ದುರದೃಷ್ಟಕ್ಕೆ ತಕ್ಷಕನು ಬಾಲ ಹುಳುವಾಗಿದ್ದ ಹಣ್ಣನ್ನೇ ತಿಂದನು.' ತಿಂದ ಕೂಡಲೇ ಸತ್ತುಹೋದನು.

ಆದಿ/೫೦

ಜನಮೇಜಯನ ಕೇಳಿಕೆಯ ಮೇರೆಗೆ ಅಮಾತ್ಯರು ಅವನಿಗೆ ಪರೀಕ್ಷಿತರಾಜನ ವೃತ್ತಾಂತ ವನ್ನು ಹೇಳಿದರು. ಅವರಲ್ಲಿ ಈ ಶಾಪದ ಉಲ್ಲೇಖವಿದೆ. ಅಮಾತ್ಯರು ಜನಮೇಜಯನಿಗೆ ಹೀಗೆಂದರು—

ಶಶಾಪಾಥ ಮಹಾತೇಜಾಃ ಪಿತರಂ ತೇ ರುಷಾನ್ವಿತಃ ।
ಋಷೇಃ ಪುತ್ರೋ ಮಹಾತೇಜಾ ಬಾಲೋಽಪಿ ಸ್ಥವಿರದ್ಯುತಿಃ ॥ ೮ ॥

(ಶಮೀಕ ಋಷಿಯನ್ನು) ಅವಮಾನಗೊಳಿಸುವ ಪರೀಕ್ಷಿತನ ಕೃತ್ಯವು ಕೃಶನಿಂದ ಚಿಕ್ಕ ವಯಸ್ಸಿನವನಾದರೂ ತೇಜಃಪೂಜನಾದ ಶೃಂಗಿಗೆ ತಿಳಿದುಬರುತ್ತಲೇ ಅವನು ಕೋಪಾ ವಿಷ್ಟನಾಗಿ ಶಾಪವನ್ನೀಯುವ ಯೋಚನೆಯನ್ನು ಮಾಡಿದನು.

ಅನಾಗಸಿ ಗುರೌ ಯೋ ಮೇ ಮೃತಂ ಸರ್ಪಮವಾಸೃಜತ್ ।
ತಂ ನಾಗಸ್ತಕ್ಷಕಃ ಕ್ರುದ್ಧಸ್ತೇಜಸಾ ಪ್ರದಹಿಷ್ಯತಿ ॥ ೧೦ ॥
ಆಶೀವಿಷಸ್ತಿಗ್ಮತೇಜಾ ಮದ್ವಾಕ್ಯಬಲಚೋದಿತಃ ।
ಸಪ್ತರಾತ್ರಾದಿತಃ ಪಾಪಂ ಪಶ್ಯ ಮೇ ತಪಸೋ ಬಲಮ್ ॥ ೧೧ ॥
ಇತ್ಯುಕ್ತ್ವಾ ಪ್ರಯಯೌ ತತ್ರ ಪಿತಾ ಯತ್ರಾಸ್ಯ ಸೋಽಭವತ್ ।
ದೃಷ್ಟ್ವಾ ಚ ಪಿತರಂ ತಸ್ಮೈ ತಂ ಶಾಪಂ ಪ್ರತ್ಯವೇದಯತ್ ॥ ೧೨ ॥

'ನನ್ನ ತಂದೆಯ ಮೈಮೇಲೆ ಸತ್ತ ಹಾವನ್ನೆಸೆಯುವವನು ನನ್ನ ಶಾಪಸಾಮರ್ಥ್ಯ ದಿಂದ ಪ್ರೇರಿತನಾದ, ತೀಕ್ಷ್ಣವಾದ ನಂಜಿನಿಂದ ಕೂಡಿದ ತಕ್ಷಕನಿಂದ ಏಳನೆಯ ದಿನ ಅವನ ನಂಜಿನ ಅಗ್ನಿಯಲ್ಲಿ ಸುಟ್ಟು ಬೂದಿಯಾಗಲಿ. ನನ್ನ ತಪಸ್ಸಿನ ಪ್ರಭಾವವನ್ನು

ಕಂಡುಕೊಳ್ಳಲಿ' ಎಂದು ನುಡಿದು ಶೃಂಗಿಯು ನಿನ್ನ ತಂದೆಯಾದ (ಜನಮೇಜಯನ ತಂದೆಗೆ) ಪರೀಕ್ಷಿತನನ್ನು ಶಪಿಸಿದನು.

ಇಷ್ಟು ನುಡಿದು ಶೃಂಗಿಯು ತನ್ನ ತಂದೆಯಾದ ಶಮೀಕನ ಬಳಿಗೆ ಹೋಗಿ ತಾನು ಶಾಪವನ್ನಿತ್ತ ಸಂಗತಿಯನ್ನು ಅವನಿಗೆ ಹೇಳಿದನು. ಶಮೀಕ ಋಷಿಯು ತನ್ನ ಶಿಷ್ಯನಾದ ಗೌರಮುಖನ ಮೂಲಕ ಪರೀಕ್ಷಿತನಿಗೆ ಹೀಗೆಂದು ತಿಳಿಸಿದನು—

ಶಪ್ತೋಽಸಿ ಮಮ ಪುತ್ರೇಣ ಯಂತ್ತೋ ಭವ ಮಹೀಪತೇ ॥ ೧೪ ॥

'ಎಲೈ ರಾಜನೇ ! (ಶೃಂಗಿಯೆಂಬ) ನನ್ನ ಮಗನು ನಿನಗೆ ಶಾಪವನ್ನಿತ್ತಿರುವನು. ಹೀಗಾಗಿ ಎಚ್ಚರದಿಂದಿರು.'

## ೨೨. ಜರತ್ಕಾರು (ಋಷಿ) > ವಾಸುಕಿ

ಆದಿ/೪೮

ಸೌತಿಯು ಶೌನಕಾದಿ ಋಷಿಗಳಿಗೆ ಆಸ್ತಿಕಾಖ್ಯಾನವನ್ನು ಹೇಳುತ್ತಲಿದ್ದಾನೆ.

ವಾಸುಕಿಯು ತನ್ನ ಸೋದರಿಯಾದ ಜರತ್ಕಾರುವನ್ನು ಋಷಿ ಜರತ್ಕಾರುವಿಗೆ ಕೊಟ್ಟು ಮದುವೆ ಮಾಡಿದನು. ಅದಕ್ಕಾಗಿ ಒಂದು ವಿಶಿಷ್ಟವಾದ ಉದ್ದೇಶವನ್ನು ಇರಿಸಿಕೊಂಡಿದ್ದನು. ಆ ಉದ್ದೇಶಪೂರ್ತಿಗಾಗಿ ಅವಳಿಗೊಂದು ಗಂಡುಮಗು ಹುಟ್ಟುವುದು ಆವಶ್ಯಕವೆನ್ನಿಸಿತ್ತು. ಆದರೆ ಮಗನು ಹುಟ್ಟುವ ಚಿಹ್ನೆ ಕಂಡುಬರುವ ಮೊದಲೇ ಋಷಿಯು ಅವಳನ್ನು ಬಿಟ್ಟುಬಿಟ್ಟನು. ಹೀಗಾಗಿ ವಾಸುಕಿ ಚಿಂತೆಗೀಡಾಗಿದ್ದನು. ಆದರೆ ವಾಸ್ತವತೆ ಬೇರೆಯದೇ ಆಗಿತ್ತು. ಋಷಿಯು ಅವಳನ್ನು ಬಿಟ್ಟುಕೊಡುವ ಕಾಲಕ್ಕೆ ಅವಳು ಬಸುರಾಗಿದ್ದಳು. ವಾಸುಕಿಗೆ ಮಾತ್ರ ಈ ಸಂಗತಿ ತಿಳಿದಿರಲಿಲ್ಲ. ಹೀಗಾಗಿ ಅವನು ಗಂಡ ಹೆಂಡತಿಯು ಕೇಳಬಾರದ ಗುಟ್ಟಿನ ಮಾತುಗಳನ್ನು ಕುರಿತು ಕೂಡ ಅವಳನ್ನು ಕೇಳಿದನು. ಹೀಗೆ ಅವಳ ವ್ಯಕ್ತಿಗತವಾದ ಬಾಳನ್ನು ಕುರಿತು ಕೇಳಕೂಡದೆಂಬುದರ ಅರಿವು ಅವನಿಗಿತ್ತು. ಬೇಕಿದ್ದರೆ ಅವನು ಇದನ್ನು ಕುರಿತು ಆ ಋಷಿಯನ್ನೇ ಕೇಳಬೇಕಿತ್ತು. ಆದರೆ ಅವನು ಅವಳಿಗೆ ಹೀಗೆಂದನು—

ನೈನಮನ್ವಾಗಮಿಷ್ಯಾಮಿ ಕದಾಚಿದ್ಧಿ ಶಪೇತ್ ಸ ಮಾಮ್ ॥ ೭ ॥

'(ಋಷಿಯು ಶೀಘ್ರಕೋಪಿ ನನಗೆ ಗೊತ್ತಿರುವ ಕಾರಣ) ಅವನಲ್ಲಿಗೆ ಹೋಗಿ (ಎಲ್ಲವನ್ನೂ ಕುರಿತು ಅವನನ್ನು ಕೇಳಲು) ನಾನು ಅಸಮರ್ಥನು. ಅವನು ನನ್ನನ್ನು ಶಪಿಸಿಯಾನು (ಎಂಬ ಹೆದರಿಕೆ ನನಗೆ).'

+ ಈ ಶಾಪವನ್ನು ನೀಡಲಾಗಿಲ್ಲ. ಋಷಿಯು ತನ್ನನ್ನು ಶಪಿಸುವನೆಂಬ ಹೆದರಿಕೆ ವಾಸುಕಿಯಲ್ಲಿತ್ತು.

## ೨೩. ಆಸ್ತಿಕ > ನಾಗ

ಆದಿ/೫೮

ಸೌತಿಯು ಶೌನಕಾದಿ ಋಷಿಗಳಿಗೆ ಆಸ್ತಿಕಾಖ್ಯಾನವನ್ನು ಹೇಳುತ್ತಲಿದ್ದಾನೆ.

ತಕ್ಷಕ ಇಂದ್ರನ ಕೈಯಿಂದ ಜಾರಿಕೊಂಡರೂ ಅಗ್ನಿಗೆ ಬೀಳಲಿಲ್ಲ. ಅವನು ಅಂತರಾಳದಲ್ಲಿ ನೇತುಬಿದ್ದುದೇ ಇದಕ್ಕೆ ಕಾರಣ. ಇದೊಂದು ಅದ್ಭುತವಾದ ಪವಾಡವಾಗಿತ್ತು.

ಆಸ್ತಿಕನು ಅವನಿಗೆ ಅಲ್ಲಿಯೇ ಇರಲು ಹೇಳಿದ್ದರಿಂದ ಇದು ಸಾಧ್ಯವಾಯಿತು. ಇದನ್ನು ಕಂಡು ಜನಮೇಜಯನಿಗೆ ಆಸ್ತಿಕನ ಸಾಮರ್ಥ್ಯದ ಅರಿವುಂಟಾಯಿತು. ಅವನು ಯಜ್ಞವನ್ನು ನಿಲ್ಲಿಸಿದನು. ನಾಗಗಳ ಸಂಹಾರ ನಿಂತಿತು. ಹೀಗಾಗಿ ಅವೆಲ್ಲ ಸಂತೋಷಪಟ್ಟವು. ಆಸ್ತಿಕನಿಗೆ ತಮ್ಮ ಕೃತಜ್ಞತೆಗಳನ್ನು ವ್ಯಕ್ತಪಡಿಸಲು ಬಯಸಿದವು. ಅವನಿಗಾಗಿ ತಾವು ಏನನ್ನು ಮಾಡಬಹುದೆಂದು ಅವನನ್ನು ಕೇಳಿದವು. ಅದಕ್ಕೆ ಆಸ್ತಿಕನು ಹೀಗೆಂದನು : 'ಸಂಜೆ-ಮುಂಜಾವುಗಳಲ್ಲಿ ನನ್ನ ಈ ಆಖ್ಯಾನವನ್ನು ಆಲಿಸುವವರಿಗೆ, ನೆನೆಯಿಸುವವರಿಗೆ ನಿಮ್ಮಿಂದ ಅಭಯ ದೊರಕಲಿ.' ನಾಗಗಳು ಒಪ್ಪಿಕೊಂಡವು. ಆದರೆ,

ಆಸ್ತೀಕಸ್ಯ ವಚಃ ಶ್ರುತ್ವಾ ಯಃ ಸರ್ಪೋ ನ ನಿವರ್ತತೇ ।
ಶತಧಾ ಭಿದ್ಯತೇ ಮೂರ್ಧ್ನಿ ಶಿಂಶವೃಕ್ಷಫಲಂ ಯಥಾ ॥ ೨೬ ॥

'ಆಸ್ತಿಕನ ಮಂತ್ರದ ಉಚ್ಚಾರವನ್ನು ಕೇಳಿಯೂ (ಅಂಥವನಿಂದ) ಹಾವುಗಳು ಹೊರಟುಹೋಗದೆ ಇದ್ದರೆ ಅವುಗಳ ಹೆಡೆಗಳು ಶಿಂಶವೃಕ್ಷದ ಹಣ್ಣುಗಳಂತೆ ನೂರಾರು ತುಣುಕುಗಳಾಗುವವು.'

+ ಶಾಪದ ಖಚಿತವಾದ ಉಲ್ಲೇಖವಿಲ್ಲ. ಆದರೂ ಈ ಉದ್ಗಾರಗಳು ಶಾಪದಂತೆಯೇ ಇವೆ. ಇದು ಶಾಪವೇ ಆಗಿದ್ದರೆ ಶರತ್ತಿನದು.

## ೨೪. ದ್ರೌಪದಿ > ಕೌರವರು

ಆದಿ/೬೨

(ಮಹಾ)ಭಾರತದ ಆಖ್ಯಾನವನ್ನು ಸಂಕ್ಷಿಪ್ತವಾಗಿ ಆಲಿಸಿದ್ದರಿಂದ ಜನಮೇಜಯನಿಗೆ ಸಮಾಧಾನ ಎನ್ನಿಸಲಿಲ್ಲ. ಹೀಗಾಗಿ ಅವನು ವೈಶಂಪಾಯನನಿಗೆ ಹಲವಾರು ಪ್ರಶ್ನೆಗಳನ್ನು ಕೇಳಿದನು. ಅವುಗಳಲ್ಲಿಯ ಒಂದು ಮುಂದಿನಂತಿದೆ—

ಕಥಂ ಸಾ ದ್ರೌಪದೀ ಕೃಷ್ಣಾ ಕ್ಲಿಶ್ಯಮಾನಾ ದುರಾತ್ಮಭಿಃ ।
ಶಕ್ತಾ ಸತೀ ಧಾರ್ತರಾಷ್ಟ್ರಾನ್ ನಾದಹತ್ ಕ್ರೋಧಚಕ್ಷುಷಾ ॥ ೭ ॥

'ದುಷ್ಟಬುದ್ಧಿಯ ಕೌರವರು (ಪಾಂಡವರೊಡನೆ ದ್ರೌಪದಿಯನ್ನು) ತುಂಬ ಪೀಡಿಸಿದಾಗ ದ್ರೌಪದಿಯು ತನ್ನಲ್ಲಿ ಸಾಮರ್ಥ್ಯವಿದ್ದೂ ಕೂಡ ತನ್ನ ಕೋಪದಿಂದ ಕಿಡಿಕಿಡಿಯಾದ ಕಣ್ಣುಗಳಿಂದ ಆ ಕೌರವರನ್ನು ಸುಟ್ಟುಬಿಡಲಿಲ್ಲವೇಕೆ ?'

**ಸಭಾ/೮೦**

ವನವಾಸಕ್ಕೆಂದು ಹೊರಟಾಗ ದ್ರೌಪದಿಯ ಬಾಯಿಂದ ಕೌರವರನ್ನು ಉದ್ದೇಶಿಸಿ ಈ ಬಗೆಯ ಉದ್ಗಾರಗಳು ಹೊರಬಂದವು—

ಯತ್ಕೃತೇಽಹಮಿದಂ ಪ್ರಾಪ್ತಾ ತೇಷಾಂ ವರ್ಷೇ ಚತುರ್ದಶೇ ।
ಹತಪತ್ಯೋ ಹತಸುತಾ ಹತಬಂಧುಜನಪ್ರಿಯಾಃ ॥ ೨೦ ॥
ಬಹುಶೋಣಿತದಿಗ್ಧಾಂಗ್ಯೋ ಮುಕ್ತಕೇಶ್ಯೋ ರಜಸ್ವಲಾಃ ।
ಏವಂ ಕೃತೋದಕಾ ಭಾರ್ಯಾಃ ಪ್ರವೇಕ್ಷ್ಯಂತಿ ಗಜಾಹ್ವಯಮ್ ॥ ೨೧ ॥

'ಯಾವ ಕೌರವರಿಂದಾಗಿ ನನ್ನ ಮೇಲೆ ಈ ಸಂಕಟ ಬಂದೆರಗಿತೋ ಅಂಥವರ ಹೆಂಡಂದಿರು ಇಂದಿನಿಂದ ಹದಿನಾಲ್ಕನೇ ವರ್ಷ ತಮ್ಮ ಗಂಡಂದಿರು, ಮಕ್ಕಳನ್ನು ಕಳೆದು

ಕೊಳ್ಳುವರು. ಅವರ ಬಂಧುಗಳು, ಅಣ್ಣತಮ್ಮಂದಿರು ಸಾವನ್ನಪ್ಪುವರು. ಮುಟ್ಟಾದ ಆ ಮಹಿಳೆಯರ ಬಟ್ಟೆಗಳೆಲ್ಲ ನೆತ್ತರಿನಿಂದ ಮಲಿನಗೊಂಡಾವು. ತಲೆಗೂದಲುಗಳ ಕಟ್ಟು ಬಿಚ್ಚಿಯಾವು, ಅಲ್ಲದೆ ತಮ್ಮ ಸತ್ತುಹೋದ ಗಂಡಂದಿರಿಗೆ ತಿಲಾಂಜಲಿಯನ್ನರ್ಪಿಸಿಯೇ ಅವರು ಹಸ್ತಿನಾಪುರದಲ್ಲಿ ಕಾಲಿಟ್ಟಾರು.'

+ ಇವೆರಡೂ ಉಲ್ಲೇಖಗಳಲ್ಲಿ ಶಾಪ ಎಂಬ ಖಚಿತವಾದ ಪದ ಇಲ್ಲದೆ ಹೋದರೂ (ಆದಿ/೬೨) ಅವು ಒಳಗೊಂಡ ಅರ್ಥ ಶಾಪ ಎಂದೇ ಆಗಿದೆ. ದ್ರೌಪದಿಯ ಉದ್ಗಾರ ವೆಂದರೆ ಶಾಪವಾಣಿಯೇ ಸರಿ. ದ್ರೌಪದಿಯ ಬಳಿ ಶಾಪವನ್ನೀಯುವ ಸಾಮರ್ಥ್ಯ ಇಲ್ಲ ವೆಂದು ಬಗೆದರೆ ಮಾತ್ರ ಅವಳೀ ಮಾತುಗಳು ಬರಿ ಅವಳ ಕಳವಳ ಎಂದೆನ್ನಬಹುದಷ್ಟೆ.

ಈ ಶಾಪ ಸಂದೇಹಾಸ್ಪದವಾಗಿ ಕಂಡರೂ ದ್ರೌಪದಿಯ ಉದ್ಗಾರದಲ್ಲಿಯ ದಾಹ ಕತೆಯು ನಿಖರವಾಗಿದೆ. ದ್ರೌಪದಿಯ ಉದ್ಗಾರಗಳೆಂದರೆ ಭವಿಷ್ಯ ಹೇಳುವುದಲ್ಲ.

## ೨೫. ಬ್ರಹ್ಮದೇವ > ಅದ್ರಿಕಾ ಆದಿ/೬೩

ವೈಶಂಪಾಯನ ಜನಮೇಜಯನಿಗೆ ಉಪರಿಚರ ವಸುವಿನ ಚರಿತ್ರೆಯನ್ನು ಹೇಳುತ್ತಲಿದ್ದಾನೆ—

ಉಪರಿಚರ ವಸು ರಾಜ ಉಗ್ರತಪಸ್ವಿಯಾಗಿದ್ದನು. ಅವನು ತನ್ನ ತಪೋಬಲ ದಿಂದಾಗಿ ಇಂದ್ರಪದವಿಯನ್ನು ಕೂಡ ಪಡೆಯಬಲ್ಲನೆಂಬ ಹೆದರಿಕೆ ದೇವತೆಗಳಿಗಿತ್ತು. ಅವರು ನೋವಾಗದ ರೀತಿಯಲ್ಲಿ ಅವನನ್ನು ತಪಶ್ಚರ್ಯೆಯಿಂದ ದೂರವಿರಿಸಿದರು. ಭೂಮಿಯಲ್ಲಿ ಒಳ್ಳೆಯ ನಿಯಂತ್ರಕನಿಲ್ಲದ ಕಾರಣ ಅಲ್ಲಿ ಧರ್ಮಸಂಕರ ಆಗುವ ಭಯ ವಿದೆ. ಆದುದರಿಂದ ಭೂಮಿಯನ್ನು ಸರಿಯಾಗಿ ಪಾಲಿಸಬೇಕೆಂದು ಇಂದ್ರನು ಅವನನ್ನು ಕೇಳಿಕೊಂಡನು. ವಸುವು ಒಪ್ಪಿಕೊಂಡನು. ಇಂದ್ರನು ಅವನಿಗೆ ದಿವ್ಯವಾದ ವಿಮಾನ, ಎಂದಿಗೂ ಬಾಡದ ಕಮಲಗಳ ಮಾಲೆ, ಬೆತ್ತದ ಬಡಿಗೆ ಮೊದಲಾದ ಉಡುಗೊರೆಗಳನ್ನು ನೀಡಿದನು. ಅವನನ್ನು ಸತ್ಕರಿಸಿದನು.

ಒಂದು ನಲ ಕೋಲಾಹಲವೆಂಬ ಪರ್ವತವು ವಸುವಿನ ರಾಜಧಾನಿಯ ಪಕ್ಕದಲ್ಲಿ ಹರಿಯುತ್ತಿದ್ದ ಶುಕ್ತಿಮತಿ ಎಂಬ ಹೊಳೆಯೊಂದಿಗೆ ಕೂಡಿಕೊಂಡಿತು. ಹೀಗಾಗಿ ಆ ಹೊಳೆಗೆ ಅವಳಿಗಳಾದವು. ಆ ಹೊಳೆಯು ಅವುಗಳನ್ನು ರಾಜನಿಗೆ ಅರ್ಪಿಸಿತು. ಅವನು ಅವಳಿಗಳಲ್ಲಿಯ ಗಂಡುಮಗನನ್ನು ದಂಡನಾಯಕನನ್ನಾಗಿ ಮಾಡಿದನು. ಹೆಣ್ಣನ್ನು ತಾನೇ ಮದುವೆಯಾದನು. ಅವಳು ಋತುಮತಿಯಾಗುವ ದಿನಗಳು ಬಂದವು, ಗಂಡನನ್ನು ಕೂಡಿಕೊಳ್ಳಬೇಕೆಂದು ಬಯಸುತ್ತಿರುವಾಗಲೇ ಅವನು ಬೇಟೆಗೆಂದು ಹೊರಟುಹೋದನು. ಕಾಡಿನ ಅಂದದಿಂದಾಗಿ ಅವನಲ್ಲಿ ಕಾಮಭಾವನೆ ಕೆರಳಿತು. ಹೆಂಡತಿಯ ನೆನವಾಗಿ ವೀರ್ಯಸ್ಖಲನವಾಯಿತು. ಅದು ಹಾಳಾಗದಿರಲೆಂದು ಅವನು ಅದನ್ನು ಒಂದು ದೊನ್ನೆ ಯಲ್ಲಿಟ್ಟು ಶ್ಯೇನ ಹಕ್ಕಿಯ ಮೂಲಕ ತನ್ನ ಮಡದಿಗೆ ಕಳುಹಿಸಿಕೊಟ್ಟನು. ಅಷ್ಟರಲ್ಲಿ ಇನ್ನೊಂದು ಹಕ್ಕಿಯು ಆ ದೊನ್ನೆಯ ಮೇಲೆ ಬಂದೆರಗಿದ್ದರಿಂದಾಗಿ ಅದು ಯಮುನಾ ನದಿಯಲ್ಲಿ ಬಿದ್ದುಬಿಟ್ಟಿತು.

ತತ್ರಾದ್ರಿಕೇತಿ ವಿಖ್ಯಾತಾ ಬ್ರಹ್ಮಶಾಪಾದ್ ವರಾಪ್ಸರಾಃ ॥ ೫೮ ॥

ಹೆಸರಾಂತ ಸುಂದರಳಾದ ಅಪ್ಸರೆಯೊಬ್ಬಳು ಬ್ರಹ್ಮದೇವನ ಶಾಪಕ್ಕೆ ಗುರಿಯಾಗಿ ಹೆಣ್ಣುಮೀನಾಗಿ (ಯಮುನೆಯಲ್ಲಿ) ಇದ್ದಳು. ಅವಳು ದೊನ್ನೆಯೊಳಗಿನ ವೀರ್ಯವನ್ನು ನುಂಗಿದಳು. ಬಸಿನಾದಳು. ಹೆರಿಗೆಯ ಮುನ್ನ ಒಬ್ಬ ಮೀನುಗಾರನ ಬಲೆಯಲ್ಲಿ ಸಿಕ್ಕು ಬಿದ್ದಳು. ಆ ಮೀನುಗಾರನು ಆ ಮೀನನ್ನು ಕೊಯ್ಯಲಾಗಿ ಅದರ ಹೊಟ್ಟೆಯಿಂದ ಮಾನವ ಅವಳಿಗಳು ಹುಟ್ಟಿಬಂದವು. ಅವುಗಳಲ್ಲಿ ಒಂದು ಗಂಡು, ಇನ್ನೊಂದು ಹೆಣ್ಣು. ನಡೆದ ಸಂಗತಿಯನ್ನೆಲ್ಲ ಮೀನುಗಾರನು ಉಪರಿಚರವಸುರಾಜನಿಗೆ ಹೇಳಿದನು. ರಾಜನು ಗಂಡುಮಗುವನ್ನು ಮಾತ್ರ ಸ್ವೀಕರಿಸಿದನು. ಮುಂದೆ ಅವನೇ ಮತ್ಸ್ಯರಾಜನಾದನು. ಮೀನುಗಾರನು ಹೆಣ್ಣುಮಗುವನ್ನು ಸಾಕಿ ಸಲಹಿದನು. ಅವಳೇ ಸತ್ಯವತಿ.

ನಾಪ್ಸರಾ ಮುಕ್ತಶಾಪಾ ಚ ಕ್ಷಣೇನ ಸಮಪದ್ಯತ ।
ಯಾ ಪುರೋಕ್ತಾ ಭಗವತಾ ತಿರ್ಯಗ್ಯೋನಿಗತಾ ಶುಭಾ ॥ ೬೪ ॥
ಮಾನುಷೌ ಜನಯಿತ್ವಾ ತ್ವಂ ಶಾಪಮೋಕ್ಷಮವಾಪ್ಸ್ಯಸಿ ।
ತತಃ ಸಾ ಜನಯಿತ್ವಾ ತೌ ವಿಶಸ್ತಾ ಮತ್ಸ್ಯಘಾತಿನಾ ॥ ೬೫ ॥
ಸಂತ್ಯಜ್ಯ ಮತ್ಸ್ಯರೂಪಂ ಸಾ ದಿವ್ಯಂ ರೂಪಮವಾಪ್ಯ ಚ ।
ಸಿದ್ಧರ್ಷಿಚಾರಣಪಥಂ ಜಗಾಮಾಥ ವರಾಪ್ಸರಾಃ ॥ ೬೬ ॥

'ಬ್ರಹ್ಮದೇವನ ಶಾಪದಿಂದಾಗಿ ಅದ್ರಿಕಾ ಎಂಬ ಅಪ್ಸರೆಗೆ ಮೀನಿನ ಜನ್ಮ ಬಂದಿತ್ತು. (ಮಾನವ ಅವಳಿಗೆ ಜನ್ಮ ನೀಡುತ್ತಲೇ) ತಕ್ಷಣವೇ ಅವಳು ಶಾಪಮುಕ್ತಳಾದಳು.' ಅವಳಿಗೆ ಬ್ರಹ್ಮದೇವನು ಮೊದಲೇ, 'ನೀನು ಇಬ್ಬರು ಮಾನವಶಿಶುಗಳನ್ನು ಹೆರುತ್ತಲೇ ಶಾಪದಿಂದ ಬಿಡುಗಡೆಹೊಂದುವೆ' ಎಂದು ಹೇಳಿದ್ದನು. ಮೀನುಗಾರನು ಆ ಮೀನನ್ನು ಕೊಯ್ಯುತ್ತಲೇ ಅದರ ಹೊಟ್ಟೆಯಿಂದ ಎರಡು ಮಾನವ ಶಿಶುಗಳು ಹುಟ್ಟಿ ಹೊರ ಬಂದವು. ಅದೇ ಕ್ಷಣಕ್ಕೆ ಅವಳ ಮೀನುರೂಪ ಇಲ್ಲದಂತಾಗಿ ಮೊದಲಿನ ದಿವ್ಯವಾದ ರೂಪು ಪ್ರಾಪ್ತವಾಯಿತು. ಸಿದ್ಧರು, ಮಹರ್ಷಿಗಳು, ಚಾರಣಾದಿಗಳು (ಹೋಗುವ) ಮಾರ್ಗದಿಂದಲೇ ಅವಳು ಸ್ವರ್ಗಕ್ಕೆ ಹೋದಳು.

+ ಬ್ರಹ್ಮದೇವನು ಅದ್ರಿಕಾ ಅಪ್ಸರೆಯನ್ನು ಶಪಿಸಿದ್ದೇಕೆ ?—ಎಂಬುದು ಸ್ಪಷ್ಟ ವಾಗಿಲ್ಲ. ಶಾಪದಿಂದ ಬಿಡುಗಡೆಯ ಉಲ್ಲೇಖ ಮಾತ್ರ ಇದೆ.

ಶಾಪಮುಕ್ತಿಯನ್ನು ಉಃಶಾಪವೆಂದು ತಿಳಿಯಬಹುದೆ ? ಅದು ಉಃಶಾಪವೇ ಆಗಿ ದ್ದರೆ ಯಾಚಿತವೋ, ಅಯಾಚಿತವೋ ?

## ೨೬. ವಸಿಷ್ಠ > ಅಷ್ಟವಸು ಆದಿ/೬೭

ವೈಶಂಪಾಯನನು ಜನಮೇಜಯನಿಗೆ ದೇವ, ದೈತ್ಯ ಹಾಗೂ ಉಳಿದ ಪ್ರಾಣಿ ಮಾತ್ರರ ಹುಟ್ಟಿನ ಬಗೆಗೆ ಹೇಳುತ್ತಲಿದ್ದಾನೆ.

ಇಲ್ಲಿ ವಸಿಷ್ಠನ ಶಾಪದ ಬರಿ ಉಲ್ಲೇಖವು ಮುಂದಿನಂತಿದೆ—

ಜಜ್ಞಿರೇ ವಸವಸ್ತ್ವಷ್ಟೌ ಗಂಗಾಯಾಂ ಶಂತನೋಃ ಸುತಾಃ ।
ವಸಿಷ್ಠಸ್ಯ ಚ ಶಾಪೇನ ನಿಯೋಗಾದ್ ವಾಸವಸ್ಯ ಚ ॥ ೭೪ ॥

ವಸಿಷ್ಠನ ಶಾಪ ಹಾಗೂ ಇಂದ್ರನ ಅಪ್ಪಣೆಗಳಿಂದಾಗಿ ಅಷ್ಟವಸುಗಳು ಶಂತನುವಿನ ಮಕ್ಕಳೆಂದು ಗಂಗೆಯ ಹೊಟ್ಟೆಯಲ್ಲಿ ಹುಟ್ಟಿಬಂದರು.

**ಆದಿ/೯೬**

ವೈಶಂಪಾಯನ ಜನಮೇಜಯನಿಗೆ ಮಹಾಭಿಷನ ಆಖ್ಯಾನವನ್ನು ಹೇಳುತ್ತಲಿದ್ದಾನೆ.

ಇಕ್ಷ್ವಾಕುಕುಲದಲ್ಲಿ ಹುಟ್ಟಿದ ಮಹಾಭಿಷ ಬಲುಪರಾಕ್ರಮಿಯಾದ ಸಾರ್ವಭೌಮ ರಾಜನಾಗಿದ್ದನು. ಅವನು ಒಂದು ನೂರು ರಾಜಸೂಯ ಯಜ್ಞಗಳನ್ನು ಮಾಡಿ ಇಂದ್ರನನ್ನು ಒಲಿಸಿಕೊಂಡಿದ್ದನು. ಅವನಿಗೆ ಸ್ವರ್ಗಲೋಕದಲ್ಲಿ ಸ್ಥಾನ ದೊರಕಿತು. ಒಂದು ಸಲ ಮಹಾಭಿಷ ಹಲವು ಜನ ದೇವತೆಗಳು ಹಾಗೂ ಋಷಿಗಳೊಂದಿಗೆ ಬ್ರಹ್ಮದೇವನ ಸನ್ನಿಧಿಯಲ್ಲಿದ್ದನು. ಆಗ ಗಂಗೆಯು ಉತ್ತಮವಾದ ಉಡುಗೆಯನ್ನುಟ್ಟು ಅಲ್ಲಿಗೆ ಬಂದಳು. ಗಾಳಿಯಿಂದಾಗಿ ಅವಳುಟ್ಟ ಬಟ್ಟೆಗಳು ಹಾರಾಡಿದವು. ಆಗ ಉಳಿದವರೆಲ್ಲ ತಲೆಗಳನ್ನು ತಗ್ಗಿಸಿದರು. ಆದರೆ ಮಹಾಭಿಷ ಮಾತ್ರ ಅವಳ ಮೇಲೆ ಕಣ್ಣು ನೆಟ್ಟನು. ಅವನ ಈ ದುರ್ವರ್ತನೆಯಿಂದಾಗಿ ಬ್ರಹ್ಮದೇವನಿಗೆ ಸಿಟ್ಟುಬಂದಿತು. ಹೀಗಾಗಿ ಅವನು ಮಹಾಭಿಷನನ್ನು ಶಪಿಸಿದನು. ಗಂಗೆಯ ಮನದಲ್ಲೂ ಮಹಾಭಿಷನ ಯೋಚನೆಗಳೇ ಸುಳಿಯುತ್ತಿದ್ದವು. ಆದರೆ ಹಿಂತಿರುಗಿ ಹೋಗುವಾಗ ದಾರಿಯಲ್ಲಿ ಅವಳಿಗೆ ಬಾಡಿದ ಮೊಗದ ಅಷ್ಟವಸುಗಳು ಕಂಡರು. ಅವಳು ಅವರ ಕುಶಲಕ್ಕಾಗಿ ಕೇಳುತ್ತಲೇ ಅವರು ಹೀಗೆಂದರು—

> ತಾಮೂಚುರ್ವಸವೋ ದೇವಾಃ ಶಪ್ತಾಃ ಸ್ಮೋ ವೈ ಮಹಾನದಿ ॥ ೧೨ ॥
> ಅಲ್ಪೇಽಪರಾಧೇ ಸಂರಂಭಾದ್ ವಸಿಷ್ಠೇನ ಮಹಾತ್ಮನಾ ।
> ವಿಮೂಢಾ ಹಿ ವಯಂ ಸರ್ವೇ ಪ್ರಚ್ಛನ್ನಮೃಷಿಸತ್ತಮಮ್ ॥ ೧೩ ॥
> ಸಂಧ್ಯಾಂ ವಸಿಷ್ಠಮಾಸೀನಂ ತಮತ್ಯಭಿಸೃತಾಃ ಪುರಾ ।
> ತೇನ ಕೋಪಾದ್ ವಯಂ ಶಪ್ತಾ ಯೋನೌ ಸಂಭವತೇತಿ ಹ ॥ ೧೪ ॥
> ನ ನಿವರ್ತಯಿತುಂ ಶಕ್ಯಂ ಯದುಕ್ತಂ ಬ್ರಹ್ಮವಾದಿನಾ ।
> ತ್ವಮಸ್ಮಾನ್ ಮಾನುಷೀ ಭೂತ್ವಾ ಸೃಜ ಪುತ್ರಾನ್ ವಸೂನ್ ಭುವಿ ॥ ೧೫ ॥

"ಎಲೆ ಮಹಾನಂದೆಯೇ! ನಮ್ಮಿಂದಾದ ಒಂದು ಚಿಕ್ಕ ತಪ್ಪಿಗಾಗಿ ಮಹಾತ್ಮನಾದ ವಸಿಷ್ಠಋಷಿಯು ನಮ್ಮನ್ನು ಶಪಿಸಿದ್ದಾನೆ. (ನಾವು ಮಾಡಿದ ತಪ್ಪೆಂದರೆ) ವಸಿಷ್ಠಋಷಿಯು ಒಂದು ಸಲ ಏಕಾಂತದಲ್ಲಿ ಸಂಧ್ಯಾವಂದನೆಯನ್ನು ಮಾಡುತ್ತಿರುವಾಗ ನಮ್ಮಿಂದ ಅವರಿಗೆ ಅವಮಾನವಾಯಿತು. (ನಾವು ಅವನ ಕಾಮಧೇನುವನ್ನು ಕದ್ದೆವು.) ಆದರಿಂದಾಗಿ ಅವರು ತುಂಬ ಕೆರಳಿ 'ನೀವು ಮಾನವಯೋನಿಯಲ್ಲಿ ಜನ್ಮತಳೆಯಲಿರುವಿರಿ' ಎಂದು ನಮ್ಮನ್ನು ಶಪಿಸಿದರು. ಬ್ರಹ್ಮವೇತ್ತನಾದ ಆ ಮಹರ್ಷಿಯ ಮಾತು ಎಂದಿಗೂ ಸುಳ್ಳಾಗಲಾರದು. (ನಾವು ಮರ್ತ್ಯಲೋಕದಲ್ಲಿ ಹುಟ್ಟಿ ಬರಲೇಬೇಕಿದೆ.) ಆದುದರಿಂದ ಎಲೆ ಗಂಗೆಯೇ, (ನೀನು ನಮಗಾಗಿ ಮಾನವ) ಹೆಣ್ಣಾಗಿ ನಮ್ಮ ತಾಯಿಯಾಗು." ಗಂಗೆ ಅವರ ಕೋರಿಕೆಯನ್ನು ಒಪ್ಪಿಕೊಂಡಳು.

**ಆದಿ/೮೯**

ಬ್ರಹ್ಮದೇವನ ಶಾಪದಿಂದಾಗಿ ಮಹಾಭಿಷ ಮರ್ತ್ಯಲೋಕದಲ್ಲಿ ಪ್ರತೀಪರಾಜನ ಮಗ ಶಂತನುವಾಗಿ ಜನ್ಮತಳೆದನು. ಗಂಗೆಯೂ ಹೆಣ್ಣಾಗಿ ಹುಟ್ಟಿದಳು. ತಾನು ಶಂತನು

ವನ್ನು ಮದುವೆಯಾದರೆ ಅಷ್ಟವಸುಗಳ ಬಯಕೆಗಳನ್ನು ಈಡೇರಿಸಲಸಾಧ್ಯ ಎಂದು ಕೊಂಡಳು. ಅವಳ ಅಲೌಕಿಕವಾದ ರೂಪರಾಶಿಯನ್ನು ಕಂಡು ಶಂತನು ಕೂಡ ಮರುಳಾಗಿ ದ್ದನು. ಅವನು ಅವಳೆದುರು ತನ್ನ ಬೇಡಿಕೆಯನ್ನು ಮುಂದಿಟ್ಟನು. ಅವಳಾದರೋ ಶರತ್ತಿ ನೊಡನೆ ಅವನ ಬೇಡಿಕೆಯನ್ನು ಸಮ್ಮತಿಸಿದಳು. ಮದುವೆ ಆದಬಳಿಕ ಅವಳಿಂದ ಏನೇ ಹೆಚ್ಚುಕಡಿಮೆ ನಡೆದರೂ ಶಂತನುವು ಆಕ್ಷೇಪವನ್ನೆತ್ತಕೂಡದು, ಅವಳು ಮನ ನೊಂದು ಕೊಳ್ಳುವಂತೆ ಮಾತನಾಡಕೂಡದು ! ಈ ಶರತ್ತುಗಳ ಪಾಲನೆ ನಾಗುವವರೆಗೆ ಮಾತ್ರ ಅವಳು ಅವನಿಗೆ ಅಂಕಿತಳಾಗಿ ಇರಲು ಒಪ್ಪಿಕೊಂಡಳು. ಆದರೆ ಉಲ್ಲಂಘನೆಯಾದ ಕ್ಷಣ ದಲ್ಲಿಯೇ ಅವಳು ಅವನನ್ನು ಬಿಟ್ಟುಹೋಗುವವಳಿದ್ದಳು. ಅವಳು ಇವೆಲ್ಲವುಗಳನ್ನು ರಾಜನಿಗೆ ಖಡಾಖಂಡಿತವಾಗಿ ಹೇಳಿಬಿಟ್ಟಳು. ಅವನು ಅವಳ ಶರತ್ತುಗಳನ್ನೆಲ್ಲ ಒಪ್ಪಿ ಅವಳ ಕೈಹಿಡಿದನು. ಅವಳೊಂದಿಗೆ ರಾಜ ಸಂತೋಷದಲ್ಲಿ ದಿನಗಳೆಯಹತ್ತಿದನು. ಅವಳೂ ಕೂಡ ತನ್ನ ಅಂದ ಹಾಗೂ ಸನ್ನಡತೆಯಿಂದ ರಾಜನನ್ನು ಖುಷಿಪಡಿಸುತ್ತಿದ್ದಳು. ಶಂತನುವಿಗೆ ಅವಳಿಂದ ಎಂಟು ಜನ ಗಂಡುಮಕ್ಕಳಾದರು. ಮಗುವನ್ನು ಹೆತ್ತಕೂಡಲೇ ಗಂಗೆಯು ಅದನ್ನು ಹೊಳೆಯಲ್ಲಿ ಮುಳುಗಿಸಿಬಿಡುತ್ತಿದ್ದಳು. ಈ ಬಗೆಯಾಗಿ ಏಳು ಮಕ್ಕಳು ಹೊಳೆಯ ಪಾಲಾದವು. ಅವನಿಗೆ ತನ್ನ ಹೆಂಡತಿಯ ಈ ನಡತೆ ಸಹಿಸದಂತಾಗಿತ್ತು. ಆದರೆ ಅವಳಿಗೆ ಏನನ್ನೂ ಅನ್ನುವ ಹಾಗಿರಲಿಲ್ಲವಲ್ಲ. ಅವಳು ತನ್ನನ್ನು ಬಿಟ್ಟುಹೋದಾ ಳೆಂಬ ಹೆದರಿಕೆಯಿಂದಾಗಿ ತನ್ನ ದುಗುಡವನ್ನೆಲ್ಲ ನುಂಗಿಕೊಂಡಿದ್ದನು. ಅವಳು ಎಂಟನೆಯ ಮಗುವನ್ನೂ ನೀರಿಗೆ ಬಿಡಲೆಳಸುತ್ತಲೇ ಅವನ ಸಹನೆಯ ಕಟ್ಟೊಡೆಯಿತು. ಅವನ ಕೋಪ ಅಳತೆ ಮೀರಿತು. ಅವನು ಅವಳನ್ನು ತಡೆದನು. ಹೊಟ್ಟೆಯ ಮಗುವನ್ನು ಕೊಲ್ಲಲು ಯತ್ನಿಸಿದುದಕ್ಕಾಗಿ ಅವಳನ್ನು ಹೀಯಾಳಿಸಿದನು. ಅವಳು ಎಂಟನೆಯ ಗಂಡು ಮಗುವನ್ನು ಕೊಲ್ಲದೆ ಶಂತನುವಿಗೆ ಒಪ್ಪಿಸಿ ಅದನ್ನು ಸರಿಯಾಗಿ ನೋಡಿಕೊಳ್ಳೆಂದು ಹೇಳಿದಳು. ಶಂತನು ಅವಳ ಶರತ್ತನ್ನು ಮುರಿದಿದ್ದರಿಂದ ಅವಳು ಹೊರಟಳು. ಹೋಗುವ ಮುನ್ನ, 'ಮೊದಲಿನ ಸಂಕೇತದಂತೆ ಭೂಮಿಯ ಮೇಲಿರುವ ನನ್ನ ಕಾಲ ಮುಗಿಯುತ್ತಬಂದಿದೆ. ನಾನು ಜಹ್ನುವಿನ ಮಗಳಾದ ಗಂಗೆಯಾಗಿದ್ದು ದೇವರ ಕಾರ್ಯ ವನ್ನು ನೆರವೇರಿಸಲೆಂದೇ ನಿನ್ನ ಮಡದಿಯಾಗಿ ನಿನ್ನ ಬಳಿಯಿದ್ದೆ.'

> ಇಮೇಽಷ್ಟೌ ವಸವೋ ದೇವಾ ಮಹಾಭಾಗಾ ಮಹೌಜಸಃ ।
> ವಸಿಷ್ಠಶಾಪದೋಷೇಣ ಮಾನುಷತ್ವಮುಪಾಗತಾಃ ॥ ೧೯ ॥

(ನಮಗೆ ಹುಟ್ಟಿದ ಈ ಎಂಟು ಜನ ಮಕ್ಕಳು) ಮಹಾತೇಜಸ್ವಿಯಾದ ಅಷ್ಟವಸುಗಳು. ವಸಿಷ್ಠರ ಶಾಪದಿಂದಾಗಿ ಅವರಿಗೆ ಈ ಮೃತ್ಯುಲೋಕದಲ್ಲಿ ಹುಟ್ಟಿಬರಬೇಕಾಯಿತು.

ಅವರಿಗೆ ನಿನ್ನಂತಹ ತಂದೆ ದೊರಕಲೆಂದೇ ನಾನೂ ಕೂಡ ಮರ್ತ್ಯಲೋಕದಲ್ಲಿ ಜನ್ಮ ತಳೆದೆ, ನಿನ್ನ ಮಡದಿಯಾದೆ. ಅವರಿಗೆ ನನ್ನಂತಹ ತಾಯಿ ಬೇಕಿದ್ದಳು. ಅವರಿಗೆ ಜನ್ಮ ವನ್ನು ನೀಡಿದ ಪುಣ್ಯದಿಂದಾಗಿ ನಿನಗೂ ಕೂಡ ಅಕ್ಷಯಲೋಕವು ಪ್ರಾಪ್ತವಾಗಲಿದೆ. 'ಮನುಷ್ಯಯೋನಿಯಲ್ಲಿ ಹುಟ್ಟಿಬರುತ್ತಲೇ ನಿಮ್ಮನ್ನು ತಕ್ಷಣ ಮರ್ತ್ಯಲೋಕದಿಂದ ಬಿಡುಗಡಗೊಳಿಸುವೆ' ಎಂದು ವಸುಗಳಿಗೆ ಮಾತುಕೊಟ್ಟಿದ್ದೆ. ಹಾಗೆಂದೇ ಹುಟ್ಟುತ್ತಲೇ ಅವರನ್ನು ಗಂಗೆಗೆ ಅರ್ಪಿಸುತ್ತಲಿದ್ದೆ.

ತತ್ ತೇ ಶಾಪಾದ್ ವಿನಿರ್ಮುಕ್ತಾ ಆಪವಸ್ಯ ಮಹಾತ್ಮನಃ ॥ ೨೩ ॥

'ಈಗ ಅವರು ವಸಿಷ್ಠನ ಶಾಪದಿಂದ ಮುಕ್ತರಾದರು.'

**ಆದಿ/೯೯**

ವೈಶಂಪಾಯನ ಜನಮೇಜಯನಿಗೆ ಅಷ್ಟವಸುಗಳ ಶಾಪದ ವೃತ್ತಾಂತವನ್ನು ಹೇಳುತ್ತಲಿದ್ದಾನೆ. ಶಂತನು ಗಂಗೆಗೆ ಹೀಗೆಂದನು—

ಆಪವೋ ನಾಮ ಕೋಽನ್ವೇಷ ವಸೂನಾಂ ಕಿಂ ಚ ದುಷ್ಕೃತಮ್ ।
ಯಸ್ಯಾಭಿಶಾಪಾತ್ ತೇ ಸರ್ವೇ ಮಾನುಷೀಯೋನಿಮಾಗತಾಃ ॥ ೧ ॥

ಯಾವ ಋಷಿಯ ಶಾಪದಿಂದಾಗಿ ಅಷ್ಟವಸುಗಳಿಗೆ ಮಾನವಜನ್ಮ ಪ್ರಾಪ್ತವಾಯಿತೋ ಆ ಆಪವ ಋಷಿ ಯಾರು? ವಸುಗಳ ಯಾವ ಅಪರಾಧಕ್ಕಾಗಿ ಅವರಿಗೆ ಶಾಪ ದೊರೆಯಿತು?

ಶಂತನುವಿನ ಪ್ರಶ್ನೆಗೆ ಗಂಗೆ ಹೀಗೆಂದಳು—ವಸಿಷ್ಠ ಋಷಿಯು ಮೇರುಪರ್ವತದ ರಮ್ಯವಾದ ವಾತಾವರಣದ ಏಕಾಂತದಲ್ಲಿ ತಪಶ್ಚರ್ಯೆಯನ್ನು ಕೈಕೊಂಡಿದ್ದನು. ಅವನ ಕಾಮಧೇನುವು ಅವನ ಆಶ್ರಮದ ಬಳಿಯಲ್ಲಿಯೇ ಸಂಚರಿಸುತ್ತಿತ್ತು. ಒಂದು ಸಲ ಅದು ಪೃಥು ಮೊದಲಾದ ವಸುಗಳ ಕಣ್ಣಿಗೆ ಬಿದ್ದಿತು. ಅದನ್ನು ಕಂಡು ಆ ವಸು(ದೇವತೆ)ಗಳು ಸಂತುಷ್ಟರಾದರು. ದ್ಯೂ ಎಂಬ ವಸುವಿನ ಮಡದಿ ಅದನ್ನು ಕಂಡು ವ್ಯಾಮೋಹಿತಳು. ಆ ಹಸುವಿನ ಹಾಲನ್ನು ಸೇವಿಸಿದರೆ ಚಿರತಾರುಣ್ಯ ಪ್ರಾಪ್ತವಾಗುವುದೆಂದು ತನ್ನ ಗಂಡನ ಬಾಯಿಂದ ಕೇಳಿ ಅದನ್ನು ಪಡೆಯಲು ಆಸೆಪಟ್ಟಳು. ಹೀಗಾಗಿ ಅವಳ ಆಸೆಯನ್ನು ಈಡೇರಿಸಲೆಂದು ವಸುಗಳು ಕಾಮಧೇನುವನ್ನು ಅಪಹರಿಸಿದರು. ತನ್ನ ಅಂತರ್ಜ್ಞಾನದಿಂದಾಗಿ ವಸಿಷ್ಠನು ಈ ಸಂಗತಿಯನ್ನು ಅರಿತುಕೊಂಡನು. ಮತ್ತೆ—

ಯಯೌ ಕ್ರೋಧವಶಂ ಸದ್ಯಃ ಶಶಾಪ ಚ ವಸೂಂಸ್ತದಾ ॥ ೩೧ ॥
ಯಸ್ಮಾನ್ಮೇ ವಸವೋ ಜಹ್ರುರ್ಗಾಂ ವೈ ದೋಗ್ಧ್ರೀಂ ಸುವಾಲಧಿಮ್ ।
ತಸ್ಮಾತ್ ಸರ್ವೇ ಜನಿಷ್ಯಂತಿ ಮಾನುಷೇಷು ನ ಸಂಶಯಃ ॥ ೩೨ ॥
ಏವಂ ಶಶಾಪ ಭಗವಾನ್ ವಸೂಂಸ್ತಾನ್ ಭರತರ್ಷಭ ।
ವಶಂ ಕ್ರೋಧಸ್ಯ ಸಂಪ್ರಾಪ್ತ ಆಪವೋ ಮುನಿಸತ್ತಮಃ ॥ ೩೩ ॥
ಶಪ್ತ್ವಾ ಚ ತಾನ್ ಮಹಾಭಾಗಸ್ತಪಸ್ಯೇವ ಮನೋ ದಧೇ ।
ಏವಂ ಸ ಶಪ್ತವಾನ್ ರಾಜನ್ ವಸೂನಷ್ಟೌ ತಪೋಧನಃ ॥ ೩೪ ॥

ವಸಿಷ್ಠನಿಗೆ ತುಂಬ ಕೋಪ ಬಂದಿತು. ಅವನು ಕೂಡಲೇ ವಸುಗಳನ್ನು ಶಪಿಸಿದನು. 'ನೀವು ನನ್ನ ಚೆಂದವಾದ ಗೊಂಡೆಯ ಬಾಲವುಳ್ಳ ಹೈನಿನ ಹಸುವನ್ನು ಕದ್ದಿರುವಿರಿ. ಹೀಗಾಗಿ ಮರ್ತ್ಯಲೋಕದಲ್ಲಿ ಮಾನವರಾಗಿ ಜನ್ಮತಳೆಯಲಿರುವಿರಿ—ಎಂಬಲ್ಲಿ ಸಂದೇಹವಿಲ್ಲ' ಎಂಬುದಾಗಿ ಸಿಟ್ಟಿನ ಕೈಯಲ್ಲಿ ಬುದ್ಧಿಯನ್ನಿತ್ತ ಆ ತಪಸ್ವಿಯು ವಸುಗಳನ್ನು ಶಪಿಸಿದನು. ಮತ್ತೆ ತನ್ನ ತಪಸ್ಸಿನಲ್ಲಿ ವ್ಯಾಪೃತನು.

ಶಾಪವನ್ನು ಕೇಳಿ ವಸುಗಳು ವಸಿಷ್ಠನನ್ನು ಪ್ರಸನ್ನಗೊಳಿಸಲೆಂದು ಅವನನ್ನು ಕೋರಿದರು. ಆದರೆ ಇನ್ನೂ ಕೋಪ ಇಳಿಯದ ವಸಿಷ್ಠನು—

ಉವಾಚ ಸ ಧರ್ಮಾತ್ಮಾ ಶಪ್ತಾ ಯೂಯಂ ಧರಾದಯಃ ।
ಅನುಸಂವತ್ಸರಾತ್ ಸರ್ವೇ ಶಾಪಮೋಕ್ಷಮವಾಪ್ಸ್ಯಥ ॥ ೩೮ ॥

ಅವನು ಅವರಿಗೆ ಹೀಗೆಂದನು—'ನನ್ನ ಶಾಪಕ್ಕೀಡಾದ ಧರ ಮೊದಲಾದ ವಸುಗಳು ವರ್ಷಕ್ಕೊಬ್ಬರಂತೆ ಅದರಿಂದ ಬಿಡುಗಡೆ ಹೊಂದಲಿರುವರು.' ಆದರೆ,

ಅಯಂ ತು ಯತ್ಕೃತೇ ಯೂಯಂ ಮಯಾ ಶಪ್ತಾಃ ಸ ವತ್ಸ್ಯತಿ ।
ದ್ಯೌಸ್ತದಾ ಮಾನುಷೇ ಲೋಕೇ ದೀರ್ಘಕಾಲಂ ಸ್ವಕರ್ಮಣಾ ॥ ೩೯ ॥
ನಾನೃತಂ ತಚ್ಚಿಕೀರ್ಷಾಮಿ ಕ್ರುದ್ಧೋ ಯುಷ್ಮಾನ್ ಯದಬ್ರುವಮ್ ।
ನ ಪ್ರಜಾಸ್ಯತಿ ಚಾಪ್ಯೇಷ ಮಾನುಷೇಷು ಮಹಾಮನಾಃ ॥ ೪೦ ॥
ಭವಿಷ್ಯತಿ ಚ ಧರ್ಮಾತ್ಮಾ ಸರ್ವಶಾಸ್ತ್ರವಿಶಾರದಃ ।
ಪಿತುಃ ಪ್ರಿಯಹಿತೇ ಯುಕ್ತಃ ಸ್ತ್ರೀಭೋಗಾನ್ ವರ್ಜಯಿಷ್ಯತಿ ॥ ೪೧ ॥

'ಯಾರ ಅಪರಾಧಕ್ಕಾಗಿ ನಾನು ನಿಮಗೆ ಶಾಪವನ್ನಿತ್ತೇನೋ ಆ ದ್ಯೂ (ಮಾತ್ರ) ತನ್ನ ಕರ್ಮಫಲವೆಂದು ಬಲುದೀರ್ಘಕಾಲದವರೆಗೆ ಮರ್ತ್ಯಲೋಕದಲ್ಲಿ ಬಾಳುವನು. ಸಿಟ್ಟಿನ ಭರದಲ್ಲಿ ನಾನಿತ್ತ ಶಾಪವನ್ನು ಹಿಂತೆಗೆದುಕೊಳ್ಳುವ ಪ್ರಶ್ನೆಯೇ ಇಲ್ಲ. ಈ ಮಹಾತ್ಮನಿಗೆ (ದ್ಯೂ) ಮಕ್ಕಳುಮರಿಗಳಾಗವು. ಅವನು ಎಲ್ಲ ಶಾಖೆಗಳಲ್ಲೂ ನಿಪುಣನಾದ ಧರ್ಮಾತ್ಮನಾಗಲಿರುವನು. ತಂದೆಯ ಅಪ್ಪಣೆಯನ್ನು ಪಾಲಿಸುವಲ್ಲಿ ಅವನು ತತ್ಪರನಾಗುವನು. ಹೆಣ್ಣಿನ ಸುಖ ಮಾತ್ರ ಅವನಿಗೆ ದೊರಕದು.'

ಏವಂ ತೇಷಾಮಹಂ ಸಮ್ಯಕ್ ಶಪ್ತಾನಾಂ ರಾಜಸತ್ತಮ ।
ಮೋಕ್ಷಾರ್ಥಂ ಮಾನುಷಾಲ್ಲೋಕಾದ್ ಯಥಾವತ್ ಕೃತವತ್ಯಹಮ್ ॥ ೪೪ ॥
ಅಯಂ ಶಾಪಾದೃಷೇಸ್ತಸ್ಯ ಏಕ ಏವ ನೃಪೋತ್ತಮ ।
ದ್ಯೌ ರಾಜನ್ ಮಾನುಷೇ ಲೋಕೇ ಚಿರಂ ವತ್ಸ್ಯತಿ ಭಾರತೇ ॥ ೪೫ ॥

'ಎಲೈ ರಾಜಶ್ರೇಷ್ಠನೇ ! ವಸಿಷ್ಠ ಋಷಿಗಳು ಇತ್ತ ಶಾಪದಿಂದ ಅಷ್ಟವಸುಗಳನ್ನು ಬಿಡಿಸಲೆಂದೇ ನಾನು ಇದೆಲ್ಲವನ್ನು ಅವರ ಬಯಕೆಯ ಮೇರೆಗೆ ಮಾಡಿದೆನು. (ಹುಟ್ಟುತ್ತಲೇ ಅವರನ್ನು ಗಂಗೆಯಲ್ಲಿ ಮುಳುಗಿಸಿದೆ ) ಈ ದ್ಯೌ ಮಾತ್ರ ಶಾಪದ ಪರಿಣಾಮವೆಂದು ಬಲುದೀರ್ಘಕಾಲ ಈ ಮರ್ತ್ಯಲೋಕದಲ್ಲಿರುವನು.'

+ ಆದಿ ೬೭/೭೪—ವಸಿಷ್ಠನ ಉದ್ಗಾರದ ಕೆಲವು ಭಾಗವು ಉಃಶಾಪದಂತಿದೆ. ಇದು ಯಾಚಿತವು.

## ೨೭. ಗುರು > ಮತಂಗ (ತ್ರಿಶಂಕು) ಆದಿ/೭೧

ದುಷ್ಯಂತನು ಶಕುಂತಲೆಗೆ ಅವಳ ವೃತ್ತಾಂತವನ್ನು ಕೇಳುತ್ತಾನೆ. ಅವಳು ಅದನ್ನು ಹೇಳುತ್ತಲಿದ್ದಾಳೆ. ವಿಶ್ವಾಮಿತ್ರನ ತಪಸ್ಸಿನಿಂದಾಗಿ ಇಂದ್ರನ ಇಂದ್ರಪದ ಸಂಕಟಕ್ಕೆ ಸಿಲುಕಿತ್ತು. ಆಗ ಅವನು ವಿಶ್ವಾಮಿತ್ರನನ್ನು ತಪಶ್ಚರ್ಯೆಯಿಂದ ದೂರವಿರಿಸಲು ಮೇನಕೆಗೆ ಹೇಳಿದನು. ಅವಳಿಗೆ ಈ ಕೆಲಸ ಬಲುಕಷ್ಟದ್ದಾಗಿ ಕಂಡಿತು. ವಿಶ್ವಾಮಿತ್ರ ಬಲುದೊಡ್ಡ

ತಪಸ್ವಿ. ಉಗ್ರತೇಜಸ್ಸಿನವನು, ಪ್ರತಿಸೃಷ್ಟಿಯನ್ನು ನಿರ್ಮಿಸುವಾತನಲ್ಲದೆ ಬಲು ಶೀಘ್ರ ಕೋಪಿ. ಹೀಗಾಗಿ ಅವಳು ಅವನ ಬಳಿಗೆ ಹೋಗಲು ಹೆದರುತ್ತಿದ್ದಳು. ವಿಶ್ವಾಮಿತ್ರನನ್ನು ಕುರಿತು ಅವಳು ಹೇಳಿದ್ದರಲ್ಲಿ ಮುಂದಿನ ಉಲ್ಲೇಖವಿದೆ—

ಗುರುಶಾಪಹತಸ್ಯಾಪಿ ತ್ರಿಶಂಕೋಃ ಶರಣಂ ದದೌ ॥ ೩೪ ॥

'ತನ್ನ ಗುರುವಿನ ಶಾಪದಿಂದಾಗಿ ಹೀನವಾದ ಅವಸ್ಥೆಯಲ್ಲಿರುವಾಗಲೂ ವಿಶ್ವಾಮಿತ್ರನು ತ್ರಿಶಂಕುವನ್ನು (ಮತಂಗ) ಕಾಪಾಡಿದನು.'

+ ಇಲ್ಲಿ ಶಾಪವನ್ನು ಬರಿ ಉಲ್ಲೇಖಿಸಲಾಗಿದೆಯಷ್ಟೆ.

ಗುರುವಿನ ಹೆಸರು ಇಲ್ಲದ್ದರಿಂದ ಸಂದೇಹ ಹುಟ್ಟುತ್ತದೆ. ವಸಿಷ್ಠನೇ ಈ ಶಾಪವನ್ನಿತ್ತಿರಲು ಸಾಕು. ಏಕೆಂದರೆ ಅವನೇ ಇಕ್ಷ್ವಾಕುಕುಲಕ್ಕೆ ಗುರುವಾಗಿದ್ದನು. ಗೋರಖಪುರದ ಗೀತಾ ಪ್ರೆಸ್ಸಿನವರ ಮೊದಲ ಖಂಡದ ೨೧೧ನೆಯ ಪುಟದಲ್ಲಿ ಇನ್ನೆರಡು ಶ್ಲೋಕಗಳನ್ನು ಕಂಸಿನಲ್ಲಿ ಕೊಡಲಾಗಿದೆ. ಅವು ಪ್ರಕ್ಷಿಪ್ತವಾಗಿರಲೂ ಸಾಕು. ಅದೇನಿದ್ದರೂ ಅವುಗಳ ಸಾಲುಗಳು ಹಾಗೂ ಅವುಗಳ ಹಿಂದೀ ಅನುವಾದಗಳನ್ನು ಗಮನಕ್ಕೆ ತೆಗೆದುಕೊಳ್ಳಲಾಗಿ ಈ ಶ್ಲೋಕದಲ್ಲಿಯ 'ಗುರು' ಎಂದರೆ ವಸಿಷ್ಠನೇ ಎಂಬುದು ಖಚಿತಗೊಳ್ಳುತ್ತದೆ.

ಬ್ರಹ್ಮರ್ಷಿಶಾಪಂ ರಾಜರ್ಷಿಃ ಕಥಂ ಮೋಕ್ಷ್ಯತಿ ಕೌಶಿಕಃ ।

ಹಿಂದಿಯ ಅನುವಾದ: ಉಸ್ ಸಮಯ್ ಯಹ ಸೋಚಕರ್ ಕಿ 'ವಿಶ್ವಾಮಿತ್ರ ಬ್ರಹ್ಮರ್ಷಿ ವಸಿಷ್ಠಕೇ ಶಾಪ್ ಕೋ ಕೈಸೇ ಛುಡಾ ದೇಂಗೆ ?'

ವಾಲ್ಮೀಕಿರಾಮಾಯಣದಲ್ಲೂ (ಬಾಲಕಾಂಡ ೫೮/ಶ್ಲೋಕ ೮–೯) ಈ ಶಾಪ ಇದೆ. ಇಲ್ಲಿ ಶಾಪವನ್ನೀಯುವವನು ವಸಿಷ್ಠನಾಗಿರದೆ ಅವನ ಮಗನು ಇತ್ತಿದ್ದಾನೆ.

ಋಷಿಪುತ್ರಾಸ್ತು ತಚ್ಛ್ರುತ್ವಾ ವಾಕ್ಯಂ ಘೋರಾಭಿಸಂಹಿತಮ್ ॥ ೮ ॥
ಶೇಪುಃ ಪರಮಸಂಕ್ರುದ್ಧಾಶ್ಚಂಡಾಲತ್ವಂ ಗಮಿಷ್ಯಸಿ ॥ ೯ ॥

"ರಾಜನ ಮಾತು ಕೇಳಿ ಆ ಗುರುಪುತ್ರರು ತುಂಬ ಸಿಟ್ಟಿಗೆದ್ದರು. ಹೀಗಾಗಿ, 'ನೀನು ಚಾಂಡಾಲನಾಗೆ'ಂದು ಅವರು ಅವನಿಗೆ ಶಾಪವನ್ನಿತ್ತರು."*

## ೨೮. ಮಹರ್ಷಿ > ಪುರೂರವ ಆದಿ/೭೫

ವೈಶಂಪಾಯನ ಜನಮೇಜಯನಿಗೆ ದಕ್ಷಪ್ರಜಾಪತಿ. ವೈವಸ್ವತ ಮನು, ಭರತ, ಕುರು, ಅಜಾಮಿಳ, ಯಾದವ ಮೊದಲಾದ ವಂಶಗಳನ್ನು ಕುರಿತ ಮಾಹಿತಿ ಹೇಳುತ್ತಲಿದ್ದಾನೆ.

ಪ್ರಾಚೇತಸನ ಮಗ ದಕ್ಷಪ್ರಜಾಪತಿ. ಅವನಿಂದ ಈ ಇಡಿಯ ವಿಶ್ವ ನಿರ್ಮಾಣಗೊಂಡಿತು. ಹಾಗೆ ನೋಡಿದರೆ ಅವನೇ ಈ ವಿಶ್ವಕ್ಕೆ ಪಿತಾಮಹನು. ದಕ್ಷನ ಹದಿಮೂರು ಜನ ಕನ್ಯೆಯರು ಕಶ್ಯಪ ಋಷಿಯ ಮಡದಿಯರು. ಅವರಿಂದ ಇಂದ್ರ, ವಿವಸ್ವಾನ್ ಮುಂತಾದ ಹನ್ನೆರಡು ಜನ ಆದಿತ್ಯರು ಹುಟ್ಟಿಬಂದರು. ವೈವಸ್ವತಮನುವು ವಿವಸ್ವಾನನ ಮಗನು. ಅವನ ಮಗಳು ಇಲಾ. ಅವಳ ಹೊಟ್ಟೆಯಲ್ಲಿ ಪುರೂರವ ಹುಟ್ಟಿಬಂದನು.

* ನೋಡಿ: ವಾಲ್ಮೀಕಿರಾಮಾಯಣ: ಶಾಪ ಮತ್ತು ವರ, ಶಾಪ ಕ್ರ. ೧೪.

ಅವನು ಬಲುಸಾಮರ್ಥ್ಯಸಂಪನ್ನನಾಗಿದ್ದನು. ಅವನ ಕೀರ್ತಿ ಎಲ್ಲೆಡೆಗೂ ಹಬ್ಬಿತ್ತು. ಅವನ ಆಡಳಿತದಲ್ಲಿ ಹದಿಮೂರು ದ್ವೀಪಗಳಿದ್ದವು. ಬಾಹುಬಲದಿಂದ ಉನ್ಮತ್ತನಾಗಿ ಅವನು ಬ್ರಾಹ್ಮಣರೊಂದಿಗೆ ಹಗೆ ತಾಳಿದನು. ಸನತ್ಕುಮಾರರು ಅವನಿಗೆ ಉಪದೇಶವನ್ನು ನೀಡಲು ಯತ್ನಿಸಿದರು. ಆದರೆ ಅವರಿಗೆ ಯಶ ದೊರೆಕಲಿಲ್ಲ.

ತತೋ ಮಹರ್ಷಿಭಿಃ ಕ್ರುದ್ಧೈಃ ಸದ್ಯಃ ಶಪ್ತೋ ವ್ಯನಶ್ಯತ ॥ ೨೨ ॥
ಲೋಭಾನ್ವಿತೋ ಬಲಮದಾನ್ನಷ್ಟಸಂಜ್ಞೋ ನರಾಧಿಪಃ ॥ ೨೩ ॥

ಕಡುಲೋಭಿ, ಬಲದಿಂದಾಗಿ ಸೊಕ್ಕೇರಿದ, ವಿವೇಕಹೀನನಾದ (ಪುರೂರವ)ರಾಜನನ್ನು ಮಹರ್ಷಿಗಳು ಕೆರಳಿ ಶಾಪವನ್ನೀಯುತ್ತಲೇ ಅದೇ ಕ್ಷಣಕ್ಕೆ ಅವನು ಮರಣಹೊಂದಿದನು.

## ೨೯. ಶುಕ್ರಾಚಾರ್ಯ > ಯಯಾತಿ ಆದಿ/೭೫

ವೈಶಂಪಾಯನ ಜನಮೇಜಯನಿಗೆ ಯಯಾತಿಯ ಉಪಾಖ್ಯಾನವನ್ನು ಹೇಳುತ್ತಲಿದ್ದಾನೆ.

ದೈತ್ಯರ ಗುರುವಾದ ಶುಕ್ರಾಚಾರ್ಯನ ಮಗಳು ದೇವಯಾನಿಯ ಮದುವೆ ಯಯಾತಿಯೊಂದಿಗೆ ಜರುಗಿತು. ದೈತ್ಯರ ರಾಜನಾದ ವೃಷಪರ್ವನ ಮಗಳು ಶರ್ಮಿಷ್ಠೆ ಹಾಗೆ ನೋಡಿದರೆ ದೇವಯಾನಿಯ ಗೆಳತಿ. ಆದರೆ ಅವಳು ದೇವಯಾನಿಯ ದಾಸಿಯಾದವಳು. ದೇವಯಾನಿಯ ಜೊತೆಗೆ ಅವಳನ್ನೂ ಕಳುಹಿಸಲಾಗಿತ್ತು. ಶುಕ್ರಾಚಾರ್ಯನು ಶರ್ಮಿಷ್ಠೆಯನ್ನು ಗೌರವದಿಂದ ನಡೆಯಿಸಿಕೊಳ್ಳಲು ಹೇಳಿದನಲ್ಲದೆ ಹಾಸಿಗೆಯ ಕೆಲಸಗಳಿಗಾಗಿ ಅವಳನ್ನು ಎಂದಿಗೂ ಕರೆಯಕೂಡದೆಂದೂ ಒತ್ತಿಹೇಳಿದ್ದನು. ಯಯಾತಿ ಒಪ್ಪಿಕೊಂಡಿದ್ದನು. ಆದರೆ ಅವನಿಂದ ತನ್ನ ಮಾತನ್ನು ಪಾಲಿಸಲಾಗಲಿಲ್ಲ. ಅವನಿಂದ ಶರ್ಮಿಷ್ಠೆಗೆ ಮೂರು ಜನ ಮಕ್ಕಳಾದವು. ದೇವಯಾನಿಗೆ ಮಾತ್ರ ಇಬ್ಬರು. ದೇವಯಾನಿಗೆ ಯಯಾತಿ–ಶರ್ಮಿಷ್ಠೆಯರ ಸಂಬಂಧ ಹಿಡಿಸಲಿಲ್ಲ. ಅವಳು ತುಂಬ ಕೆರಳಿದಳು. ಶರ್ಮಿಷ್ಠೆಯನ್ನು ಕುರಿತು ಮೊದಲಿನಿಂದಲೂ ಇದ್ದ ಅವಳಲ್ಲಿಯ ಅಸೂಯೆ ಇನ್ನಷ್ಟು ಕುದಿದೆದ್ದಿತು. ಹೀಗಾಗಿ ಅವಳು ಶುಕ್ರಾಚಾರ್ಯರೆದುರು ಅದನ್ನು ತೋಡಿಕೊಂಡಳು. ಅವನು ಯಯಾತಿಯನ್ನು ಶಪಿಸಿದನು.

ಶುಕ್ರಾಚಾರ್ಯನ ಶಾಪದಿಂದಾಗಿ ಯಯಾತಿಯು ಅಕಾಲಿಕವಾಗಿ ಮುಪ್ಪಾದನು. ಭೋಗಲಾಲಸೆ ತೃಪ್ತಿಯನ್ನು ಹೊಂದಿರಲಿಲ್ಲ, ಯಾರಾದರೂ ತಮ್ಮ ತಾರುಣ್ಯವನ್ನು ಅವನಿಗೆ ನೀಡಿ ಅವನ ಮುಪ್ಪನ್ನು ತಾವು ಪಡೆಯಲು ಒಪ್ಪಿದ್ದರೆ ಅವನು ಮತ್ತೆ ತಾರುಣ್ಯವನ್ನು ಹೊಂದಬಹುದಿತ್ತು. ಶುಕ್ರಾಚಾರ್ಯನು ಅವನಿಗೆ ಇಂಥ ಒಂದು ಸವಲತ್ತನ್ನು ದಯಪಾಲಿಸಿದ್ದನು. ಹೀಗಾಗಿ ಯಯಾತಿಯು ತನ್ನ ಮಗ ಯದುವನ್ನು ಕೆಲಕಾಲದವರೆಗೆ—ಒಂದು ಸಾವಿರ ವರ್ಷಗಳು—ತನಗೆ ತಾರುಣ್ಯವನ್ನು ನೀಡಿ ತನ್ನಿಂದ ಮುಪ್ಪನ್ನು ಪಡೆಯಬೇಕೆಂದು ಸೂಚಿಸಿದನು. ಈ ಕಾಲಾವಧಿಯು ಮುಗಿಯುತ್ತಲೇ ಅವನ ತಾರುಣ್ಯವನ್ನು ಹಿಂತಿರುಗಿಸುವುದಾಗಿ ಒಪ್ಪಿಕೊಂಡೂ ಆಯಿತು. ಆದರೆ ಯದುವು ಅವನ ಈ ಬೇಡಿಕೆಯನ್ನು ತಳ್ಳಿಹಾಕಿದನು. ಯದು, 'ನನ್ನ ತಾರುಣ್ಯವನ್ನು ಪಡೆದು ನೀವೇನು ಮಾಡುವಿರಿ ?' ಎಂದನು. ಅದಕ್ಕೆ ಯಯಾತಿಯ ಉತ್ತರ—

ಯಜತೋ ದೀರ್ಘಸತ್ರೈರ್ಮೇ ಶಾಪಾಚ್ಚೋಶನಸೋ ಮುನೇಃ ।
ಕಾಮಾರ್ಥಃ ಪರಿಹೀಣೋಽಯಂ ತಪ್ಯೇಯಂ ತೇನ ಪುತ್ರಕಾಃ ॥ ೪೧ ॥

'ಇಂದಿನವರೆಗೆ ಹಲವಾರು ಯಜ್ಞಗಳು, ಅನುಷ್ಠಾನಗಳಲ್ಲಿ ಬಲುದೀರ್ಘಸಮಯ ವನ್ನು ಸವೆಯಿಸಿದೆ. ಹಲವು ವ್ರತಗಳನ್ನು ಆಚರಿಸಿದೆ. (ಅವುಗಳ ಕಟ್ಟುಪಾಡುಗಳನ್ನು ಪಾಲಿಸುವಲ್ಲಿ ನನ್ನ ಕಾಮೇಚ್ಛೆಯನ್ನು ತೃಪ್ತಿಪಡಿಸಲಾಗಲಿಲ್ಲ. ಈಗಂತೂ) ಶುಕ್ರಾ ಚಾರ್ಯನ ಶಾಪದಿಂದಾಗಿ ನನಗೆ ಮುಪ್ಪು ಬಂದುಬಿಟ್ಟಿತು. ಹೀಗಾಗಿ ನಾನು ಕಾಮ ರೂಪದ ಪುರುಷಾರ್ಥಕ್ಕೆ ವಂಚಿತನಾಗಿದ್ದೇನೆ.'

**ಆದಿ/೮೩**

ಶುಕ್ರಾಚಾರ್ಯನು ಯಯಾತಿಗೆ ಈ ರೀತಿ ಶಾಪವನ್ನಿತ್ತನು—

ಧರ್ಮಜ್ಞಃ ಸನ್ ಮಹಾರಾಜ ಯೋಽಧರ್ಮಮಕೃಥಾಃ ಪ್ರಿಯಮ್ ।
ತಸ್ಮಾಜ್ಜರಾ ತ್ವಾಮಚಿರಾದ್ ಧರ್ಷಯಿಷ್ಯತಿ ದುರ್ಜಯಾ ॥ ೩೧ ॥

'ಎಲೈ ರಾಜನೇ! ನೀನು ಧರ್ಮವನ್ನು ಅರಿತವನು. ಹೀಗಿದ್ದೂ ನಿನಗೆ ಬೇಕಿದ್ದು ದನ್ನು ಹೊಂದಲೆಂದು ನೀನು ಅಧರ್ಮವನ್ನು ಜೊತೆಗೂಡಿರುವೆ. (ಆದ್ದರಿಂದ ಈ ಪಾಪದ ಫಲವೆಂದು) ಬಲುಕಠಿಣವಾದ ಮುಪ್ಪು ಕೂಡಲೇ ನಿನ್ನನ್ನು ಆವರಿಸಲಿ.'

ಶುಕ್ರಾಚಾರ್ಯನ ಶಾಪವನ್ನು ಕೇಳಿ 'ಕಾಮವಾಸನೆಯಿಂದ ಪ್ರೇರಿತನಾಗಿ ಶರ್ಮಿಷ್ಠೆ ಯೊಂದಿಗೆ ಕೂಡಿಕೊಳ್ಳಲಿಲ್ಲ. ಋತುಕಾಲ ಹಾಳಾಗಕೂಡದೆಂದು ಹೆಣ್ಣಾದವಳು ಬೇಡಿ ಕೊಂಡಾಗ ಅದನ್ನು ಪೂರೈಸದಿದ್ದರೆ ಭ್ರೂಣಹತ್ಯೆಯ ಪಾತಕ ತಗಲುತ್ತದೆಂದು ಬ್ರಹ್ಮ ವೇತ್ತರು ಹೇಳುತ್ತಾರೆ. ಶರ್ಮಿಷ್ಠೆಯ ಬಯಕೆಯನ್ನು ಪೂರ್ತಿಗೊಳಿಸದಿರುವುದು ಅಧರ್ಮ ಎಂದೆನಿಸುತ್ತಿತ್ತು' ಎಂದು ಯಯಾತಿ ಹೇಳಿದನು. ಆದರೆ ಯಯಾತಿಯು ಮುಂದೊಡ್ಡಿದ ಈ ಸಮರ್ಥನೆ ಶುಕ್ರಾಚಾರ್ಯನಿಗೆ ಹಿಡಿಸಲಿಲ್ಲ. ಅವನು, 'ನೀನು ಆತ್ಮ ವಂಚನೆಯನ್ನು ಮಾಡಿಕೊಳ್ಳುತ್ತಿರುವೆ' ಎಂದು ನುಡಿದು,

ಕ್ರುದ್ಧೇನೋಶನಸಾ ಶಪ್ತೋ ಯಯಾತಿರ್ನಹುಷಸ್ತದಾ ।
ಪೂರ್ವ ವಯಃ ಪರಿತ್ಯಜ್ಯ ಜರಾಂ ಸದ್ಯೋಽನ್ವಪದ್ಯತ ॥ ೩೭ ॥

ಕ್ರೋಧಾಧೀನನಾದ ಶುಕ್ರಾಚಾರ್ಯನು ನಹುಷಪುತ್ರನಾದ ಯಯಾತಿಯನ್ನು ಶಪಿಸುತ್ತಲೇ ಅವನ ತಾರುಣ್ಯ ನಾಶಹೊಂದಿ ಅದೇ ಕ್ಷಣಕ್ಕೆ ಹಣ್ಣುಹಣ್ಣು ಮುದುಕ ನಾದನು.

ದೇವಯಾನಿಯ ತಾರುಣ್ಯವನ್ನು ಉಪಭೋಗಿಸಬೇಕೆಂಬ ತನ್ನ ಬಯಕೆ ಇನ್ನೂ ಪೂರ್ತಿಯಾಗಿಲ್ಲವಾದ್ದರಿಂದ ತನ್ನನ್ನು ಕ್ಷಮಿಸಬೇಕೆಂದು ಯಯಾತಿಯು ಕೋರಿದನು. ಅಲ್ಲದೆ ಅಕಾಲಿಕವಾಗಿ ಬಂದಿರುವ ಈ ಮುಪ್ಪನ್ನು ದೂರಕ್ಕೆ ತಳ್ಳುವ ಉಪಾಯವನ್ನು ಕುರಿತೂ ಕೇಳಿದನು. ಆಗ ಶುಕ್ರಾಚಾರ್ಯನು ಹೀಗೆಂದನು—

ನಾಹಂ ಮೃಷಾ ಬ್ರವೀಮ್ಯೇತಜ್ಜರಾಂ ಪ್ರಾಪ್ತೋಽಸಿ ಭೂಮಿಪ ।
ಜರಾಂ ತ್ವೇತಾಂ ತ್ವಮನ್ಯಸ್ಮಿನ್ ಸಂಕ್ರಾಮಯ ಯದೀಚ್ಛಸಿ ॥ ೩೯ ॥

'ಎಲೈ ರಾಜನೇ ! ನಾನು ನುಡಿದದ್ದು (ಎಂದಿಗೂ) ಸುಳ್ಳಾಗಲಾರದು. ಮುಪ್ಪಂತೂ (ಈಗಾಗಲೇ) ನನ್ನ ದೇಹವನ್ನು ಹೊಕ್ಕಾಗಿದೆ. ನಾನು (ಹೆಚ್ಚೆಂದರೆ) ನಿನಗೊಂದು ಸವಲತ್ತನ್ನು ನೀಡಬಲ್ಲೆ. ಅದೆಂದರೆ, ಯಾವನಾದರೂ ನಿನ್ನ ಮುಪ್ಪನ್ನು ಪಡೆದು ಅದರ ಬದಲು ತನ್ನ ತಾರುಣ್ಯವನ್ನು ನಿನಗೆ ನೀಡಲು ಸಿದ್ಧನಿದ್ದರೆ ಈ ಮಾರ್ಪಾಟು ಸಾಧ್ಯ.'

ತನ್ನ ಮಕ್ಕಳಲ್ಲಿ ಒಬ್ಬನಾದರೂ ಇಂಥ ವಿನಿಮಯಕ್ಕೆ ಒಪ್ಪುವನೆಂಬ ಭರವಸೆ ಯಯಾತಿಯಲ್ಲಿತ್ತು. ಹೀಗಾಗಿ ಅವನು ಶುಕ್ರಾಚಾರ್ಯನಿಗೆ ಹೀಗೆಂದನು : 'ನನಗೆ ತನ್ನ ಯೌವನವನ್ನು ನೀಡುವ ಮಗನಿಗೇನೆ ರಾಜ್ಯ ದೊರಕತಕ್ಕದ್ದು. ಅವನು ಪುಣ್ಯವಂತನೂ ಯಶಸ್ವಿಯೂ ಆಗತಕ್ಕದ್ದು ಎಂದು ನನ್ನನ್ನು ಹರಸಿ.' ಶುಕ್ರಾಚಾರ್ಯನು ಅವನ ಕೋರಿಕೆಯನ್ನು ಮನ್ನಿಸಿ ಅವನನ್ನು ಹರಸಿದನು. 'ಇಷ್ಟೇ ಅಲ್ಲದೆ ಚೊಚ್ಚಲು ಮಗನು ಒಪ್ಪದೆ ಕಿರಿಯನು ಒಪ್ಪಿದರೆ ಅವನನ್ನು ಪಟ್ಟಕ್ಕೆ ಕುಳ್ಳಿರಿಸಿದರೂ ನಿನ್ನ ಕೈಯಿಂದ ಅಧರ್ಮ ನಡೆಯದು— ' ಎಂದೂ ಹೇಳಿದನು.

**ಆದಿ/೮೫**

ಯಯಾತಿಯು ಪುರುವಿಗೆ ಅವನ ಯೌವನವನ್ನು ಮರಳಿ ಕೊಟ್ಟು ತಾನು ತನ್ನ ಮುಪ್ಪನ್ನು ಪಡೆದನು. ತನ್ನ ಕಿರಿಯ ಮಗನಿಗೆ ಪಟ್ಟಗಟ್ಟುವುದರಲ್ಲಿ ಅಧರ್ಮವೇನೂ ಇಲ್ಲವೆಂದು ತನ್ನ ಪ್ರಜೆಗಳನ್ನು ಮನಗಾಣಿಸಿದನು. ಅವನು ಹೀಗೆಂದನು—

ಶುಕ್ರೇಣ ಚ ವರೋ ದತ್ತಃ ಕಾವ್ಯೇನೋಶನಸಾ ಸ್ವಯಮ್ ॥ ೨೪ ॥
ಪುತ್ರೋ ಯಸ್ತ್ವಾನುವರ್ತೇತ ಸ ರಾಜಾ ಪೃಥಿವೀಪತಿಃ ।
ಭವತೋಽನುನಯಾಮ್ಯೇವಂ ಪುರೂ ರಾಜ್ಯೇಽಭಿಷಿಚ್ಯತಾಮ್ ॥ ೨೯ ॥

'ನನ್ನ ಮನದಂತೆ ನಡೆಯುವ ಮಗನೇ ಪಟ್ಟವನ್ನೇರಿ ಪೃಥ್ವಿಯನ್ನು ಪರಿಪಾಲಿಸುವನೆಂದು ಶುಕ್ರಾಚಾರ್ಯನು ನನಗೆ ವರವನ್ನಿತ್ತಿರುವನು. ಹೀಗಾಗಿ, ಎಲೈ ಪ್ರಜೆಗಳೇ, ಪುರುವಿಗೇನೆ ಪಟ್ಟವನ್ನು ಕಟ್ಟಬೇಕೆಂಬ ನನ್ನ ತೋರಿಕೆಯನ್ನು ನೀವೆಲ್ಲ ಮನ್ನಿಸಬೇಕು.'

+ ಮುಪ್ಪು, ತಾರುಣ್ಯಗಳ ವಿನಿಮಯಕ್ಕಾಗಿ ಯಯಾತಿಯು ಮಾಡಿದ ಕೋರಿಕೆಯನ್ನು ಶುಕ್ರಾಚಾರ್ಯನು ಒಪ್ಪಿಕೊಂಡನು. ಇದೊಂದು ಶಾಪವೇ ಇಲ್ಲವೆ ವರದಾನ ? ನಿಜವೆಂದರೆ ಇದೊಂದು ಉಃಶಾಪ. ಆದರೆ ಮೇಲೆ (೮೫/೨೮) 'ವರೋ ದತ್ತಃ' ಎಂಬ ಮಾತಿದೆ. ಇದು ಉಃಶಾಪವಾಗಿರಲಿ ಇಲ್ಲವೆ ವರವಾಗಿರಲಿ, ಇದು ಯಾಚಿತವಾಗಿದ್ದು ಶರತ್ತಿನದೂ ಆಗಿದೆಯೆಂಬುದು ಮಾತ್ರ ನಿಜ.

## ೩೦. ಶುಕ್ರಾಚಾರ್ಯ > ಬ್ರಾಹ್ಮಣ ಜಾತಿ **ಆದಿ/೭೬**

ವೈಶಂಪಾಯನ ಜನಮೇಜಯನಿಗೆ ಕಚನು ಸಂಜೀವಿನೀವಿದ್ಯೆಯನ್ನು ಹೇಗೆ ಪಡೆದನೆಂಬುದನ್ನು ಕುರಿತು ಹೇಳುತ್ತಲಿದ್ದಾನೆ.

ಅಸುರರು ಮದಿರಾಸಕ್ತರಾಗಿ ಕಚನನ್ನು ಸುಟ್ಟು ಅವನ ದೇಹದ ಬೂದಿಯನ್ನು ಶುಕ್ರಾಚಾರ್ಯನ ಹೆಂಡದಲ್ಲಿ ಬೆರೆಸಿ ಕುಡಿಸಿದರು. ಅದರಿಂದಾಗಿ ಕಚನಿಗೆ ಸಂಜೀವಿನೀವಿದ್ಯೆ ದೊರಕಿತು. ಶುಕ್ರಾಚಾರ್ಯನಿಗೆ ತನ್ನ ತಪ್ಪಿನ ಅರಿವಾಯಿತು. ಆದರೆ ನಡೆಯಬಾರದ್ದು

ನಡೆದುಹೋದದ್ದರಿಂದ ಆವನು ಕೈಕೈಹಿಸುಕಿಕೊಳ್ಳುತ್ತ ಕುಳಿತುಕೊಳ್ಳುವುದನ್ನು ಬಿಟ್ಟು ಇನ್ನೇನನ್ನೂ ಮಾಡುವಂತಿರಲಿಲ್ಲ. ಇದೆಲ್ಲ ಅನರ್ಥಕ್ಕೆ ಕಾರಣ ಮದ್ಯಪಾನ. ಅವನು ಬಲುಕ್ರುದ್ಧನಾದನು. ಇಡಿಯ ಬ್ರಾಹ್ಮಣಜಾತಿಯ ಕಲ್ಯಾಣಕ್ಕಾಗಿ ಎಂದು ಅವನು ಈ ಶಾಪವನ್ನು ಉಚ್ಚರಿಸಿದನು—

> ಯೋ ಬ್ರಾಹ್ಮಣೋಽದ್ಯಪ್ರಭೃತೀಹ ಕಶ್ಚಿನ್ಮೋಹಾತ್ ಸುರಾಂ ಪಾಸ್ಯತಿ ಮಂದಬುದ್ಧಿಃ ।
>
> ಅಪೇತಧರ್ಮಾ ಬ್ರಹ್ಮಹಾ ಚೈವ ಸ್ಯಾದಸ್ಮಿಂಲ್ಲೋಕೇ ಗರ್ಹಿತಃ ಸ್ಯಾತ್ ಪರೇ ಚ ॥ ೬೭ ॥
>
> ಮಯಾ ಚೈತಾಂ ವಿಪ್ರಧರ್ಮೋಕ್ತಿಸೀಮಾಂ ಮರ್ಯಾದಾಂ ವೈ ಸ್ಥಾಪಿತಾಂ ಸರ್ವಲೋಕೇ ।
>
> ಸಂತೋ ವಿಪ್ರಾಃ ಶುಶ್ರುವಾಂಸೋ ಗುರೂಣಾಂ ದೇವಾ ಲೋಕಾಶ್ಚೋಪ ಶೃಣ್ವಂತು ಸರ್ವೇ ॥ ೬೮ ॥

'ಇಂದಿನಿಂದ ಯಾವನಾದರೂ ಬ್ರಾಹ್ಮಣನು ಮೋಹವಶದಿಂದಾಗಿ ಮದ್ಯಪಾನವನ್ನು ಮಾಡಿದನಾದರೆ ಅವನು ಧರ್ಮಭ್ರಷ್ಟನಾಗುವನು, ಬ್ರಾಹ್ಮಣರಿಗೆ ಘಾತವನ್ನು ಮಾಡುವನು, ಇಹಲೋಕ ಹಾಗೂ ಪರಲೋಕಗಳಲ್ಲಿ ನಿಂದೆಗೆ ಗುರಿಯಾಗುವನು. ನಾನಿಂದು ಬ್ರಾಹ್ಮಣರಿಗೆ ಆಚಾರಸಂಹಿತೆಯನ್ನು ಹೇಳುತ್ತಲಿದ್ದೇನೆ. ಬ್ರಾಹ್ಮಣರೆಲ್ಲರೂ ಅದನ್ನು ಪಾಲಿಸತಕ್ಕದ್ದು. ಸನ್ನಡತೆಯ ಬ್ರಾಹ್ಮಣರು, ಗುರುಸೇವೆಯಲ್ಲಿ ಮೈಮರೆತವರಾದ ಶಿಷ್ಯಂದಿರು, ಈ ವಿಶ್ವದಲ್ಲಿರುವ ಸಾಮಾನ್ಯ ಪ್ರಜೆಗಳು ಹಾಗೂ ದೇವತೆಗಳು (ಕೂಡ) ಮರ್ಯಾದೆಯನ್ನು ಪಾಲಿಸಲೇಬೇಕು.'

+ ಶುಕ್ರಾಚಾರ್ಯರ ಮೇಲಿನ ಉದ್ಗಾರವನ್ನು ಪೂರ್ತಿ ಶಾಪೋದ್ಗಾರ ಎನ್ನಲಾಗದು. ಇದರಲ್ಲಿ ಉಪದೇಶವಿದೆ. ಅದನ್ನು ಪಾಲಿಸದಿದ್ದಲ್ಲಿ ಎಂತಹ ಶಿಕ್ಷೆಯಾದೀತೆಂಬ ಸಂಗತಿಯ ಸಂಸೂಚನೆಯೂ ಇದೆ.

## ೩೧. ದೇವಯಾನಿ > ಕಚ

**ಆದಿ/೭೭**

ವೈಶಂಪಾಯನ ಜನಮೇಜಯನಿಗೆ ಕಚ-ದೇವಯಾನಿಯ ಕಥೆಯನ್ನು ಹೇಳುತ್ತಲಿದ್ದಾನೆ.

ಕಚ ಸಂಜೀವಿನೀವಿದ್ಯೆಯನ್ನು ಪಡೆದು ಶುಕ್ರಾಚಾರ್ಯನ ಅಪ್ಪಣೆಯ ಮೇರೆಗೆ ಅಲ್ಲಿಂದ ಹೊರಟನು. ಆಗ ದೇವಯಾನಿಯು ಅವನ ಬಗೆಗಿನ ತನ್ನ ಪ್ರೇಮವನ್ನು ವ್ಯಕ್ತಪಡಿಸಿದಳು. ತನ್ನನ್ನು ವಿಧಿವತ್ತಾಗಿ ಮದುವೆಯಾಗಬೇಕೆಂದು ಕೇಳಿಕೊಂಡಳು. ಅಸುರರು ಎರಡು ಸಲ ಅವನನ್ನು ಕೊಂದುಬಿಟ್ಟಾಗ ಅವಳು ಆತನ ಬಗೆಗಿನ ಪ್ರೇಮದಿಂದಾಗಿಯೇ ಶುಕ್ರಾಚಾರ್ಯನಿಗೆ ದುಂಬಾಲುಬಿದ್ದು ಅವನನ್ನು ಬದುಕಿಸಿರುತ್ತಾಳೆ. ಒಂದು ಸಲವಂತೂ ಕಚ ಶುಕ್ರಾಚಾರ್ಯನ ಹೊಟ್ಟೆಯಿಂದ ಹುಟ್ಟಿ ಬಂದನು. ಹೀಗಾಗಿ ಅವನು ತನ್ನನ್ನು ದೇವಯಾನಿಯ ಒಡಹುಟ್ಟಿದವನೆಂದು ಬಗೆಯಹತ್ತಿದ್ದನು. ಆದ್ದರಿಂದ ಈಗ ಅವನು ಬಗೆಬಗೆಯಾಗಿ ಅವಳಿಗೆ ತಿಳಿಹೇಳಲು ಯತ್ನಿಸಹತ್ತಿದನು. ಆದರೆ ಅವಳು ಮಾತ್ರ

ತನ್ನ ಹಟವನ್ನು ಬಿಡಲಿಲ್ಲ. ಕಚನ ನಿರ್ಧಾರವೂ ಅವಿಚಲವಾದುದರಿಂದ ಅವನು ಅವಳ ಕೋರಿಕೆಯನ್ನು ಒಪ್ಪಲಿಲ್ಲ. ಇನ್ನು ಅವನು ತನಗೆ ವಶವಾಗನೆಂಬುದು ಮನದಟ್ಟಾಗುತ್ತಲೇ ದೇವಯಾನಿಯು ತುಂಬ ಸಂತಪ್ತಳಾಗಿ ಅವನಿಗೆ ಹೀಗೆಂದಳು—

ಯದಿ ಮಾಂ ಧರ್ಮಕಾಮಾರ್ಥೇ ಪ್ರತ್ಯಾಖ್ಯಾಸಸಿ ಯಾಚಿತಃ ।
ತತಃ ಕಚ ನ ತೇ ವಿದ್ಯಾ ಸಿದ್ಧಿಮೇಷಾ ಗಮಿಷ್ಯತಿ ॥ ೧೬ ॥

'ಧರ್ಮ, ಅರ್ಥ ಹಾಗೂ ಕಾಮ ಎಂಬ ಈ ಪುರುಷಾರ್ಥಗಳ ಪ್ರಾಪ್ತಿಗಾಗಿ ನಾನು ನಿನ್ನನ್ನು ಮದುವೆಯಾಗಬಯಸುತ್ತಿರುವಲ್ಲಿ ನೀನು ಮಾತ್ರ ನನ್ನನ್ನು ತಳ್ಳಿಹಾಕುತ್ತಿರುವೆ ಎಂದಬಳಿಕ ನೀನು ಗಳಿಸಿಕೊಂಡ (ಸಂಜೀವಿನೀ) ವಿದ್ಯೆಯು ನಿನಗೆ ಫಲವನ್ನು ನೀಡದಿರಲಿ.'

ಶಪ್ತೋ ನಾರ್ಹೋಽಸ್ಮಿ ಶಾಪಸ್ಯ ಕಾಮತೋಽದ್ಯ ನ ಧರ್ಮತಃ ॥ ೧೮ ॥

+ ದೇವಯಾನಿಯು ಈ ಮಾತನ್ನಾಡಿದುದು ಧರ್ಮಬುದ್ಧಿಯಿಂದಾಗಿರದೆ ಕಾಮಬುದ್ಧಿಯಿಂದ ಎಂಬುದು ಕಚನ ಅಭಿಪ್ರಾಯವಾಗಿದೆ. ಅಲ್ಲದೆ ಶಾಪವನ್ನು ನೀಡುವ ಸಾಮರ್ಥ್ಯ ದೇವಯಾನಿಯ ಬಳಿ ಬಂದುದು ಹೇಗೆ ? ಎಂಬ ಪ್ರಶ್ನೆಯೂ ಉಳಿದುಕೊಳ್ಳುತ್ತದೆ.

## ೩೨. ಕಚ > ದೇವಯಾನಿ ಆದಿ/೭೭

ನೋಡಿ : ಶಾಪ—ದೇವಯಾನಿ > ಕಚ

ವೈಶಂಪಾಯನ ಜನಮೇಜಯನಿಗೆ ಕಚ–ದೇವಯಾನಿಯ ಕಥೆಯನ್ನು ಹೇಳುತ್ತಲಿದ್ದಾನೆ.

ಕಚನು ದೇವಯಾನಿಯನ್ನು ಮದುವೆಯಾಗಲು ಒಪ್ಪದಿರಲು ಹಲವು ಕಾರಣಗಳಿದ್ದವು. ಅವನು ವಿದ್ಯೆಯನ್ನು ಗಳಿಸಲೆಂದು ಶುಕ್ರಾಚಾರ್ಯನಲ್ಲಿಗೆ ಬಂದಿದ್ದನು. ಸಂಜೀವಿನೀ ವಿದ್ಯೆಯನ್ನು ಪಡೆಯುವುದು ಅವನ ಮುಖ್ಯ ಗುರಿಯಾಗಿತ್ತು. ಅದರಲ್ಲಿ ಬಾಧೆಯನ್ನು ಉಂಟುಮಾಡಬಲ್ಲ ಯಾವುದೇ ಸಂಗತಿಯ ಆಸೆ ಅವನಲ್ಲಿರಲಿಲ್ಲ. ದೇವಯಾನಿಯು ಗುರುವಿನ ಮಗಳಾದ್ದರಿಂದ ಅವಳ ಬಗೆಗೆ ಪ್ರಣಯಭಾವನೆಯನ್ನು ತಳೆಯುವುದು ತಪ್ಪು. ಅಲ್ಲದೆ ಅವರ ಮದುವೆಗೆ ಶುಕ್ರಾಚಾರ್ಯನ ಒಪ್ಪಿಗೆ ದೊರೆಯುವ ಸಾಧ್ಯತೆಯೂ ಇರಲಿಲ್ಲ. ಅವನು ಶುಕ್ರಾಚಾರ್ಯನ ಹೊಟ್ಟೆಯಿಂದ ಮರುಹುಟ್ಟು ಪಡೆದ ಕಾರಣ ಅವಳು ಒಡಹುಟ್ಟಿದವಳೆನ್ನಿಸಿದ್ದಳು. ಕಚನು ದೇವಯಾನಿಗೆ ಇವೆಲ್ಲ ಸಂಗತಿಗಳನ್ನು ತಿಳಿಹೇಳಿಯೂ ಅವಳು ತನ್ನನ್ನು ಶಪಿಸಿದುದು ಅವನಿಗೆ ಸುತರಾಂ ಹಿಡಿಸಲಿಲ್ಲ, ಅವನು ಅವಳಿಗೆ ಹೀಗೆಂದನು—

ಆರ್ಷಂ ಧರ್ಮಂ ಬ್ರುವಾಣೋಽಹಂ ದೇವಯಾನಿ ಯಥಾ ತ್ವಯಾ ।
ಶಪ್ತೋ ನಾರ್ಹೋಽಸ್ಮಿ ಶಾಪಸ್ಯ ಕಾಮತೋಽದ್ಯ ನ ಧರ್ಮತಃ ॥ ೧೮ ॥
ತಸ್ಮಾದ್ ಭವತ್ಯಾ ಯಃ ಕಾಮೋ ನ ತಥಾ ಸ ಭವಿಷ್ಯತಿ ।
ಋಷಿಪುತ್ರೋ ನ ತೇ ಕಶ್ಚಿಜ್ಜಾತು ಪಾಣಿಂ ಗ್ರಹೀಷ್ಯತಿ ॥ ೧೯ ॥

ಫಲಿಷ್ಯತಿ ನ ತೇ ವಿದ್ಯಾ ಯತ್ ತ್ವಂ ಮಾಮಾತ್ಥ ತತ್ ತಥಾ ।
ಅಧ್ಯಾಪಯಿಷ್ಯಾಮಿ ತು ಯಂ ತಸ್ಯ ವಿದ್ಯಾ ಫಲಿಷ್ಯತಿ ॥ ೨೦ ॥

'ನಾನು ನಿನಗೆ ಹಿಂದಿನಿಂದ ನಡೆದುಬಂದಿರುವ ಧರ್ಮನಿರ್ಣಯವನ್ನು ವಿವರಿಸುತ್ತಲಿದ್ದೆ. ಇಷ್ಟಾಗಿಯೂ ನೀನು ನನಗಿತ್ತ ಶಾಪಕ್ಕೆ ನಾನು ಅರ್ಹನಲ್ಲ (ಅದು ನನಗೆ ಪರಿಣಾಮಕರವಲ್ಲ). ಈ ಶಾಪವನ್ನೀಯುವಲ್ಲಿ ನಿನ್ನ ಧರ್ಮಬುದ್ಧಿ ಇರದೆ ಕಾಮ ವಿಕಾರದಿಂದಾಗಿ ನಿನ್ನ ಸಮತೋಲ ಕೆಟ್ಟಿದೆ. ಹೀಗಾಗಿ ಬ್ರಾಹ್ಮಣಕುಮಾರನೊಂದಿಗೆ ಮದುವೆಯಾಗಬೇಕೆನ್ನುವ ನಿನ್ನ ಹಂಬಲ ಎಂದಿಗೂ ಕೈಗೂಡದು. ನಾನು ಪಡೆದ ಸಂಜೀವಿನೀವಿದ್ಯೆ ನನಗೆ ದಕ್ಕದೆಂದು ನನ್ನನ್ನು ಶಪಿಸಿರುವೆ (ನಾನದನ್ನು ಲೆಕ್ಕಿಸೆನು). ಆದರೆ ನಾನು ವಿದ್ಯೆಯನ್ನು ಯಾರಿಗೆ ಕಲಿಸುವೆನೋ ಅವರಿಗಾದರೂ ಅದು ಫಲ ನೀಡದಿರದು (ಎಂಬಲ್ಲಿ ಸಂದೇಹವಿಲ್ಲ).'

+ ಮರುಶಾಪ.

## ೩೩. ಯಯಾತಿ > ಯದು

**ಆದಿ/೮೪**

ನೋಡಿ : ಶಾಪ—ಶುಕ್ರಾಚಾರ್ಯ > ಯಯಾತಿ

ವೈಶಂಪಾಯನ ಜನಮೇಜಯನಿಗೆ ಯಯಾತಿಯ ಆಖ್ಯಾನವನ್ನು ಹೇಳುತ್ತಲಿದ್ದಾನೆ.

ಶುಕ್ರಾಚಾರ್ಯನ ಶಾಪದಿಂದಾಗಿ ಯಯಾತಿಗೆ ಅಕಾಲಿಕವಾಗಿ ಮುಪ್ಪು ಬಂದಿತು. ಅವನ ಯೌವನದ ಅಭಿಲಾಷೆ ಇನ್ನೂ ಪೂರ್ತಿಯಾಗಿರಲಿಲ್ಲ. ಶುಕ್ರಾಚಾರ್ಯರಿತ್ತ ಉಃಶಾಪದಿಂದಾಗಿ ಅವನು ಬೇರೊಬ್ಬನಿಗೆ ತನ್ನ ಮುಪ್ಪನ್ನು ನೀಡಿ ಅವನಿಂದ ಅವನ ಯೌವನವನ್ನು ಪಡೆಯುವ ಸಾಧ್ಯತೆ ಹುಟ್ಟಿಕೊಂಡಿತ್ತು. ಯಯಾತಿಯು ಈ ಬಗೆಗೆ ತನ್ನ ಮಗ ಯದುವನ್ನು ಕೇಳಲಾಗಿ ಅವನು ಅದನ್ನು ನಿರಾಕರಿಸಿಬಿಟ್ಟನು. ಇಷ್ಟಕ್ಕೇ ನಿಲ್ಲದೆ ಅವನು, 'ನಿಮಗೆ ನಾನಲ್ಲದೆ ಇನ್ನೂ ಕೆಲವು ಜನ ಮಕ್ಕಳಿದ್ದಾರೆ. (ಬೇಕಿದ್ದರೆ) ಅವರಲ್ಲಿ ಯಾರನ್ನಾದರೂ ಕೇಳಿ' ಎಂದನು.

ಯತ್ ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ।
ತಸ್ಮಾದರಾಜ್ಯಭಾಕ್ ತಾತ ಪ್ರಜಾ ತವ ಭವಿಷ್ಯತಿ ॥ ೯ ॥

ಆಗ ಯಯಾತಿ ಹೀಗೆಂದನು : 'ನೀನು ನನ್ನ ಹೊಟ್ಟೆಯ ಮಗನಿದ್ದೂ ನನಗೆ ನಿನ್ನ ಯೌವನವನ್ನು ಕೊಡಲೊಪ್ಪುತ್ತಲಿಲ್ಲ. ಆದುದರಿಂದ ನಿನ್ನ ಮಕ್ಕಳು-ಮೊಮ್ಮಕ್ಕಳಿಗೂ ಕೂಡ ರಾಜ್ಯ ಸಿಕ್ಕಲಾರದು.'

+ ಸಂಸ್ಕೃತದ ಶ್ಲೋಕದಲ್ಲಿ ಶಾಪ ಎಂಬ ಪದವಿಲ್ಲ. ಅಂದಬಳಿಕ ಇದು ಶಿಕ್ಷೆಯೋ ಇಲ್ಲವೆ ಶಾಪವೋ ?

**ಉದ್ಯೋಗ/೧೪೯**

ತನ್ನ ಮಧ್ಯಸ್ಥಿಕೆಯ ಕಾಲಕ್ಕೆ ಧೃತರಾಷ್ಟ್ರನು ದುರ್ಯೋಧನನಿಗೆ ಏನೆಂಬುದನ್ನು (ಈಗ) ಶ್ರೀಕೃಷ್ಣ ಯುಧಿಷ್ಠಿರನಿಗೆ ಹೇಳುತ್ತಲಿದ್ದಾನೆ. ಯಯಾತಿಯ ಮಗ ಯದು ಬಲು ಬಲಾಢ್ಯನಾಗಿದ್ದನು. ಆದರೆ ಯಯಾತಿಯು ಅವನನ್ನು ರಾಜ್ಯದಿಂದ ದೂರಕ್ಕೆ

ಸರಿಸಿದನು. ಅವನು ಯಯಾತಿಗೆ ತನ್ನ ಯೌವನವನ್ನು ಕೊಡಲು ನಿರಾಕರಿಸಿದ್ದೇ ಇದಕ್ಕೆ ಕಾರಣ.

ತಂ ಶಿತಾ ಪರಮಕ್ರುದ್ಧೋ ಯಯಾತಿರ್ನಹುಷಾತ್ಮಜಃ ।
ಶಶಾಪ ಪುತ್ರಂ ಗಾಂಧಾರೇ ರಾಜ್ಯಾಚ್ಚಾಪಿ ವ್ಯರೋಪಯತ್ ॥ ೧೦ ॥

ನಹುಷನ ಮಗನಾದ ಯಯಾತಿಯು ಸಂತಪ್ತನಾಗಿ ಯದುವನ್ನು ಶಪಿಸಿ ಅವನನ್ನು ರಾಜ್ಯದಿಂದ ದೂರ ತಳ್ಳಿದನು.

+ ಇಲ್ಲಿ 'ಶಾಪ'ವನ್ನಿತ್ತ ಬಗೆಗೆ ಖಚಿತವಾದ ನಿರ್ದೇಶನವಿದೆ.

ಈ ಬಗೆಗೆ ಭಾರತಾಚಾರ್ಯರಾದ ಚಿಂ. ವಿ. ವೈದ್ಯ ಅವರು ಹೀಗೆನ್ನುತ್ತಾರೆ : 'ಯದುವಿಗೆ—ನಿನ್ನ ಸಂತತಿಯು ಅರಾಜಭಾಕ್ ಆಗಲಿದೆಯೆಂದು ನೀಡಲಾದ ಶಾಪ—'

## ೩೪. ಯಯಾತಿ > ತುರ್ವಸು ಆದಿ/೮೪

ನೋಡಿ : ಶಾಪ—ಯಯಾತಿ > ಯದು
ಮೊದಲ ಸಂದರ್ಭ: ಯಯಾತಿ > ಯದು ಶಾಪದಂತೆ.

ಯದುವು ಯಯಾತಿಯ ಮುಪ್ಪನ್ನು ತುಸು ಕಾಲದವರೆಗೆ ಪಡೆದು ಬದಲಾಗಿ ತನ್ನ ಯೌವನವನ್ನು ಅವನಿಗೆ ನೀಡಲು ಸುತರಾಂ ಒಪ್ಪಲಿಲ್ಲ. ಆಗ ಯಯಾತಿಯು ತನ್ನ ಎರಡನೆಯ ಮಗ ತುರ್ವಸುವನ್ನು ಈ ಬಗೆಗೆ ಕೇಳಿದನು. ಅವನೂ ಒಪ್ಪಲಿಲ್ಲ. ಆಗ ಕೋಪದಿಂದ ಕೆರಳಿದ ಯಯಾತಿಯು ಅವನಿಗೆ ಹೀಗೆಂದನು—

ಯತ್ ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ।
ತಸ್ಮಾತ್ ಪ್ರಜಾ ಸಮುಚ್ಛೇದಂ ತುರ್ವಸೋ ತವ ಯಾಸ್ಯತಿ ॥ ೧೩ ॥
ಸಂಕೀರ್ಣಾಚಾರಧರ್ಮೇಷು ಪ್ರತಿಲೋಮಚರೇಷು ಚ ।
ಪಿಶಿತಾಶಿಷು ತಿರ್ಯಗ್ಯೋನಿಗತೇಷು ಚ ।
ಪಶುಧರ್ಮೇಷು ಪಾಪೇಷು ಮ್ಲೇಚ್ಛೇಷು ತ್ವಂ ಭವಿಷ್ಯಸಿ ॥ ೧೫ ॥

'ಎಲೈ ಮೂರ್ಖ ತುರ್ವಸುವೇ ! ನೀನು ನನ್ನ ಕರುಳಿನ ಕುಡಿಯಾಗಿಯೂ ನನಗೆ ನಿನ್ನ ಯೌವನವನ್ನು ಒಪ್ಪಿಸಲು ಸಿದ್ಧನಿಲ್ಲ. ಅಂದಬಳಿಕ ನಿನ್ನ ವಂಶ ಬೆಳೆಯದಿರಲಿ. ಅಶುದ್ಧವಾದ ಆಚಾರಧರ್ಮದವರು, ಪ್ರತಿಲೋಮವಿವಾಹದಿಂದಾಗಿ ಸಂಕರಹೊಂದಿದವರು, ನರಭಕ್ಷಕರಾದ ಅಂತ್ಯಜರು, ಗುರುಪತ್ನಿಯೊಂದಿಗೆ ಸಂಬಂಧವನ್ನಿರಿಸಿಕೊಳ್ಳಲು ಹಿಂಜರಿಯದವರು, ಮೊದಲಾದಂತಹ ಮ್ಲೇಂಛರಿಗೆ ನೀನು ರಾಜನಾಗು.'

+ ಮೇಲಿನ ಶ್ಲೋಕದಲ್ಲಿ 'ಶಾಪ' ಎಂಬ ಪದವಿಲ್ಲದೆಹೋದರೂ ಅದು ಶಾಪವೇ ಆಗಿದೆ. ಏಕೆಂದರೆ,

ಏವಂ ಸ ತುರ್ವಸುಂ ಶಪ್ತ್ವಾ ಯಯಾತಿಃ ಸುತಮಾತ್ಮನಃ ॥ ೧೬ ॥

ಎಂಬ ಖಚಿತವಾದ ಉಲ್ಲೇಖ ಇದೆ.

ಉದ್ಯೋಗ/೧೪೯

ಇದರಲ್ಲೂ ಕೂಡ 'ಶಾಪ'ದ ಖಚಿತವಾದ ಉಲ್ಲೇಖವು ಮುಂದಿನಂತಿದೆ—

ಯೇ ಚೈನಮನ್ವವರ್ತಂತ ಭ್ರಾತರೋ ಬಲದರ್ಪಿತಾಃ ।
ಶಶಾಪ ತಾನಭಿಕ್ರುದ್ಧೋ ಯಯಾತಿಸ್ತನಯಾನಥ ॥ ೧೧ ॥

ಯಯಾತಿಯು ತಮ್ಮ ಸಾಮರ್ಥ್ಯಗಳಿಂದಾಗಿ ಸೊಕ್ಕೇರಿದ ಯದುವಿನ ತಮ್ಮಂದಿರಾದ ತನ್ನ (ಉಳಿದ) ಮಕ್ಕಳನ್ನು ಶಪಿಸಿದನು.

## ೩೫. ಯಯಾತಿ > ದ್ರುಹ್ಯು

ಆದಿ/೮೪

ನೋಡಿ : ಶಾಪ—ಯಯಾತಿ > ತುರ್ವಸು
ಮೊದಲ ಸಂದರ್ಭ : ಯಯಾತಿ > ಯದುವಿನ ಶಾಪದಂತೆ.

ಯದು ಹಾಗೂ ತುರ್ವಸುವಿನ ನಂತರ ಯಯಾತಿಯು ಅವರಂತೆಯೇ ದ್ರುಹ್ಯುವನ್ನು ಅವನ ಯೌವನಕ್ಕಾಗಿ ಕೇಳಿದನು. ಅವನೂ ಒಪ್ಪಲಿಲ್ಲ. ಆಗ ಯಯಾತಿಯು ಅವನಿಗೆ ಹೀಗೆಂದನು—

ಯತ್ ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ।
ತಸ್ಮಾದ್ ದ್ರುಹ್ಯೋ ಪ್ರಿಯಃ ಕಾಮೋ ನ ತೇ ಸಂಪತ್ಸ್ಯತೇ ಕ್ವಚಿತ್ ॥ ೨೦ ॥
ಯತ್ರಾಶ್ವರಥಮುಖ್ಯಾನಾಮಶ್ವಾನಾಂ ಸ್ಯಾದ್ ಗತಂ ನ ಚ ।
ಹಸ್ತಿನಾಂ ಪೀಠಕಾನಾಂ ಚ ಗರ್ದಭಾನಾಂ ತಥೈವ ಚ ॥ ೨೧ ॥
ಬಸ್ತಾನಾಂ ಚ ಗವಾಂ ಚೈವ ಶಿಬಿಕಾಯಾಸ್ತಥೈವ ಚ ।
ಉಡುಪ್ಲವಸಂತಾರೋ ಯತ್ರ ನಿತ್ಯಂ ಭವಿಷ್ಯತಿ ।
ಅರಾಜಾ ಭೋಜಶಬ್ದಂ ತ್ವಂ ತತ್ರ ಪ್ರಾಪ್ಸ್ಯಸಿ ಸಾನ್ವಯಃ ॥ ೨೨ ॥

'ಎಲೈ ದ್ರುಹ್ಯುವೇ ! ನೀನು ನನ್ನ ಹೊಟ್ಟೆಯ ಮಗನಾಗಿಯೂ ನಿನ್ನ ಯೌವನವನ್ನು ನನಗೆ ಕೊಡಲಿಚ್ಛಿಸೆ. ಅಂದಬಳಿಕ ನಿನ್ನ ಬಯಕೆಗಳಾವವೂ ಕೈಗೂಡದಿರಲಿ. ಉತ್ತಮವಾದ ರಥಗಳು, ಕುದುರೆಗಳು, ಆನೆಗಳು ಇಲ್ಲವೆ ಕತ್ತೆಗಳು ಕೂಡ ಹೋಗಲಾಗದಂಥ ; ಟಗರು, ಎತ್ತುಗಳು ಕೂಡ ಹೋಗಲಾಗದಂಥ ; ಪಲ್ಲಕ್ಕಿಯಲ್ಲಿ ಕುಳಿತು ಕೂಡ ಹೋಗಲಾಗದಂಥ ; ಬರಿ ನೌಕೆಯಲ್ಲಿ ಕುಳಿತು ಮಾತ್ರ ಹೋಗಬಹುದಾದ ತಾಣದಲ್ಲಿ ನೀನು ವಾಸಮಾಡಬೇಕಾದೀತು. ಅಲ್ಲಿ ಯಾರೂ ನಿನ್ನನ್ನು ರಾಜನೆಂದು ಒಪ್ಪಲಾರರು. ನೀನು ಬರಿ 'ಭೋಜ'ನೆಂದು ಅಲೆದಾಡಬೇಕಾದೀತು. ನಿನ್ನ ವಂಶಜರೂ ನಿನ್ನ ಹಾಗೆಯೇ ಆಗುವರು.'

+ ಯಯಾತಿ > ತುರ್ವಸು ಶಾಪದಂತೆ.

ಉದ್ಯೋಗ/೧೪೯

+ ಯಯಾತಿ > ತುರ್ವಸು ಶಾಪದಂತೆ.

## ೩೬. ಯಯಾತಿ > ಅನು

ಆದಿ/೮೪

ನೋಡಿ : ಶಾಪ—ಯಯಾತಿ > ತುರ್ವಸು
ಮೊದಲ ಸಂದರ್ಭ—ಯಯಾತಿ > ಯದು ಶಾಪದಂತೆ.

ಯದು, ತುರ್ವಸು ಹಾಗೂ ದ್ರುಹ್ಯುವು ಮುಪ್ಪನ್ನು ತೆಗೆದುಕೊಳ್ಳಲು ನಿರಾಕರಿಸಿದ ತರುವಾಯ ಯಯಾತಿಯು ಅನುವನ್ನು ಅವನ ಯೌವನಕ್ಕಾಗಿ ಕೇಳಿದನು. ಅವನೂ ಒಪ್ಪಲಿಲ್ಲ. ತಾನು ಒಪ್ಪದಿರಲು ಮುಂದಿನ ಕಾರಣಗಳನ್ನು ಹೇಳಿದನು—

ಜೀರ್ಣಃ ಶಿಶುವದಾದತ್ತೇಽಕಾಲೇಽನ್ನಮಶುಚಿರ್ಯಥಾ ।
ನ ಜುಹೋತಿ ಚ ಕಾಲೇಽಗ್ನಿಂ ತಾಂ ಜರಾಂ ನಾಭಿಕಾಮಯೇ ॥ ೨೪ ॥

'ಯಾವ ವಯಸ್ಸಿನಲ್ಲಿ ಚಿಕ್ಕ ಮಕ್ಕಳಂತೆ ಹೊತ್ತಿಲ್ಲದ ಹೊತ್ತಿಗೆ ತಿನ್ನಬೇಕಾಗುವದೋ; ಯಾವ ಅವಸ್ಥೆಯಲ್ಲಿ ಅಸಹ್ಯವನ್ನು ಹುಟ್ಟಿಸುವಂಥ ಸಂಗತಿಗಳು ತುಂಬ ಇರುವವೋ; ಅಗ್ನಿಹೋತ್ರವನ್ನು ಕಾಯ್ದುಕೊಳ್ಳುವುದು ಕೂಡ ಕಷ್ಟದ್ದೋ; ಅಂಥ ಮುಪ್ಪು ನನಗೆ ಬೇಡ.' ಅನುವಿನ ಮಾತು ಕೇಳಿ ಯಯಾತಿಗೆ ಕೆಂಡದಂತಹ ಕೋಪ ಬಂದಿತು. ಅವನೆಂದನು—

ಯತ್ ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ।
ಜನಾದೋಷಸ್ತ್ವಯಾ ಪ್ರೋಕ್ತಸ್ತಸ್ಮಾತ್ ತ್ವಂ ಪ್ರತಿಪತ್ಸ್ಯಸೇ ॥ ೨೫ ॥
ಪ್ರಜಾಶ್ಚ ಯೌವನಪ್ರಾಪ್ತಾ ವಿನಶಿಷ್ಯಂತ್ಯನೋ ತವ ।
ಅಗ್ನಿಪ್ರಸ್ಕಂದನಪರಸ್ತ್ವಂ ಚಾಪ್ಯೇವಂ ಭವಿಷ್ಯಸಿ ॥ ೨೬ ॥

'ಎಲೈ ಅನೂ! ನೀನು ನನ್ನ ಮಗನೇ ಆಗಿಯೂ ನನಗೆ ನಿನ್ನ ಯೌವನವನ್ನು ಕೊಡಲೊಪ್ಪುತ್ತಿಲ್ಲ. (ಅಂದಬಳಿಕ) ಇದೀಗ ನೀನೇ ಬಣ್ಣಿಸಿದ ಮುಪ್ಪಿನ ಅವಸ್ಥೆ ಈ ಕ್ಷಣಕ್ಕೆ ನಿನಗೆ ಬರಲಿ. ನಿನ್ನ ಮಕ್ಕಳು ತುಂಬುಯೌವನದಲ್ಲಿಯೇ ನಾಶವನ್ನಪ್ಪಲಿ. ಮುಪ್ಪಿನಲ್ಲಿ ಕಾಪಾಡಲಾಗದ ಅಗ್ನಿಹೋತ್ರ ನಿನ್ನ ಕೈಯಿಂದ (ಈಗಲೂ) ಕಾಪಾಡದಂತಾಗಲಿ.'

+ ಯಯಾತಿ > ತುರ್ವಸು ಶಾಪದಂತೆ.

ಉದ್ಯೋಗ/೧೪೯

+ ಯಯಾತಿ > ತುರ್ವಸು ಶಾಪದಂತೆ.

## ೩೭. ಬ್ರಹ್ಮದೇವ > ಮಹಾಭಿಷ ಆದಿ/೯೬

ಜನಮೇಜಯ ವೈಶಂಪಾಯನನಿಗೆ ಭೀಷ್ಮನ ಹಿಂದಿನ ಜನ್ಮದ ಕಥೆಯನ್ನು ಹೇಳುತ್ತಲಿದ್ದಾನೆ.

ನೋಡಿ : ಶಾಪ—ವಸಿಷ್ಠ > ಅಷ್ಟವಸು ಆದಿ ೯೬/೧೨–೧೫
೯೮/೧೯, ೨೩

ಗಂಗೆಯ ಉಡಿಗೆ ಗಾಳಿಯಿಂದಾಗಿ ಹಾರಿತು. ಆಗ ಮಹರ್ಷಿಗಳು ಹಾಗೂ ಬ್ರಹ್ಮದೇವರೆಲ್ಲ ಅಲ್ಲಿದ್ದರು. ಮಹಾಭಿಷನು ಕಣ್ಣಿಟ್ಟು ಅವಳತ್ತ ನೋಡಿದನು. ಇದನ್ನು ಕಂಡು ಬ್ರಹ್ಮದೇವನಿಗೆ ಎಲ್ಲಿಲ್ಲದ ಸಿಟ್ಟು ಬಂದಿತು. ಆತ—

ಸೋಽಪಧ್ಯಾತೋ ಭಗವತಾ ಬ್ರಾಹ್ಮಣಾ ತು ಮಹಾಭಿಷಃ ।
ಉಕ್ತಶ್ಚ ಜಾತೋ ಮರ್ತ್ಯೇಷು ಪುನರ್ಲೋಕಾನವಾಪ್ಸ್ಯಸಿ ॥ ೬ ॥

ಯಯಾಽಽಹತಮನಾಶ್ಚಾಸಿ ಗಂಗ್ಯಾ ತ್ವಂ ಹಿ ದುರ್ಮತೇ ।
ಸಾ ತೇ ವೈ ಮಾನುಷೇ ಲೋಕೇ ವಿಪ್ರಿಯಾಣ್ಯಾಚರಿಷ್ಯತಿ ॥ ೭ ॥
ಯದಾ ತೇ ಭವಿತಾ ಮನ್ಯುಸ್ತದಾ ಶಾಪಾದ್ ವಿಮೋಕ್ಷ್ಯಸೇ ॥ ೮ ॥

ಅವನು ಮಹಾಭಿಷನಿಗೆ ಹೀಗೆಂದನು: 'ಎಲೈ ದುರ್ಮತಿಯೇ! ಮತ್ತೆ ನೀನು ಭೂಲೋಕದಲ್ಲಿ ಮಾನವನಾಗಿ ಹುಟ್ಟಿ ಬರಲಿರುವೆ. ತರುವಾಯ (ಮತ್ತೆ) ಸ್ವರ್ಗ ದೊರೆತೀತು. ನಿನ್ನನ್ನು ಮೋಹಿತನನ್ನಾಗಿ ಮಾಡಿರುವ ಗಂಗೆ (ಮರ್ತ್ಯಲೋಕದಲ್ಲಿ) ನಿನ್ನ ಮಡದಿಯಾಗಲಿರುವಳು. ಆದರೆ ಅವಳು ನಿನ್ನ ಮನದಂತೆ ನಡೆಯಲಾರಳು. ನಿನಗೆ ಅವಳ ಮೇಲೆ ಕೋಪ ಬಂದ ದಿನವೇ ನೀನು ಶಾಪಮುಕ್ತನಾಗಲಿರುವೆ.'

+ ಮಹಾಭಿಷನು ಉಃಶಾಪಕ್ಕಾಗಿ ಕೇಳಿಲ್ಲ. ಶಾಪಮುಕ್ತಿಯನ್ನು ಕುರಿತಾದ ಬ್ರಹ್ಮ ದೇವನ ಉದ್ಗಾರಗಳು ಉಃಶಾಪದಂತೆಯೇ ಇವೆ. ಹೀಗಾಗಿ ಇದು ಅಯಾಚಿತವಾದ ಉಃಶಾಪ.

ಆದಿ/೯೮

+ ಕೆಟ್ಟ ನಡತೆಯ ಹೆಣ್ಣೆಂದು ಗಂಗೆಯು ಹೆಣ್ಣಾಗಿ ಹುಟ್ಟಿ ಬರುವುದೆಂದರೆ ಅವಳನ್ನೂ ಶಪಿಸಿದಂತಾಯಿತಲ್ಲವೆ ? ಇದು ಶಾಪವೊ ಇಲ್ಲವೆ ಶಿಕ್ಷೆಯೊ ? ಶಿಕ್ಷೆಯಾಗಿದ್ದರೆ ಯಾವ ತಪ್ಪಿಗಾಗಿ ? ಗಂಗೆಯ ಉಡುಗೆ ಹಾರಿದ್ದುದು ಗಾಳಿಯಿಂದಾಗಿ. ಇದರಲ್ಲಿ ಅವಳ ತಪ್ಪೇನೂ ಇಲ್ಲ. ಮರ್ತ್ಯಲೋಕದಲ್ಲಿ ಅವಳು ಅವನ ಮಡದಿಯಾದಳು. ಇದಕ್ಕೆ ಕಾರಣ ಅವಳಿಗೆ ಬ್ರಹ್ಮದೇವನ ಶಾಪವಿತ್ತೆಂದು ಆಗಿರದೆ ಅದೊಂದು ದೇವಕಾರ್ಯ ಆಗಿತ್ತು ಎಂಬ ಕಾರಣಕ್ಕಾಗಿ. ಹಾಗೆಂದು ಅವಳು ಶಂತನುವಿಗೆ ಖಂಡಿತವಾಗಿ ಹೇಳಿದಳು.

ದೇವಕಾರ್ಯಾರ್ಥಸಿದ್ಧ್ಯರ್ಥಮುಷಿತಾಹಂ ತ್ವಯಾ ಸಹ ॥ ೧೮ ॥

ಇಷ್ಟೇ ಅಲ್ಲದೆ, ಅಷ್ಟವಸುಗಳನ್ನು ಹೆರಲು ಶಂತನುವಿನಂತಹ ಸರಿಯಾದ ತಂದೆ ಹಾಗೂ ತನ್ನಂತಹ ಸರಿಯಾದ ತಾಯಿ ಬೇರಿನ್ನಾರೂ ಇಲ್ಲವೆಂಬುದನ್ನು ಅರಿತೇ ಅವಳು ಅವನ ಮಡದಿಯಾದಳು. ಅವಳು ಅಷ್ಟರಮಟ್ಟಿಗೆ ಮಾತ್ರ ಮಾನವಜನ್ಮವನ್ನು ತಳೆದು ಬಂದಳು. ಅಷ್ಟವಸುಗಳು ಅದಕ್ಕಾಗಿ ಅವಳನ್ನು ಕೋರಿದ್ದರು. ಅವಳು ಅದನ್ನು ಒಪ್ಪಿಕೊಂಡಿದ್ದಳು.

## ೩೮. ಬೃಹಸ್ಪತಿ > ಉತಥ್ಯಪುತ್ರ (ಬಸಿರಲ್ಲಿರುವ) ದೀರ್ಘತಮ

ಆದಿ/೧೦೪

ವೈಶಂಪಾಯನ ಜನಮೇಜಯನಿಗೆ ಉತಥ್ಯನ ಮಗನಾದ ದೀರ್ಘತಮನ ಕಥೆಯನ್ನು ಹೇಳುತ್ತಲಿದ್ದಾನೆ.

ತಮ್ಮ ವಂಶವನ್ನು ಮುಂದುವರಿಸಲೆಂದು ಸತ್ಯವತಿಯು ಭೀಷ್ಮನಿಗೆ ವಿಚಿತ್ರವೀರ್ಯನ ಮಡದಿಯೊಡನೆ ನಿಯೋಗವನ್ನು ಕೈಕೊಂಡು ಪ್ರಜೋತ್ಪತ್ತಿಯನ್ನು ಮಾಡಲು ಹೇಳಿ ದಳು. ಅವನು ಅದನ್ನು ನಿರಾಕರಿಸಿದನು. ಈ ಕೆಲಸವನ್ನು ಒಬ್ಬ ಯೋಗ್ಯನಾದ ಬ್ರಾಹ್ಮಣ ನಿಂದ ಮಾಡಿಸಬೇಕೆಂದು ಹೇಳಿದನು. ತನ್ನೀ ಹೇಳಿಕೆಗೆ ಪುಷ್ಟಿಯನ್ನು ನೀಡಲೆಂದು ಅವನು

ಒಂದು ಸಂಗತಿಯನ್ನು ಮುಂದೊಡ್ಡಿದನು. ಅದೆಂದರೆ, ಪರಶುರಾಮನು ಈ ಭೂಮಿಯನ್ನು ನಿಃಕ್ಷತ್ರಿಯವಾಗಿ ಮಾಡಿದ ಘಟನೆ. ಆಗ ಕ್ಷತ್ರಿಯ ಹೆಣ್ಣುಗಳು ಬ್ರಾಹ್ಮಣರೊಡನೆ ನಿಯೋಗವನ್ನು ಕೈಕೊಂಡು ಮಕ್ಕಳನ್ನು ಪಡೆದುದು. ಇದೇ ಸಂದರ್ಭದಲ್ಲಿ ಅವನು ಉತಥ್ಯನ ಮಗನ ಕಥೆಯನ್ನು ಅವಳಿಗೆ ಹೇಳಿದನು.

ಬೃಹಸ್ಪತಿಯು ಉತಥ್ಯಮುನಿಯ ತಮ್ಮನು. ಉತಥ್ಯ ಬಲುಬುದ್ಧಿವಂತನು. ಅವನ ಮಡದಿ ಮಮತೆ. ಅವಳು ಬಸುರಿಯಾಗಿದ್ದಾಗ ಬೃಹಸ್ಪತಿಯು ಕಾಮುಕವಾದ ಉದ್ದೇಶದಿಂದ ಮಮತೆಯ ಬಳಿಗೆ ಹೋದನು. ಅವಳು ಅವನನ್ನು ಇಂಥ ಅವಿಚಾರದ ಕೃತ್ಯದಿಂದ ದೂರವಿರಿಸಲು ಹೆಣಗಿದಳು. ತಾನು ಬಸುರಾಗಿದ್ದು ತನ್ನ ಬಸಿರಲ್ಲಿ ಒಂದಕ್ಕಾಗಿ ಮಾತ್ರ ಸ್ಥಳ ಇರುವುದಾಗಿ ಹೇಳಿದಳಲ್ಲದೆ ಅವನಂತಹ ಅಮೋಘವೀರ್ಯನು ಇಂತಹ ಕೀಳು ಕೆಲಸವನ್ನು ಮಾಡಕೂಡದೆಂದು ಪರಿಪರಿಯಾಗಿ ಬೇಡಿಕೊಂಡಳು. ಆದರೆ ಅವನು ಅದಕ್ಕೆಲ್ಲ ಸೊಪ್ಪುಹಾಕಲಿಲ್ಲ. ಅವನು ಸಮಾಗಮಕ್ಕಾಗಿ ಆತುರನಾಗಿಯೇ ಇದ್ದನು. ಆಗ ಬಸಿರಲ್ಲಿದ್ದ ಉತಥ್ಯನ ಮಗನು ಅವನಿಗೆ ಹೀಗೆಂದನು: 'ನೀವು ಹೀಗೆಲ್ಲ ಕಾಮವಾಸನೆಗೆ ಒಳಪಟ್ಟು ನನ್ನನ್ನು ಪೀಡಿಸಬೇಡಿ.' ಈ ಮಾತಿಗೂ ಅವನು ಜಗ್ಗಲಿಲ್ಲ. ಮುನ್ನುಗ್ಗಿ ಮಮತೆಯೊಂದಿಗೆ ಸಮಾಗಮವನ್ನು ಆರಂಭಿಸಿದನು. ಆಗ ಬಸಿರಲ್ಲಿದ್ದ ಮಗುವು ತನ್ನ ಕಾಲುಗಳಿಂದ ವೀರ್ಯದ ದಾರಿಯನ್ನು ಬಂದುಮಾಡಿಬಿಟ್ಟಿತು. ವೀರ್ಯ ನೆಲಕ್ಕೆ ಚೆಲ್ಲಿತು.

ಸ್ಥಾನಮಪ್ರಾಪ್ತಮಥ ತಚ್ಛುಕ್ರಂ ಪ್ರತಿಹತಂ ತದಾ ॥
ಪಪಾತ ಸಹಸಾ ಭೂಮೌ ತತಃ ಕ್ರುದ್ಧೋ ಬೃಹಸ್ಪತಿಃ ।
ತಂ ದೃಷ್ಟ್ವಾ ಪತಿತಂ ಶುಕ್ರಂ ಶಶಾಪ ಚ ರುಷಾನ್ವಿತಃ ॥

ವೀರ್ಯವು ಹಾಳಾದುದನ್ನು ಕಂಡು ಬೃಹಸ್ಪತಿ ಕೆರಳಿದನು. ಅವನು ಬಸಿರಲ್ಲಿದ್ದ ಮಗುವನ್ನು ಹೀಗಳೆದನು. ಆಮೇಲೆ ಅವನನ್ನು ಶಪಿಸಿದನು—

ಯನ್ಮಾಂ ತ್ವಮೀದೃಶಕಾಲೇ ಸರ್ವಭೂತೇಪ್ಸಿತೇ ಸತಿ ॥
ಏವಮಾತ್ಥ ವಚಸ್ತಸ್ಮಾತ್ತಮೋ ದೀರ್ಘಂ ಪ್ರವೇಕ್ಷ್ಯಸಿ ।
ಸಾ ವೈ ದೀರ್ಘತಮಾ ನಾಮ ಶಾಪಾದೃಷಿರಜಾಯತ ॥

ನಾನು ಬಲು ಸಂತೋಷದ ಕ್ಷಣದಲ್ಲಿರುವಾಗ ನೀನು ನನಗೆ ಅವಮಾನಕರವಾಗಿ ಹೀಗೆ ಮಾತಾಡಿರುವೆ. ಹೀಗಾಗಿ ನೀನು ಕೊನೆಯವರೆಗೂ ಕತ್ತಲೆಯಲ್ಲಿಯೇ ಇರಬೇಕಾದೀತು (ನೀನು ಕುರುಡನಾಗುವೆ). ಈ ಶಾಪದಿಂದಾಗಿ ಮುಂದೆ ಬಸಿರಲ್ಲಿದ್ದ ಆ ಮಗು ಕುರುಡಾಗಿಯೇ ಹುಟ್ಟಿಬಂದಿತು. ಆತನ ಹೆಸರು ದೀರ್ಘತಮ.*

**ಶಾಂತಿ/೩೪೧**

ವೈಶಂಪಾಯನ ಜನಮೇಜಯನಿಗೆ ವ್ಯಾಸರು ಶ್ರೀಕೃಷ್ಣನನ್ನು ಕುರಿತು ಮಾಡಿದ ಸ್ತುತಿಯ ಬಗೆಗೆ ಹೇಳುತ್ತಲಿದ್ದಾನೆ.

ಬಸಿರಲ್ಲಿದ್ದ ಉತಥ್ಯನ ಮಗುವು ತನ್ನ ಕಾಲುಗಳಿಂದ ವೀರ್ಯದ ದಾರಿಯನ್ನು

* ಆದಿ ೧೦೪ರಲ್ಲಿಯ ೪೯ ರಿಂದ ೫೬ ವರೆಗಿನ ಶ್ಲೋಕಗಳು ಗೀತಾ ಪ್ರೆಸ್ಸಿನ ಆವೃತ್ತಿಯಲ್ಲಿ ಇಲ್ಲ.

ಮುಚ್ಚಿದ್ದರಿಂದ ಬೃಹಸ್ಪತಿಯ ವೀರ್ಯ ನೆಲಕ್ಕೆ ಬಿದ್ದಿತು. ಆದ್ದರಿಂದ ಅವನು ಸಿಟ್ಟಾಗಿ ಶಾಪವನ್ನಿತ್ತನು.

## ೩೯. ಪರಾಶರ > ಸತ್ಯವತಿ ಆದಿ/೧೦೪

ವೈಶಂಪಾಯನ ಜನಮೇಜಯನಿಗೆ ವ್ಯಾಸನ ಹುಟ್ಟಿನ ಕಥೆಯನ್ನು ಹೇಳುತ್ತಲಿದ್ದಾನೆ.

ವಂಶವನ್ನು ಮುಂದುವರಿಸಲೆಂದು ಸತ್ಯವತಿಯು ಒಂದು ಅಪದ್ಧರ್ಮವೆಂದೇ ಭೀಷ್ಮನಿಗೆ ವಿಚಿತ್ರವೀರ್ಯನ ಮಡದಿಯೊಂದಿಗೆ ನಿಯೋಗವನ್ನು ಮಾಡಲು ಹೇಳುತ್ತಾಳೆ. ಭೀಷ್ಮ ತನ್ನ ಪ್ರತಿಜ್ಞೆಗೆ ಕಟ್ಟುಬಿದ್ದು ಅದನ್ನು ನಿರಾಕರಿಸುತ್ತಾನೆ. ಒಬ್ಬ ವಿದ್ವಾಂಸನೂ ಗುಣವಂತನೂ ಆದ ಬ್ರಾಹ್ಮಣನಿಂದ ಈ ಕೆಲಸವನ್ನು ಮಾಡಿಸಲು ಹೇಳುತ್ತಾನೆ. ಹಾಗೆ ನೋಡಿದರೆ ಸತ್ಯವತಿಯು ತನ್ನ ಬಾಳಿನ ಹೇಳಬಾರದ ಘಟನೆಯನ್ನು ಕೂಡ ಭೀಷ್ಮನನ್ನು ಮನಗಾಣಿಸಲೆಂದೇ ಅವನಿಗೆ ಹೇಳಿದಳು. ಅವಳು ಅವನಿಗೆ ವ್ಯಾಸನ ಹುಟ್ಟಿನ ಕಥೆಯನ್ನು ಹೇಳುತ್ತಲಿದ್ದಾಳೆ—ಅವಳ ತಂದೆ ಒಬ್ಬ ಒಳ್ಳೆಯ ಧರ್ಮವಂತನಾಗಿದ್ದನು. ಅವನು ಗಂಗೆಯಲ್ಲಿ ಧರ್ಮಕ್ಕಾಗಿ (ಪುಕ್ಕಟೆ) ನೌಕೆಯನ್ನು ನಡೆಸುತ್ತಿದ್ದನು. ಸತ್ಯವತಿಯು ತುಂಬು ಯೌವನದಲ್ಲಿರುವಾಗ ಒಂದು ಸಲ ಪರಾಶರ ಋಷಿಯು ನಾವೆಯನ್ನೇರಿ ಕುಳಿತನು. ಅವಳ ಚೆಲುವಿಗೆ ಮರುಳಾದನು. ಅವನು ಅವಳನ್ನು ತನ್ನೊಂದಿಗೆ ಸಂಭೋಗಕ್ಕಾಗಿ ಕೇಳಿದನು. ಅದನ್ನು ಒಪ್ಪುವುದು ಅವಳಿಗೆ ಕಷ್ಟದ್ದಾಗಿತ್ತು. ಅವಳು ಅವನಿಗೆ ತನ್ನ ಕುಲ-ಶೀಲಗಳ ಬಗೆಗೆ ಹೇಳಿ ತಾನು ಮೀನುಗಾರನ ಮಗಳೆಂದಳು.

ತಮಹಂ ಶಾಪಭೀತಾ ಚ ಪಿತುರ್ಭೀತಾ ಚ ಭಾರತ ।
ವರೈರಸುಲಭೈರುಕ್ತಾ ನ ಪ್ರತ್ಯಾಖ್ಯಾತುಮುತ್ಸಹೇ ॥ ೧೦ ॥

'ಋಷಿಯ ಕೋರಿಕೆಯನ್ನು ಮನ್ನಿಸಬೇಕೆಂದರೆ ಒಂದೆಡೆ ಅಪ್ಪನ ಹೆದರಿಕೆ ನನ್ನನ್ನು ಕಾಡುತ್ತಿತ್ತು. ಅತ್ತ (ಒಪ್ಪಿಕೊಳ್ಳದಿದ್ದರೆ) ಋಷಿಯು ಶಪಿಸುವನೆಂಬ ಹೆದರಿಕೆ. ಅಷ್ಟರಲ್ಲಿಯೇ ಋಷಿಯು ನನಗೆ ದುರ್ಲಭವಾದ ವರಗಳ ಆಸೆಯನ್ನು ತೋರಿಸಿದ್ದರಿಂದ ಅವನ ಬಯಕೆಯನ್ನು ತಳ್ಳಿಹಾಕಲಾರದವಳಾದೆ.'

+ ನಿಜವಾಗಿ ಈ ಶಾಪವನ್ನು ನೀಡಲಾಗಿಲ್ಲ. ಅವನು ಶಪಿಸುವನೆಂಬ ಸತ್ಯವತಿಯ ಹೆದರಿಕೆ ಶರತ್ತಿನದು. ಋಷಿಯು ಏನೆಂದು ಶಪಿಸುವವನಿದ್ದನೆಂಬುದು ಖಚಿತವಾಗಿ ತಿಳಿದು ಬಾರದು

## ೪೦. ಶಕ್ತಿ > ಕಲ್ಮಾಷಪಾದ ಆದಿ/೧೭೫

ವಿಶ್ವಾಮಿತ್ರ ಹಾಗೂ ವಸಿಷ್ಠರಲ್ಲಿ ಹಗೆ ಹುಟ್ಟಿಕೊಂಡಿತು. ಇದಕ್ಕೆ ಕಾರಣವೇನೆಂದು ಅರ್ಜುನನು ಗಂಧರ್ವನನ್ನು ಕೇಳಿದನು. ಗಂಧರ್ವನು ಅವನಿಗೆ ನಡೆದ ಸಂಗತಿಯನ್ನು ಹೇಳಿದನು. ವೈಶಂಪಾಯನ ಇದೇ ಸಂಗತಿಯನ್ನು ಜನಮೇಜಯನಿಗೆ ಹೇಳುತ್ತಲಿದ್ದಾನೆ.

ಇಕ್ಷ್ವಾಕುಕುಲದಲ್ಲಿ ಹುಟ್ಟಿದವನಾದ ಕಲ್ಮಾಷಪಾದನಿಗೆ ಬೇಟೆಯ ಹವ್ಯಾಸವಿತ್ತು. ಒಂದು ಸಲ ಅವನು ಬೇಟೆಯಿಂದ ಹಿಂತಿರುಗಿ ಬರುತ್ತಿರುವಾಗ ದಾರಿಯಲ್ಲಿ ಒಂದು

ಇಕ್ಕಟ್ಟಿನ ತಾವಿನಲ್ಲಿ ವಸಿಷ್ಠನ ಮಗನಾದ ಶಕ್ತಿಯು ಆವನಿಗೆ ಎದುರಾದನು. ದಾರಿ ಬಲು ಇಕ್ಕಟ್ಟಿನದಾದ್ದರಿಂದ ಒಂದು ಸಲಕ್ಕೆ ಒಬ್ಬನೇ ದಾಟಬಹುದಿತ್ತು. ಇವರಿಬ್ಬರೂ ಎದುರು ಬದುರಾಗಿ ನಿಂತಿದ್ದರು. ಯಾವೊಬ್ಬನೂ ಹಿಂದಕ್ಕೆಹೋಗದೆ ಬೇರೆ ವಿಧಿಯಿರಲಿಲ್ಲ. ರಾಜನು ಶಕ್ತಿಗೆ ಹಿಂದಕ್ಕೆ ಹೋಗೆಂದನು. ಅವನು ಒಪ್ಪಲಿಲ್ಲ. ಅವನು ರಾಜನಿಗೇನೆ ಹಿಂತಿರುಗಿ ಹೋಗೆಂದನು. ದಾರಿಯ ಮೇಲೆ ರಾಜನಿಗಿಂತಲೂ ಬ್ರಾಹ್ಮಣನಿಗೆ ಹೆಚ್ಚಿನ ಅಧಿಕಾರ ಎಂಬುದು ಅವನ ವಾದ. ರಾಜನಿಗೆ ಶಕ್ತಿಯ ಈ ಒರಟುತನ ಹಿಡಿಸಲಿಲ್ಲ. ಹೀಗಾಗಿ ಅವನು ಶಕ್ತಿಯನ್ನು ಚಾಟಿಯಿಂದ ಚೆನ್ನಾಗಿ ಹೊಡೆದುಬಿಟ್ಟನು. ಆಗ ಕೆರಳಿ ಹೋಗಿ—

ತಂ ಶಶಾಪ ನೃಪಶ್ರೇಷ್ಠಂ ವಾಸಿಷ್ಠಃ ಕ್ರೋಧಮೂರ್ಛಿತಃ ॥ ೧೨ ॥
ಹಂಸಿ ರಾಕ್ಷಸವದ್ ಯಸ್ಮಾದ್ ರಾಜಾಪಸದ ತಾಪಸಮ್ ।
ತಸ್ಮಾತ್ ತಮದ್ಯಪ್ರಭೃತಿ ಪುರುಷಾದೋ ಭವಿಷ್ಯಸಿ ॥ ೧೩ ॥
ಮನುಷ್ಯಪಿಶಿತೇ ಶಕ್ತಶ್ಚರಿಷ್ಯಸಿ ಮಹೀಮಿಮಾಮ್ ॥ ೧೪ ॥

ಶ್ರೇಷ್ಠ ಋಷಿಯ ಮಗನಾದ ಆ ಶಕ್ತಿಯು ರಾಜನನ್ನು ಹೀಗೆ ಶಪಿಸಿದನು—

'ಎಲೈ ನೀಚನಾದ ರಾಜನೇ ! ನೀನೊಬ್ಬ ರಾಕ್ಷಸನಂತೆ ತಪಸ್ವಿಯನ್ನು (ಚಾಟಿಯಿಂದ) ಹೊಡೆಯುತ್ತಲಿರುವೆ. ಹೀಗಾಗಿ ನೀನು ನರಮಾಂಸಭಕ್ಷಕನಾದ ರಾಕ್ಷಸನಾಗಲಿರುವೆ. ಅಲ್ಲದೆ ನರಮಾಂಸಕ್ಕಾಗಿ ಎಂದು ಈ ಭೂಮಿಯ ಮೇಲೆಲ್ಲ ಅಂಡಲೆಯುವೆ.'

ಸ ತು ಶಪ್ತಸ್ತದಾ ತೇನ ಶಕ್ತಿನಾ ವೈ ನೃಪೋತ್ತಮಃ ।
ಜಗಾಮ ಶರಣಂ ಶಕ್ತಿಂ ಪ್ರಸಾದಯಿತುಮರ್ಹಯನ್ ॥ ೧೯ ॥

ಶಕ್ತಿಯು ಶಾಪವನ್ನಿತ್ತಬಳಿಕ ರಾಜನು ಅವನಿಗೆ ಶರಣುಹೋದನು. ಅಲ್ಲದೆ ಅವನನ್ನು ಪ್ರಸನ್ನಗೊಳಿಸಲು ಹವಣಿಸಿದನು.

ವಿಶ್ವಾಮಿತ್ರನಿಗೂ ವಸಿಷ್ಠನಿಗೂ ಹಗೆಯಿತ್ತು. ರಾಜನು ತನ್ನ ಯಜಮಾನ ಪದವನ್ನು ಸ್ವೀಕರಿಸಬೇಕೆಂಬ ಉದ್ದೇಶದಿಂದ ವಿಶ್ವಾಮಿತ್ರನು ಒಬ್ಬ ರಾಕ್ಷಸನಿಗೆ ರಾಜನ ಮೈಯಲ್ಲಿ ಹೋಗಲು ಹೇಳಿದನು.

ಶಾಪಾತ್ ತಸ್ಯ ತು ವಿಪ್ರರ್ಷೇರ್ವಿಶ್ವಾಮಿತ್ರಸ್ಯ ಚಾಜ್ಞಯಾ ।
ರಾಕ್ಷಸಃ ಕಿಂಕರೋ ನಾಮ ವಿವೇಶ ನೃಪತಿಂ ತದಾ ॥ ೨೧ ॥

ಶಕ್ತಿಯು ರಾಜನನ್ನು ಮೊದಲೇ ಶಪಿಸಿದ್ದನು. ಅದಕ್ಕೆ ಈಗ ವಿಶ್ವಾಮಿತ್ರನ ಅಪ್ಪಣೆಯೂ ಸೇರಿಕೊಂಡು ಕಿಂಕರನೆಂಬ ರಾಕ್ಷಸನು ರಾಜನ ದೇಹವನ್ನು ಹೊಕ್ಕನು.

ರಾಕ್ಷಸನು ರಾಜನ ಮನಸ್ಸಿನ ಮೇಲೆ ಹಿಡಿತವನ್ನಿಟ್ಟುಕೊಂಡನು. ರಾಜ ಇದೇ ಅವಸ್ಥೆಯಲ್ಲಿ ಕಾಡುಮೇಡುಗಳನ್ನು ಅಲೆಯತೊಡಗಿದನು. ಹೀಗಿರುವಾಗ ಒಂದೆಡೆ ಒಬ್ಬ ಹಸಿದು ಬಾಯಾರಿದ ಬ್ರಾಹ್ಮಣ ಇವನನ್ನು ಮಾಂಸಾಹಾರಕ್ಕಾಗಿ ಕೇಳಿದನು. ಬೇಕಿದ್ದ ಮಾಂಸ ದೊರಕದಿದ್ದರೆ ನರಮಾಂಸವನ್ನೇ ಕುದಿಸಿ ಬ್ರಾಹ್ಮಣನಿಗೆ ನೀಡುವಂತೆ ರಾಜನು ತನ್ನ ಸೇವಕರಿಗೆ ಅಪ್ಪಣೆ ನೀಡಿದನು. ಅಡಿಗೆಯವನು ನರಮಾಂಸದಿಂದ ಕೂಡಿದ ಆಹಾರವನ್ನೇ ಬ್ರಾಹ್ಮಣನಿಗೆ ನೀಡಿದನು. ಅದನ್ನು ಕಂಡು ಬ್ರಾಹ್ಮಣನ ಪಿತ್ತ ನೆತ್ತಿಗೇರಿತು. ಅವನು

'ಎಲೈ ನೀಚನೇ! ನೀನು ನನಗೆ ನೀಡಿದ ಈ ಅಯೋಗ್ಯವಾದ ಆಹಾರ ನಿನಗೇ ಪ್ರಿಯ ವಾಗಲಿ' ಎಂದು ನುಡಿದನು.

ನಕ್ಷೋ ಮಾನುಷಮಾಂಸೇಷು ಯಥೋಕ್ತಃ ಶಕ್ತಿನಾ ತಥಾ ।
ಉದ್ವೇಜನೀಯೋ ಭೂತಾನಾಂ ಚರಿಷ್ಯತಿ ಮಹೀಮಿಮಾಮ್ ॥ ೩೬ ॥
ದ್ವಿರನುವ್ಯಾಹೃತೇ ರಾಜ್ಞಃ ನ ಶಾಪೋ ಬಲವಾನಭೂತ್ ।
ರಕ್ಷೋಬಲನವಾವಿಷ್ಟೋ ವಿಸಂಜ್ಞಶ್ಚಾಭವನ್ನೃಪಃ ॥ ೩೭ ॥

ನಿನ್ನ ನಾಲಿಗೆ ಆ ನರಮಾಂಸಕ್ಕಾಗಿ ಆಸೆಪಡಲಿ. ಶಕ್ತಿಯು ಹೇಳಿದಂತೆ ನರಮಾಂಸದ ಬಗೆಗೆ ನಿನ್ನ ಆಸಕ್ತಿ ಬೆಳೆದೀತು. ನಿನ್ನನ್ನು ಕಂಡು ಜನರಲ್ಲಿ ಉದ್ವೇಗ ಹೆಚ್ಚೀತು. ಬಲು ಹೀನವಾದ ಅವಸ್ಥೆಯಲ್ಲಿ ಈ ಭೂಮಿಯ ಮೇಲೆ ಅಲೆದಾಡಬೇಕಾದೀತು. ಬ್ರಾಹ್ಮಣನು ಅದನ್ನು ಇನ್ನೊಮ್ಮೆ ಉಚ್ಚರಿಸಿದ ಕಾರಣ ಶಕ್ತಿಯ ಶಾಪ ಇನ್ನಷ್ಟು ಗಟ್ಟಿಗೊಂಡಿತು. ರಾಕ್ಷಸ ದೇಹವನ್ನು ಹೊಕ್ಕಿದ್ದರಿಂದ ಆ ರಾಜ ವಿವೇಕವನ್ನು ಕಳೆದುಕೊಂಡನು.

ದೇಹದಲ್ಲಿ ರಾಕ್ಷಸನಿರುವ ಕಲ್ಮಾಜಪಾದ ರಾಜನು ಶಕ್ತಿಯ ಭೆಟ್ಟಿಯಾಗುತ್ತಲೆ ಅವನಿಗೆ ಹೀಗೆಂದನು—

ಯಸ್ಮಾದಸದೃಶಃ ಶಾಪಃ ಪ್ರಯುಕ್ತೋಽಯಂ ಮಯಿ ತ್ವಯಾ ।
ತಸ್ಮಾತ್ ತ್ವತ್ತಃ ಪ್ರವರ್ತಿಷ್ಯೇ ಖಾದಿತುಂ ಪುರುಷಾನಹಮ್ ॥ ೩೯ ॥

'ನೀನು ನನಗೆ ಅಯೋಗ್ಯವಾದ ಶಾಪವನ್ನಿತ್ತೆ. (ಹೀಗಾಗಿ) ನಿನ್ನಿಂದಲೇ ನರಮಾಂಸ ವನ್ನು ತಿನ್ನಲು ಶುರುಮಾಡುವೆ' ಎಂದು ನುಡಿದು ಅವನು ಶಕ್ತಿಯನ್ನು ನುಂಗಿಹಾಕಿದ ನಲ್ಲದೆ ವಿಶ್ವಾಮಿತ್ರನ ಚುಚ್ಚುವಿಕೆಯಿಂದಾಗಿ ವಸಿಷ್ಠನ ಮಕ್ಕಳೆಲ್ಲರನ್ನೂ ಕೊಂದು ಹಾಕಿದನು.'

ಆದಿ/೧೭೦

ಪುಲಸ್ತ್ಯಮುನಿಯು ಶಕ್ತಿಯ ಮಗನಾದ ಪರಾಶರನಿಗೆ ತನ್ನ ಶೋಕಕ್ಕೆ ಕಡಿವಾಣ ವನ್ನು ಹಾಕಲು ಹೇಳಿದನು. ಇದೆಲ್ಲ ಮೊದಲೇ ಹೇಗೆ ನಿರ್ಧರಿತವಾದುದು ಎಂಬುದನ್ನೂ ಹೇಳಿದನು. ಮುನಿಯು ಹೀಗೆಂದನು—

ಶಾಪಾದ್ಧಿ ಶಕ್ತೇರ್ವಾಸಿಷ್ಠ ತದಾ ತದುಪಪಾದಿತಮ್ ।
ಆತ್ಮಜೇನ ಸ ದೋಷೇಣ ಶಕ್ತಿರ್ನೀತ ಇತೋ ದಿವಮ್ ॥ ೧೫ ॥

'ಎಲೈ ವಸಿಷ್ಠಕುಲಭೂಷಣನೇ! ಪರಾಶರನೇ! (ರಾಕ್ಷಸನು ವಸಿಷ್ಠನ ಮಕ್ಕಳನ್ನು ಸಂಹರಿಸಿದನೆಂಬುದು ನಿಜವೇ. ಆದರೆ ಅದು ಮೊದಲೇ ನಿಯೋಜಿತವಾಗಿತ್ತು.) ಶಕ್ತಿಯು (ಕಲ್ಮಾಷಪಾದರಾಜನಿಗೆ) ಶಾಪವನ್ನಿತ್ತ ಫಲ ಅದಾಗಿತ್ತು.'

ಆದಿ/೧೭೧

ಗಂಧರ್ವನು ಅರ್ಜುನನಿಗೆ ಹೀಗೆಂದನು—

ಕಥಿತಂ ತೇ ಮಯಾ ಸರ್ವಂ ಯಥಾ ಶಪ್ತಃ ನ ಪಾರ್ಥಿವಃ ।
ಶಕ್ತಿನಾ ಭರತಶ್ರೇಷ್ಠ ವಾಸಿಷ್ಠೇನ ಮಹಾತ್ಮನಾ ॥ ೫ ॥
ಸ ತು ಶಾಪವಶಂ ಪ್ರಾಪ್ತಃ ಕ್ರೋಧಪರ್ಯಾಕುಲೇಕ್ಷಣಃ ।
ನಿರ್ಜಗಾಮ ಪುರಾದ್ ರಾಜಾ ಸಹದಾರಃ ಪರಂತಪಃ ॥ ೬ ॥

ವಸಿಷ್ಠನ ಮಗ ಶಕ್ತಿಯು ಕಲ್ಮಾಷಪಾದರಾಜನಿತ್ತ ಶಾಪದ ಬಗೆಗೆ ನೀನು ನನಗೆ ಎಲ್ಲವನ್ನೂ ಈಗಾಗಲೇ ಹೇಳಿರುವೆ. ಶಾಪವನ್ನು ಕೇಳಿ ರಾಜನು ಕೆಂಡದಂತಾದನು. ತನ್ನ ಮಡದಿಯೊಂದಿಗೆ ರಾಜಧಾನಿಯಿಂದ ಹೊರಬಿದ್ದನು.*

+ ಶಾಪದ ಉಲ್ಲೇಖ ಮಾತ್ರ ಇದೆ.

## ೪೧. ಬ್ರಾಹ್ಮಣ > ಕಲ್ಮಾಷಪಾದ **ಆದಿ/೧೭೫**

ಮೊದಲ ಸಂದರ್ಭ : ನೋಡಿ—ಶಾಪ : ಶಕ್ತಿ >ಕಲ್ಮಾಷಪಾದ.

ಶಕ್ತಿಯು ಕಲ್ಮಾಷಪಾದರಾಜನಿಗೆ ಇತ್ತ ಶಾಪಕ್ಕೆ ಬ್ರಾಹ್ಮಣನ ಶಾಪವು ಕೂಡಿಕೊಂಡುದರಿಂದ ಅದರ ಪರಿಣಾಮ ಇನ್ನಷ್ಟು ತೀವ್ರವಾಯಿತು. ನೋಡಿ : ಆದಿ/೧೭೫-೩೬, ೩೭ ಹಾಗೂ ೩೯.

**ಆದಿ/೧೭೬**

ಕಲ್ಮಾಷಪಾದರಾಜನ ಮೈಯಲ್ಲಿ ಕಿಂಕರ ರಾಕ್ಷಸನು ಹೊಕ್ಕ ಬಳಿಕ ಅವನು ವಸಿಷ್ಠನ ಮಕ್ಕಳನ್ನು ತಿಂದುಹಾಕಿದನು. ಆಗ ವಸಿಷ್ಠನು ಗಂಡುಮಕ್ಕಳ ಸಾವಿನಿಂದಾಗಿ ಬಲು ವ್ಯಾಕುಲನಾದನು. ಅವನು ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ಯೋಚಿಸಿದನು. ಆದರೆ ಅವನ ಸೊಸೆಯಾದ ಅದೃಶ್ಯಂತಿಯಿಂದ ಶಕ್ತಿಯ ಬಸಿರು ಅವಳ ಹೊಟ್ಟೆಯಲ್ಲಿ ಬೆಳೆಯುತ್ತಿರುವುದು ತಿಳಿಯಿತು. ಹೀಗಾಗಿ ಅವನು ದೇಹತ್ಯಾಗದ ವಿಚಾರ ಕೈಬಿಟ್ಟನು. ಒಂದು ಸಲ ವಸಿಷ್ಠನು ತನ್ನ ಸೊಸೆಯೊಂದಿಗೆ ಕಾಡಿನಲ್ಲಿ ಹೊರಟಿದ್ದನು. ರಾಕ್ಷಸ ಅವರನ್ನು ಕಂಡನು. ಅವರನ್ನು ತಿಂದುಹಾಕಬೇಕೆಂದು ನಿರ್ಧರಿಸಿದನು. ರಾಕ್ಷಸನನ್ನು ಕಂಡು ಅದೃಶ್ಯವತಿಯು ತುಂಬ ಹೆದರಿಕೊಂಡಳು. ವಸಿಷ್ಠನು ಆತ ರಾಕ್ಷಸನಾಗಿರದೆ ಕಲ್ಮಾಷಪಾದನಾಗಿರುವುದನ್ನು ಗುರುತಿಸಿದನು. ಅವನಿಂದ ತಮಗಾವ ಅಪಾಯವೂ ಇಲ್ಲವೆಂದು ಕೆಚ್ಚಿನಿಂದ ಅವಳಿಗೆ ಹೇಳಿದನು.

> ತಮಾಪತಂತಂ ಸಂಪ್ರೇಕ್ಷ್ಯ ವಸಿಷ್ಠೋ ಭಗವಾನೃಷಿಃ ।
> ವಾರಯಾಮಾಸ ತೇಜಸ್ವೀ ಹುಂಕಾರೇಣೈವ ಭಾರತ ॥ ೨೫ ॥
> ಮಂತ್ರಪೂತೇನ ಚ ಪುನಃ ಸ ತಮಭ್ಯುಕ್ಷ್ಯ ವಾರಿಣಾ ।
> ಮೋಕ್ಷಯಾಮಾಸ ವೈ ಶಾಪಾತ್ ತಸ್ಮಾದ್ ಯೋಗಾನ್ನರಾಧಿಪಮ್ ॥ ೨೬ ॥

'ಎಲೈ ಅರ್ಜುನನೇ ! ರಾಕ್ಷಸ ತನ್ನ ಮೇಲೆ ಏರಿಬರುವುದನ್ನು ಕಂಡು ವಸಿಷ್ಠನು ತನ್ನ ಹುಂಕಾರಮಾತ್ರದಿಂದಲೇ ಅವನನ್ನು ತಡೆದು ನಿಲ್ಲಿಸಿದನು. ವಸಿಷ್ಠನು ಅವನ ಮೈ ಮೇಲೆ ಮಂತ್ರಿಸಿದ ಪವಿತ್ರ ನೀರನ್ನು ಸಿಂಪಡಿಸಿ ಅವನನ್ನು ಶಾಪದಿಂದ ಬಿಡುಗಡೆ ಮಾಡಿದನು.'

+ ಇಲ್ಲಿ ಶಾಪದಿಂದ ಬಿಡುಗಡೆಯ ಉಲ್ಲೇಖವಿದೆ. ವಸಿಷ್ಠನು ಅವನನ್ನು ಶಾಪದಿಂದ

---

* ವಾಲ್ಮೀಕಿರಾಮಾಯಣ—ಉತ್ತರಕಾಂಡ/೬೫, ವಸಿಷ್ಠ > ಸೌದಾಸ—ವಸಿಷ್ಠನು ಶಾಪವನ್ನಿತ್ತಿರುವವನು. ಆದರೆ ಇಲ್ಲಿ ಮಾತ್ರ ವಸಿಷ್ಠನ ಮಗನಾದ ಶಕ್ತಿಯು ಶಾಪವನ್ನಿತ್ತವನು.

ನೋಡಿ : ವಾಲ್ಮೀಕಿರಾಮಾಯಣ : ಶಾಪ ಮತ್ತು ವರ, ಶಾಪ ಕ್ರ. ೫೭, ಪು. ೮೧-೮೨.

ಬಿಡುಗಡೆಗೊಳಿಸಿರುವನಾದರೂ ಅದನ್ನಿತ್ತವರು ಮಾತ್ರ ಶಕ್ತಿ ಹಾಗೂ ಬ್ರಾಹ್ಮಣ. ವಾಲ್ಮೀಕಿರಾಮಾಯಣದಲ್ಲಿ ಶಾಪವನ್ನಿತ್ತವನು ವಸಿಷ್ಠನು. ನೋಡಿ—ಉತ್ತರಕಾಂಡ/೬೫, ವಾಲ್ಮೀಕಿರಾಮಾಯಣ : ಶಾಪ ಮತ್ತು ವರ, ಪು. ೮೧-೮೨.

## ೪೨. ಬ್ರಾಹ್ಮಣಸ್ತ್ರೀ > ಕಲ್ಮಾಷಪಾದ ಆದಿ/೧೮೧

ಕಲ್ಮಾಷಪಾದನು ತನ್ನ ಮಡದಿ ಮದಯಂತಿಯನ್ನು ಮಕ್ಕಳನ್ನು ಪಡೆಯಲೆಂದು ವಸಿಷ್ಠಋಷಿಯ ಬಳಿಗೆ ಕಳುಹಿಸಿದ್ದೇಕೆ ?—ಎಂಬುದನ್ನು ಅರ್ಜುನನು ಅರಿಯಬಯಸಿದನು. ಗಂಧರ್ವನು ಆಗ ಅವನಿಗೆ ಹೇಳಿದುದನ್ನೇ ವೈಶಂಪಾಯನ ಜನಮೇಜಯನಿಗೆ ಹೇಳುತ್ತಲಿದ್ದಾನೆ.

ಶಕ್ತಿಯ ಶಾಪದಿಂದ ಸಂತಪ್ತನಾದ ಕಲ್ಮಾಷಪಾದ ರಾಜಧಾನಿಯನ್ನು ತೊರೆದು ತನ್ನ ಮಡದಿಯೊಂದಿಗೆ ಹೋಗಿ ಒಂದು ಕಾಡಿನಲ್ಲಿ ವಾಸಮಾಡಿದನು. ಒಂದು ಸಲ ಅವನು ಹಸಿವಿನಿಂದ ತೊಳಲಾಡುತ್ತ ಬೇಟೆಗಾಗಿ ಅಲೆದಾಡುತ್ತಿರುವಾಗ ಪ್ರಣಯಕೇಳಿಯಲ್ಲಿ ತೊಡಗಿದ ಒಂದು ಬ್ರಾಹ್ಮಣ ಜೊತೆ ಅವನಿಗೆ ಕಂಡಿತು. ಆ ಗಂಡ-ಹೆಂಡತಿ ಈ (ಕಲ್ಮಾಷಪಾದ) ರಾಕ್ಷಸನನ್ನು ಕಂಡು ನಾಚಿದರು. ಅವರಿಬ್ಬರೂ ಎದ್ದು ಓಟಕಿತ್ತರು. ರಾಜ ಅವರನ್ನು ಬೆನ್ನಟ್ಟಿ ಬ್ರಾಹ್ಮಣನನ್ನು ಹಿಡಿದುಕೊಂಡನು. ಆ ಹೆಣ್ಣು ತನ್ನ ಗಂಡನನ್ನು ಬಿಟ್ಟುಕೊಡುವಂತೆ ಈತನನ್ನು ಪರಿಪರಿಯಾಗಿ ಕೇಳಿಕೊಂಡಳು. ಈ ರಾಕ್ಷಸನು ಅತ್ತ ಕಿವಿಗೊಡದೆ ಬ್ರಾಹ್ಮಣನನ್ನು ತಿಂದುಬಿಟ್ಟನು. ಮಗುವಿಗಾಗಿ ತಾನು ತನ್ನ ಗಂಡನನ್ನು ಕೂಡಿಕೊಳ್ಳಹತ್ತಿದ್ದೆನೆಂದು ಅವಳು ಎಷ್ಟೇ ಹೇಳಿದರೂ ಅದರಿಂದಾಗಿ ರಾಕ್ಷಸನ ಮೇಲೆ ಯಾವುದೇ ಬಗೆಯ ಪರಿಣಾಮವನ್ನು ಬೀರಲಾಗಲಿಲ್ಲ. ಕಣ್ಣೆದುರಿನಲ್ಲೇ ತನ್ನ ಗಂಡ ಕೊಲೆಯಾದುದನ್ನು ಅವಳಿಗೆ ತಡೆದುಕೊಳ್ಳಲು ಆಗಲಿಲ್ಲ. ಅವಳು ತುಂಬ ಕೆರಳಿ ಕೆಂಡವಾದಳು. ಆಕೆ—

> ಕಲ್ಮಾಷಪಾದಂ ರಾಜರ್ಷಿಮಶಪದ್ ಬ್ರಾಹ್ಮಣೀ ರುಷಾ ।
> ಯಸ್ಮಾನ್ಮಮಾಕೃತಾರ್ಥಾಯಾಸ್ತ್ವಯಾ ಕ್ಷುದ್ರ ನೃಶಂಸವತ್ ॥ ೧೮ ॥
> ಪ್ರೇಕ್ಷಂತ್ಯಾ ಭಕ್ಷಿತೋ ಮೇಽದ್ಯ ಪ್ರಿಯೋ ಭರ್ತಾ ಮಹಾಯಶಾಃ ।
> ತಸ್ಮಾತ್ ತ್ವಮಪಿ ದುರ್ಬುದ್ಧೇ ಮಚ್ಛಾಪಪರಿವಿಕ್ಷಿತಃ ॥ ೧೯ ॥
> ಪತ್ನೀಮೃತಾವನುಪ್ರಾಪ್ಯ ಸದ್ಯಸ್ತ್ಯಕ್ಷ್ಯಸಿ ಜೀವಿತಮ್ ।
> ಯಸ್ಯ ಚರ್ಷೇರ್ವಸಿಷ್ಠಸ್ಯ ತ್ವಯಾ ಪುತ್ರಾ ವಿನಾಶಿತಾಃ ॥ ೨೦ ॥
> ತೇನ ಸಂಗಮ್ಯ ತೇ ಭಾರ್ಯಾ ತನಯಂ ಜನಯಿಷ್ಯತಿ ।
> ಸ ತೇ ವಂಶಕರಃ ಪುತ್ರೋ ಭವಿಷ್ಯತಿ ನೃಪಾಧಮ ॥ ೨೧ ॥

ರಾಜರ್ಷಿಯಾದ ಕಲ್ಮಾಷಪಾದರಾಜನಿಗೆ ಹೀಗೆ ಶಾಪವಿತ್ತಳು : 'ಎಲೈ ನೀಚನೇ ! ನೀನು ನನ್ನ ಕಾಮತೃಪ್ತಿಯಾಗುವ ಮೊದಲೇ ನನ್ನ ಗಂಡನನ್ನು ನನ್ನ ಕಣ್ಣೆದುರಿನಲ್ಲೇ ಕೊಂದು ತಿಂದುಹಾಕಿರುವೆ. ಹೀಗಾಗಿ, ಎಲೈ ದುರುಳ ರಾಜನೇ ! ನನ್ನ ಶಾಪದಿಂದಾಗಿ ನೀನು ನಿನ್ನ ಹೆಂಡತಿಯನ್ನು ಅವಳ ಋತುಕಾಲದಲ್ಲಿ ಸಮೀಪಿಸುತ್ತಲೇ ಸಾವನ್ನಪ್ಪುವೆ.

ಅಲ್ಲದೆ ಯಾವ ವಸಿಷ್ಠನ ಮಕ್ಕಳನ್ನು ನೀನು ಕೊಂದಿರುವೆಯೋ ಅದೇ ವಸಿಷ್ಠನ ಬಳಿಗೆ ನಿನ್ನ ಹೆಂಡತಿಯು ಮಗುವನ್ನು ಪಡೆಯಲೆಂದು ಸಮಾಗಮಕ್ಕಾಗಿ ಹೋಗಲಿರುವಳು. ಆ ಮಗುವೇ ನಿನ್ನ ವಂಶವನ್ನು ಬೆಳೆಯಿಸಲಿರುವನು.'

ಏವಂ ಶಪ್ತ್ವಾ ತು ರಾಜಾನಂ ಸಾ ತಮಾಂಗಿರಸೀ ಶುಭಾ ।
ತಸ್ಯೈವ ಸನ್ನಿಧೌ ದೀಪ್ತಂ ಪ್ರವಿವೇಶ ಹುತಾಶನಮ್ ॥ ೨೨ ॥

ಈ ರೀತಿಯಾಗಿ, ಅಂಗೀರಸಕುಲದಲ್ಲಿ ಹುಟ್ಟಿದ ಸಾಧ್ವಿಯು ಕಲ್ಮಾಷಪಾದರಾಜನನ್ನು ಶಪಿಸಿದನಂತರ ಪ್ರಜ್ವಲಿತವಾದ ಅಗ್ನಿಗೆ ಹಾರಿಕೊಂಡಳು.

ಇದೆಲ್ಲ ವಸಿಷ್ಠನಿಗೆ ಅವನ ಯೋಗಸಾಮರ್ಥ್ಯದಿಂದಾಗಿ ತಿಳಿದುಬಂದಿತು.

ಮುಕ್ತಶಾಪಶ್ಚ ರಾಜರ್ಷಿಃ ಕಾಲೇನ ಮಹತಾ ತತಃ ।
ಋತುಕಾಲೇಽಭಿಪತಿತೋ ಮದಯಂತ್ಯಾ ನಿವಾರಿತಃ ॥ ೨೪ ॥
ನ ಹಿ ಸಸ್ಮಾರ ನೃಪಸ್ತಂ ಶಾಪಂ ಕಾಮಮೋಹಿತಃ ।
ದೇವ್ಯಾಃ ಸೋಽಥ ವಚಃ ಶ್ರುತ್ವಾ ಸಂಭ್ರಾಂತೋ ನೃಪಸತ್ತಮಃ ॥ ೨೫ ॥
ತಂ ಶಾಪಮನುಸಂಸ್ಮೃತ್ಯ ಪರ್ಯತಪ್ಯದ್ ಭೃಶಂ ತದಾ ।
ಏತಸ್ಮಾತ್ ಕಾರಣಾದ್ ರಾಜಾ ವಸಿಷ್ಠಂ ಸನ್ಯಯೋಜಯತ್ ।
ಸ್ವದಾರೇಷು ನರಶ್ರೇಷ್ಠ ಶಾಪದೋಷಸಮನ್ವಿತಃ ॥ ೨೬ ॥

'ಶಾಪದಿಂದ ಬಿಡುಗಡೆಹೊಂದಿದ ತರುವಾಯ ಕಲ್ಮಾಷಪಾದರಾಜನು ಮಡದಿಯು ಋತುಕಾಲದಲ್ಲಿ ಕೂಡಿಕೊಳ್ಳುವ ಲವಲವಿಕೆಯಿಂದ ಅವಳ ಬಳಿಗೆ ಹೋದನು. ಆದರೆ ಅವಳು ಒಪ್ಪಲಿಲ್ಲ. ಕಾಮಾತುರತೆಯಿಂದಾಗಿ ರಾಜ ತನ್ನ ಶಾಪವನ್ನು ಮರೆತಿದ್ದನು, ಮದಯಂತಿಯು ಅವನಿಗೆ ಅದನ್ನು ನೆನಪು ಮಾಡಿಕೊಟ್ಟಳು. ಅದರ ನೆನಪಿನಿಂದಾಗಿ ಅವನಿಗೆ ತುಂಬ ಪಶ್ಚಾತ್ತಾಪವಾಯಿತು. ಹೀಗಾಗಿ ಕಲ್ಮಾಷಪಾದರಾಜನು ಮದಯಂತಿಯನ್ನು ಸಂತಾನಪ್ರಾಪ್ತಿಗಾಗಿ ವಸಿಷ್ಠರ ಬಳಿಗೆ ಕಳುಹಿಸಿದನು.'

## ೪೩. ಋಷಿ > ಸುಂದೋಪಸುಂದ ಆದಿ/೨೦೯

ಯುಧಿಷ್ಠಿರನ ಕೇಳಿಕೆಯ ಮೇರೆಗೆ ನಾರದನು ಅವನಿಗೆ ಸುಂದೋಪಸುಂದರ ಕಥೆಯನ್ನು ಹೇಳಿದನು. ಅದನ್ನೇ ಈಗ ವೈಶಂಪಾಯನ ಜನಮೇಜಯನಿಗೆ ಹೇಳುತ್ತಲಿದ್ದಾನೆ.

ಹಿರಣ್ಯಕಶ್ಯಪನ ಕುಲದಲ್ಲಿ ಹುಟ್ಟಿದವನಾದ ನಿಕುಂಭ ಒಬ್ಬ ಬಲಾಢ್ಯನಾದ ದೈತ್ಯನಾಗಿದ್ದನು. ಸುಂದೋಪಸುಂದರು ಅವನ ಮಕ್ಕಳು. ಅವರೂ ಕೂಡ ಬಲುಪರಾಕ್ರಮಿಗಳಾಗಿದ್ದರು, ಬಲಾಢ್ಯರಾಗಿದ್ದರು. ಇಬ್ಬರೂ ಒಬ್ಬರನ್ನೊಬ್ಬರು ಕೇಳಿಯೋ ಯಾವ ಕೆಲಸವನ್ನಾದರೂ ಮಾಡುತ್ತಿದ್ದರು. ಅವರು ಒಬ್ಬರನ್ನೊಬ್ಬರು ಬಲುಪ್ರೀತಿಸುತ್ತಿದ್ದರು. ತ್ರೈಲೋಕ್ಯವನ್ನು ಗೆದ್ದುಕೊಳ್ಳುವ ಉದ್ದೇಶದಿಂದ ಅವರಿಬ್ಬರೂ ವಿಂಧ್ಯಪರ್ವತದ ಮೇಲೆ ಉಗ್ರತಪಸ್ಸಿಗೆ ಕುಳಿತರು. ತಪೋಭಂಗವು ಆಗುವಂತಹ ಯಾವುದೇ ಸಂಕಟಗಳಿಗೂ ಅವರು ಸೊಪ್ಪುಹಾಕಲಿಲ್ಲ. ಬ್ರಹ್ಮದೇವನು ಅವರ ತಪಸ್ಸಿಗೆ ಸಂತುಷ್ಟನಾದನು. ಅವನು ಅವರಿಬ್ಬರಿಗೂ ಮಾಯೆ, ಅಸ್ತ್ರವಿದ್ಯೆ, ಬೇಕಿದ್ದ ರೂಪವನ್ನು ಧರಿಸುವ ಶಕ್ತಿ,

ಅತುಲನೀಯವಾದ ಸಾಮರ್ಥ್ಯ ಮೊದಲಾದ ಹಲವು ವರಗಳನ್ನು ದಯಪಾಲಿಸಿದನು. ಅಮರತ್ವದ ಅವರ ಕೇಳಿಕೆಯನ್ನು ಮಾತ್ರ ನಿರಾಕರಿಸಿದನು. ಅವರು ಕೇಳಿದ 'ಪರಸ್ಪರೆರನ್ನು ಬಿಟ್ಟರೆ ಬೇರೆಯವರಿಗೆ ಅವಧ್ಯರಾಗಿರುವೆವು' ಎಂಬ ವರವನ್ನು ಕೂಡ ಬ್ರಹ್ಮದೇವನು ಬಲುಸಂತುಷ್ಟಮನದಿಂದ ನೀಡಿದನು. ವರವು ದೊರೆತ ಕೂಡಲೇ ಅವರಿಬ್ಬರೂ ಉದ್ದಾಮರಾದರು. ಕಂಡವರನ್ನು ಕೊಲ್ಲತೊಡಗಿದರು. ಅವರ ಸೈನಿಕರು ಒಂದು ಆಶ್ರಮವನ್ನು ಹೊಕ್ಕು ಅಗ್ನಿಹೋತ್ರದ ಸಾಮಗ್ರಿಗಳನ್ನೆಲ್ಲ ನೀರಿಗೆ ಎಸೆದುಬಿಟ್ಟರು. ಹಲವು ಜನ ಋಷಿಗಳು ಹೆದರಿ ಅಡಗಿ ಕುಳಿತರು. ಅವರ ಈ ಅಘೋರವಾದ ಕೃತ್ಯದಿಂದಾಗಿ ಎಲ್ಲೆಡೆಗಳಲ್ಲಿ ಹಾಹಾಕಾರ ಎದ್ದಿತು. ಋಷಿಗಳು ಅವರನ್ನು ಶಪಿಸಿದರು.

> ತಪೋಧನೈಶ್ಚ ಯೇ ಕ್ರುದ್ಧೈಃ ಶಾಪಾ ಉಕ್ತಾ ಮಹಾತ್ಮಭಿಃ ।
> ನಾಕ್ರಮಂತ ತಯೋಸ್ತೇಽಪಿ ವರದಾನನಿರಾಕೃತಾಃ ॥ ೧೫ ॥
> ನಾಕ್ರಾಮಂತ ಯದಾ ಶಾಪಾ ಬಾಣಾ ಮುಕ್ತಾಃ ಶಿಲಾಸ್ವಿವ ।
> ನಿಯಮಾನ್ ಸಂಪರಿತ್ಯಜ್ಯ ವ್ಯದ್ರವಂತ ದ್ವಿಜಾತಯಃ ॥ ೧೬ ॥

ಋಷಿಗಳು ಸಂತಪ್ತರಾಗಿ ನೀಡಿದ ಶಾಪಗಳು ಅವರ ಬಗೆಗೆ ಫಲಕಾರಿಯಾಗಲಿಲ್ಲ. ಬ್ರಹ್ಮದೇವನ ವರದಿಂದಾಗಿ ಶಾಪಗಳ ದಾಹಕತೆ ನಾಶಹೊಂದಿತು. ಬಂಡೆಯ ಮೇಲೆ ಎಸೆದ ಬಾಣಗಳಂತಹ ಅವಸ್ಥೆ ಋಷಿಗಳ ಶಾಪಗಳದಾಯಿತು. ಹೀಗಾಗಿ ಬ್ರಾಹ್ಮಣರು (ಭಯಭೀತರಾಗಿ) ಕೈಯೊಳಗಿನ ಕೆಲಸಗಳನ್ನು ಹಾಗೆಯೇ ಬಿಟ್ಟುಕೊಟ್ಟು ದಿಕ್ಕು ಕಂಡತ್ತ ಓಟಕಿತ್ತರು.

+ ವಿಫಲವಾದ ಶಾಪಗಳು.

## ೪೪. ಅರ್ಜುನ, ಅಗ್ನಿ, ಶ್ರೀಕೃಷ್ಣ > ಅಶ್ವಸೇನ (ನಾಗ)

**ಆದಿ/೨೨೬**

ವೈಶಂಪಾಯನ ಜನಮೇಜಯನಿಗೆ ದೇವತೆಗಳು ಹಾಗೂ ಅರ್ಜುನ. ಶ್ರೀಕೃಷ್ಣರ ಯುದ್ಧವನ್ನು ಕುರಿತು ಹೇಳುತ್ತಲಿದ್ದಾನೆ—

ಅರ್ಜುನನು ತನ್ನ ಅಸ್ತ್ರವನ್ನು ಬಳಸಿ ಇಂದ್ರನ ಪರ್ಜನ್ಯವೃಷ್ಟಿಯನ್ನು ನಿವಾರಿಸಿದನು. ಅರ್ಜುನನ ಶರಸಂಧಾನದಿಂದಾಗಿ ಖಾಂಡವ ವನವು ಪೂರ್ತಿಯಾಗಿ ಹೊದಿಸಲ್ಪಟ್ಟಿತು. ಹೀಗಾಗಿ ಯಾವ ಪ್ರಾಣಿಗೂ ಅಲ್ಲಿಂದ ಹೊರಬರುವುದು ಅಸಾಧ್ಯವಾಯಿತು. ಖಾಂಡವವನ ಅಗ್ನಿಗೆ ಆಹುತಿಯಾಗುತ್ತಲಿತ್ತು. ಆಗ ನಾಗರಾಜನಾದ ತಕ್ಷಕ ಅಲ್ಲಿರಲಿಲ್ಲ. ಅವನ ಪರಾಕ್ರಮಿಯಾದ ಮಗ ಅಶ್ವಸೇನ ಅಲ್ಲಿದ್ದನು. ಅರ್ಜುನನ ಬಾಣಗಳ ಮಳೆಯ ಎದುರು ಅವನ ಆಟ ನಡೆಯದಂತಾಗಿತ್ತು. ಅವನನ್ನು (ಅಶ್ವಸೇನನನ್ನು) ನುಂಗಿಹಾಕಿ ಅವನ ತಾಯಿಯು ಖಾಂಡವವನದಿಂದ ನುಣುಚಿಕೊಳ್ಳುತ್ತಿರುವಾಗಲೇ ಅರ್ಜುನನು ತನ್ನ ಬಾಣಗಳಿಂದ ಅವಳ ತಲೆಯನ್ನು ಒಡೆದು ಹೋಳುಗಳನ್ನಾಗಿ ಮಾಡಿದನು. ಆಗ ಇಂದ್ರನು ಅಶ್ವಸೇನನನ್ನು ಬಿಡುಗಡೆಗೊಳಿಸಲೆಂದು ವಾಯು-ಅಸ್ತ್ರವನ್ನು ಎಸೆದನು. ಅದರಿಂದಾಗಿ ಅರ್ಜುನ ಎಚ್ಚರದಪ್ಪಿ ಬಿದ್ದನು. ಅಷ್ಟರಲ್ಲಿ ಅಶ್ವಸೇನ ಅಲ್ಲಿಂದ ನುಣುಚಿಕೊಂಡನು.

ತಾಂ ಚ ಮಾಯಾಂ ತದಾ ದೃಷ್ಟ್ವಾ ಘೋರಾಂ ನಾಗೇನ ವಂಚಿತಃ ।
ದ್ವಿಧಾ ತ್ರಿಧಾ ಚ ಖಗತಾನ್ ಪ್ರಾಣಿನಃ ಪಾಂಡವೋಽಚ್ಛಿನತ್ ॥ ೧೦ ॥
ಶಶಾಪ ತಂ ಚ ಸಂಕ್ರುದ್ಧೋ ಬೀಭತ್ಸುರ್ಜಿಹ್ಮಗಾಮಿನಮ್ ।
ಪಾವಕೋ ವಾಸುದೇವಶ್ಚಾಪ್ಯಪ್ರತಿಷ್ಠೋ ಭವಿಷ್ಯಸಿ ॥ ೧೧ ॥

ಅರ್ಜುನ (ಇಂದ್ರನ) ಮಾಯೆಯನ್ನು ಗುರುತಿಸಿದನು. ಅಶ್ವಸೇನ ನುಣುಚಿಕೊಂಡನು. ಇದನ್ನು ಕಂಡು ಅರ್ಜುನನು ಮುಗಿಲಲ್ಲಿ ಧುಮುಕುವ ಪ್ರಾಣಿಮಾತ್ರರೆಲ್ಲರನ್ನು ತುಣುಕುಗಳನ್ನಾಗಿ ಮಾಡಿಬಿಟ್ಟನು. ಅವನು, 'ನೀನು ನಿರಾಧಾರನೂ, ನಿರಾಶ್ರಿತನೂ ಆಗುವೆ' ಎಂದು ಬಲುಕೋಪದಿಂದ ಶಾಪವನ್ನಿತ್ತನು. ಅಗ್ನಿ ಹಾಗೂ ಶ್ರೀಕೃಷ್ಣರೂ ಅದನ್ನೇ ಪುನರುಚ್ಚರಿಸಿದರು.

## ೪೫. ಊರ್ವಶಿ > ಅರ್ಜುನ

ವನ/೪೬

ವೈಶಂಪಾಯನ ಜನಮೇಜಯನಿಗೆ ಊರ್ವಶಿಯ ಶಾಪದ ಕಥೆಯನ್ನು ಹೇಳುತ್ತಲಿದ್ದಾನೆ.

ಅರ್ಜುನ ಊರ್ವಶಿಯ ಬಗೆಗೆ ಆಸಕ್ತಿಯನ್ನು ತಳೆದಿರುವನೆಂದು ಬಗೆದು ಇಂದ್ರನು ಚಿತ್ರಸೇನ ಗಂಧರ್ವನಿಗೆ ಊರ್ವಶಿಯು ಅರ್ಜುನನ ಸೇವೆಗೆ ಹೋಗುವಂತೆ ನೋಡಿಕೊಳ್ಳಲು ಸೂಚನೆಯನ್ನಿತ್ತನು. ಊರ್ವಶಿಯು ಇಂದ್ರನ ಬಯಕೆಗೆ ಮನ್ನಣೆಯನ್ನಿತ್ತಳು. ಅಲ್ಲದೆ ಅವಳೂ ಕೂಡ ಅರ್ಜುನನ ಅಂದಕ್ಕೆ ಮರುಳಾಗಿದ್ದಳು. ಅವಳಲ್ಲಿ ಕಾಮವಾಸನೆ ಕೆರಳಿದ್ದಿತು. ಊರ್ವಶಿ ಹುಟ್ಟುಚೆಲುವೆ. ಮೇಲೆ ಬಟ್ಟೆಬರೆ ವಸ್ತ್ರ ಒಡವೆಗಳ ಮೆರಗು ಬೇರೆ. ರಾತ್ರಿ ಅವಳು ಅರ್ಜುನನ ಮಂದಿರಕ್ಕೆ ಹೋದಳು. ತನ್ನೊಂದಿಗೆ ರಮಿಸಬೇಕೆಂದು ಕೇಳಿದಳು. ಅರ್ಜುನ ಮಾತ್ರ, 'ನೀನು ನನಗೆ ಮಾತೆ—ಕುಂತಿ, ಮಾದ್ರಿ, ಶಚಿಯರಂತೆ ವಂದ್ಯಳು' ಎಂದು ನುಡಿದು ಅವಳ ಬಯಕೆಯನ್ನು ತಳ್ಳಿಹಾಕಿದನು. ಅವಳು ಬಗೆಬಗೆಯಾಗಿ ಅವನನ್ನು ಬೇಡಿಕೊಂಡಳು. ಅವನು ದೇವಸಭೆಯಲ್ಲಿ ಕಣ್ಣು ಮಿಳುಕಿಸದೆಯೇ ತನ್ನತ್ತಲೇ ನೋಡುತ್ತಿದ್ದನೆಂದೂ ಹೇಳಿದಳು. ತಮ್ಮ ಈ ಕೂಟಕ್ಕೆ ಇಂದ್ರನ ಒಪ್ಪಿಗೆ ಇದೆಯೆಂದೂ ಹೇಳಿ ನೋಡಿದಳು. ಆದರೆ ಅರ್ಜುನನ ನಿರ್ಧಾರದ ಕಟ್ಟು ಸಡಿಲಾಗಲೇ ಇಲ್ಲ. ಹೀಗಾಗಿ ಕೊನೆಗೆ ಅವಳು ತುಂಬ ಕೆರಳಿ ಅವನಿಗೆ ಹೀಗೆಂದಳು—

ತವ ಪಿತ್ರಾಭ್ಯನುಜ್ಞಾತಾಂ ಸ್ವಯಂ ಚ ಗೃಹಮಾಗತಾಮ್ ।
ಯಸ್ಮಾನ್ಮಾಂ ನಾಭಿನಂದೇಥಾಃ ಕಾಮಬಾಣವಶಂಗತಾಮ್ ॥ ೪೯ ॥
ತಸ್ಮಾತ್ ತ್ವಂ ನರ್ತನಃ ಪಾರ್ಥ ಸ್ತ್ರೀಮಧ್ಯೇ ಮಾನವರ್ಜಿತಃ ।
ಅಪಮಾನಿತಿ ವಿಖ್ಯಾತಃ ಷಂಡವತ್ ವಿಚರಿಷ್ಯಸಿ ॥ ೫೦ ॥

'ಎಲೈ ಅರ್ಜುನನೇ ! ನಿನ್ನ ತಂದೆಯಾದ ಇಂದ್ರನ ಅಪ್ಪಣೆಯಿಂದಾಗಿಯೇ ನಾನಿಲ್ಲಿಗೆ ಬಂದಿರುವೆ. ನೀನು ಕಾಮಬಾಣಗಳಿಂದ ನನ್ನನ್ನು ನುಗ್ಗುನುಗ್ಗಾಗಿಸಿರುವೆ. ಇಂಥ ಪರಿಸ್ಥಿತಿಯಲ್ಲೂ ನೀನು ನನ್ನನ್ನು ಧಿಕ್ಕರಿಸುತ್ತಿರುವೆ. ಹೀಗಾಗಿ ನೀನು ಅಪಮಾನಿತನಾಗಿ

ಹೆಂಗಳೆಯರ ನಡುವೆ ಇರುವಂತಾಗಲಿ. ನರ್ತಕನಾಗಿ ಅಲೆದಾಡುವೆ. ಷಂಡನೆಂದು ನಿನ್ನನ್ನು ಹೀಗಳೆಯಲಾದೀತು. ನಿನ್ನ ನಡೆವಳಿಕೆ ಕೂಡ ಷಂಡನಂತೆಯೇ ಆದೀತು.'

ಶಾಪವನ್ನು ಕೇಳಿ ಅರ್ಜುನನಿಗೆ ಬಲು ಕೆಡುಕೆನಿಸಿತು. ನಡೆದುದನ್ನೆಲ್ಲ ಅವನು ಚಿತ್ರಸೇನನ ಮೂಲಕ ಇಂದ್ರನಿಗೆ ತಿಳಿಸಿದನು. ಇಂದ್ರನು ಅರ್ಜುನನನ್ನು ಒಂಟಿಯಾಗಿ ಕರೆದು ಅವನಿಗೆ ತಿಳಿಹೇಳಿದನು. ನೆಮ್ಮದಿಯ ಮಾತುಗಳಲ್ಲಿ ಅವನಿಗೆ ಹೀಗೆಂದನು—

ಯತ್ ತು ದತ್ತವತೀ ಶಾಪಮುರ್ವಶೀ ತವ ಮಾನದ ॥ ೫೬ ॥
ಸ ಚಾಪಿ ತೇಽರ್ಥಕೃತ್ ತಾತ ಸಾಧಕಶ್ಚ ಭವಿಷ್ಯತಿ ॥ ೫೭ ॥
ಅಜ್ಞಾತವಾಸೋ ವಸ್ತವ್ಯೋ ಭವದ್ಭಿರ್ಭೂತಲೇಽನಘ ।
ವರ್ಷೇ ತ್ರಯೋದಶೇ ವೀರ ತತ್ರ ತ್ವಂ ಕ್ಷಪಯಿಷ್ಯಸಿ ॥ ೫೮ ॥
ತೇನ ನರ್ತನವೇಷೇಣ ಅಪುಂಸತ್ವೇನ ತಥೈವ ಚ ।
ವರ್ಷಮೇಕಂ ವಿಹೃತ್ಯೈವ ತತಃ ಪುಂಸತ್ವಮಾಪ್ಸ್ಯಸಿ ॥ ೫೯ ॥

'ನಿನ್ನ ಹಿತಕ್ಕಾಗಿಯೆಂದೇ ಊರ್ವಶಿಯು ನಿನಗೆ ಶಾಪವನ್ನಿತ್ತಿರುವಳು. ನೀನು ನಿಷ್ಪಾಪಿ. ಭೂಮಿಯ ಮೇಲೆ ನೀನು ಒಂದು ವರ್ಷವನ್ನು ಅಜ್ಞಾತವಾಸದಲ್ಲಿ ಕಳೆಯ ಬೇಕಿದೆ. ಅಜ್ಞಾತವಾಸದೊಂದಿಗೇನೆ ನಿನ್ನ ಶಾಪವೂ ಕೊನೆಗೊಳ್ಳಲಿದೆ. ಒಂದು ವರ್ಷದ ಮಟ್ಟಿಗೆ ಮಾತ್ರ ನೀನು ಕುಣಿತದವನಾಗಿ ಅಲೆಯಬೇಕಾದೀತು. ನಿನ್ನ ಈ ಅವಸ್ಥೆ ಹಾಗೂ ನಪುಂಸಕತ್ವಗಳು ಒಂದು ವರ್ಷದ ತರುವಾಯ ಇಲ್ಲವಾಗಲಿವೆ. ಮತ್ತೆ ನಿನಗೆ ನಿನ್ನ ಗಂಡಸುತನ ಬರಲಿದೆ.'

+ ಇಂದ್ರನ ಆಶ್ವಾಸನೆಯು ಉಃಶಾಪದಂತಿದೆ. ಊರ್ವಶಿಯಿತ್ತ ಶಾಪದಲ್ಲಿ ಕಾಲ ಮರ್ಯಾದೆಯನ್ನು ಖಚಿತವಾಗಿ ಸೂಚಿಸಲಾಗಿಲ್ಲ. ಇಂದ್ರನ ಆಶ್ವಾಸನೆಯಲ್ಲಿ ಮಾತ್ರ ಅದನ್ನು ಒಂದು ವರ್ಷ ಮಾತ್ರವೆಂದು ಹೇಳಲಾಗಿದೆ. ಇಂದ್ರನ ಆ ಆಶ್ವಾಸನೆಯನ್ನೇ ಉಃಶಾಪವೆಂದು ಬಗೆಯುವುದಾದರೆ ಅದು ಯಾಚಿತವಾದುದೇ ಎಂದೆನ್ನಬೇಕು. ಏಕೆಂದರೆ ನಡೆದುದನ್ನೆಲ್ಲ ಇಂದ್ರನಿಗೆ ತಿಳಿಸುವಲ್ಲಿ ಶಾಪದಿಂದ ಬಿಡುಗಡೆಹೊಂದಬೇಕೆಂಬ ಅರ್ಜುನನ ಬಯಕೆಯೇ ಎದ್ದು ಕಾಣುತ್ತದೆ.

ಅರ್ಜುನನ ದೃಷ್ಟಿಯಿಂದ ಈ ಶಾಪವು ವರವೇ ಆಗಿದೆ. ವಾಲ್ಮೀಕಿರಾಮಾಯಣ ದಲ್ಲಿಯ ಪುಲಸ್ತ್ಯ > ತೃಣಬಿಂದುಕನ್ಯೆ (ಉತ್ತರಕಾಂಡ/೨/೧೩, ೧೪) ಈ ಶಾಪ ಕೂಡ ಹೀಗೆಯೇ ವರದಂತಿದೆ. (ವಾಲ್ಮೀಕಿರಾಮಾಯಣ : ಶಾಪ ಮತ್ತು ವರ—ಶಾಪ : ಕ್ರ. ೩೮, ನೋಡಿ.)*

* ಗೃಹೀತಾಸ್ತ್ರಸ್ತು ಕೌಂತೇಯೋ ಭ್ರಾತೄನ್ ಸಸ್ಮಾರ ಪಾಂಡವಃ ॥
ಪುರಂದರನಿಯೋಗಾಚ್ಚ ಪಂಚಾಬ್ದಾನವಸತ್ ಸುಖೀ ॥ ೫ ॥

ಈ ಶ್ಲೋಕದಲ್ಲಿಯ ಐದು ವರ್ಷಗಳ ಉಲ್ಲೇಖವನ್ನು ಗಮನಿಸಿದರೆ ಊರ್ವಶಿಯ ಶಾಪದ ಪರಿಣಾಮ ಶುರುವಾದುದು ಯಾವಾಗ ? ಎಂಬ ಬಗೆಗೆ ಸಂದೇಹ ಹುಟ್ಟಿಕೊಳ್ಳುತ್ತದೆ. ವನ/೪೬/೫೮ ರಲ್ಲಿ ಅಜ್ಞಾತವಾಸ ಹಾಗೂ ಊರ್ವಶಿಯ ಶಾಪಗಳಿಂದ ಒಂದೇ ಕಾಲಕ್ಕೆ ಬಿಡುಗಡೆಯಾದೀತು. ವನ/೪೬/೫೯ರಲ್ಲಿ ಇಂದ್ರನ ಈ ಬಗೆಯ ಆಶ್ವಾಸನೆ ಇದೆ—

## ೪೬. ಕಲಿ > ನಲರಾಜ ವನ/೫೮

ಬೃಹದಶ್ವನು ಯುಧಿಷ್ಠಿರನಿಗೆ ನಲಚರಿತ್ರೆಯನ್ನು ಹೇಳಿದ್ದನು. ಅದನ್ನೇ ವೈಶಂಪಾಯನ ಜನಮೇಜಯನಿಗೆ ಹೇಳುತ್ತಲಿದ್ದಾನೆ.

ದಮಯಂತಿಯು ದೇವತೆಗಳು ಹಾಗೂ ಹಲವು ಜನ ರಾಜರುಗಳ ಸಾಕ್ಷಿಯಿಂದ ನಲರಾಜನ ಕೊರಳಿಗೆ ವರಮಾಲೆಯನ್ನು ಹಾಕಿ ತನ್ನ ಆಯ್ಕೆಯನ್ನು ವ್ಯಕ್ತಪಡಿಸಿದಳು. ಎಲ್ಲರಿಗೂ ಬಲುಸಂತೋಷವಾಯಿತು. ಲೋಕಪಾಲರು ಸಂತುಷ್ಟರಾಗಿ ನಲನನ್ನು ಹರಸಿದರು. ಅವನಿಗೆ ವರವನ್ನಿತ್ತರು. ಸ್ವಯಂವರ ಮುಗಿದ ತರುವಾಯ ಇಂದ್ರಾದಿದೇವತೆಗಳು ಹಿಂತಿರುಗಿ ಹೋಗುತ್ತಿರುವಾಗ ದಾರಿಯಲ್ಲಿ ಕಲಿ ಹಾಗೂ ದ್ವಾಪರರ ಭೇಟ್ಟಿಯಾಯಿತು. ಅವರು ದಮಯಂತಿಯ ಸ್ವಯಂವರಕ್ಕೆಂದೇ ಹೊರಟಿದ್ದರು. ಚಂದ್ರನು ಅವರಿಗೆ ದಮಯಂತಿಯ ಸ್ವಯಂವರ ಮುಗಿದಿದ್ದು ಅವಳು ನಲನನ್ನು ವರಿಸಿರುವುದಾಗಿ ಹೇಳಿದನು. ಕಲಿಗೆ ತುಂಬ ಕೋಪ ಬಂದಿತು. ಅವನು, 'ಇಷ್ಟೆಲ್ಲ ದೇವತೆಗಳಿರುವಾಗ ದಮಯಂತಿಯು ಒಬ್ಬ (ತೀರ ಸಾಮಾನ್ಯ) ಮಾನವನನ್ನು ತನ್ನ ಗಂಡನೆಂದು ಸ್ವೀಕರಿಸಿದಳೆಂದಬಳಿಕ ಅವಳಿಗೆ ತಕ್ಕ ಶಿಕ್ಷೆಯಾಗಲೇಬೇಕು' ಎಂದನು. ಕಲಿಯ ಈ ಮಾತನ್ನು ಕೇಳಿ ಅವರೆಲ್ಲ ನಲ ಒಬ್ಬ ಮಾನವನಾಗಿದ್ದರೂ ದಮಯಂತಿಯ ಆಯ್ಕೆ ಅದೆಷ್ಟು ಸರಿಯಾದುದೆಂದು ಅವನಿಗೆ ಮನಗಾಣಿಸಲು ಯತ್ನಿಸಿದರು. ಇಷ್ಟೇ ಅಲ್ಲದೆ ಅವರು ಮತ್ತೆ ಹೀಗೂ ಅಂದರು—

> ಏವಂ ರೂಪಂ ನಲಂ ಯೋ ವೈ ಕಾಮಯೇಚ್ಛಪಿತುಂ ಕಲೇ ।
> ಆತ್ಮಾನಂ ಸ ಶಪೇನ್ಮೂಢೋ ಹನ್ಯಾದಾತ್ಮಾನಮಾತ್ಮನಾ ॥ ೧೧ ॥
> ಏವಂ ಗುಣಂ ನಲಂ ಯೋ ವೈ ಕಾಮಯೇಚ್ಛಪಿತುಂ ಕಲೇ ।
> ಕೃಚ್ಛ್ರೇ ಸ ನರಕೇ ಮಜ್ಜೇದಗಾಧೇ ವಿಪುಲೇ ಹ್ರದೇ ॥ ೧೨ ॥

'ಗುಣ-ರೂಪಗಳಿಂದೆಲ್ಲ ಯುಕ್ತನಾದ ಇಂತಹ ನಲನನ್ನು ಶಪಿಸಲೆಳಸುವ ಮೂರ್ಖನು ತನ್ನನ್ನೇ ಶಪಿಸಿಕೊಂಡಂತೆ. ಅಲ್ಲದೆ ತನ್ನ ನಾಶಕ್ಕೆ ತಾನೇ ಕಾರಣನಾಗುವನು. ಗುಣ-ರೂಪಗಳಿಂದ ಕೂಡಿದ ನಲನನ್ನು ಶಪಿಸುವವನು ಬಲುದಾರುಣವಾದ ಬವಣೆಯ ನರಕವನ್ನು ಪ್ರವೇಶಿಸುವನು.'

+ ದೇವತೆಗಳು ಕಲಿಯ ಈ ಸಿಟ್ಟಿನ ಮಾತುಗಳನ್ನು 'ಶಾಪ'ವೆಂದೇ ಕರೆದಿದ್ದಾರೆ

. . . . .ಅಪುಂಸ್ತ್ವೇನ ತಥೈವ ಚ । ವರ್ಷಮೇಕಂ ವಿಹತ್ಯೈವ. . . . . .

ಎಂಬ ನುಡಿಯಲ್ಲಿ ಶಾಪದ ಕಾಲಮಿತಿಯು ಖಚಿತಗೊಂಡಿದೆ. ಅದನ್ನು ಗಮನಕ್ಕೆ ತೆಗೆದುಕೊಳ್ಳಲಾಗಿ ಊರ್ವಶಿಯ ಶಾಪವು ಅಜ್ಞಾತವಾಸದೊಂದಿಗೇನೆ ಶುರುವಾಗಿರಲು ಸಾಕು. ಏಕೆಂದರೆ ಊರ್ವಶಿಯು ಶಾಪವನ್ನಿತ್ತ ಕಾಲಕ್ಕೆ ಪಾಂಡವರ ವನವಾಸದ ಐದು ವರ್ಷಗಳಾದರೂ ಕಳೆದಿದ್ದವು. ಇನ್ನೂ ಏಳು ವರ್ಷಗಳು ಉಳಿದುಕೊಂಡಿದ್ದವು. ಊರ್ವಶಿಯ ಶಾಪ ತತ್ಕಾಲಕ್ಕೇನೆ ಶುರುವಾಯಿತೆಂದೂ, ಅರ್ಜುನನ ಶಾಪ ಹಾಗೂ ಅಜ್ಞಾತವಾಸಗಳು ಒಂದೇ ಕಾಲಕ್ಕೆ ಮುಗಿಯಲಿದ್ದರೆ ಮಾತ್ರ ಅರ್ಜುನನ ನಪುಂಸಕತ್ವವು ಒಂದು ವರ್ಷಕ್ಕಿಂತಲೂ ಹೆಚ್ಚಿಗೆ, ಅಂದರೆ ಸುಮಾರು ಎಂಟು ವರ್ಷಗಳದೆಂದು ಒಪ್ಪಬೇಕಾದೀತು. ಅದರಲ್ಲಿ ವನವಾಸದ ಉಳಿದಿರುವ ವರ್ಷಗಳು ಹಾಗೂ ಅಜ್ಞಾತವಾಸದ ಒಂದು ವರ್ಷ—ಎಂದು ಲೆಕ್ಕ.

ಅವನು ದೇವತೆಗಳ ಮಾತನ್ನು ಕೇಳಲಿಲ್ಲ. ಅವನು ತನ್ನ ಮನಬಂದಂತೆ ನಡೆದು ಕೊಂಡನು. (ದೇವತೆಗಳ ಹೇಳಿಕೆಯಂತೆ) ಇದೊಂದು ಶಾಪೋದ್ಗಾರವಾಗಿದ್ದರೆ ಅದ ರಿಂದಾಗಿ ಕಲಿಯು ಅನುಭವಿಸಬೇಕಾಗಿಬಂದ ಪರಿಣಾಮಗಳಾವುವು ? ಅವನು ಅನು ಭವಿಸದೇ ಹೋಗಿದ್ದರೆ ಈ ಶಾಪ ವ್ಯರ್ಥವೆನ್ನಿಸೀತು.

**ವನ/೬೩**

ನಲನು ದಮಯಂತಿಯನ್ನು ಕಾಡಿನಲ್ಲಿ ಬಿಟ್ಟುಹೋದನು. ಆಗ ಅವಳು ಮಾಡಿದ ವಿಲಾಪದಲ್ಲಿ ಮುಂದಿನ ಉದ್ಗಾರಗಳಿವೆ—

ಯಸ್ಯಾಭಿಶಾಪಾದ್ ದುಃಖಾರ್ತೋ ದುಃಖಂ ವಿಂದತಿ ನೈಷಧಃ ।
ತಸ್ಯ ಭೂತಸ್ಯ ನೋ ದುಃಖಾದ್ ದುಃಖಮಪ್ಯಧಿಕಂ ಭವೇತ್ ॥ ೧೬ ॥
ಅಪಾಪಚೇತಸಂ ಪಾಪೋ ಯ ಏವಂ ಕೃತವಾನ್ ನಲಮ್ ।
ತಸ್ಮಾದ್ ದುಃಖತರಂ ಪ್ರಾಪ್ಯ ಜೀವತ್ವಸುಖಜೀವಿಕಾಮ್ ॥ ೧೭ ॥

'ಯಾರ ಶಾಪದಿಂದಾಗಿ ನಲನಿಗೆ ದುಃಖ ಹಾಗೂ ಕ್ಲೇಶಗಳನ್ನು ಅನುಭವಿಸುವ ಹೊತ್ತು ಬಂದಿದೆಯೋ ಅಂಥವನಿಗೆ (ಪ್ರಾಣಿಗೆ) ಇದಕ್ಕಿಂತಲೂ ಹೆಚ್ಚಿನ ಬವಣೆ ಯಾದೀತು. ಯಾವ ಪಾಪಿಯು ನಲನಂತಹ ಪುಣ್ಯವಂತನಿಗೆ ಇಂಥ ಅವಸ್ಥೆಯನ್ನು ತಂದೊದಗಿಸಿದನೋ ಅಂಥವನ ಬಾಳು ಬವಣೆಗಳಿಂದ ತುಂಬಿಹೋಗಲಿ.'

+ ದಮಯಂತಿಯ ಈ ಮಾತುಗಳು ಶಾಪಗಳಂತಿವೆ ಎನ್ನುವಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ನಲನನ್ನು ಕಷ್ಟಕ್ಕೀಡುಮಾಡಿದವರು ಯಾರೆಂಬುದು ಅವಳಿಗೆ ತಿಳಿದಿಲ್ಲ. ಹೀಗಾಗಿ ಅವಳು ಬರಿ 'ಪಾಪಿ' ಎಂದಿಷ್ಟೇ ಅನ್ನುತ್ತಾಳೆ. ತನಗಾದ ಸಂಕಟವನ್ನು ತಡೆದು ಕೊಳ್ಳಲಾಗದೆ ಅವಳಾಡಿದ ಮಾತುಗಳು ಶಾಪಗಳೆನ್ನಿಸಿದರೂ ಅವಳಿಗೆ ಆ ವ್ಯಕ್ತಿಯೇ ಗೊತ್ತಿರದ ಕಾರಣ ಈ ಮಾತುಗಳು ಅವಳ ಮನದ ಕಳವಳವನ್ನು ಮಾತ್ರ ವ್ಯಕ್ತ ಗೊಳಿಸುತ್ತಿವೆ. ಹೆಬ್ಬಾವು ತನ್ನನ್ನು ನುಂಗಿದಾಗಲೂ ಅವಳು ತನಗಾಗಿ ದುಃಖಿಸಿದವಳಲ್ಲ. ಅವಳ ದುಃಖವೆಲ್ಲ ನಲನಿಗಾಗಿಯೇ ಇದ್ದುದು. ಅವಳ ತಳಮಳವೆಲ್ಲ ನಲನ ದುಃಖವನ್ನು ಕುರಿತಾದುದು. ಹೀಗಾಗಿ ದಮಯಂತಿಯ ವಿಲಾಪವನ್ನು ಒಂದು ಭಿನ್ನವಾದ ಶಾಪ ಎಂದೆನ್ನಲಾಗದು.

## ೪೭. ದಮಯಂತಿ > ಬೇಡರವ **ವನ/೬೩**

ಬೃಹದಶ್ವನು ಯುಧಿಷ್ಠಿರನಿಗೆ ನಲನ ಕಥೆಯನ್ನು ಹೇಳುತ್ತಲಿದ್ದಾನೆ.

ನಲನು ದಮಯಂತಿಯನ್ನು ಕಾಡಿನಲ್ಲಿ ಬಿಟ್ಟು ಹೋಗಿಬಿಡುತ್ತಾನೆ. ಆಗ ಅವಳು ದಾರಿ ಕಂಡಂತೆ ಅಲೆಯುತ್ತ ಹೊರಡುತ್ತಾಳೆ. ದಾರಿಯಲ್ಲಿ ಒಂದೆಡೆ ಒಂದು ಹಸಿದ ಹೆಬ್ಬಾವು ಅವಳನ್ನು ಸುತ್ತಿಕೊಳ್ಳುತ್ತದೆ. ಅವಳನ್ನು ನುಂಗಿಹಾಕಲು ಹವಣಿಸುತ್ತದೆ. ಒಬ್ಬ ಬೇಡನು ಅವಳ ಕೂಗನ್ನು ಕೇಳುತ್ತಾನೆ. ಅವನು ಶೀಘ್ರವಾಗಿ ಓಡುತ್ತ ಅಲ್ಲಿಗೆ ಬಂದು ತನ್ನ ಕತ್ತಿಯಿಂದ ಹೆಬ್ಬಾವನ್ನು ಕಡಿದು ತುಂಡುತುಂಡುಗಳನ್ನಾಗಿ ಮಾಡುತ್ತಾನೆ. ದಮಯಂತಿ ಬದುಕಿ ಉಳಿಯುತ್ತಾಳೆ. ಅವನ ಕೇಳಿಕೆಯ ಮೇರೆಗೆ ಅವಳು ಅವನಿಗೆ ತನ್ನ

ಕಥೆಯನ್ನೆಲ್ಲ ಹೇಳುತ್ತಾಳೆ. ಅವಳ ಅಮೋಘವಾದ ಸೌಂದರ್ಯದಿಂದಾಗಿ ಆ ಬೇಡನು ಕಾಮಾರ್ತನಾಗುತ್ತಾನೆ. ಅವನು ಅವಳನ್ನು ಒಲಿಸಿಕೊಳ್ಳಲೆಂದು ಅವಳಿಗೆ ಬಗೆಬಗೆಯ ಮಾತುಗಳನ್ನು ಕೊಡುತ್ತಾನೆ. ದಮಯಂತಿಗೆ ಅವನ ಇಂಗಿತ ಅರ್ಥವಾಯಿತು. ಅವನು ಅವಳ ಅಸಹಾಯಕತೆಯ ದುರ್ಲಾಭವನ್ನು ಪಡೆಯಬಯಸಿದ್ದನು. ಅವನು ಅವಳ ಮೇಲೆ ಅತ್ಯಾಚಾರವನ್ನೆಸಗಲು ಸಿದ್ಧನಾಗಿದ್ದನು. ಆದರೆ ಅವಳ ಮೈ ಮುಟ್ಟಲು ಹೆದರುತ್ತಿದ್ದನು. ದಮಯಂತಿಯು ಅವನನ್ನು ಅವನ ದುರಾಲೋಚನೆಯಿಂದ ದೂರವಿರಿಸಲು ಹವಣಿಸುತ್ತಿದ್ದಳು. ಆದರೆ ಅವಳಾನೆ ಕೈಗೂಡಲಿಲ್ಲ. ಹೀಗಾಗಿ ತನ್ನ ಗಂಡ ಹಾಗೂ ರಾಜ್ಯಗಳಿಂದ ದೂರಾದ ದಮಯಂತಿ ಅವನನ್ನು ಈ ರೀತಿ ಶಪಿಸಿದಳು—

ದಮಯಂತೀ ತು ದುಃಖಾರ್ತಾ ಪತಿರಾಜ್ಯವಿನಾಕೃತಾ ।
ಅತೀತವಾಕ್ಪಥೇ ಕಾಲೇ ಶಶಾಪೈನಂ ರುಷಾನ್ವಿತಾ ॥ ೩೭ ॥
ಯದ್ಯಹಂ ನೈಷಧಾದನ್ಯಂ ಮನಸಾಪಿ ನ ಚಿಂತಯೇ ।
ತಥಾಯಂ ಪತತಾಂ ಪರಾಸುರ್ಮೃಗಜೀವನಃ ॥ ೩೮ ॥

'ನೈಷಾಧನನ್ನುಳಿದು ನಾನು ಇನ್ನಾರನ್ನೂ ಕುರಿತು ಮನದಲ್ಲಿ ನೆನೆಸದೇ ಇದ್ದರೆ ಇಂಥ ಸಾಮರ್ಥ್ಯದಿಂದಾಗಿ ಈ ಕೀಳು ಬೇಡನು ಸಾವನ್ನಪ್ಪಲಿ.'

ಬೇಡನ ಕಿವಿಗೆ ಅವಳ ಈ ನುಡಿಗಳು ಬೀಳುತ್ತಲೇ ಬಿರುಗಾಳಿಯಿಂದ ಬೇರು ಕಿತ್ತಿ ನೆಲಕ್ಕುರುಳುವ ಹೆಮ್ಮರದಂತೆ ಆ ಬೇಡನು ಸತ್ತುಬಿದ್ದನು.

+ ಈ ಶಾಪದ ನುಡಿಯಲ್ಲಿ ಸತ್ಯಕ್ರಿಯೆಯೂ ಇದೆ.

## ೪೮. ನಾರದ > ಕರ್ಕೋಟಕ ವನ/೬೬

ಬೃಹದಶ್ವನು ಯುಧಿಷ್ಠಿರನಿಗೆ ನಲನ ಕಥೆಯನ್ನು ಹೇಳುತ್ತಲಿದ್ದಾನೆ.

ನಲನು ದಮಯಂತಿಯನ್ನು ತ್ಯಜಿಸಿದ ತರುವಾಯ ಒಂದು ದಟ್ಟವಾದ ಕಾಡಿನಲ್ಲಿ ಅಲೆಯುತ್ತಿದ್ದನು. ಆಗ ಅವನಿಗೆ ಒಂದೆಡೆಯಲ್ಲಿ ಧಗಧಗಿಸುವ ಕಾಡುಬೆಂಕಿ ಕಂಡಿತು. ಅವನು ಅದನ್ನು ಬಳಿಸಾರುತ್ತಲೇ 'ಎಲೈ ಪುಣ್ಯಶ್ಲೋಕನಾದ ನಲನೇ ! ಬೇಗನೆ ಧಾವಿಸಿ ಬಾ' ಎಂಬ ನುಡಿ ಕೇಳಿಬಂದಿತು. ನಲನು ದನಿಯ ಸುಳಿವನ್ನು ಹಿಡಿದು ಬೆಂಕಿಯನ್ನು ಹೊಕ್ಕನು. ಅಲ್ಲಿ ಅವನೊಬ್ಬ ನಾಗರಾಜನನ್ನು ಕಂಡನು. ಅವನು ನಲನನ್ನು ನಮಸ್ಕರಿಸಿದನು—

ಉವಾಚ ಮಾಂ ವಿದ್ಧಿ ರಾಜನ್ ನಾಗಂ ಕರ್ಕೋಟಕಂ ನೃಪ ॥ ೪ ॥
ಮಯಾ ಪ್ರಲಬ್ಧೋ ಬ್ರಹ್ಮರ್ಷಿರ್ನಾರದಃ ಸುಮಹಾತಪಾಃ ।
ತೇನ ಮನ್ಯುಪರೀತೇನ ಶಪ್ತೋऽಸ್ಮಿ ಮನುಜಾಧಿಪ ॥ ೫ ॥
ತಿಷ್ಠ ತ್ವಂ ಸ್ಥಾವರ ಇವ ಯಾವದೇವ ನಲಃ ಕ್ವಚಿತ್ ।
ಇತೋ ನೇತಾ ಹಿ ತತ್ರ ತ್ವಂ ಶಾಪಾನ್ಮೋಕ್ಷ್ಯಸಿ ಮತ್ಕೃತಾತ್ ॥ ೬ ॥
ತಸ್ಯ ಶಾಪಾನ್ನ ಶಕ್ತೋऽಸ್ಮಿ ಪದಾದ್ ವಿಚಲಿತುಂ ಪದಮ್ ।
ಉಪದೇಕ್ಷ್ಯಾಮಿ ತೇ ಶ್ರೇಯಸ್ತ್ರಾತುಮರ್ಹತಿ ಮಾಂ ಭವಾನ್ ॥ ೭ ॥

ಮತ್ತೆ ಹೀಗೆಂದನು : "ಎಲೈ ರಾಜನೇ ! ನಾನು ಕರ್ಕೋಟಕನೆಂಬ ನಾಗನೆಂಬುದು ನಿನಗೆ ತಿಳಿದಿರಲಿ. ಒಂದು ಸಲ ನಾನು ಬ್ರಹ್ಮರ್ಷಿಯಾದ ನಾರದನಿಗೆ ಮೋಸಮಾಡಿದೆ. ಆಗ ಅವನು ನನ್ನನ್ನು ಹೀಗೆಂದು ಶಪಿಸಿದನು : 'ನೀನು ಒಂದು ಮರದಂತೆ ಒಂದೆಡೆಯಲ್ಲಿ ಬಿದ್ದುಕೊಂಡಿರುವಿ. ಆಗ ನಲರಾಜ ನಿನ್ನನ್ನು ಬೇರೆಡೆಗೆ ಕೊಂಡೊಯ್ಯಲಿರುವನು. ಹಾಗಾದಾಗಲೇ ನಿನಗೆ ಈ ಶಾಪದಿಂದ ಬಿಡುಗಡೆ ದೊರಕಲಿದೆ."

'ಎಲೈ ರಾಜನೇ ! ನಾರದಮುನಿಯ ಶಾಪದಿಂದಾಗಿ ನಾನು ಒಂದು ಹೆಜ್ಜೆ ಕೂಡ ಮುಂದಕ್ಕೆ ಅಲುಗಲಾರೆ. ನೀನು ನನ್ನನ್ನು ಬಿಡುಗಡೆ ಮಾಡು.' ನಾನು ನಿನಗೆ ಗೆಳೆಯನಾಗ ಬಯಸುತ್ತೇನೆ. ಅಲ್ಲದೆ ನಿನಗೆ ಸರಿಯಾದ ಉಪದೇಶವನ್ನೂ ನೀಡಬಲ್ಲೆನೆಂದು ಮಾತು ಕೊಟ್ಟನು.

ನಲನು ಅವನನ್ನು ಅಗ್ನಿಯಿಂದ ಪಾರುಮಾಡಿದನು. ನಾಗರಾಜ ಶಾಪದಿಂದ ಬಿಡುಗಡೆ ಹೊಂದಿದನು.

+ ಉತ್ತರಾರ್ಧದಲ್ಲಿ ಉಃಶಾಪವಿದೆ. ಇದನ್ನು ಉಃಶಾಪ ಎನ್ನಬಹುದೋ ಇಲ್ಲವೆ ಶಾಪದಿಂದ ಬಿಡುಗಡೆಯ ಕಥೆ ಎನ್ನಬಹುದೋ ? ಇದನ್ನು ಉಃಶಾಪ ಎಂದೆನ್ನುವು ದಾದರೆ ಇದು ಅಯಾಚಿತವಾದುದೇ ಸರಿ.

## ೪೯. ನಲ > ಕಲಿ

**ವನ/೭೨**

ಬೃಹದಶ್ವನು ಯುಧಿಷ್ಠಿರನಿಗೆ ನಲನ ಕಥೆಯನ್ನು ಹೇಳುತ್ತಲಿದ್ದಾನೆ.

ಋತುಪರ್ಣ ರಾಜನಿಗೆ ದಮಯಂತಿಯ ಸ್ವಯಂವರದ ವಾರ್ತೆ ತಿಳಿದಾಗ ಸರಿಯಾದ ಹೊತ್ತಿಗೆ ಅಲ್ಲಿಗೆ ಹೋಗಿ ತಲುಪುವುದು ಅಸಾಧ್ಯವಾಗಿತ್ತು. ಆದರೆ ಬಾಹುಕನಂತಹ ಕುಶಲಸಾರಥಿಯು ಮಾತುಕೊಟ್ಟಿದ್ದರಿಂದ ಋತುಪರ್ಣ ಸ್ವಯಂವರದಲ್ಲಿ ವರನಾಗಿ ಪಾಲ್ಗೊಳ್ಳಲು ಹೊರಟನು. ಪ್ರಯಾಣದಲ್ಲಿರುವಾಗ ರಾಜನು ಬಾಹುಕನಿಗೆ ಅಕ್ಷವಿದ್ಯೆ (ಜೂಜು)ಯನ್ನು ಹೇಳಿಕೊಟ್ಟು ಅವನಿಂದ ಅಶ್ವವಿದ್ಯೆಯನ್ನು ಪಡೆದನು. (ನಲ) ಬಾಹುಕನಿಗೆ ಅಕ್ಷವಿದ್ಯೆ ದೊರಕುತ್ತಲೇ ಕಲಿಯು ಮೈಯಿಂದ ಹೊರಬಂದನು. ಅದೇ ಕಾಲಕ್ಕೆ ಕಲಿಯ ಶಾಪಾಗ್ನಿ ಕೂಡ ಅವನ ಮೈಯಿಂದ ಹೊರಬಂದಿತು.

ಕಲಿಯ ಸ್ವರೂಪವು ಕಣ್ಣಿಗೆ ಕಾಣುತ್ತಲೇ ನಲ ತುಂಬ ಕೆರಳಿದನು. ಹೀಗಾಗಿ ಅವನು ಕಲಿಯನ್ನು ಶಪಿಸಬಯಸಿದನು—

ತಂ ಶಪ್ತುಮೈಚ್ಛತ್ ಕುಪಿತೋ ನಿಷಧಾಧಿಪತಿರ್ನಲಃ ॥ ೩೨ ॥

ಆಗ ಕಲಿಯು ನಲನಿಗೆ ಕೈಮುಗಿದು ಹೀಗೆಂದನು—'ಎಲೈ ಮಹಾರಾಜನೇ ! ನೀನು ನಿನ್ನ ಕೋಪವನ್ನು ತಡೆಹಿಡಿ. ನಾನು ನಿನ್ನನ್ನು ಮೊರೆಹೊಕ್ಕಿರುವೆನು. ದಮಯಂತಿಯ ಶಾಪವಾಣಿ ಹಾಗೂ ಕರ್ಕೋಟಕನ ತೀಕ್ಷ್ಣವಾದ ನಂಜಿನಿಂದಾಗಿ ನಾನು ನಿನ್ನ ದೇಹವನ್ನು ಹೊಕ್ಕಿದ್ದೆ.

......ಶೃಣು ಚೇದಂ ವಚೋ ಮಮ ।
ಯೇ ಚ ತ್ವಾಂ ಮನುಜಾ ಲೋಕೇ ಕೀರ್ತಯಿಷ್ಯಂತ್ಯತಂದ್ರಿತಾಃ ।
ಮತ್ಪ್ರಸೂತಂ ಭಯಂ ತೇಷಾಂ ನ ಕದಾಚಿದ್ ಭವಿಷ್ಯತಿ ॥ ೩೬ ॥

ಭಯಾರ್ತಂ ಶರಣಂ ಯಾತಂ ಯದಿ ಮಾಂ ತ್ವಂ ನ ಶಪ್ಸ್ಯಸೇ ॥ ೩೭ ॥

'ಎಲೈ ರಾಜನೇ ! ನಾನು ಹೇಳುವುದನ್ನು ಆಲಿಸು. ಹೆದರಿದವನಾದ ನಾನು ನಿನ್ನನ್ನು ಮೊರೆಹೊಕ್ಕಿರುವೆನು. ನೀನು ನನ್ನನ್ನು ಶಪಿಸದಿದ್ದರೆ ಮಾತ್ರ ನಿನ್ನ ನಾಮಸಂಕೀರ್ತನೆಯನ್ನು ಮಾಡುವವನಿಗೆ ನನ್ನಿಂದ ಇನಿತೂ ತೊಂದರೆಯಾಗದು' ಎಂದು ನಾನು ನಿನಗೆ ಮಾತುಕೊಡುತ್ತೇನೆ. ಕಲಿಯ ಮಾತನ್ನಾಲಿಸಿ ನಲನು ಅವನನ್ನು ಶಪಿಸುವ ಗೋಜಿಗೆ ಹೋಗಲಿಲ್ಲ.

+ ನೀಡಲಾಗದ ಶಾಪ.

## ೫೦. ದಮಯಂತಿ > ಕಲಿ

**ವನ/೭೨**

ಬೃಹದಶ್ವನು ಯುಧಿಷ್ಠಿರನಿಗೆ ನಲನ ಕಥೆಯನ್ನು ಹೇಳುತ್ತಲಿದ್ದಾನೆ.

ನಲನು ದಮಯಂತಿಯನ್ನು ಕಾಡಿನಲ್ಲಿ ಬಿಟ್ಟು ಹೊರಟುಹೋಗುತ್ತಲೇ ಅವಳು ವಿರಹದ ಬೇಗೆಯಲ್ಲಿ ಬೆಂದುಹೋದಳು. ತನ್ನ ಗಂಡನಿಗೆ ಕಾರಣವಿಲ್ಲದೆ ತೊಂದರೆಯನ್ನಿತ್ತ ಆ ಅನಾಮಿಕ ವ್ಯಕ್ತಿಗೆ ಅವಳು ಶಾಪವನ್ನಿತ್ತಳು. ಅದು ಕಲಿಯನ್ನುದ್ದೇಶಿಸಿದ್ದಾಗಿತ್ತು. ಆದರೆ ಅವಳಿಗೆ ಇದು ತಿಳಿದಿರಲಿಲ್ಲ.*

ಕರ್ಕೋಟಕನ ವಿಷದ ಪೀಡೆಯಿಂದ ಬಿಡುಗಡೆಯಾದಬಳಿಕ ಕಲಿಯು ತನ್ನ ಸ್ವರೂಪವನ್ನು ವ್ಯಕ್ತಪಡಿಸಿದನು. ಅದನ್ನು ಕಂಡು ನಲನಿಗೆ ತುಂಬ ಕೋಪ ಬಂದಿತು. ಹೀಗಾಗಿ ಅವನು ಕಲಿಯನ್ನು ಶಪಿಸಲು ಸಿದ್ಧನಾದನು. ಕಲಿಯು ಅವನನ್ನು ಮೊರೆಹೊಕ್ಕನು. ತನ್ನನ್ನು ಶಪಿಸಬಾರದೆಂದು ಅವನನ್ನು ಕೇಳಿಕೊಂಡನು, ನಲ ಒಪ್ಪಿದನು. ಕಲಿಯು ನಲನೆದುರು ಹೇಳಿದ ದಮಯಂತಿಯ ಶಾಪ ಈ ರೀತಿಯಾಗಿದೆ—

ಇಂದ್ರಸೇನಸ್ಯ ಜನನೀ ಕುಪಿತಾ ಮಾಶಪತ್ ಪುರಾ ।
ಯದಾ ತ್ವಯಾ ಪರಿತ್ಯಕ್ತಾ ತತೋಽಹಂ ಭೃಶಪೀಡಿತಃ ॥ ೩೪ ॥

'ಇಂದ್ರಸೇನನ ತಾಯಿಯಾದ ದಮಯಂತಿಯನ್ನು ಕಾಡಿನಲ್ಲಿ ಬಿಟ್ಟುಕೊಡುತ್ತಲೇ ಅವಳು ಕುಪಿತಳಾಗಿ ನನಗಿತ್ತ ಶಾಪದಿಂದಾಗಿ ನಾನು ಬಲು ಪೀಡಿತನಾದೆನು.'

**ವನ/೭೬**

ಋತುಪರ್ಣ ರಾಜನನ್ನು ಕರೆತಂದ ಬಾಹುಕನೆಂದರೆ ನಲನೇ ಆಗಿರಬಹುದೆಂಬುದು ದಮಯಂತಿಗೆ ಮನದಟ್ಟಾಗಿತ್ತು. ಇಷ್ಟಾಗಿಯೂ ಅವಳು ಅವನನ್ನು ಹಲವು ಬಗೆಯ ಪರೀಕ್ಷೆಗಳಿಗೆ ಒಡ್ಡಿದಳು. ಅವನು ಕುಳ್ಳನಾಗಿದ್ದ ಕಾರಣ ಅವಳಿಗೆ ಅವನ ಬಗೆಗೆ ಅಭ್ಯಂತರ ಕಂಡಿತ್ತು. ಆದರೆ ಅವನನ್ನು ಎದುರಿನಲ್ಲಿ ಕಂಡಕೂಡಲೇ ಮಾತ್ರ ಅದಿಲ್ಲವಾಯಿತು. ದಮಯಂತಿ ತನ್ನ ಮನದ ಅಳಲನ್ನೆಲ್ಲ ಅವನೆದುರು ತೋಡಿಕೊಂಡಳು. ಆಗ ಬಾಹುಕ ಅವಳಿಗೆ ಇಂತೆಂದನು—

ಮಮ ರಾಜ್ಯಂ ಪ್ರಣಷ್ಟಂ ಯನ್ನಾಹಂ ತತ್ ಕೃತವಾನ್ ಸ್ವಯಮ್ ।
ಕಲಿನಾ ತತ್ ಕೃತಂ ಭೀರೂ ಯಚ್ಚ ತ್ವಾಮಹಮತ್ಯಜಮ್ ॥ ೧೭ ॥

---

* ನೋಡಿ : ಶಾಪ ಕ್ರ. ೪೬–ಕಲಿ > ನಲರಾಜ, ವನಪರ್ವ ೬೩/೧೬-೧೭.

ಯತ್ ತ್ವಯಾ ಧರ್ಮಕೃಚ್ಛ್ರೇ ತು ಶಾಪೇನಾಭಿಹತಃ ಪುರಾ ।
ವನಸ್ಥಯಾ ದುಃಖಿತಯಾ ಶೋಚಂತ್ಯಾ ಮಾಂ ದಿವಾನಿಶಮ್ ॥ ೧೮ ॥
ಸ ಮಚ್ಛರೀರೇ ತ್ವಚ್ಛಾಪಾದ್ ದಹ್ಯಮಾನೋಽವಸತ್ ಕಲಿಃ ।
ತ್ವಚ್ಛಾಪದಗ್ಧಃ ಸತತಂ ಸೋಽಗ್ನಾವಗ್ನಿರಿವಾಹಿತಃ ॥ ೧೯ ॥

‘ಎಲೈ ಪಾಪಭೀರುವೇ ! ನನ್ನ ರಾಜ್ಯ ಕಳೆದು ನಾನು ನಿನ್ನನ್ನು ಬಿಟ್ಟುಹೋಗಲು ಕಾರಣನಾದವನೆಂದರೆ ಕಲಿಯು. ಹಾಗೆ ನಾನೇನೂ ಮಾಡಲಿಲ್ಲ. ಕಾಡಿನಲ್ಲಿರುವಾಗ ನಾನು ನನ್ನನ್ನು ಕುರಿತು ಹಗಲಿರುಳು ಒಂದೇ ಸಮನೆ ಹಲಬುತ್ತಿದ್ದೆ. ನಿನ್ನ ಮೇಲೆ ಧರ್ಮಸಂಕಟ ಬಂದೆರಗಿತ್ತು. ಆಗ ನೀನು (ಅನಾಮಿಕನನ್ನು) ಶಪಿಸುತ್ತಲೇ ಕಲಿಯು ನನ್ನನ್ನು ಹೊಕ್ಕು ಧಗಧಗಿಸಹತ್ತಿದನು. ನನ್ನ ದೇಹದಲ್ಲಿಯ ಅವನ ವಾಸವೆಂದರೆ ಬೆಂಕಿಯು ಬೆಂಕಿಯನ್ನೇ ಸುಟ್ಟಂತಹ ಮಾತು.’

+ ಇವೆರಡೂ ಸನ್ನಿವೇಶಗಳಲ್ಲಿ ದಮಯಂತಿಯು ಶಾಪ ಏನೆಂಬುದನ್ನು ಹೇಳಲಾಗಿಲ್ಲ. ಬರೀ ಉಲ್ಲೇಖ ಮಾತ್ರವಿದೆ.

## ೫೧. ಅಗಸ್ತ್ಯ > (ವಿದರ್ಭ) ಪೃಥ್ವೀಪತಿ ವನ/೯೭

ಅಗಸ್ತ್ಯನು ವಾತಾಪಿ ದೈತ್ಯನನ್ನು ಸದೆಬಡಿದ ಘಟನೆಯನ್ನು ಕುರಿತು ಯುಧಿಷ್ಠಿರನು ಲೋಮಶನನ್ನು ಕೇಳಿದನು. ಲೋಮಶ ಅವನಿಗೆ ಅದನ್ನು ಹೇಳುತ್ತಲಿದ್ದಾನೆ.

ಒಂದು ಸಲ ಅಗಸ್ತ್ಯನು ಸಂತತಿಗಾಗಿ ಹಾತೊರೆಯುತ್ತ ನೇತುಬಿದ್ದ ತನ್ನ ಪಿತೃಗಳನ್ನು ಕಂಡನು. ಅವರು ತಮ್ಮ ಮುಕ್ತಿಗಾಗಿ ಅವನು ಉತ್ತಮವಾದ ಸಂತತಿಯನ್ನು ಹುಟ್ಟುಹಾಕಬೇಕೆಂದು ಹೇಳಿದರು. ಅಗಸ್ತ್ಯ ತನಗೊಬ್ಬಳು ಒಳ್ಳೆಯ ಮಡದಿಯನ್ನು ಪಡೆಯಲೆಂದು ತುಂಬ ಅಂಡಲೆದನು. ಆದರೆ ಅವನಿಗೆ ಯಶ ದೊರಕಲಿಲ್ಲ. ಆಗ ಅವನು ಬೇರೆ ಬೇರೆ ಪ್ರಾಣಿಗಳ ಅಂದವಾದ ಅವಯವಗಳನ್ನು ಒಟ್ಟುಗೂಡಿಸಿ ಒಬ್ಬಳು ಸುಂದರಳಾದ ಹೆಣ್ಣನ್ನು ತಯಾರಿಸಿದನು. ಪಿತೃಗಳಿಗಾಗಿ ತಪಶ್ಚರ್ಯೆಯನ್ನು ಆಚರಿಸುತ್ತಲಿದ್ದ ವಿದರ್ಭದ ರಾಜನಿಗೆ ಅವಳನ್ನು ಒಪ್ಪಿಸಿದನು. ರಾಜನಿಗೆ ತುಂಬ ಸಂತೋಷವಾಯಿತು. ಅವನು ಅವಳಿಗೆ ಲೋಪಮುದ್ರಾ ಎಂದು ಹೆಸರಿಟ್ಟನು. ಅವಳು ಯೌವನದಲ್ಲಿ ಕಾಲಿಡುತ್ತಲೇ ಬಲುಚೆಲುವೆಯಾಗಿ ಕಾಣಹತ್ತಿದಳು. ಅವಳ ಮೊಗದಲ್ಲಿ ಶೀಲ, ಸದಾಚಾರಗಳ ತೇಜಸ್ಸು ಥಳಥಳಿಸುತ್ತಿತ್ತು. ರಾಜ ಅವಳ ಮದುವೆಗಾಗಿ ಚಿಂತೆಗೀಡಾದನು. ಆಗ ಅಗಸ್ತ್ಯನು ಅವಳನ್ನು ಸಂತತಿಯನ್ನು ಪಡೆಯಲೆಂದು ತನಗೆ ಕೊಡಬೇಕೆಂದು ಕೇಳಿದನು. ರಾಜನಿಗೆ ಅಚ್ಚರಿಯಾಯಿತು. ಅವನಿಗಿದು ಒಪ್ಪಿಗೆಯಾಗುವಂತಿರಲಿಲ್ಲವಾದರೂ ಅಗಸ್ತ್ಯನ ಸಾಮರ್ಥ್ಯವನ್ನು ಅರಿಯದವನಲ್ಲ. ಅವನು ತನ್ನ ಪಟ್ಟದರಸಿಗೆ ಇಂತೆಂದನು—

ಮಹರ್ಷಿರ್ವೀರ್ಯವಾನೇಷ ಕ್ರುದ್ಧಃ ಶಾಪಾಗ್ನಿನಾ ದಹೇತ್ ॥ ೪ ॥

‘ಈ ಮಹರ್ಷಿಯು (ಅಗಸ್ತ್ಯ) ಬಲುಶಕ್ತಿವಂತನು. ಈತ ಕೋಪಿಸಿಕೊಂಡರೆ ಶಾಪಾಗ್ನಿಯಿಂದ (ನಮ್ಮನ್ನು) ಸುಟ್ಟುಹಾಕದೆ ಇರಲಾರ.’

+ ಪ್ರತ್ಯಕ್ಷವಾಗಿ ಶಾಪವನ್ನು ಉಚ್ಚರಿಸಲಾಗಿಲ್ಲ. ಅದನ್ನೀಯಲಾದೀತೆಂಬ ಸಾಧ್ಯತೆ

ಹಾಗೂ ಅದರಿಂದಾಗಬಹುದಾದ ಭಯಂಕರವಾದ ಪರಿಣಾಮಗಳನ್ನು ಕುರಿತು ಇಲ್ಲಿ ಭಯವನ್ನು ವ್ಯಕ್ತಪಡಿಸಲಾಗಿದೆ.

## ೫೨. ಬ್ರಹ್ಮದೇವ (?) > (ದೇವಕನ್ಯೆ) ಮೃಗಿ ವನ/೧೧೦

ಲೋಮಶ ಮುನಿಯು ಯುಧಿಷ್ಠಿರನಿಗೆ ಋಷ್ಯಶೃಂಗನ ಹುಟ್ಟಿನ ಕಥೆಯನ್ನು ಹೇಳುತ್ತಲಿದ್ದಾನೆ.

ವಿಭಾಂಡಕ ಒಬ್ಬ ಮಹಾತೇಜಸ್ಸಿನ ಬ್ರಹ್ಮರ್ಷಿಯಾಗಿದ್ದನು. ಅವನ ದೇಹದ ಕಾಂತಿ ದೇವರಂತಿತ್ತು. ಅವನು ಹಲವು ಬಗೆಯ ದೇಹದಂಡನೆಯಿಂದ ಉಗ್ರವಾದ ತಪಶ್ಚರ್ಯೆಯನ್ನು ಕೈಕೊಂಡನು. ಒಂದು ಸಲ ಜಲಾಶಯದಲ್ಲಿ ಮೀಯುತ್ತಿರುವಾಗ ಊರ್ವಶಿಯ ಸೌಂದರ್ಯವನ್ನು ಕಂಡು ಅವನ ವೀರ್ಯಸ್ಖಲನವಾಯಿತು. ಅದೇ ಹೊತ್ತಿಗೆ ಬಾಯಾರಿದ ಹಿಂದು ಹೆಣ್ಣುಚಿಗರೆ ಅಲ್ಲಿಗೆ ನೀರು ಕುಡಿಯಲೆಂದು ಬಂದಿತು. ನೀರಿನೊಂದಿಗೆ ವೀರ್ಯ ಅದರ ಹೊಟ್ಟೆಯನ್ನು ಸೇರಿತು. ಅದು ಬಸಿರಾಯಿತು.

ನಾ ಪುರೋಕ್ತಾ ಭಗವತಾ ಬ್ರಹ್ಮಣಾ ಲೋಕಕರ್ತೃಣಾ ॥ ೩೬ ॥
ದೇವಕನ್ಯಾ ಮೃಗೀ ಭೂತ್ವಾ ಮುನಿಂ ಸೂಯ ವಿಮೋಕ್ಷ್ಯಸೇ ।
ಅಮೋಘತ್ವಾದ್ ವಿಧೇಶ್ಚೈವ ಭಾವಿತ್ವಾದ್ ದೈವನಿರ್ಮಿತಾತ್ ॥ ೩೭ ॥
ತಸ್ಯಾಂ ಮೃಗ್ಯಾಂ ಸಮಭವತ್ ತಸ್ಯ ಪುತ್ರೋ ಮಹಾನೃಷಿಃ ।
ಋಷ್ಯಶೃಂಗಸ್ತಪೋನಿತ್ಯೋ ವನ ಏವಾಭ್ಯವರ್ತತ ॥ ೩೮ ॥

'ಹಿಂದಿನ ಜನ್ಮದಲ್ಲಿ ಅದು ಒಬ್ಬಳು ದೇವಕನ್ಯೆಯಾಗಿತ್ತು. ಸೃಷ್ಟಿಕರ್ತನಾದ ಬ್ರಹ್ಮನು ಅವಳಿಗೆ ಮೊದಲೇ ಒಂದು ಮಾತನ್ನು ಹೇಳಿಟ್ಟಿದ್ದನು. ಅದೆಂದರೆ, ಅವಳು ಒಂದು ಜಿಂಕೆಯಾಗಿ ಒಬ್ಬ ಋಷಿಯನ್ನು ಹೆತ್ತ ತರುವಾಯವೇ ಅವಳಿಗೆ ಮುಕ್ತಿ ದೊರಕುವುದೆಂಬುದು. ಬ್ರಹ್ಮದೇವನ ವಾಣಿ ಅಮೋಘವಾದುದರಿಂದಲೂ, ದೈವಗತವಾದ ಯೋಜನೆಗಳನ್ನು ತಪ್ಪಿಸಲಾಗದ್ದರಿಂದಲೂ ಆ ಚಿಗರೆಯು ಒಬ್ಬ ಋಷಿಕುಮಾರನಿಗೆ ಜನ್ಮವನ್ನು ನೀಡಿತು. ಅವನ ಹಸರು ಋಷ್ಯಶೃಂಗ. ಅವನು ಯಾವಾಗಲೂ ಕಾಡಿನಲ್ಲಿಯೇ ವಾಸವಾಗಿರುತ್ತಿದ್ದನು. ಅಲ್ಲದೆ ಯಾವಾಗಲೂ ತಪಸ್ಸಿನಲ್ಲಿ ಮಗ್ನನಾಗಿರುತ್ತಿದ್ದನು.'

ಆ ಋಷಿಯ ತಲೆಯ ಮೇಲೆ ಒಂದು ಕೋಡು ಇದ್ದುದರಿಂದ ಅವನಿಗೆ ಋಷ್ಯಶೃಂಗನೆಂಬ ಹೆಸರು ಬಂದಿತು.

+ 'ಶಾಪ'ದ ಖಚಿತವಾದ ಉಲ್ಲೇಖವಿಲ್ಲದಿದ್ದರೂ ಕೂಡ ಶಾಪಮುಕ್ತಿಯ ಉಲ್ಲೇಖ ಮಾತ್ರ ಇದೆ. ದೇವಕನ್ಯೆಗೆ ಶಾಪವನ್ನಿತ್ತವರಾರು, ಯಾವ ಕಾರಣಕ್ಕಾಗಿ ಎಂಬ ಸಂಗತಿಗಳಲ್ಲದೆ ಅದರ ಸ್ವರೂಪವೇನು ? — ಎಂಬುದು ನಿಚ್ಚಳವಾಗಿಲ್ಲ. ಶಾಪಮುಕ್ತಿಯ ಉಲ್ಲೇಖವು ಉಃಶಾಪದಂತೆಯೇ ಇದೆ. ಆದರೆ ಯಾಚಿತವೋ, ಅಯಾಚಿತವೋ ಎಂಬುದನ್ನು ಮಾತ್ರ ನಿಖರವಾಗಿ ಹೇಳಲಾಗದು.

## ೫೩. ಋಷ್ಯಶೃಂಗ > ಸೂಳೆ ವನ/೧೧೦

ಲೋಮಶ ಮುನಿಯು ಯುಧಿಷ್ಠಿರನಿಗೆ ಅಂಗದೇಶದಲ್ಲಿ ಬಿದ್ದ ಬರ ಹಾಗೂ ಅದನ್ನು ನಿವಾರಿಸಲೆಂದು ಕೈಕೊಳ್ಳಲಾದ ಉಪಾಯಗಳನ್ನು ಕುರಿತು ಹೇಳುತ್ತಲಿದ್ದಾನೆ.

ಲೋಮಪಾದ ಅಂಗದೇಶಕ್ಕೆ ಅಧಿಪತಿಯಾಗಿದ್ದನು ಅವನು ಬೇಕೆಂದೇ ಒಬ್ಬ ಬ್ರಾಹ್ಮಣನೊಂದಿಗೆ ಸುಳ್ಳು ವ್ಯವಹಾರವನ್ನು ಕೈಕೊಂಡನು. ಹೀಗಾಗಿ ಬ್ರಾಹ್ಮಣ ವರ್ಗವು ಅವನನ್ನು ಬಹಿಷ್ಕರಿಸಿದ್ದಿತು. ರಾಜನೂ ಕೂಡ ಪುರೋಹಿತರ ಮೇಲೆ ಮನಬಂದಂತೆ ತಪ್ಪುಹೊರಿಸಿದನು. ಹೀಗಾಗಿ ಇಂದ್ರನು ಅವನ ರಾಜ್ಯದಲ್ಲಿ ಮಳೆ ಬೀಳದಂತೆ ನೋಡಿಕೊಂಡನು. ಸ್ವಾಭಾವಿಕವಾಗಿಯೇ ಅವನ ರಾಜ್ಯದ ಮೇಲೆಲ್ಲ ಬರಗಾಲದ ಕರಾಳಛಾಯೆ ಬಿದ್ದಿತ್ತು. ಪ್ರಜೆಗಳು ತುಂಬ ಬವಣೆಗೀಡಾದರು. ಆಗ ರಾಜನು ತಪೋನಿಷ್ಠರೂ ಬುದ್ಧಿವಂತರೂ ಹಾಗೂ ನಿಷ್ಠಾವಂತರೂ ಆದ ಬ್ರಾಹ್ಮಣರನ್ನು ಕರೆಕಳುಹಿ 'ರಾಜ್ಯದಲ್ಲಿ ಮಳೆ ಬೀಳುವಂತೆ' ನೋಡಿಕೊಳ್ಳಲು ಉಪಾಯವನ್ನು ಕಂಡುಹಿಡಿಯಲು ಹೇಳಿದನು. ಒಬ್ಬ ಮಹರ್ಷಿಯು ಬ್ರಾಹ್ಮಣರ ಕೋಪವನ್ನು ಶಾಂತಗೊಳಿಸಲೆಂದು ರಾಜನಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲು ಹೇಳಿದನು. ಅಲ್ಲದೆ, ತೀರ ಸರಳಮನೋಧರ್ಮದ ಹೆಣ್ಣುಗಳ ಬಗೆಗೆ ಏನನ್ನೂ ಅರಿಯದ ವಿಭಾಂಡಕ ಋಷಿಯ ಮಗನಾದ ಋಷ್ಯಶೃಂಗನನ್ನು ರಾಜ್ಯಕ್ಕೆ ಕರೆತರಲು ಹೇಳಿದನು. ಅವನು ರಾಜ್ಯಕ್ಕೆ ಕಾಲಿಡುತ್ತಲೇ ಮಳೆ ಬಂದೇ ಬರುವುದೆಂಬ ಬಗೆಗೆ ಅವರೆಲ್ಲರಿಗೆ ಖಾತ್ರಿಯಿತ್ತು.

ರಾಜನು ಪ್ರಾಯಶ್ಚಿತ್ತವನ್ನು ಕೈಕೊಂಡು ಬ್ರಾಹ್ಮಣರೆನ್ನೆಲ್ಲ ಸಂತುಷ್ಟರನ್ನಾಗಿ ಮಾಡಿದನು. ಮಂತ್ರಿಗಳೊಂದಿಗೆ ಚರ್ಚಿಸಿ ಋಷ್ಯಶೃಂಗನನ್ನು ಕರೆತರುವ ಉಪಾಯಗಳನ್ನು ಕಂಡುಕೊಳ್ಳಲಾಯಿತು. ಅದಕ್ಕಾಗಿ ಗಂಡುಗಳನ್ನು ತಮ್ಮತ್ತ ಆಕರ್ಷಿಸಿಕೊಳ್ಳುವ ಕಲೆಯಲ್ಲಿ ಚತುರೆಯರಾದ ಸೂಳೆಯರ ನೆರವಿನಿಂದ ಋಷ್ಯಶೃಂಗನನ್ನು ಕರೆತರಲು ನಿರ್ಧರಿಸಲಾಯಿತು. ಚತುರೆಯರಾದ ವಾರಾಂಗನೆಯರಿಗೆ ಈ ಕೆಲಸವನ್ನು ಒಪ್ಪಿಸಲಾಯಿತು. ಆಗ,

ತಾ ರಾಜಭಯಭೀತಾಶ್ಚ ಶಾಪಭೀತಾಶ್ಚ ಯೋಷಿತಃ ॥ ೫೪ ॥
ಅಶಕ್ಯಮೂಚುಸ್ತತ್ ಕಾರ್ಯಂ ವಿವರ್ಣಾ ಗತಚೇತಸಃ ॥ ೫೫ ॥

ರಾಜನ ಅಪ್ಪಣೆಯನ್ನು ಕೇಳಿ ಅವರೆಲ್ಲ ರಾಜನ ಹಾಗೂ ಶಾಪದ ಭಯದಿಂದಾಗಿ ತುಂಬ ಹೆದರಿಕೊಂಡರು. 'ಈ ಕೆಲಸವನ್ನು ಪೂರ್ತಿಗೊಳಿಸುವುದು ಅಸಾಧ್ಯ' ಎಂದರು. ಅವರೆಲ್ಲ ಎಚ್ಚರದಪ್ಪಿದರು ಕೂಡ.

+ ಶಾಪವನ್ನು ಪ್ರತ್ಯಕ್ಷವಾಗಿ ಉಚ್ಚರಿಸಲಾಗಿಲ್ಲ. ಆ ವೇಶ್ಯೆಯರಿಗೆಲ್ಲ ಋಷ್ಯಶೃಂಗ ತಮ್ಮನ್ನು ಶಪಿಸುವನೆಂಬ ಹೆದರಿಕೆಯಿತ್ತು.

## ೫೪. ಜಮದಗ್ನಿ > ರುಮಣ್ವಾನ್, ಸುಷೇಣ, ವಸು, ವಿಶ್ವಾವಸು ವನ/೧೧೬

ಅಕೃತವ್ರಣ ಯುಧಿಷ್ಠಿರನಿಗೆ ಪರಶುರಾಮನ ಹುಟ್ಟಿನ ಹಾಗೂ ಪರಾಕ್ರಮಗಳನ್ನು ಕುರಿತು ಹೇಳುತ್ತಲಿದ್ದಾನೆ.

ಜಮದಗ್ನಿಯು ವೇದಾಧ್ಯಯನಸಂಪನ್ನನಾದ ಒಬ್ಬ ತಪಸ್ವಿಯಾಗಿದ್ದನು. ಅವನು ನಿಯಮಗಳನ್ನು ಬಲು ಕಟ್ಟುನಿಟ್ಟಾಗಿ ಪಾಲಿಸುವವನಾಗಿದ್ದನು. ಅವನು ಪ್ರಸೇನಜಿತ ರಾಜನ ಕನ್ಯೆಯಾದ ರೇಣುಕೆಗಾಗಿ ಕೇಳಿ ಅವಳನ್ನು ಮಡದಿಯನ್ನಾಗಿ ಮಾಡಿಕೊಂಡಿದ್ದನು. ಅವಳು ಒಳ್ಳೆಯ ಪತಿಪರಾಯಣಳು, ವ್ರತಗಳನ್ನು ಪಾಲಿಸುವವಳು, ತತ್ಪರಳು ಹಾಗೂ ಜಮದಗ್ನಿಗೆ ತಕ್ಕ ಮಡದಿಯಾಗಿದ್ದಳು. ಒಂದು ಸಲ ಅವಳು ಹೊಳೆಯಲ್ಲಿ ಮಿಂದು ಹಿಂತಿರುಗುವಾಗ ಮಾರ್ತಿಕಾವತ ದೇಶದ ರಾಜ ಚಿತ್ರರಥ ತನ್ನ ಮಡದಿಯೊಂದಿಗೆ ಜಲಕ್ರೀಡೆಯಾಡುತ್ತಿದ್ದುದನ್ನು ಕಂಡಳು. ಅವಳ ಮನದಲ್ಲಿ ಅವನ ಬಗೆಗೆ ಬಯಕೆ ಹುಟ್ಟಿಕೊಂಡಿತು. ಜಮದಗ್ನಿ ಇದನ್ನು ಕಂಡುಕೊಂಡನು. ಅವನು ಒಬ್ಬೊಬ್ಬರಂತೆ ತನ್ನ ಮಕ್ಕಳಿಗೆ ಅವಳನ್ನು ಕೊಂದುಬಿಡುವಂತೆ ಅಪ್ಪಣೆಯನ್ನು ಮಾಡಿದನು. ರುಮಣ್ವಾನ್, ಸುಷೇಣ, ವಸು ಹಾಗೂ ವಿಶ್ವಾವಸು ಈ ಮಕ್ಕಳು ತಮ್ಮ ಅಮ್ಮನ ಮೇಲಿನ ಮಮತೆಯಿಂದಾಗಿ ಅವಳ ರುಂಡವನ್ನು ಕಡಿದುಹಾಕಲು ಸಿದ್ಧರಾಗಲಿಲ್ಲ. ಆಗ,

ತತಃ ಶಶಾಪ ತಾನ್ ಕ್ರೋಧಾತ್ ತೇ ಶಪ್ತಾಶ್ಚೇತನಾಂ ಜಹುಃ ।
ಮೃಗಪಕ್ಷಿಸಧರ್ಮಾಣಃ ಕ್ಷಿಪ್ರಮಾಸಂಜಡೋಪಮಾಃ ॥ ೧೨ ॥

'(ಜಮದಗ್ನಿಯು) ಕೆರಳಿ ಅವರನ್ನು ಶಪಿಸಿದನು. ಹೀಗಾಗಿ ಅವರೆಲ್ಲ ಪಶುಪಕ್ಷಿಗಳಂತೆ ಮಂದಬುದ್ಧಿಯುಳ್ಳರಾದರು. ಅವರೆಲ್ಲ ತಮ್ಮ ಆಲೋಚನೆಯ ಸಾಮರ್ಥ್ಯವನ್ನು ಕಳೆದುಕೊಂಡರು.'

ಒಡಹುಟ್ಟಿದವರಲ್ಲೆಲ್ಲ ಕಿರಿಯವನಾದ ಪರಶುರಾಮನು ತಂದೆಯ ಅಪ್ಪಣೆಯನ್ನು ಪಾಲಿಸಿ ತನ್ನ ತಾಯಿಯ ಶಿರಚ್ಛೇದವನ್ನು ಮಾಡಿದನು. ಆಗ ಜಮದಗ್ನಿಯು ಸಂತುಷ್ಟನಾಗಿ ಅವನಿಗೆ ವರವನ್ನು ಬೇಡಲು ಹೇಳಿದನು. ಅದಕ್ಕೆ ಅವನು ತನ್ನ ತಾಯಿ ಮರಳಿ ಜೀವ ಪಡೆಯಬೇಕೆಂದೂ. ಒಡಹುಟ್ಟಿದವರೆಲ್ಲರೂ ಮೊದಲಿನಂತಾಗಲೆಂದೂ ಕೇಳಿಕೊಂಡನು. ಅದರಿಂದಾಗಿ ರೇಣುಕೆ ಹಾಗೂ ಉಳಿದವರೆಲ್ಲ ಮೊದಲಿನಂತಾದರು.

+ ಶಾಪ ಎಂದಬಳಿಕ ಅದನ್ನು ಉಚ್ಚರಿಸುವುದು ಆವಶ್ಯಕ. ಇಲ್ಲಿ ಶಾಪದ ನುಡಿಗಳನ್ನು ನೀಡಲಾಗಿಲ್ಲ. ಶಾಪದ ಪರಿಣಾಮವನ್ನು ಮಾತ್ರ ಬಣ್ಣಿಸಲಾಗಿದೆ.

## ೫೫. ಕಹೋಡ > (ಬಸಿರಲ್ಲಿದ್ದ) ಅಷ್ಟಾವಕ್ರ ವನ/೧೩೨

ಯುಧಿಷ್ಠಿರನ ಕೋರಿಕೆಯ ಮೇರೆಗೆ ಲೋಮಶ ಮುನಿಯು ಅವನಿಗೆ ಅಷ್ಟಾವಕ್ರನನ್ನು ಕುರಿತು ಹೇಳುತ್ತಲಿದ್ದಾನೆ.

ಕಹೋಡನು ಉದ್ದಾಲಕಮುನಿಯ ಶಿಷ್ಯನು. ಅವನು ಬಲು ನಮ್ರನು, ಸೇವಾತತ್ಪರನು ಹಾಗೂ ವಿಧೇಯನಾಗಿದ್ದನು. ಗುರುವು ಸಂತುಷ್ಟನಾಗಿ ಅವನನ್ನು ವೇದಶಾಸ್ತ್ರಸಂಪನ್ನನನ್ನಾಗಿ ಮಾಡಿದನು. ಇಷ್ಟೇ ಅಲ್ಲದೆ ತನ್ನ ಮಗಳಾದ ಸುಜಾತೆಯನ್ನು ಅವನಿಗೆ ಕೊಟ್ಟು ಮದುವೆ ಮಾಡಿದನು, ಅಳಿಯನನ್ನಾಗಿ ಮಾಡಿಕೊಂಡನು. ಸುಜಾತೆ ಬಸಿರಾಗಿದ್ದಳು. ಒಂದು ದಿನ ಬಸಿರಲ್ಲಿದ್ದ ಆ ಮಗು ತನ್ನ ಅಪ್ಪನಿಗೆ ಹೀಗೆಂದಿತು : 'ನೀವು ರಾತ್ರಿಯಿಡೀ ವೇದಪಠಣವನ್ನು ಮಾಡಿಯೂ ನಿಮ್ಮ ಅಧ್ಯಯನ ಸರಿಯಾಗಿ ಆಗಲಿಲ್ಲ.

ಉಚ್ಚಾರಗಳೂ ಸರಿಯಾಗಿ ಶುದ್ಧವಾಗಿರಲಿಲ್ಲ.' ಈ ಮಾತನ್ನು ಕೇಳಿ ಕಹೋಡನಿಗೆ ತುಂಬ ಕೋಪ ಬಂದಿತು.

—ಸ ತಂ ಕೋಪಾದುದರಸ್ಥಂ ಶಶಾಪ ।
ಯಸ್ಮಾತ್ ಕುಕ್ಷೌ ವರ್ತಮಾನೋ ಬ್ರವೀಷಿ ತಸ್ಮಾದ್ ವಕ್ರೋ
ಭವಿತಾಸ್ಯಷ್ಟಕೃತ್ವಃ ॥ ೧೧ ॥
ಸ ವೈ ತಥಾ ವಕ್ರ ಏವಾಭ್ಯಜಾಯದಷ್ಟಾವಕ್ರಃ ಪ್ರಥಿತೋ ವೈ
ಮಹರ್ಷಿಃ ॥ ೧೨ ॥

ಮತ್ತೆ ಅವನು ಬಸಿರಲ್ಲಿದ್ದ ಮಗುವನ್ನು ಈ ರೀತಿಯಾಗಿ ಶಪಿಸಿದನು : 'ಹೊಟ್ಟೆಯಲ್ಲಿರುವಾಗಲೂ ನೀನು ಈ ರೀತಿ ಆಡಬಾರದ್ದನ್ನು ಆಡುತ್ತಲಿರುವೆ. ಹೀಗಾಗಿ ನಿನ್ನ ದೇಹ ಎಂಟು ಕಡೆಗಳಲ್ಲಿ ಡೊಂಕಾಗಲಿದೆ.' ಅವನ ದೇಹ ಶಾಪದಂತೆಯೇ ಆದದ್ದರಿಂದ ಅವನಿಗೆ 'ಅಷ್ಟಾವಕ್ರ'ನೆಂಬ ಹೆಸರು ಬಂದಿತು.

## ೫೬. ಅಷ್ಟಾವಕ್ರ > ಸುಜಾತಾ ವನ/೧೩೨

ಮೊದಲ ಸಂದರ್ಭ : ನೋಡಿ : ಶಾಪ—ಕಹೋಡ > ಅಷ್ಟಾವಕ್ರ.

ಉದ್ದಾಲಕನ ಮಗ ಶ್ವೇತಕೇತು ಹಾಗೂ ಕಹೋಡನ ಮಗ ಅಷ್ಟಾವಕ್ರರು ಸೋದರ ಮಾವ-ಅಳಿಯಂದಿರು. ಆದರೆ ಅಷ್ಟಾವಕ್ರನು ಅವನನ್ನು ತನ್ನ ಸೋದರನೆಂದೂ, ಉದ್ದಾಲಕನನ್ನೇ ತನ್ನ ತಂದೆಯೆಂದೂ ಮನ್ನಿಸುತ್ತಿದ್ದನು. ಇದಕ್ಕೆ ಒಂದು ಕಾರಣವಿದೆ. ಅದೆಂದರೆ ಅಷ್ಟಾವಕ್ರ ಹುಟ್ಟುವ ಮೊದಲು ಸುಜಾತೆಯು ತನಗೆ ದಿನಗಳು ತುಂಬಿ ಬಂದ ಕಾಲಕ್ಕೆ ಒಮ್ಮೆ ಗಂಡ ಕಹೋಡನಿಗೆ ಹಣದ ಕೊರತೆಯನ್ನು ಕುರಿತು ಹೇಳಿದ್ದಳು. ಹೀಗಾಗಿ ಅವನು ಹಣ ಕೇಳಲೆಂದು ಜನಕರಾಜನ ಬಳಿಗೆ ಹೋದನು. ಅಲ್ಲಿ ಬಂದಿಯು ವಾದವಿವಾದದಲ್ಲಿ ಇವನನ್ನು ಸೋಲಿಸಿ ನೀರಿನಲ್ಲಿ ಮುಳುಗಿಸಿಬಿಟ್ಟನು. ಉದ್ದಾಲಕನಿಗೆ ಈ ಸಂಗತಿಯು ತಿಳಿದುಬರುತ್ತಲೇ ಅವನು ಸುಜಾತೆಗೆ, 'ಅಷ್ಟಾವಕ್ರನಿಗೆ ಈ ಬಗೆಗೆ ಏನೂ ತಿಳಿಯಕೂಡದು' ಎಂದು ಹೇಳಿದನು. ಒಂದು ಸಲ ಅಷ್ಟಾವಕ್ರನು ಉದ್ದಾಲಕನ ತೊಡೆಯ ಮೇಲೆ ಕುಳಿತಿದ್ದನು. ಶ್ವೇತಕೇತುವು ಅದನ್ನು ಕಂಡು ಅವನನ್ನು ಅಲ್ಲಿಂದ ಎಬ್ಬಿಸಿದನು. 'ಇದು ನಿನ್ನಪ್ಪನ ತೊಡೆ ಅಲ್ಲ (ನನ್ನಪ್ಪನದು)' ಎಂದನು. ಅಷ್ಟಾವಕ್ರನಿಗೆ ಈ ಮಾತನ್ನು ಸಹಿಸಿಕೊಳ್ಳಲಾಗಲಿಲ್ಲ. ಅವನಿಗೆ ಬಲುಕೆಡುಕೆನಿಸಿತು. ಅದನ್ನವನು ತನ್ನ ಅಮ್ಮನೆದುರು ತೋಡಿಕೊಂಡನು. 'ನನ್ನ ಅಪ್ಪನೆಲ್ಲಿ ?' ಎಂದು ಅವಳನ್ನು ಕೇಳಿದನು. ಅವನ ಪ್ರಶ್ನೆಯಿಂದಾಗಿ ಸುಜಾತೆಗೂ ಬಲುದುಃಖವಾಯಿತು,

ತತಃ ಸುಜಾತಾ ಪರಮಾರ್ತರೂಪಾ ಶಾಪಾದ್ ಭೀತಾ
ಸರ್ವಮೇವಾಚಚಕ್ಷೇ ॥ ೨೦ ॥

ನಿಜವನ್ನು ಹೇಳದಿದ್ದರೆ ಅವನು ಶಾಪವನ್ನೀಯುವನೆಂಬ ಹೆದರಿಕೆಯಿಂದಾಗಿ ಅವಳು ನಡೆದುದೆಲ್ಲವನ್ನೂ ಅವನಿಗೆ ಹೇಳಿದಳು.

+ ಪ್ರತ್ಯಕ್ಷವಾಗಿ ಶಾಪವನ್ನು ಉಚ್ಚರಿಸಲಾಗಿಲ್ಲ. ಶಾಪದ ಹೆದರಿಕೆ ಮಾತ್ರ ವ್ಯಕ್ತಗೊಂಡಿದೆಯಷ್ಟೆ.

## ೫೭. ಧನುಷಾಕ್ಷ > ಮೇಧಾವಿ

**ವನ/೧೩೫**

ಲೋಮಶ ಮುನಿಯು ಯುಧಿಷ್ಠಿರನಿಗೆ ಯವಕ್ರೀತನ ಆಖ್ಯಾನವನ್ನು ಹೇಳುತ್ತಲಿದ್ದಾನೆ. ತಾನು ವೇದಜ್ಞಾನದ ಬಗೆಗೆ ವರವನ್ನು ಪಡೆದಿರುವದಾಗಿ ಯವಕ್ರೀತನು ತನ್ನ ತಂದೆ ಭಾರದ್ವಾಜ ಮುನಿಗೆ ಹೇಳಿದನು. ಈ ಮಾತನ್ನು ಕೇಳಿ ಭಾರದ್ವಾಜನಿಗೆ ಸಂತೋಷವೇನೂ ಆಗಲೇ ಇಲ್ಲ. ಬದಲು ಮಗನ ಅಹಂಕಾರ ಬೆಳೆಯುವ ಸಾಧ್ಯತೆಯನ್ನು ಅವನಿಗೆ ಹೇಳಿದನು. ಈ ಹಿನ್ನೆಲೆಯಲ್ಲಿ ಅವನು ಯವಕ್ರೀತನಿಗೆ ಒಂದು ಉದಾಹರಣೆಯೆಂದು ಬಾಲಧಿ ಋಷಿಯ ಕಥೆಯನ್ನು ಹೇಳಿದನು.

ಬಾಲಧಿ ಒಬ್ಬ ಹೆಸರಾದವನೂ, ಸಮರ್ಥನೂ ಆದ ಮುನಿಯಾಗಿದ್ದನು. ಅವನು ತನ್ನ ಮಗನ ಸಾವಿನಿಂದಾಗಿ ಘೋರವಾದ ತಪಸ್ಸನ್ನು ಆರಂಭಿಸಿದನು. ದೇವತೆಗಳನ್ನು ಸಂತೋಷಪಡಿಸಿದನು. ಅವನದು ಸಕಾಮವಾದ ತಪಶ್ಚರ್ಯೆ ಆಗಿತ್ತು. ತನಗೊಬ್ಬ ದೇವನಂತಹ ಮಗ ಬೇಕೆಂಬುದು ಅವನ ಬಯಕೆಯಾಗಿತ್ತು. ದೇವತೆಗಳು ಅವನಿಗೊಲಿದರೂ ಕೂಡ ದೇವನಂತಹ ಮಗನೇನೂ ಅವನಿಗೆ ಆಗಲಿಲ್ಲ, ಮರ್ತ್ಯನಿಗೆ ಅಮರತ್ವ ಸಿಗದು. ಹೀಗಾಗಿ ಯಾವುದಾದರೂ ಕಾರಣದಿಂದ ಅವನ ಮಗನಿಗೆ ಸಾವು ಬಂದೇ ತೀರುವುದೆಂದು ದೇವತೆಗಳು ಅವನಿಗೆ ಹೇಳಿದರು. ಅವನು ತನ್ನ ಮಗನಿಗೆ ಬೆಟ್ಟದಂತೆ ಅಕ್ಷಯತೆ ದೊರಕಬೇಕೆಂದುಕೊಂಡನು. ಹೀಗಾಗಿ ಅವನು ಬೆಟ್ಟಗಳಿರುವವರೆಗಾದರೂ ಮಗನಿಗೆ ಸಾವೆಂಬುದು ಬಾರದಿರಲಿ—ಎಂದು ದೇವತೆಗಳನ್ನು ಬೇಡಿಕೊಂಡನು. ದೇವತೆಗಳು ಒಪ್ಪಿಕೊಂಡು ಅವನಿಗೆ ವರವಿತ್ತರು.

ಬಾಲಧಿಗೆ ಮಗ ಹುಟ್ಟಿದನು. ಆತನ ಹೆಸರು ಮೇಧಾವಿ. ದೇವತೆಗಳು ತನಗಿತ್ತ ವರ ಆತನಿಗೆ ತಿಳಿದಿತ್ತು. ಹೀಗಾಗಿ ಅವನು ಮದೋನ್ಮತ್ತನಾಗಿ ಋಷಿಗಳನ್ನು ಪೀಡಿಸಹತ್ತಿದನು. ಅವರಿಗೆ ಅಗೌರವ ತೋರಿದನು. ಅವರನ್ನು ಹೀಯಾಳಿಸಹತ್ತಿದನು. ಇದೇ ರೀತಿಯಾಗಿ ಅವನು ಧನುಷಾಕ್ಷ ಎಂಬ ಒಬ್ಬ ಮಹಾತಪಸ್ವಿಯನ್ನೂ ಹಿಂಸಿಸಹತ್ತಿದನು. ಆಗ,

> ತಸ್ಯಾಪಚಕ್ರೇ ಮೇಧಾವೀ ತಂ ಶಶಾಪ ಸ ವೀರ್ಯವಾನ್ ।
> ಭವ ಭಸ್ಮೇತಿ ಚೋಕ್ತಃ ಸ ನ ಭಸ್ಮ ಸಮಪದ್ಯತ ॥ ೫೧ ॥

'ನೀನು ಸುಟ್ಟು ಬೂದಿಯಾಗೆಂದು' ಆ ತಪೋನಿಷ್ಠನು ಅವನಿಗೆ ಶಾಪವನ್ನಿತ್ತನು. ಆದರೆ ಮೇಧಾವಿ ಹಾಗಾಗಲಿಲ್ಲ. ದೇವತೆಗಳ ವರದಿಂದಾಗಿ ಅವನು ರಕ್ಷಿಸಲ್ಪಟ್ಟನು. ಆಗ,

> ಧನುಷಾಕ್ಷಸ್ತು ತಂ ದೃಷ್ಟ್ವಾ ಮೇಧಾವಿನಮನಾಮಯಮ್ ।
> ನಿಮಿತ್ತಮಸ್ಯ ಮಹಿಷೈರ್ಭೇದಯಾಮಾಸ ವೀರ್ಯವಾನ್ ॥ ೫೨ ॥
> ಸ ನಿಮಿತ್ತೇ ವಿನಷ್ಟೇ ತು ಮಮಾರ ಸಹಸಾ ಶಿಶುಃ ॥ ೫೩ ॥

ಮೇಧಾವಿಯು ಬೇನೆ ಹಾಗೂ ಒಂದು ಬೆಟ್ಟದವರೆಗೆ ಸಾವಿನಾಚೆಗೆ ಇರುವನೆಂಬುದನ್ನು ಧನುಷಾಕ್ಷ ಕಂಡುಕೊಂಡನು. ಅವನ ಆಯುಸ್ಸು ಬೆಟ್ಟದಷ್ಟು ಎಂಬುದನ್ನರಿತ ಆ ತಪಸ್ವಿಯು ಒಂದು ಕೋಣನಿಂದ ಆತನನ್ನು ಇರಿದು ತುಂಡುತುಂಡುಗಳನ್ನಾಗಿ ಮಾಡಿದನು. ನಿಮಿತ್ತವು ನಾಶವಾದುದರಿಂದ ಮೇಧಾವಿಯೂ ಸಾವನ್ನಪ್ಪಿದನು,

+ ಸೋತ ಶಾಪ. ದೋಧಾವಿಗೆ ಸಾವು ಬಂದುದು ನಿಮಿತ್ತದ ನಾಶದಿಂದಾಗಿ ; ಶಾಪದ ಪರಿಣಾಮದಿಂದಾಗಿ ಅಲ್ಲ.

## ೫೮. ಯವಕ್ರೀತ > ರೈಭ್ಯನ ಸೊಸೆ ವನ/೧೩೭

ಲೋಮಶಮುನಿಯು ಯುಧಿಷ್ಠಿರನಿಗೆ ಯವಕ್ರೀತನ ವಧೆಯ ವೃತ್ತಾಂತವನ್ನು ಹೇಳುತ್ತಲಿದ್ದಾನೆ.

ಯವಕ್ರೀತ ಭಾರದ್ವಾಜನ ಮಗನು. ಭಾರದ್ವಾಜ ಹಾಗೂ ರೈಭ್ಯ ಇವರು ಪರಮ ಮಿತ್ರರು. ಅವರಿಬ್ಬರೂ ಒಂದೇ ಆಶ್ರಮದಲ್ಲಿ ಇರುತ್ತಿದ್ದರು. ಜನ ಭಾರದ್ವಾಜರನ್ನು ಅಷ್ಟಾಗಿ ಮನ್ನಿಸುತ್ತಿರಲಿಲ್ಲ. ರೈಭ್ಯ ಹಾಗೂ ಆತನ ಮಕ್ಕಳಿಗೆ ಮಾತ್ರ ತುಂಬ ಗೌರವ ದೊರಕುತ್ತಿತ್ತು. ಇದನ್ನು ಕಂಡು ಯವಕ್ರೀತನಿಗೆ ಕೋಪ ಉಕ್ಕೇರಿಬಂದಿತು ಹೀಗಾಗಿ, ಗುರುವಿಲ್ಲದೆಯೇ ವೇದವಿದ್ಯೆಯನ್ನು ಗಳಿಸಿಕೊಳ್ಳಲೆಂದು ಅವನು ಘೋರತಪಸ್ಸಿಗೆ ಕುಳಿತನು. ಅವನ ಈ ಹೆಣಗಾಟ ವ್ಯರ್ಥವಾದುದೆಂದು ಇಂದ್ರನು ಒಂದು ಉದಾಹರಣೆಯಿಂದ ತೋರಿಸಿಕೊಡಲು ಯತ್ನಿಸಿದನು. ಅಲ್ಲದೆ ಅವನನ್ನು ತಪಶ್ಚರ್ಯೆಯಿಂದ ದೂರ ವಿರಿಸಲು ಹವಣಿಸಿದನು. ಇಂದ್ರನು ಭಾರದ್ವಾಜನಿಗೂ, ಯವಕ್ರೀತನಿಗೂ ವೇದಗಳ ಜ್ಞಾನ ಬರಲಿದೆಯೆಂದು ವರವನ್ನಿತ್ತನು. ಹೀಗಾಗಿ ಅವನ ತಪಶ್ಚರ್ಯೆ ನಿಂತಿತು. ಅವನು ತನಗೆ ದೊರೆತ ವರದಾನದ ಬಗೆಗೆ ತನ್ನ ತಂದೆಗೆ ಹೇಳಿದನು. ಆದರೆ, ವರದಿಂದಾಗಿ ಅಹಂಕಾರ ಹುಟ್ಟಿಕೊಂಡು ನಾಶಹೊಂದುವ ಹೆದರಿಕೆ ಇರುತ್ತದೆ ಎಂದು ಅವನನ್ನು ತಂದೆ ಎಚ್ಚರಿಸಿದನು. ಅದರೊಟ್ಟಿಗೇನೆ ಅವನಿಗೆ ರೈಭ್ಯ ಋಷಿಯ ಸಾಮರ್ಥ್ಯದ ಬಗೆಗೂ ಹೇಳಿ ಅವರ ಬಳಿ ಸುಳಿಯದಂತೆಯೂ ಎಚ್ಚರವನ್ನಿತ್ತನು. 'ಅವರೂ ನಿನಗೆ ತಂದೆಯ ಸಮಾನರು. ಅವರಿಗೆ ಯಾವುದೇ ಬಗೆಯ ಪೀಡೆಯಾಗದಂತಿರು. ಇಲ್ಲವಾದರೆ ನಿನಗೆ ಭಯಂಕರವಾದ ಹಿಂಸೆ ತಪ್ಪಿದ್ದಲ್ಲ' ಎಂದೂ ಹೇಳಿದನು.

ಒಂದು ಸಲ ಯವಕ್ರೀತನು ರೈಭ್ಯ ಮುನಿಯ ಸೊಸೆಯನ್ನು ಕಂಡನು. ಅವಳು ಕಿನ್ನರಿಯಂತೆ ಸುಂದರಿಯಾಗಿದ್ದಳು. ಅವಳನ್ನು ಕಂಡು ಯವಕ್ರೀತನಲ್ಲಿ ಕಾಮಭಾವನೆ ಉಕ್ಕೇರಿತು. ಅವನು ನಾಚಿಕೆಗೇಡಿಯಂತೆ ಅವಳನ್ನು ತನ್ನ ಬಳಿಗೆ ಕರೆದನು. ಆಗ,

> ಸಾ ತಸ್ಯ ಶೀಲಮಾಜ್ಞಾಯ ತಸ್ಮಾಚ್ಛಾಪಾಚ್ಚ ಬಿಭ್ಯತೀ ।
> ತೇಜಸ್ವಿತಾಂ ಚ ರೈಭ್ಯಸ್ಯ ತಥೇತ್ಯುಕ್ತ್ವಾಽಽಜಗಾಮ ಹ ॥ ೪ ॥

ಯವಕ್ರೀತನ ಗುಣ ಹಾಗೂ ಶೀಲಗಳು ಅವಳಿಗೆ ತಿಳಿದವುಗಳೇ ! ಆದರೆ ಅವಳು ಅವನ ಶಾಪಕ್ಕಾಗಿ ಹೆದರುತ್ತಿದ್ದಳು. ರೈಭ್ಯನ ತೇಜಸ್ಸು ಕೂಡ ಅವಳಿಗೆ ತಿಳಿದಿತ್ತು. ಹೀಗಾಗಿ ಅವಳು ಬಯಕೆಗೆ ತಲೆಬಾಗಿದಳು.

+ ಪ್ರತ್ಯಕ್ಷದಲ್ಲಿ ಶಾಪವನ್ನೀಯಲಾಗಿಲ್ಲ. ಶಾಪದ ಹೆದರಿಕೆ ವ್ಯಕ್ತಗೊಂಡಿದೆಯಷ್ಟೆ.

## ೫೯. ಭರದ್ವಾಜ > ರೈಭ್ಯ ವನ/೧೩೭

ಮೊದಲ ಸಂದರ್ಭ : ನೋಡಿ : ಶಾಪ—ಯವಕ್ರೀತ > ರೈಭ್ಯನ ಸೊಸೆ.

ರೈಭ್ಯನ ಸೊಸೆಯು ನಡೆದುದೆಲ್ಲವನ್ನು ತನ್ನ ಮಾವನೆದುರು ಹೇಳಿ ತನ್ನ ಅಸಹಾಯಕತೆ

ಯನ್ನು ಒಪ್ಪಿಕೊಂಡಳು. ತನ್ನಿಂದಾದ ತಪ್ಪು ನಡವಳಿಕೆಯನ್ನು ಒಪ್ಪಿಕೊಂಡಳು. ಯವಕ್ರೀತನ ಈ ಕೆಟ್ಟ ನಡವಳಿಕೆಯಿಂದಾಗಿ ರೈಭ್ಯನಿಗೆ ಎಲ್ಲಿಲ್ಲದ ಕೋಪ ಬಂದಿತು. ಅವನು ತನ್ನ ತಪೋಬಲದಿಂದ ಒಬ್ಬಳು ಮಾಟಗಾರ್ತಿ ಹಾಗೂ ರಾಕ್ಷಸನನ್ನು ನಿರ್ಮಿಸಿದನು. ಅವರಿಗೆ ಯವಕ್ರೀತನನ್ನು ಕೊಂದುಬಿಡಲು ಹೇಳಿದನು. ಅವರು ಅವನನ್ನು ಕೊಂದುಬಿಟ್ಟರು. ತನ್ನ ಒಬ್ಬನೇ ಅದ ಮಗನ ಕೊಲೆಯ ವಾರ್ತೆಯನ್ನು ಕೇಳಿ ಭರದ್ವಾಜ ಬಲುದುಃಖಿತನಾದನು. ಮಗನಿಲ್ಲದೆ ತಾನು ಬದುಕಲಾರೆನೆಂದುಕೊಂಡನು. ಹೀಗಾಗಿ ದೇಹತ್ಯಾಗವನ್ನು ಮಾಡಲು ನಿರ್ಧರಿಸಿದನು. ಆಶ್ರಮದ ಕಾವಲುಗಾರನಿಂದ ಯವಕ್ರೀತನ ಸಾವಿಗೆ ರೈಭ್ಯನೇ ಕಾರಣನೆಂಬುದು ಅವನಿಗೆ ತಿಳಿಯಿತು. ಅವನ ಸಿಟ್ಟು ಕಟ್ಟೊಡೆಯಿತು. ಅವನು ಹೀಗೆಂದನು—

ಯಥಾಽಹಂ ಪುತ್ರಶೋಕೇನ ದೇಹಂ ತ್ಯಕ್ಷ್ಯಾಮಿ ಕಿಲ್ಬಿಷೀ ।
ತಥಾ ಜ್ಯೇಷ್ಠಃ ಸುತೋ ರೈಭ್ಯಂ ಹಿಂಸ್ಯಾಚ್ಛೀಘ್ರಮನಾಗಸಮ್ ॥ ೧೫ ॥
ಸುಖಿನೋ ವೈ ನರಾ ಯೇಷಾಂ ಜಾತ್ಯಾ ಪುತ್ರೋ ನ ವಿದ್ಯತೇ ।
ತೇ ಪುತ್ರಶೋಕಮಪ್ರಾಪ್ಯ ವಿಚರಂತಿ ಯಥಾಸುಖಮ್ ॥ ೧೬ ॥
ಯೇ ತು ಪುತ್ರಕೃತಾಚ್ಛೋಕಾದ್ ಭೃಶಂ ವ್ಯಾಕುಲಚೇತಸಃ ।
ಶಪಂತೀಷ್ಟಾನ್ ಸಖೀನಾರ್ತಾಸ್ತೇಭ್ಯಃ ಪಾಪತರೋ ನು ಕಃ ॥ ೧೭ ॥
ಪರಾಸುಶ್ಚ ಸುತೋ ದೃಷ್ಟಃ ಶಪ್ತಶ್ಚೇಷ್ಟಃ ಸಖಾ ಮಯಾ ।
ಈದೃಶೀಮಾಪದಂ ಕೋಽತ್ರ ದ್ವಿತೀಯೋಽನುಭವಿಷ್ಯತಿ ॥ ೧೮ ॥

ಪಾಪಿಯಾದ ನಾನು ಪುತ್ರಶೋಕದಿಂದಾಗಿ ದೇಹವನ್ನು ತ್ಯಜಿಸಲಿರುವೆನು. ಇದೇ ರೀತಿಯಾಗಿ, ನಿರಪರಾಧಿಯಾದ ರೈಭ್ಯ ತನ್ನ ಚೊಚ್ಚಿಲು ಮಗನಿಂದ ಕೊಲ್ಲಲ್ಪಡುವನು. ಈ ಜಗತ್ತಿನಲ್ಲಿ ಮಕ್ಕಳಿಲ್ಲದ ಮಾನವರೇ ಸುಖಿಗಳು. ಏಕೆಂದರೆ ಅವರಿಗೆ ಮಕ್ಕಳ ವಧೆಯ ದುಃಖ ಎನ್ನುವುದೇ ಗೊತ್ತಿರದು. ಹಾಗೆಂದೇ ಅವರು ಸುಖದಿಂದಿರಬಲ್ಲರು. ಮಗನ ಸಾವಿನಿಂದ ಬೆಂದು ದುಃಖವನ್ನನುಭವಿಸುವವರಿಗಿಂತ ಹೆಚ್ಚಿನ ಪಾಪಿಗಳು ಯಾರಿರಲು ಸಾಧ್ಯ ? ನಾನು ಮಗನ ಸಾವನ್ನು ಕಣ್ಣಿಂದ ಕಾಣುವಂತಾಯಿತು. ನನ್ನ ಹತ್ತಿರದ ಸ್ನೇಹಿತನನ್ನೇ ಶಪಿಸಿದೆ. ನನ್ನಂತಹ ಸಹಿಸಲಸಾಧ್ಯವಾದ ಪ್ರಸಂಗ ಇನ್ನಾರಿಗಾದರೂ ಬಂದಿರಲು ಸಾಧ್ಯವೆ ?

ಭರದ್ವಾಜನು ಮಗನ ಅಂತ್ಯಸಂಸ್ಕಾರಗಳನ್ನು ತೀರಿಸಿ ತಾನು ಅಗ್ನಿಯನ್ನು ಪ್ರವೇಶಿಸಿದನು.

## ೬೦. ? > ಭೀಮ **ವನ/೧೪೬**

ಭೀಮನು ಗಂಧಮಾದನ ಪರ್ವತದ ಮೇಲೆ ಮೆರೆದ ಕಲಿತನವನ್ನು ಕುರಿತು ವೈಶಂಪಾಯನ ಜನಮೇಜಯನಿಗೆ ಹೇಳುತ್ತಲಿದ್ದಾನೆ.

ಒಂದು ಸಲ ದ್ರೌಪದಿಯು ಸಾವಿರ ದಲದ ಒಂದು ಕಮಲದ ಹೂವನ್ನು ಕಂಡಳು. ಅದು ಗಾಳಿಯಿಂದಾಗಿ ಹಾರಿ ಬಂದು ಬಿದ್ದಿತ್ತು. ಅವಳು ಅದನ್ನು ಧರ್ಮರಾಯನಿಗೆ ಉಡುಗೊರೆಯಾಗಿ ಕೊಡಬಯಸಿದಳು. ಈ ಸಂಗತಿಯನ್ನು ಭೀಮನೆದುರು ಆಡಿದಳು.

ಇನ್ನೂ ಕೆಲವು ಹೂಗಳನ್ನು ತಂದುಕೊಡಲು ಅವನಿಗೆ ಹೇಳಿದಳು. ಅವನು ತನ್ನ ಮನದನ್ನೆಯ ಬಯಕೆಯನ್ನು ಈಡೇರಿಸಲೆಂದು ಆ ಗಾಳಿಯ ದಿಕ್ಕಿನಲ್ಲಿ ಹೊರಟನು. ಅವನು ತನ್ನ ಕಡುಗಲಿತನವನ್ನು ಮೆರೆಯುತ್ತ ಮುನ್ನುಗ್ಗಿ ಹೋದನು. ಕೊನೆಗೆ ಮಾನವರಿಗೆ ಹೋಗಲು ನಿಷೇಧಿಸಲ್ಪಟ್ಟ ಒಂದು ತಾಣಕ್ಕೆ ಬಂದು ತಲುಪಿದನು. ಮುಂದಿನ ನಾಡೆಲ್ಲ ದೇವತೆಗಳಿಗಾಗಿಯೆಂದೇ ಕಾದಿರಿಸಲ್ಪಟ್ಟಿತ್ತು. ಭೀಮನಿಗೆ ಈ ಸಂಗತಿ ತಿಳಿದಿರಲಿಲ್ಲವೆಂದು ಕಾಣುತ್ತದೆ. ಹೀಗಾಗಿ—

ಮಾತ್ರ ಪ್ರಾಪ್ಸ್ಯತಿ ಶಾಪಂ ವಾ ಘರ್ಷಣಾಂ ವೇತಿ ಪಾಂಡವಃ ।
ಕದಲೀಷಂಡಮಧ್ಯಸ್ಥೋ ಹ್ಯೇವಂ ಸಂಚಿಂತ್ಯ ವಾನರಃ ॥ ೬೮ ॥
ವ್ಯಾಜೃಂಭತ ಮಹಾಕಾಯೋ ಹನೂಮಾನ್ ನಾಮ ವಾನರಃ ।
ಕದಲೀಷಂಡಮಧ್ಯಸ್ಥೋ ನಿದ್ರಾವಶಗತಸ್ತದಾ ॥ ೬೯ ॥

ಕದಳಿಯ ಕಾಡಿನಲ್ಲಿ ಕಾಲಿಟ್ಟ ಪಾಂಡುವಿನ ಈ ಮಗನಾದ ಭೀಮನನ್ನು ಯಾರೂ ಶಪಿಸದಿರಲಿ, ಇಲ್ಲವೆ ಅವನನ್ನು ತಿರಸ್ಕರಿಸದಿರಲೆಂದು ಹನುಮಂತನೆಂಬ ವಾನರನು ಮಹಾಕಾಯರೂಪವನ್ನು ಧರಿಸಿ ದಾರಿಗಡ್ಡವಾಗಿ ಮಲಗಿಕೊಂಡನು. ಹೀಗೆ ಸ್ವರ್ಗದ ದಾರಿಯನ್ನು ತಡೆಗಟ್ಟಿದನು.

+ ಇಲ್ಲಿ ಯಾರು ಯಾರಿಗೂ ಶಾಪವನ್ನಿತ್ತಿಲ್ಲ. ಶಾಪ ಬರಕೂಡದೆಂದು ಎಚ್ಚರಿಕೆಯನ್ನು ಮಾತ್ರ ವಹಿಸಲಾಗಿದೆ.

**ವನ/೧೪೮**

ಹನುಮಂತ ರಾಮಾಯಣದಲ್ಲಿ ಬಂದ ತನ್ನ ಚರಿತ್ರೆಯನ್ನು ಕುರಿತು ಭೀಮನಿಗೆ ಹೇಳುತ್ತಲಿದ್ದಾನೆ—

ತತೋಽಹಂ ರುದ್ಧವಾನ್ ಮಾರ್ಗಂ ತವೇಮಂ ದೇವಸೇವಿತಮ್ ॥ ೨೦ ॥
ಘರ್ಷಯೇದ್ ವಾ ಶಪೇದ್ ವಾಪಿ ಮಾ ಕಶ್ಚಿದಿತಿ ಭಾರತ ।
ದಿವ್ಯೋ ದೇವಪಥೋ ಹ್ಯೇಷ ನಾತ್ರ ಗಚ್ಛಂತಿ ಮಾನುಷಾಃ ॥ ೨೨ ॥

(ಈ ದಾರಿಯು ಮರ್ತ್ಯರಿಗಾಗಿಯಲ್ಲದ ಕಾರಣ) ನಾನು ನಿನ್ನನ್ನು ಈ ದೇವರ ಮಾರ್ಗದಲ್ಲಿ ತಡೆದೆನು. ನೀನು ಈ ದಾರಿಯಾಗಿ ಹೋಗುವಾಗ ಯಾರೂ ನಿನ್ನನ್ನು ಶಪಿಸುವಂತಾಗದಿರಲಿ ಇಲ್ಲವೆ ತಿರಸ್ಕರಿಸುವಂತಾಗದಿರಲಿ(ಎಂಬುದೇ ನನ್ನ ಗುರಿಯಾಗಿತ್ತು) —ಇದು ದಿವ್ಯವಾದ ದಾರಿಯಾದ್ದರಿಂದ ಮಾನವರು ಇಲ್ಲಿಂದ ಹಾಯಕೂಡದು.

## ೬೧. ಅಗಸ್ತ್ಯ > ಕುಬೇರ, ಮಣಿಮಾನ್, ಸೈನಿಕ ವನ/೧೬೦

ಅಗಸ್ತ್ಯನು ಕುಬೇರನಿಗಿತ್ತ ಶಾಪವನ್ನು ಕುರಿತು ವೈಶಂಪಾಯನ ಜನಮೇಜಯನಿಗೆ ಹೇಳುತ್ತಲಿದ್ದಾನೆ. ಕುಬೇರನು ಯುಧಿಷ್ಠಿರನ ಕೋರಿಕೆಯ ಮೇರೆಗೆ ಅವನಿಗೀ ಕಥೆಯನ್ನು ಹೇಳಿದನು.

ದ್ರೌಪದಿಯ ಬಯಕೆಯ ಮೇರೆಗೆ ಭೀಮನು ಸುವಾಸನೆಯ ಆ ಕಮಲದ ಹೂಗಳನ್ನು ತರಲು ಹೊರಟಿದ್ದನು. ದಾರಿಯಲ್ಲಿ ಅವನಿಗೆ ಹನುಮಂತನ ಭೆಟ್ಟಿಯಾಯಿತು. ಅವನು

ಹನುಮಂತನಿಂದ ಆಶ್ವಾಸನೆಯನ್ನು ಪಡೆದು ಸೌಗಂಧಿಕವನವನ್ನು ಪ್ರವೇಶಿಸಿದನು. ಅಲ್ಲಿ ಹಲವು ಜನ ರಾಕ್ಷಸರೊಂದಿಗೆ ಕಾದು ಅವರನ್ನು ಯಮಲೋಕಕ್ಕೆ ಕಳಿಸಿದನು. ಆಮೇಲೆ ಸೌಗಂಧಿಕ ಸರೋವರದಲ್ಲಿಯ ಕಮಲಗಳನ್ನು ಕಿತ್ತುಕೊಂಡನು. ಅವನು ಜಟಾಸುರ ಹಾಗೂ ಮಣಿಮಾನ್ ರಕ್ಕಸರನ್ನು ಕೊಂದನು. ಭೀಮಸೇನ ಕಾಣದಂತಾಗುತ್ತಲೆ ಉಳಿದ ಪಾಂಡವರು ಅವನನ್ನು ಹುಡುಕಲೆಂದು ಹೊರಟರು. ಅವರು ಕೆಲಕಾಲ ಆರ್ಷ್ಟಿಷೇಣ ನೆಂಬ ಋಷಿಯ ಆಶ್ರಮದಲ್ಲಿ ತಂಗಿದರು. ಆಮೇಲೆ ಅವರು ದ್ರೌಪದಿಯನ್ನು ಅಲ್ಲಿಯೇ ಬಿಟ್ಟು ಗಂಧಮಾದನ ಪರ್ವತವನ್ನೇರಿ ಹೋದರು. ಅಲ್ಲಿ ಭೀಮನನ್ನು ಕಂಡರು. ಯುಧಿಷ್ಠಿರನು ಭೀಮನಿಗೆ ಉಪದೇಶವನ್ನಿತ್ತನು. ಧರ್ಮವನ್ನು ಅಪಮಾನಗೊಳಿಸಿ ಸಾಹಸವನ್ನು ತೋರಕೂಡದು ಎಂದನು. ರಾಕ್ಷಸನೊಬ್ಬನು ಒಬ್ಬ ಮಾನವನು ಕೈಕೊಂಡ ಈ ಸಂಹಾರದ ವಾರ್ತೆಯನ್ನು ಕುಬೇರನಿಗೆ ಹೇಳಿದನು. ಅವನು ಸೈನ್ಯದೊಂದಿಗೆ ಶಿಖರ ವನ್ನೇರಿ ಬಂದನು. ಕುಬೇರನು ಯುಧಿಷ್ಠಿರನಿಗೆ ಅಭಯವನ್ನಿತ್ತನು. ಭೀಮನ ಮೇಲೆ ಕೋಪಿಸಿಕೊಳ್ಳದಿರಲು ಅವನಿಗೆ ಹೇಳಿದನು. ಏಕೆಂದರೆ ಭೀಮ ನಿಮಿತ್ತಮಾತ್ರವಾಗಿ ದ್ದನು. ಯಕ್ಷ, ರಾಕ್ಷಸರ ವಿನಾಶ ತಪ್ಪಿಸಲಾಗದ್ದಿತ್ತು. ಭೀಮ ವಿಲಕ್ಷಣವಾದ ಸಾಹಸ ಹಾಗೂ ಸಂಹಾರಗಳನ್ನು ಕೈಕೊಂಡಿದ್ದರೂ ತನಗೆ ಅವನ ಮೇಲೆ ಕೋಪವಿಲ್ಲವಷ್ಟೇ ಅಲ್ಲದೆ ಪ್ರಸನ್ನನಾಗಿರುವುದಾಗಿ ಹೇಳಿದನು. ಅವನು ನೀಡಿದ ಕಾರಣವಿದು—

> ಶಾಪಾದದ್ಯ ವಿನಿರ್ಮುಕ್ತೋ ಘೋರಾದಸ್ಮಿ ವೃಕೋದರ ॥ ೪೯ ॥
> ಅಹಂ ಪೂರ್ವಮಗಸ್ತ್ಯೇನ ಕ್ರುದ್ಧೇನ ಪರಮರ್ಷಿಣಾ ।
> ಶಪ್ತೋಽಪರಾಧೇ ಕಸ್ಮಿಂಶ್ಚಿತ್ ತಸ್ಯೈಷಾ ನಿಷ್ಕೃತಿಃ ಕೃತಾ ॥ ೫೦ ॥
> ದೃಷ್ಟೋ ಹಿ ಮಮ ಸಂಕ್ಲೇಶಃ ಪುರಾ ಪಾಂಡವನಂದನ ।
> ನ ತವಾತ್ರಾಪರಾಧೋಽಸ್ತಿ ಕಥಂಚಿದಪಿ ಪಾಂಡವ ॥ ೫೧ ॥

'ಎಲೈ ವೃಕೋದರನೇ ! ನಾನಿಂದು ಒಂದು ಬಲು ಘೋರವಾದ ಶಾಪದಿಂದ ಬಿಡುಗಡೆ ಯನ್ನು ಹೊಂದಿದೆನು. ಹಿಂದಕ್ಕೆ ನನ್ನೊಂದು ಅಪರಾಧಕ್ಕಾಗಿ ಮಹರ್ಷಿ ಅಗಸ್ತ್ಯನು ನನ್ನನ್ನು ಕೋಪದಿಂದ ಶಪಿಸಿದ್ದನು. ಇಂದು ನಿನ್ನಿಂದಾಗಿ ಅದರಿಂದ ನನ್ನ ಬಿಡುಗಡೆ ಯಾಯಿತು. ಇದೆಲ್ಲ ಬವಣೆಯನ್ನು ನಾನು ಸಹಿಸಲೇಬೇಕೆಂಬುದು ಮೊದಲೇ ನಿರ್ಧಾರಿತ ವಾಗಿದ್ದಿತು. ಅದೇನಿದ್ದರೂ, ಎಲೈ ಪಾಂಡವನೇ, ಇದರಲ್ಲಿ ನಿನ್ನ ತಪ್ಪೇನೂ ಇಲ್ಲ.'

ಕುಬೇರನ ಮಾತುಗಳನ್ನು ಕೇಳಿ ಯುಧಿಷ್ಠಿರನಿಗೆ ಅಗಸ್ತ್ಯ ಶಾಪವನ್ನಿತ್ತದ್ದೇಕೆ ? —ಎಂಬುದನ್ನು ಅರಿತುಕೊಳ್ಳಬೇಕೆನ್ನಿಸಿತು. ಆಗ ಕುಬೇರನು ತನಗೆ ದೊರೆತ ಶಾಪದ ವೃತ್ತಾಂತವನ್ನು ಅವನಿಗೆ ಹೇಳಿದನು—

'ಹಿಂದಕ್ಕೆ ಕುಶಾವರ್ತದಲ್ಲಿ ಏರ್ಪಟ್ಟ ದೇವತೆಗಳ ಸಭೆಗೆ ನಾನೂ ನಿಮಂತ್ರಿತನಾಗಿದ್ದೆ. ನಾನು ಮೂರು ನೂರು ಜನ ಸೈನಿಕರ ಪಡೆಯೊಂದಿಗೆ ಅಲ್ಲಿಗೆ ಹೋಗಿ ತಲುಪಿದೆ. ಆಗ ಯಮುನೆಯ ದಡದಲ್ಲಿ ಅಗಸ್ತ್ಯರು ತಪಸ್ಸಿಗೆ ಕುಳಿತಿದ್ದರು. ಯಕ್ಷನಾದ ಮಣಿಮಾನ್ ಎಂಬ ಗೆಳೆಯನು ದುರಭಿಮಾನಿಯೂ, ಮೂರ್ಖನೂ ಆಗಿದ್ದನು. ಅವನು ತನ್ನ ಅರಿವು ಗೇಡಿತನ ಹಾಗೂ ಮೋಹಕ್ಕೊಳಪಟ್ಟು ಮುಗಿಲಿನಿಂದಲೇ ಅಗಸ್ತ್ಯರ ತಲೆಯ ಮೇಲೆ ಉಗುಳಿಬಿಟ್ಟನು. ಆಗ ಅವರು ಸಂತಪ್ತರಾಗಿ ನನಗೆ ಹೀಗೆಂದರು—

ಮಾಮವಜ್ಞಾಯ ದುಷ್ಟಾತ್ಮಾ ಯಸ್ಮಾದೇಷ ಸಖಾ ತವ ।
ಧರ್ಷಣಾಂ ಕೃತವಾನೇತಾಂ ಪಶ್ಯತಸ್ತೇ ಧನೇಶ್ವರ ॥ ೬೦ ॥
ತಸ್ಮಾತ್ ಸಹೈಭಿಃ ಸೈನ್ಯೈಸ್ತೇ ವಧಂ ಪ್ರಾಪ್ಸ್ಯತಿ ಮಾನುಷಾತ್ ।
ತ್ವಂ ಚಾಪ್ಯೇಭಿರ್ಹತೈಃ ಸೈನ್ಯೈಃ ಕ್ಲೇಶಂ ಪ್ರಾಪ್ಯೇಹ ದುರ್ಮತಿಃ ।
ತಮೇವ ಮಾನುಷಂ ದೃಷ್ಟ್ವಾ ಕಿಲ್ಬಿಷಾದ್ ವಿಪ್ರಮೋಕ್ಷ್ಯಸೇ ॥ ೬೧ ॥
ಸೈನ್ಯಾನಾಂ ತು ತವೈತೇಷಾಂ ಪುತ್ರಪೌತ್ರಬಲಾನ್ವಿತಮ್ ।
ನ ಶಾಪಂ ಪ್ರಾಪ್ಸ್ಯತೇ ಘೋರಂ ತತ್ ತವಾಜ್ಞಾಂ ಕರಿಷ್ಯತಿ ॥ ೬೨ ॥
ಏಷ ಶಾಪೋ ಮಯಾ ಪ್ರಾಪ್ತಃ ಪ್ರಾಕ್ ತಸ್ಮಾದೃಷಿಸತ್ತಮಾತ್ ।
ಸ ಭೀಮೇನ ಮಹಾರಾಜ ಭ್ರಾತ್ರಾ ತವ ವಿಮೋಕ್ಷಿತಃ ॥ ೬೩ ॥

'ಎಲೈ ಧನೇಶ್ವರನೇ! ನಿನ್ನೀ ದುರುಳನಾದ ಗೆಳೆಯನು ನಿನ್ನ ಕಣ್ಣೆದುರಿನಲ್ಲೇ ನನ್ನನ್ನು ಅಪಮಾನಕ್ಕೀಡುಮಾಡಿದನು. ಅದರಿಂದಾಗಿ ಅವನು ತನ್ನ ಸೇನೆಯೊಂದಿಗೆ ಒಬ್ಬ ಮಾನವನಿಂದ ಕೊಲ್ಲಲ್ಪಡಲಿರುವನು. ಅಲ್ಲದೆ ನಿನ್ನ ಬುದ್ಧಿಯೂ ಭ್ರಷ್ಟವಾಗಿರುವ ಕಾರಣ ನೀನೂ ಕೂಡ ಇದೆಲ್ಲ ದುಃಖವನ್ನು ಅನುಭವಿಸಲಿರುವೆ. ಮುಂದೆ ಆ ಮಾನವನ ದರ್ಶನದಿಂದಾಗಿ ನಿನ್ನ ಪಾಪ ಹಾಗೂ ಶಾಪಗಳಿಂದ ಬಿಡುಗಡೆಹೊಂದುವೆ. ನಿನ್ನ ಅಪ್ಪಣೆಯನ್ನು ಪಾಲಿಸಿದ ಸೈನಿಕರಿಗೆ ಮಾತ್ರ ಈ ಶಾಪದ ಬಾಧೆ ತಟ್ಟದು.'

ಹಿಂದಕ್ಕೆ ಅಗಸ್ತ್ಯ ಋಷಿಗಳು ನನ್ನನ್ನು ಈ ಬಗೆಯಾಗಿ ಶಪಿಸಿದ್ದರು. ನಿನ್ನ ತಮ್ಮನಾದ ಭೀಮನೆಂಬ ಮಾನವನ ದರ್ಶನದಿಂದಾಗಿ ನಾನಿಂದು ಶಾಪಮುಕ್ತನಾದೆ.

+ ಶಾಪದ ಉತ್ತರಾರ್ಧದಲ್ಲಿಯೇ ಶಾಪಮುಕ್ತಿಯ ಉಲ್ಲೇಖವು ಉಃಶಾಪದಂತಿದೆ. ಇದು ಅಯಾಚಿತವಾದ ಉಃಶಾಪ.

## ೬೨. ಅಗಸ್ತ್ಯ > ರಾಕ್ಷಸ **ವನ/೧೬೨**

**ಮೊದಲ ಸಂದರ್ಭ: ನೋಡಿ: ಶಾಪ—ಅಗಸ್ತ್ಯ > ಕುಬೇರ.**

**ಭೀಮನು ಕುಬೇರನಿಗೆ ಶರಣುಹೋದನು. ಕುಬೇರನು ಭೀಮ ಹಾಗೂ ಯುಧಿಷ್ಠಿರನಿಗೆ ಉಪದೇಶವನ್ನಿತ್ತನು. ಅವರಿಗೆ ಯಕ್ಷಲೋಕದಲ್ಲಿ ಅಭಯವನ್ನಿತ್ತನು. ಅರ್ಜುನ ಕೂಡ ಶೀಘ್ರದಲ್ಲಿಯೇ ಭೆಟ್ಟಿಯಾಗಲಿರುವನೆಂದು ಆಶ್ವಾಸನೆಯನ್ನಿತ್ತನು. ತರುವಾಯ ಅವನು ಯಕ್ಷರು-ರಾಕ್ಷಸರೊಂದಿಗೆ ಕೈಲಾಸಕ್ಕೆ ತೆರಳಿದನು. ಕುಬೇರನ ಅಪ್ಪಣೆಯ ಮೇರೆಗೆ ರಾಕ್ಷಸರ ಹೆಣಗಳನ್ನು ಆ ಪರ್ವತದಿಂದ ದೂರಕ್ಕೆ ಸಾಗಿಸಲಾಯಿತು.**

ತೇಷಾಂ ಹಿ ಶಾಪಕಾಲಃ ಸ ಕೃತೋಽಗಸ್ತ್ಯೇನ ಧೀಮತಾ ।
ಸಮರೇ ನಿಹಿತಾಸ್ತಸ್ಮಾಚ್ಛಾಪಸ್ಯಾಂತೋಽಭವತ್ ತದಾ ॥ ೩೭ ॥

ಬುದ್ಧಿವಂತನಾದ ಅಗಸ್ತ್ಯನು ಅವರ ಶಾಪದ ಕಾಲವನ್ನಷ್ಟೇ ನಿರ್ಧರಿಸಿದ್ದನು. ಯುದ್ಧದಲ್ಲಿ ಸಾವು ಬರುತ್ತಲೇ ಅವರ ಶಾಪ ಮುಗಿಯಿತು.

## ೬೩. ಅಗಸ್ತ್ಯ > ನಹುಷ

**ವನ/೧೭೯**

ವೈಶಂಪಾಯನ ಜನಮೇಜಯನಿಗೆ ಹೆಬ್ಬಾವು ಭೀಮನನ್ನು ಸುತ್ತಿಕೊಂಡದ್ದನ್ನು ಕುರಿತು ಹೇಳುತ್ತಲಿದ್ದಾನೆ.

ಭೀಮನ ಮೈಯಲ್ಲಿ ಸಾವಿರ ಆನೆಗಳ ಸಾಮರ್ಥ್ಯವಿತ್ತು. ಅವನು ಹುಲಿ, ಸಿಂಹ, ಕೋಣ, ಆನೆಗಳನ್ನು ಕೂಡ ನೆಲಕ್ಕುರುಳಿಸಿದವನು. ಇಂಥವನನ್ನು ಒಂದು ಹೆಬ್ಬಾವು ಗಟ್ಟಿಯಾಗಿ ಸುತ್ತಿಕಟ್ಟುವುದೊಂದು ಅಚ್ಚರಿಯ ಸಂಗತಿಯಾಗಿತ್ತು. ಹೀಗಾಗಿ ಅವನು ಆ ಹೆಬ್ಬಾವನ್ನೇ, 'ಮಾನವನ ಶೌರ್ಯವನ್ನೇ ನುಚ್ಚಾಗಿಸುವ ಅದಾವ ವಿದ್ಯೆ ನಿನ್ನಲ್ಲಿದೆ ?' ಎಂದು ಕೇಳಿದನು. ಹೆಬ್ಬಾವು ಹೀಗೆಂದು ಉತ್ತರಿಸಿತು—

> ಇಮಾಮವಸ್ಥಾಂ ಸಂಪ್ರಾಪ್ತೋ ಹ್ಯಹಂ ಕೋಪಾನ್ಮನೀಷಿಣಾಮ್ ।
> ಶಾಪಸ್ಯಾಂತಂ ಪರಿಪ್ರೇಪ್ಸುಃ ಸರ್ವಂ ತತ್ ಕಥಯಾಮಿ ತೇ ॥ ೧೨ ॥
> ನಹುಷೋ ನಾಮ ರಾಜರ್ಷಿರ್ವ್ಯಕ್ತಂ ತೇ ಶ್ರೋತ್ರಮಾಗತಃ ।
> ತವೈವ ಪೂರ್ವಃ ಪೂರ್ವೇಷಾಮಾಯೋರ್ವಂಶಧರಃ ಸುತಃ ॥ ೧೩ ॥
> ಸೋಽಹಂ ಶಾಪಾದಗಸ್ತ್ಯಸ್ಯ ಬ್ರಾಹ್ಮಣಾನವಮನ್ಯ ಚ ।
> ಇಮಾಮವಸ್ಥಾಮಾಪನ್ನಃ ಪಶ್ಯ ದೈವಮಿದಂ ಮಮ ॥ ೧೪ ॥

'ನನಗೀ ಅವಸ್ಥೆ ಬಂದುದು ಹೇಗೆಂಬುದನ್ನು ನಿನಗೆ ಹೇಳಲೇಬೇಕಿದೆ. ಅದನ್ನು ಎಚ್ಚರದಿಂದ ಆಲಿಸು. ನಿನ್ನ ಈ ದೌರ್ಭಾಗ್ಯಕ್ಕೆ ಕಾರಣ ಒಬ್ಬ ತಲೆಹಿಡುಕ ಋಷಿಯ ಕೋಪ. ಅವನು ನನಗಿತ್ತ ಶಾಪ ಕೊನೆಗೊಳ್ಳುವುದಕ್ಕಾಗಿ ಕಾಯುತ್ತಲಿದ್ದೇನೆ. ನಾನು ನಹುಷ. ನಾನೊಬ್ಬ ರಾಜರ್ಷಿಯಾಗಿದ್ದೆ. ನೀನು ನನ್ನ ಹೆಸರನ್ನು ಕೇಳಿರಲು ಸಾಕು. ನಾನು ನಿನ್ನ ಪೂರ್ವಜನೇ ಆಹುದು. ನಾನು ಆಯುವಿನ ಮಗನು. ನಾನು ಬ್ರಾಹ್ಮಣರನ್ನು ಅವಮಾನಗೊಳಿಸಿದ್ದ ಕಾರಣ ಅಗಸ್ತ್ಯನ ಶಾಪಕ್ಕೀಡಾಗಿ ನನ್ನ ದುರವಸ್ಥೆ ಹೀಗಾಯಿತು. ನೀನು ನನ್ನ ದುರದೃಷ್ಟವನ್ನು ಕಣ್ಣಿಂದಲೇ ಕಾಣುತ್ತಿರುವೆ.

ನೀನು ನನ್ನ ವಂಶಜನೇ ಆದುದರಿಂದ ನನಗೆ ಅವಧ್ಯನು. ಆದರೆ ನೀನು ದಿನದ ಆರನೆಯ ಭಾಗದಲ್ಲಿ ನನ್ನ ಕೈಗೆ ಸಿಕ್ಕುಬಿದ್ದ ಕಾರಣ ನಿನಗೆ ಬಿಡುಗಡೆ ಎಂಬುದಿಲ್ಲ. ನಾನು ನಿನ್ನನ್ನು ನುಂಗಿಬಿಡುವೆನು. ನಾನು ಇಂದ್ರಪದದಿಂದ ಪದಭ್ರಷ್ಟನಾಗುವ ಕಾಲಕ್ಕೆ ಅಗಸ್ತ್ಯನಿಗೆ ಹೀಗೆಂದು ಬೇಡಿಕೊಂಡಿದ್ದೆ—

> ಕುರು ಶಾಪಾಂತಮಿತ್ಯುಕ್ತೋ ಭಗವಾನ್ ಮುನಿಸತ್ತಮಃ ॥ ೧೮ ॥
> ಸ ಮಾಮುವಾಚ ತೇಜಸ್ವೀ ಕೃಪಯಾಭಿಪರಿಪ್ಲುತಃ ।
> ಮೋಕ್ಷಸ್ತೇ ಭವಿತಾ ರಾಜನ್ ಕಸ್ಮಾಚ್ಚಿತ್ ಕಾಲಪರ್ಯಯಾತ್ ॥ ೧೯ ॥

'ಎಲೈ ಪ್ರಭುವೇ! ನನ್ನ ಶಾಪದ ಕೊನೆಯನ್ನು (ಯಾವಾಗ, ಹೇಗೆಂಬುದನ್ನು) ನಿರ್ಧರಿಸಿ. ಆಗ ತೇಜಸ್ವಿಯಾದ ಆ ದೇವರ್ಷಿಯು ನನ್ನ ಮೇಲೆ ದಯೆ ತೋರಿ ಹೀಗೆಂದನು: 'ಕೆಲಕಾಲಾವಧಿಯ ತರುವಾಯ ಈ ಶಾಪದಿಂದ ನಿನ್ನ ಬಿಡುಗಡೆಯಾಗಲಿದೆ.' ತರುವಾಯ ನಾನು ವಿಮಾನದಿಂದ ನೆಲಕ್ಕೆ ಬಿದ್ದೆ. ಅವನು ಹೀಗೂ ಅಂದನು—

ಯಸ್ತು ತೇ ವ್ಯಾಹತಾನ್ ಪ್ರಶ್ನಾನ್ ಪ್ರತಿಬ್ರೂಯಾದ್ ವಿಭಾಗವಿತ್ ।
ಸ ತ್ವಾಂ ಮೋಕ್ಷಯಿತಾ ಶಾಪಾದಿತಿ ಮಾಮಬ್ರವೀದೃಷಿಃ ॥ ೨೦ ॥

'ನಿನ್ನ ಪ್ರಶ್ನೆಗಳಿಗೆ ಆಯಾ ವಿಭಾಗದಂತೆ ಕ್ರಮವಾಗಿ ಮಾರುತ್ತರವನ್ನು ನೀಡಬಲ್ಲವನೇ ನಿನ್ನನ್ನು (ಈ) ಶಾಪದಿಂದ ಬಿಡುಗಡೆ ಮಾಡಬಲ್ಲನು.'

ಹೀಗಾಗಿ ನಾನು ನನ್ನ (ಈ ಯೋನಿಯಿಂದ) ಬಿಡುಗಡೆಗಾಗಿ (ಇಲ್ಲಿದ್ದು) ಕಾಯುತ್ತಲ್ಲಿದ್ದೇನೆ.

**ವನ/೧೮೧**

ಯುಧಿಷ್ಠಿರನು ಭೀಮನನ್ನು ಹುಡುಕಲು ಹೊರಟಿದ್ದನು. ಆಗ ಒಂದೆಡೆ ಭೀಮ ಹೆಬ್ಬಾವಿನ ಹಿಡಿತಕ್ಕೆ ಸಿಕ್ಕಿಹಾಕಿಕೊಂಡದ್ದನ್ನು ಕಂಡನು. ಅದೊಂದು ಸಾಮಾನ್ಯವಾದ ಹೆಬ್ಬಾವು ಆಗಿರದೆ ಯಾವುದಾದರೂ ದೇವತೆಯಾಗಿರಬಹುದು—ಎಂದುಕೊಂಡನು. ಈ ಹೆಬ್ಬಾವು ಎಂದರೆ ಹಿಂದಕ್ಕೆ ರಾಜರ್ಷಿಯಾಗಿದ್ದ ನಹುಷನು; ಆತ ನಮ್ಮ ಪೂರ್ವಜ. ಆತ ತನ್ನನ್ನು ನುಂಗಿಹಾಕಲು ಹವಣಿಸುತ್ತಿರುವನೆಂದು ಭೀಮನು ಯುಧಿಷ್ಠಿರನಿಗೆ ಹೇಳಿದನು. ಯುಧಿಷ್ಠಿರನು ಭೀಮನನ್ನು ಬಿಟ್ಟುಕೊಡುವಂತೆ ಆ ಹೆಬ್ಬಾವನ್ನು ಕೇಳಿದನು. ಆದರೆ ಅದು ಆ ಬೇಡಿಕೆಯನ್ನು ತಳ್ಳಿಹಾಕಿತು. ತರುವಾಯ ಮಾತ್ರ ಶರತ್ತಿನೊಂದಿಗೆ ಒಪ್ಪಿಕೊಂಡಿತು. (ಯುಧಿಷ್ಠಿರನು) ತನ್ನ ಪ್ರಶ್ನೆಗಳನ್ನು ಸರಿಯಾಗಿ ಉತ್ತರಿಸಿದರೆ ತಾನು ಭೀಮನನ್ನು ಬಿಟ್ಟುಬಿಡುವುದಾಗಿ ಹೇಳಿತು. ಆ ಹೆಬ್ಬಾವು ಬ್ರಾಹ್ಮಣ್ಯ ಮೊದಲಾದ ಹಲವು ಸಂಗತಿಗಳನ್ನು ಕುರಿತು ಪ್ರಶ್ನೆಗಳನ್ನು ಕೇಳಿತು. ಯುಧಿಷ್ಠಿರನ ಉತ್ತರಗಳಿಂದಾಗಿ ಹೆಬ್ಬಾವು ಸಂತಸಪಟ್ಟಿತು. ತನ್ನ ಮಾತಿನಂತೆ ಭೀಮನನ್ನು ಬಿಡುಗಡೆ ಮಾಡಲು ಸಿದ್ಧವಾಯಿತು. ಯುಧಿಷ್ಠಿರನಿಗೆ ಹೆಬ್ಬಾವಿನ ಜ್ಞಾನವನ್ನು ಕಂಡು ಬೆರಗಾಯಿತು. ಅವನು ತನ್ನ ಸಂದೇಹವನ್ನು ವ್ಯಕ್ತಪಡಿಸುತ್ತಲೇ—

ಕೃತಂ ಕಾರ್ಯಂ ಮಹಾರಾಜ ತ್ವಯಾ ಮಮ ಪರಂತಪ ।
ಕ್ಷೀಣಃ ಶಾಪಃ ಸುಕೃಚ್ಛ್ರೋ ಮೇ ತ್ವಯಾ ಸಂಭಾಷ್ಯ ನಾಧುನಾ ॥ ೩೨ ॥

'ಎಲೈ ಪರಂತಪನೇ ! ನೀನಿಂದು ನನ್ನ ಬಲು ದೊಡ್ಡ ಕೆಲಸವನ್ನು ಮಾಡಿರುವೆ. ನಿನ್ನೊಂದಿಗೆ ಮಾತುಕತೆಯಾಡಲು (ನನಗೆ ಅವಕಾಶ ದೊರೆತು) ನನ್ನ ಬಲುದುಃಸಹವಾದ ಶಾಪ ಕಳೆಯಿತು' ಎಂಬುದಾಗಿ ರಾಜನು ಅವನಿಗೆ ಕೃತಜ್ಞತೆಗಳನ್ನು ಸಲ್ಲಿಸಿದನು. ತರುವಾಯ ತನ್ನ ಶಾಪದ ಕಥೆಯನ್ನು ಹೇಳಿದನು—

ಬ್ರಹ್ಮರ್ಷೀಣಾಂ ಸಹಸ್ರಂ ಹಿ ಉವಾಹ ಶಿಬಿಕಾಂ ಮಮ ।
ಸ ಮಾಮವನಯೋ ರಾಜನ್ ಭ್ರಂಶಯಾಮಾಸ ವೈ ಶ್ರಿಯಃ ॥ ೩೬ ॥
ತತ್ರ ಹ್ಯಗಸ್ತ್ಯಃ ಪಾದೇನ ವಹನ್ ಸ್ಪೃಷ್ಟೋ ಮಯಾ ಮುನಿಃ ।
ಅಗಸ್ತ್ಯೇನ ತತೋಽಸ್ಮ್ಯುಕ್ತಃ ಸರ್ಪಸ್ತ್ವಂ ಚ ಭವೇತಿ ಹ ॥ ೩೭ ॥
ತತಸ್ತಸ್ಮಾದ್ ವಿಮಾನಾಗ್ರ್ಯಾನ್ ಪ್ರಚ್ಯುತಶ್ಚ್ಯುತಲಕ್ಷಣಃ ।
ಪ್ರಪತನ್ ಬುಬುಧೇಽಽತ್ಮಾನಂ ವ್ಯಾಲೀಭೂತಮಧೋಮುಖಮ್ ।
ಅಯಾಚಂ ತಮಹಂ ವಿಪ್ರಂ ಶಾಪಾಸ್ಯಾಂತೋ ಭವೇದಿತಿ ॥ ೩೮ ॥

ಸಾವಿರಾರು ಜನ ಋಷಿಗಳು ನನ್ನ ಪಲ್ಲಕ್ಕಿಯನ್ನು ಹೊರುತ್ತಿದ್ದರು. ನನ್ನೀ ಅತ್ಯಾಚರಣೆಯಿಂದಾಗಿಯೇ ನಾನು ಸ್ವರ್ಗೀಯವಾದ ವೈಭವದಿಂದ ದೂರಾದೆನು. ನಾನು ಸ್ವರ್ಗದಲ್ಲಿರುವಾಗ ಮುನಿಪುಂಗವರಾದ ಅಗಸ್ತ್ಯರು ನನ್ನ ಪಲ್ಲಕ್ಕಿಯನ್ನು ಹೊತ್ತೊಯ್ಯುತ್ತಿದ್ದರು. ಆಗ ನಾನು ಕಾಲಿನಿಂದ ಅವರನ್ನು ಒದ್ದೆನು. ಆಗ ಅವರು ನನಗಂದರು: 'ನೀನು ಹಾವಾಗಲಿರುವ.' ಅವರ ಬಾಯಿಂದ ಮಾತು ಹೊರಡುವುದೇ ತಡ ನನ್ನ ರಾಜ ಲಾಂಛನಗಳೆಲ್ಲ ಕಳೆಗುಂದಿದವು. ನಾನು ಹಾವಾಗಿ ನೆಲಕ್ಕೆ ಬಿದ್ದೆ. ಆಗ ನನ್ನ ಗಮನಕ್ಕೆ ಬಂದ ಸಂಗತಿಯೆಂದರೆ ಅಧೋಮುಖನಾಗಿ ನನಗೆ ಹಾವಿನ ಅವಸ್ಥೆ ಬಂದಿದೆಯೆಂಬುದು. ಶಾಪ ಬೇಗ ಕೊನೆಗೊಳ್ಳಲೆಂದು ನಾನು ಪ್ರಾರ್ಥಿಸಿದೆ—

ಪ್ರಮಾದಾತ್ ಸಂಪ್ರಮೂಢಸ್ಯ ಭಗವನ್ ಕ್ಷಂತುಮರ್ಹಸಿ ॥ ೩೯ ॥

'ಭಗವಂತನೇ ! ಪ್ರಮಾದದಿಂದಾಗಿ ನಾನು ವಿವೇಕಬುದ್ಧಿಯನ್ನು ಕಳೆದುಕೊಂಡಿದ್ದೆ. ಹೀಗಾಗಿ ನನ್ನ ಕೈಯಿಂದ ಇಂತಹ ಘೋರವಾದ ಅಪರಾಧವು ನಡೆಯಿತು. ನನಗೆ ಕ್ಷಮೆಯಿರಲಿ.' ಆಗ ದಯಾನಿಧಿಯಾದ ಆ ಋಷಿಗಳು ನನಗೆ ಆಶ್ವಾಸನೆಯನ್ನಿತ್ತರು—

ಯುಧಿಷ್ಠಿರೋ ಧರ್ಮರಾಜಃ ಶಾಪಾತ್ ತ್ವಾಂ ಮೋಕ್ಷಯಿಷ್ಯತಿ ।
ಅಭಿಮಾನಸ್ಯ ಘೋರಸ್ಯ ಪಾಪಸ್ಯ ಚ ನರಾಧಿಪ ॥ ೪೦ ॥
ಫಲೇ ಕ್ಷೀಣೇ ಮಹಾರಾಜ ಫಲಂ ಪುಣ್ಯಮವಾಪ್ಸ್ಯಸಿ ॥ ೪೧ ॥

'ಧರ್ಮರಾಜನಾದ ಯುಧಿಷ್ಠಿರನಿಂದ ನಿನ್ನ ಈ ಶಾಪದಿಂದ ಬಿಡುಗಡೆಯನ್ನು ಹೊಂದಲಿರುವೆ. ಅದೇ ಕಾಲಕ್ಕೆ ನಿನ್ನ ಈ ದುರಭಿಮಾನ ಹಾಗೂ ಭಯಂಕರವಾದ ಪಾಪದ ಫಲವು ಇಳಿಮುಖವಾದೀತು. ಮತ್ತೆ ನಿನ್ನ ಪುಣ್ಯಕರ್ಮದ ಫಲವನ್ನು ಪಡೆಯುವೆ.'

+ ಯಾಚಿತವಾದ ಉಃಶಾಪ. ಶಾಪಮುಕ್ತಿಯ ಆಶ್ವಾಸನೆಯೇ ವರದಾನವು.

**ಉದ್ಯೋಗ/೧೭**

ನಹುಷ ಸ್ವರ್ಗಭ್ರಷ್ಟನಾದುದು ಹೇಗೆಂಬುದನ್ನು ಕುರಿತು ಅಗಸ್ತ್ಯ ಇಂದ್ರನಿಗೆ ಹೇಳಿದನು: 'ಅಹಂಕಾರದಿಂದಾಗಿ ಅವನ ಬುದ್ಧಿ ಮಬ್ಬಾಯಿತು. ಅವನು ವೇದಗಳ ಪ್ರಾಮಾಣ್ಯವನ್ನೇ ಮೀರಿಬಿಟ್ಟನು. ನನ್ನ ತಲೆಗೆ ಒದೆದನು. ಹೀಗಾಗಿ ನಾನು ಸಿಟ್ಟಿನಿಂದ ಅವನಿಗೆ ಇಂತೆಂದೆನು—

ಯಸ್ಮಾತ್ ಪೂರ್ವೈಃ ಕೃತಂ ರಾಜನ್ ಬ್ರಹ್ಮರ್ಷಿಭಿರನುಷ್ಠಿತಮ್ ।
ಅದುಷ್ಟಂ ದೂಷಯಸಿ ಮೇ ಯಚ್ಚ ಮೂರ್ಧ್ನ್ಯ ಸ್ಪೃಶಃ ಪದಾ ॥ ೧೪ ॥
ಯಚ್ಚಾಪಿ ತ್ವಮೃಷೀನ್ ಮೂಢ ಬ್ರಹ್ಮಕಲ್ಪಾನ್ ದುರಾಸದಾನ್ ॥ ೧೫ ॥
ವಾಹಾನ್ ಕೃತ್ವಾ ವಾಹಯಸಿ ತೇನ ಸ್ವರ್ಗಾದ್ಧತಪ್ರಭಃ ।
ಧ್ವಂಸಪಾಪಪರಿಭ್ರಷ್ಟಃ ಕ್ಷೀಣಪುಣ್ಯೋ ಮಹೀತಲೇ ॥ ೧೬ ॥
ದಶವರ್ಷಸಹಸ್ರಾಣಿ ಸರ್ಪರೂಪಧರೋ ಮಹಾನ್ ।
ವಿಚರಿಷ್ಯಸಿ ಪೂರ್ಣೇಷು ಪುನಃ ಸ್ವರ್ಗಮವಾಪ್ಸ್ಯಸಿ ॥ ೧೭ ॥

'ಹಿಂದಕ್ಕೆ ಮಹರ್ಷಿಗಳು ಅನುಷ್ಠಾನಗಳನ್ನು ಕೈಕೊಂಡು ಅವುಗಳನ್ನೇ ಪ್ರಮಾಣವೆಂದು ಬಗೆದ ವೇದಗಳ ಅಭಿಪ್ರಾಯಗಳನ್ನೇ ನೀನು ಮೀರಿ ನಡೆಯುವೆ. ಅವುಗಳ ಬಗೆಗೆ

ಅಪನಂಬಿಕೆಯನ್ನು ತೋರುವಿ. ಅಲ್ಲದೆ ನನ್ನ ತಲೆಗೆ ಆಘಾತವನ್ನು ಕೊಟ್ಟೆ. ಎಲೈ ಮೂರ್ಖನೇ, ಬ್ರಹ್ಮಸಮಾನರಾದ, ದುರ್ಧರ್ಷರಾದ, ತೇಜಃಪುಂಜರೂ ಆದ ಋಷಿಗಳಿಗೆ ನಿನ್ನ ಪಲ್ಲಕ್ಕಿಯನ್ನು ಹೊರೆಹಚ್ಚುವೆ. ಅದರಿಂದಾಗಿ ನೀನು ಕಳೆಗೆಟ್ಟಿರುವೆ. ನಿನ್ನ ಪುಣ್ಯ ಅಳಿದಿದೆ. ನೀನು ಸ್ವರ್ಗವನ್ನು ಕಳೆದುಕೊಂಡು ನೆಲಕ್ಕೆ ಕುಸಿದುಬೀಳುವೆ. ಹಾವಾಗಿ ಹತ್ತುಸಾವಿರ ವರ್ಷಗಳ ಕಾಲ ಭೂಮಿಯ ಮೇಲಿರಬೇಕಾದೀತು. ಈ ಕಾಲಾವಧಿ ಮುಗಿಯುತ್ತಲೇ ಮತ್ತೆ ಸ್ವರ್ಗವನ್ನು ಪಡೆಯುವಿ.'

+ ಶಾಪದ ಉತ್ತರಾರ್ಧದಲ್ಲಿ ಉಃಶಾಪವಿದೆ. ಇಲ್ಲಿ ನಹುಷನು ಕೇಳಿಕೊಂಡಿರದ ಕಾರಣ ಉಃಶಾಪವು ಅಯಾಚಿತವಾದುದು.

**ಉದ್ಯೋಗ/೧೮**

ಇದು ಶಾಪದ ಒಂದು ಉಲ್ಲೇಖ ಮಾತ್ರ.

'ಇಂದ್ರನು ತನ್ನ ಮಗನನ್ನು ಕೊಂದು ರಾಜ್ಯವನ್ನು ವಶಪಡಿಸಿಕೊಂಡಹಾಗೆ ನೀನೂ ಕೂಡ ನಿನ್ನ (ಮೊದಲಿನ) ರಾಜ್ಯವನ್ನು ಖಂಡಿತವಾಗಿಯೂ ಪಡೆಯುವೆ' ಎಂದು ಶಲ್ಯನು ಯುಧಿಷ್ಠಿರನಿಗೆ ಹೇಳಿದನು. ಈ ಬಗೆಗೆ ನಹುಷನ ಉದಾಹರಣೆಯನ್ನು ನೀಡಿದನು—

ದುರಾಚಾರಶ್ಚ ನಹುಷೋ ಬ್ರಹ್ಮದ್ವಿಟ್ ಪಾಪಚೇತನಃ ।
ಅಗಸ್ತ್ಯಶಾಪಾಭಿಹತೋ ವಿನಷ್ಟಃ ಶಾಶ್ವತೀಃ ಸಮಾಃ ॥ ೧೩ ॥

'ಅಗಸ್ತ್ಯನ ಶಾಪದಿಂದಾಗಿ ಬ್ರಾಹ್ಮಣದ್ರೋಹಿಯೂ ದುರಾಚಾರಿಯೂ ಪಾಪಿಯೂ ಆದ ನಹುಷ ಸಾವಿರಾರು ವರ್ಷಗಳ ಕಾಲ ನಾಶಹೊಂದಿದವನಂತೆಯೇ ಆಗಿದ್ದನು.' ಅದೇ ರೀತಿಯಾಗಿ ಕರ್ಣ-ದುರ್ಯೋಧನ ಮೊದಲಾದ ನಿನ್ನ ಹಗೆಗಳು ನಾಶಹೊಂದುವ ರಲ್ಲದೆ ನೀನು ಮತ್ತೆ ನೃಪತಿಯಾಗಲಿರುವೆ.

**ಶಾಂತಿ/೩೪೨**

ಶ್ರೀಕೃಷ್ಣನು ಅರ್ಜುನನಿಗೆ ನಹುಷ, ಇಂದ್ರ ಹಾಗೂ ಶಚಿ ಇವರನ್ನು ಕುರಿತು ಹೇಳು ವಲ್ಲಿ ಮುಂದಿನ ಒಂದು ಉಲ್ಲೇಖವಿದೆ—

—ತತಃ ಸ ನಹುಷಮಬ್ರವೀತ್—ಅಕಾರ್ಯಪ್ರವೃತ್ತ ಪಾಪ ಪತಸ್ವ ಮಹೀಂ ಸರ್ಪೋ ಭವ ಯಾವದ್ಭೂಮಿರ್ಗಿರಯಶ್ಚ ತಿಷ್ಠೇಯುಸ್ತಾವದಿತಿ ಸ ಮಹರ್ಷಿ ವಾಕ್ಯಸಮಕಾಲಮೇವ ತಸ್ಮಾದ್ ಯಾನಾದವಾಪತತ್ ॥ ೫೧ ॥

'ಆಗ ಅವನು (ಅಗಸ್ತ್ಯನು) ನಹುಷನಿಗೆ ಹೀಗೆಂದನು—

ಅಕಾರ್ಯವನ್ನು ಎಸಗಲು ಪ್ರವೃತ್ತನಾದ ನೀಚನೇ! ನೀನು ಭೂಮಿಯ ಮೇಲೆ ಬೀಳಲಿರುವೆ. ನೆಲ, ಪರ್ವತಗಳಿರುವವರೆಗೂ ಹಾವಾಗಿ ಇರುವೆ.' ತತ್ಕ್ಷಣ ನಹುಷ ಪಲ್ಲಕ್ಕಿ ಯಿಂದ (ಹಾವಾಗಿ) ನೆಲಕ್ಕುರುಳಿದನು

+ 'ಶಾಪ' ಎಂಬುದಾಗಿ ಖಚಿತವಾದ ಉಲ್ಲೇಖ ಇಲ್ಲದಿದ್ದರೂ ಅಗಸ್ತ್ಯನ ಮಾತು ಹಾಗೂ ಅದರ ಪರಿಣಾಮವನ್ನು ಗಮನಿಸಿದರೆ ಇದು ಶಾಪವಾಣಿಯೇ ಸರಿ.

**ಅನುಶಾಸನ/೯೯**

ಭೀಷ್ಮನು ಯುಧಿಷ್ಠಿರನಿಗೆ ಧೂಪದಾನ ಹಾಗೂ ಬಲಿದಾನಗಳ ಹೆಗ್ಗಳಿಕೆಯನ್ನು ಕುರಿತು ಹೇಳುತ್ತಲಿದ್ದನು ನಹುಷನ ಪುಣ್ಯಕರ್ಮಗಳೊಂದಿಗೆಯೇ ಅವನ ಅಹಂಕಾರ, ಋಷಿಗಳಿಂದ ತನ್ನ ಪಲ್ಲಕ್ಕಿಯನ್ನು ಹೊರಿಸುವುದು, ಅವರನ್ನು ಅವಮಾನಿಸುವುದು ಮೊದಲಾದ ಸಂಗತಿಗಳನ್ನು ಕೂಡ ಹೇಳುತ್ತಾನೆ. ಇದೇ ಸಂದರ್ಭದಲ್ಲಿ ಈ ಶಾಪದ ಉಲ್ಲೇಖವೂ ಬಂದಿದೆ. ನೀನು ನಹುಷನ ಸೊಕ್ಕಿನ ನಡತೆಯನ್ನು ಸಹಿಸುವಿಯೇಕೆ ?— ಎಂದು ಭೃಗುವು ಅಗಸ್ತ್ಯನನ್ನು ಕೇಳಿದನು. ಅದಕ್ಕೆ ಅಗಸ್ತ್ಯನು ಹೀಗೆಂದನು—

> ಕಥಮೇಷ ಮಯಾ ಶಕ್ಯಃ ಶಪ್ತುಂ ಯಸ್ಯ ಮಹಾಮುನೇ ।
> ವರದೇನ ವರೋ ದತ್ತೋ ಭವತೋ ವಿದಿತಶ್ಚ ಸಃ ॥ ೧೬ ॥

'ಮಹಾಮುನಿಗಳೇ ! ಬ್ರಹ್ಮದೇವನು ಅವನಿಗೆ ವರವಿತ್ತುದನ್ನು ನೀವು ಬಲ್ಲಿರಿ. ಅಂದ ಬಳಿಕ ನಾನು ಅವನನ್ನು ಶಪಿಸುವುದು ಹೇಗೆ ?'

ಅದಕ್ಕೆ ಭೃಗುವು ಅಗಸ್ತ್ಯನಿಗೆ ಹೀಗೆಂದನು : 'ನಹುಷನನ್ನು ಎದುರಿಸಲೆಂದೇ ನಾನು ನಿನ್ನ ಬಳಿಗೆ ಬಂದಿರುವುದು. ನಹುಷನಿಗೆ ಬುದ್ಧಿಭ್ರಂಶವಾಗಿದೆ. ಅವನು ನಿನಗೆ ಪಲ್ಲಕ್ಕಿಯನ್ನು ಹೊತ್ತು ಸಾಗಿಸಲು ಹೇಳುವನು. ಅಲ್ಲದೆ ನಿನ್ನ ತಲೆಗೆ ಒದೆಯುವನು. ಮತ್ತೆ—

> ವ್ಯುತ್ಕ್ರಾಂತಧರ್ಮಂ ತಮಹಂ ಘರ್ಷಣಾಮರ್ಷಿತೋ ಭೃಶಮ್ ।
> ಅಹಿರ್ಭವಸ್ವೇತಿ ರುಷಾ ಶಪ್ಸ್ಯೇ ಪಾಪಂ ದ್ವಿಜದ್ರುಹಮ್ ॥ ೨೬ ॥

'ಆದರಿಂದ ಸಂತಪ್ತನಾಗಿ 'ಹಾವಾಗು' ಎಂದು ಆ ಬ್ರಹ್ಮದ್ರೋಹಿಯನ್ನು ಶಪಿಸುವೆ.'

**ಅನುಶಾಸನ/೧೦೦**

ಯುಧಿಷ್ಠಿರನ ಕೋರಿಕೆಯ ಮೇರೆಗೆ ಭೀಷ್ಮ ಅವನಿಗೆ ನಹುಷನ ಅಧಃಪತನವನ್ನು ಕುರಿತಾಗಿ ಹೇಳುತ್ತಲಿದ್ದಾನೆ.

ಭೃಗುವು ಅಗಸ್ತ್ಯನ ಜಡೆಯಲ್ಲಿ ಅಡಗಿ ಕುಳಿತಿದ್ದನು. ನಹುಷನು ಅಗಸ್ತ್ಯನನ್ನು ರಥಕ್ಕೆ ಹೂಡುತ್ತಾನೆ. ಅವನನ್ನು ಚಾಟಿಯಿಂದ ಹೊಡೆಯುತ್ತಾನೆ. ಆದರೂ ಅಗಸ್ತ್ಯ ಸಿಟ್ಟಿಗೇಳಲಿಲ್ಲ. ನಹುಷನು ಅಗಸ್ತ್ಯನ ತಲೆಯನ್ನು ಒದೆಯುತ್ತಲೇ ಅದು ಭೃಗುವಿಗೆ ತಾಗಿತು.

> ಶಶಾಪ ಬಲವತ್ಕ್ರುದ್ಧೋ ನಹುಷಂ ಪಾಪಚೇತಸಮ್ ।
> ಯಸ್ಮಾತ್ ಪದಾಽಽಹತಃ ಕ್ರೋಧಾಚ್ಛಿರಸೀಮಂ ಮಹಾಮುನಿಮ್ ॥ ೨೪ ॥
> ತಸ್ಮಾದಾಶು ಮಹೀಂ ಗಚ್ಛ ಸರ್ಪೋ ಭೂತ್ವಾ ಸುದುರ್ಮತೇ ।
> ಇತ್ಯುಕ್ತಃ ಸ ತದಾ ತೇನ ಸರ್ಪೋ ಭೂತ್ವಾ ಪಪಾತ ಹ ॥ ೨೫ ॥

ಆಗ ಸಿಟ್ಟಿಗೆದ್ದ ಭೃಗುವು ಪಾಪಾಚರನಾದ ಆ ನಹುಷನಿಗೆ, 'ಎಲೈ ನೀಚನೇ ! ನೀನು (ಅಗಸ್ತ್ಯನಂತಹ) ಶ್ರೇಷ್ಠನಾದ ಮುನಿಯ ತಲೆಗೆ ಒದೆತವನ್ನು ಕೊಟ್ಟೆ. ಹೀಗಾಗಿ ಹಾವಾಗಿ ಭೂಮಿಯ ಮೇಲೆ ಬೀಳು' ಎಂದು ಶಪಿಸಿದನು. ಭೃಗುವಿನ ಮಾತು ಹೊರ ಬರುತ್ತಲೇ ನಹುಷ ಹಾವಾಗಿ ನೆಲಕ್ಕೆ ಬಂದು ಬಿದ್ದನು.

ಆದರೂ ಕೂಡ ನಹುಷನು ಮಾಡಿದ ದಾನಧರ್ಮಗಳಂತಹ ಪುಣ್ಯಕರ್ಮಗಳಿಂದಾಗಿ ಅವನ ನೆನಪಿನ ಶಕ್ತಿ ಉಳಿದುಕೊಂಡಿತ್ತು.

ಪ್ರಸಾದಯಾಮಾಸ ಭೃಗುಂ ಶಾಪಾಂತೋ ಮೇ ಭವೇದಿತಿ ॥ ೨೮ ॥

ಅವನು ಭೃಗುವನ್ನು, 'ಎಲೈ ಭಗವಂತನೇ ! ನನಗೆ ದೊರೆತ ಶಾಪ ಕೊನೆಗೊಳ್ಳಲಿ' ಎಂದು ಬೇಡಿಕೊಂಡನು.

ತತೋಽಗಸ್ತ್ಯಃ ಕೃಪಾವಿಷ್ಟಃ ಪ್ರಾಸಾದಯುತ ತಂ ಭೃಗುಮ್ ।
ಶಾಪಾಂತಾರ್ಥಂ ಮಹಾರಾಜ ಸ ಚ ಪ್ರಾದಾತ್ ಕೃಪಾನ್ವಿತಃ ॥ ೨೯ ॥

ಭೃಗುರುವಾಚ—

ರಾಜಾ ಯುಧಿಷ್ಠಿರೋ ನಾಮ ಭವಿಷ್ಯತಿ ಕುಲೋದ್ವಹಃ ।
ಸ ತ್ವಾಂ ಮೋಕ್ಷಯಿತಾ ಶಾಪಾದಿತ್ಯುಕ್ತ್ವಾಂತರಧೀಯುತ ॥ ೩೦ ॥

ಅಗಸ್ತ್ಯನಲ್ಲಿ ನಹುಷನ ಬಗೆಗೆ ದಯೆ ಮೂಡಿತು. ನಹುಷನ ಶಾಪ ಕೊನೆಗೊಳ್ಳಲೆಂದು ಅವನು ಭೃಗುವಿನ ಮನವೊಲಿಸಿದನು. ಆಗ ಭೃಗುವು ದಯೆ ತೋರುತ್ತ, 'ಈ ಬಗೆಯಾಗಿ ನಿನ್ನ ಶಾಪ ಕೊನೆಗೊಳ್ಳಲಿದೆ. ನಿನ್ನ ಕುಲದಲ್ಲಿಯೇ ಮುಂದಕ್ಕೆ ಯುಧಿಷ್ಠಿರನೆಂಬ ಕುಲೋದ್ಧಾರಕನಾದ ರಾಜ ಜನ್ಮತಳೆಯಲಿರುವನು. ಅವನು ನಿನ್ನನ್ನು ಈ ಶಾಪದಿಂದ ಬಿಡಿಸುವನು' ಎಂದನು.

ಭೃಗುವು ಅಂತರ್ಧಾನನಾಗುತ್ತಲೇ ಭೀಷ್ಮನು ಯುಧಿಷ್ಠಿರನಿಗೆ ಹೀಗೆಂದನು—

ನಹುಷೋಽಪಿ ತ್ವಯಾ ರಾಜಂಸ್ತಸ್ಮಾಚ್ಛಾಪಾತ್ ಸಮುದ್ಧೃತಃ ॥ ೩೨ ॥

'ಎಲೈ ರಾಜನೇ (ಯುಧಿಷ್ಠಿರನೇ) ! ನೀನು ನಹುಷನನ್ನು ಶಾಪದಿಂದ ಮುಕ್ತನನ್ನಾಗಿ ಮಾಡಿರುವೆ. ನಿನ್ನ ಕಣ್ಣೆದುರಿನಲ್ಲಿಯೇ ಅವನು ಬ್ರಹ್ಮಲೋಕಕ್ಕೆ ತೆರಳಿದನು.'

+ ವನಪರ್ವ ೧೮೧ರಲ್ಲಿಯ ಉಃಶಾಪವು ಯಾಚಿತವಾಗಿದ್ದು ಉದ್ಯೋಗಪರ್ವ ೧೭ ರಲ್ಲಿಯ ಉಃಶಾಪವು ಅಯಾಚಿತವಾದುದು. ಭೃಗುವು ಶಾಪವನ್ನಿತ್ತವನೆಂದು ಅನುಶಾಸನ ಪರ್ವ ಹೇಳುತ್ತದೆ. ಬೇರೆ ಪರ್ವಗಳಲ್ಲಿ ಮಾತ್ರ ಶಾಪವನ್ನೀಯುವವನು ಅಗಸ್ತ್ಯ. ಶಾಪದ ಕಾಲಾವಧಿಯ ಬಗೆಗೂ ಭಿನ್ನಭಿನ್ನವಾದ ಉಲ್ಲೇಖಗಳಿವೆ. ವನಪರ್ವದಲ್ಲಿ ಕಾಲಾವಧಿಯ ಖಚಿತವಾದ ಉಲ್ಲೇಖವಿಲ್ಲ. ಉದ್ಯೋಗಪರ್ವದಲ್ಲಿ 'ಶಾಶ್ವತೀಃ ಸಮಾಃ' ಎಂದೆನ್ನಲಾಗಿದೆ. ಶಾಂತಿಪರ್ವ ೩೪೨ರಲ್ಲಿ ಈ ಕಾಲಾವಧಿಯು ಪೃಥ್ವಿ ಹಾಗೂ ಪರ್ವತಗಳಿರುವವರೆಗೆ ದೀರ್ಘವಾಗಿರುವ ಉಲ್ಲೇಖವಿದೆ.

## ೬೪. ಆಯು > ಸುಶೋಭನೆ ವನ/೧೯೨

ವೈಶಂಪಾಯನ ಜನಮೇಜಯನಿಗೆ ಪರೀಕ್ಷಿತನನ್ನು ಕುರಿತು ಒಂದು ಕಥೆಯನ್ನು ಹೇಳುತ್ತಲಿದ್ದಾನೆ.

ಪರೀಕ್ಷಿತ್ ರಾಜನು ಒಂದು ಸಲ ಒಂದು ಚೆಂದಾದ ಕಾಡಿನಲ್ಲಿ ಹೋಗಿದ್ದನು. ಅಲ್ಲಿ ಒಬ್ಬ ಲಾವಣ್ಯವತಿಯಾದ ಕನ್ಯೆಯನ್ನು ಕಂಡನು. ಅವಳಿಗೆ ತನ್ನ ಮನದಿಚ್ಛೆಯನ್ನು ಹೇಳಿದನು. ಒಂದು ಶರತ್ತಿನೊಂದಿಗೆ ಅವಳು ಅವನನ್ನು ಮದುವೆಯಾಗಲು ಒಪ್ಪಿದಳು. ಅದೆಂದರೆ, ಅವಳಿಗೆ ಅದೆಂದಿಗೂ ನೀರು ಕಾಣಕೂಡದು ಎಂಬುದು. ಅವನು ಒಪ್ಪಿದನು. ಅವಳನ್ನು ಮದುವೆಯಾದನು. ಅವನು ಅವಳ ಶರತ್ತನ್ನು ಪಾಲಿಸುತ್ತ ಸುಖದಿಂದ

ಸಂಸಾರವನ್ನು ಸಾಗಿಸಿಕೊಂಡು ಇದ್ದನು. ಒಂದು ಸಲ ಪ್ರಧಾನಿಯ ಬಲವಂತದಿಂದಾಗಿ ಪರೀಕ್ಷಿತನು ಮಡದಿಯೊಂದಿಗೆ ಒಂದು ಉಪವನಕ್ಕೆ ಹೋದನು. ಅಲ್ಲಿ ಮುತ್ತಿನ ಜಾಳಿಗೆಗಳಿಂದ ಮುಚ್ಚಿದ ಒಂದು ಬಾವಿ ಇತ್ತು. ರಾಜನು ರಾಣಿಗೆ ನೀರಿಗೆ ಹಾರಿಬರಲು ಹೇಳಿದನು. ಹಾಗೆ ಹಾರಿದ ಅವಳು ಮತ್ತೆ ಮೇಲೆ ಬರಲೇ ಇಲ್ಲ. ಅವಳನ್ನು ಕಂಡುಹಿಡಿಯಲೆಂದು ರಾಜ ಬಾವಿಯ ನೀರನ್ನೆಲ್ಲ ಸೇದಿಸಿದನು. ಆಗ ಬಾವಿಯ ತಳಕ್ಕೆ ಒಂದು ಬಿಲದ ಪಕ್ಕದಲ್ಲಿ ಒಂದು ಕಪ್ಪೆ ಕಂಡಿತು. ಆ ಕಪ್ಪೆಯೇ ರಾಣಿಯನ್ನು ನುಂಗಿಹಾಕಿತೆಂದುಕೊಂಡು ಆ ರಾಜನು ಕಂಡ ಕಂಡ ಕಪ್ಪೆಗಳನ್ನೆಲ್ಲ ಕೊಲ್ಲಲು ಆರಂಭಿಸಿದನು. ಹೀಗಾಗಿ ಕಪ್ಪೆಗಳೆಲ್ಲ ಹೆದರಿ ತಮ್ಮ ದೊರೆಯಾದ ಮಂಡೂಕನಲ್ಲಿಗೆ ಹೋದವು. ನಡೆದುದನ್ನೆಲ್ಲ ಅವನಿಗೆ ಅರುಹಿದವು. ಮಂಡೂಕ ಒಬ್ಬ ತಪಸ್ವಿಯ ರೂಪದಲ್ಲಿ ಪರೀಕ್ಷಿತನನ್ನು ಕಂಡನು. ಸುಮ್ಮನೆ ಕಪ್ಪೆಗಳನ್ನು ಕೊಲ್ಲಬಾರದೆಂದು ಬೇಡಿಕೊಂಡನು. ಕಪ್ಪೆಗಳನ್ನು ಕೊಲ್ಲಲು ಕಾರಣವೇನೆಂದು ಕೇಳಿದನು. ಆಗ ಪರೀಕ್ಷಿತನು ತನ್ನ ರಾಣಿಯನ್ನು ಒಂದು ಕಪ್ಪೆ ತಿಂದುಹಾಕಿದುದೇ ಕಾರಣವೆಂದನು. ಮುಂದೆ ಮಂಡೂಕನ ಮಗಳೇ ತನ್ನ ರಾಣಿಯೆಂಬುದು ಆತನಿಗೆ ತಿಳಿದು ಬಂದಿತು. ಅವಳು ತನಗೆ ಬೇಕೆಂದು ಕೇಳಿದನು. ಮಂಡೂಕ ಒಪ್ಪಿಕೊಂಡನು. ತನ್ನ ಮಗಳು ಬಲು ದುಷ್ಟಸ್ವಭಾವದವಳಾಗಿದ್ದು ಆಕೆ ಹಲವು ಜನ ರಾಜರನ್ನು ಮೋಹಗೊಳಿಸಿರುವುದಾಗಿ ಹೇಳಿದನು.

ಮಂಡೂಕನು ತನ್ನ ಕನ್ಯೆಯಾದ ಸುಶೋಭನೆಯನ್ನು ಪರೀಕ್ಷಿತನಿಗಿತ್ತು ಗಂಡನನ್ನು ಸರಿಯಾಗಿ ನೋಡಿಕೊಳ್ಳಲು ಬುದ್ಧಿ ಹೇಳಿದನು. ಆದರೆ ಅವಳ ನಡತೆ ಸುಧಾರಿಸಲೇ ಇಲ್ಲ. ಹೀಗಾಗಿ ಪರೀಕ್ಷಿತನು ಸಿಟ್ಟಾಗಿ ಅವಳನ್ನು ಈ ರೀತಿ ಶಪಿಸಿದನು—

> ಸ ಏವಮುಕ್ತ್ವಾ ದುಹಿತರಂ ಕ್ರುದ್ಧಃ ಶಶಾಪ ಯಸ್ಮಾತ್ ತ್ವಯಾ
> ರಾಜಾನೋ ವಿಪ್ರಲಬ್ಧಾ ।
> ಬಹವಸ್ತಸ್ಮಾದಬ್ರಹ್ಮಣ್ಯಾನಿ ತವಾಪತ್ಯಾನಿ ಭವಿಷ್ಯಂತ್ಯನೃತಿಕತ್ವಾತ್
> ತವೇತಿ ॥ ೩೫ ॥

'ನೀನು ಹಲವು ಜನ ರಾಜರನ್ನು ಮೋಸಗೊಳಿಸಿರುವೆ. ಹೀಗಾಗಿ ನಿನ್ನ ಹೊಟ್ಟೆಯಿಂದ ಹುಟ್ಟಿ ಬರುವ ಮಕ್ಕಳು ಬ್ರಾಹ್ಮಣವಿರೋಧಿಗಳಾಗಲಿರುವರು. ಏಕೆಂದರೆ ನೀನು ಸುಳ್ಳುಗಾರ್ತಿ.'

ಅವಳ ಮಕ್ಕಳಾದ ಶಲ, ಬಲ, ದಲರು ಬ್ರಾಹ್ಮಣವಿರೋಧಿಗಳಾಗಿದ್ದರು.

## ೬೫. ವಾಮದೇವ > (ಶಲರಾಜನ) ಸಾರಥಿ ವನ/೧೯೨

ಮೊದಲ ಸಂದರ್ಭ : ನೋಡಿ : ಶಾಪ—ಆಯು > ಸುಶೋಭನೆ.

ವೈಶಂಪಾಯನ ಜನಮೇಜಯನಿಗೆ ವಾಮದೇವ ಮುನಿಯ ಬಗೆಗೆ ಹೇಳುತ್ತಲಿದ್ದಾನೆ—

ಪರೀಕ್ಷಿತನಿಗೆ ಸುಶೋಭನೆಯಿಂದ ಮೂವರು ಗಂಡುಮಕ್ಕಳಾದರು. ಅವರಲ್ಲಿ ಶಲ ಚೊಚ್ಚಿಲು ಮಗನು. ಪರೀಕ್ಷಿತನು ಸರಿಯಾದ ಕಾಲಕ್ಕೆ ಶಲನಿಗೆ ರಾಜ್ಯಾಡಳಿತೆಯನ್ನು ಒಪ್ಪಿಸಿ ತಾನು ಕಾಡಿಗೆ ತಪಸ್ಸಿಗೆಂದು ತೆರಳಿದನು. ಒಂದು ದಿನ ಶಲನು ಸಾರಥಿಯೊಂದಿಗೆ

ಬೇಟೆಗೆಂದು ಕಾಡಿಗೆ ಹೋದಾಗ ಒಂದು ಕ್ರೂರಮೃಗವನ್ನು ಕಂಡನು. ರಾಜ ಅದಕ್ಕೆ ಗುರಿಯಿಡುವಷ್ಟರಲ್ಲಿ ಸಾರಥಿಯು ಅವನಿಗೆ ಹಾಗೆ ಮಾಡದಿರಲು ಹೇಳಿದನು. ಆ ಕಾಡು ಪ್ರಾಣಿಯು ಬಲುಚುರುಕಿನದಾದ್ದರಿಂದ ರಥದ ಕುದುರೆಗಳು ಕೂಡ ಅದನ್ನು ಬೆನ್ನಟ್ಟಲಾರದಂತಿತ್ತು. ರಥಕ್ಕೆ 'ವಾಮ್ಯ' ಕುದುರೆಗಳನ್ನು ಹೂಡಿದರೆ ಮಾತ್ರ ಆ ಪ್ರಾಣಿಯನ್ನು ಬೆನ್ನಟ್ಟಲು ಸಾಧ್ಯವೆಂದು ಹೇಳಲಾಯಿತು. ಆಗ ರಾಜನು, 'ವಾಮ್ಯ' ಕುದುರೆಗಳು ಎಲ್ಲಿವೆ? ಅವುಗಳನ್ನು ಪಡೆಯುವುದು ಹೇಗೆ? ಹೇಳದಿದ್ದರೆ ಸಾರಥಿಯನ್ನು ಕೊಂದು ಬಿಡುವುದಾಗಿ ಬೆದರಿಸಿದನು.

ರಾಜಭಯಭೀತಃ ಸೂತೋ ವಾಮದೇವಶಾಪಭೀತಶ್ಚ
ಸನ್ ನಾಚಖ್ಯೌ ರಾಜ್ಞೇ ॥ ೪೧ ॥

ಸಾರಥಿ ಒಂದೆಡೆ ರಾಜನಿಗೆ ಹೆದರುತ್ತಿದ್ದು ಒಂದೆಡೆ ತಾನು (ವಾಮದೇವನ ಬಳಿಯಿದ್ದ ಕುದುರೆಗಳ ಬಗೆಗೆ ಹೇಳಿದರೆ) ಶಾಪಕ್ಕೀಡಾಗುವೆನೆಂದು ಹೆದರಿದ್ದನು. ಹೀಗಾಗಿ ಅವನು ಹೇಳಲು ಸಿದ್ಧನಿರಲಿಲ್ಲ.

ಆದರೆ ರಾಜನು ಕತ್ತಿಯನ್ನು ಹಿರಿದು ನಿಲ್ಲುತ್ತಲೇ ಹೆದರಿದ ಅವನು ವಾಮದೇವ ಋಷಿಯ ಬಳಿ ಆ ಕುದುರೆಗಳಿರುವುದಾಗಿ ಹೇಳಿದನು. ಅವುಗಳಿಗೆ 'ವಾಮ್ಯ' ಎಂಬ ಹೆಸರೆಂದೂ ಹೇಳಿಬಿಟ್ಟನು.

+ ಶಾಪವನ್ನು ನೀಡಲಾಗಿಲ್ಲ. ಶಾಪವನ್ನು ನೀಡಲಾದೀತೆಂಬ ಹೆದರಿಕೆ ಮಾತ್ರ ವ್ಯಕ್ತಗೊಂಡಿದೆ.

## ೬೬. ಬ್ರಾಹ್ಮಣ > ವೃಷದರ್ಭ ವನ/೧೯೬

ಯುಧಿಷ್ಠಿರನ ಕೋರಿಕೆಯ ಮೇರೆಗೆ ಮಾರ್ಕಂಡೇಯ ಋಷಿಯು ಅವನಿಗೆ ಕ್ಷತ್ರಿಯರ ಹಿರಿಮೆಯ ಸಂದರ್ಭದಲ್ಲಿ ವೃಷದರ್ಭ ಹಾಗೂ ಸೇದುಕ ರಾಜರ ಕಥೆಗಳನ್ನು ಹೇಳಿದನು. ಅವುಗಳನ್ನೇ ವೈಶಂಪಾಯನ ಜನಮೇಜಯ ರಾಜನಿಗೆ ಹೇಳುತ್ತಲಿದ್ದಾನೆ.

ವೃಷದರ್ಭ ಹಾಗೂ ಸೇದುಕ ರಾಜರುಗಳು ನೀತಿಮೌಲ್ಯಗಳನ್ನು ಪಾಲಿಸುವವರಾಗಿದ್ದರು. ಅವರು ಅಸ್ತ್ರವಿದ್ಯೆಯಲ್ಲಿ ನುರಿತವರಾಗಿದ್ದರು. ವೃಷದರ್ಭನು ತನ್ನ ಚಿಕ್ಕಂದಿನಿಂದಲೇ ಒಂದು ವ್ರತವನ್ನು ಪಾಲಿಸುತ್ತ ಬಂದಿದ್ದನು. ಅವನು ಯಾರಿಗೂ ಅದನ್ನು ಕುರಿತು ಹೇಳಿರಲಿಲ್ಲ. ಹೀಗಾಗಿ ಅದು ಗುಟ್ಟಾಗಿ ಉಳಿದಿತ್ತು. ಅವನು ಬ್ರಾಹ್ಮಣರಿಗೆ ಬರಿ ಬೆಳ್ಳಿ, ಹೊನ್ನುಗಳನ್ನಷ್ಟೇ ಕೊಡುತ್ತಿದ್ದನು ; ಇನ್ನೇನನ್ನೂ ಇಲ್ಲ. ಸೇದುಕನಿಗೆ ಈ ಸಂಗತಿ ತಿಳಿದಿತ್ತು. ಒಂದು ಸಲ ಬ್ರಾಹ್ಮಣನೊಬ್ಬನು ಗುರುದಕ್ಷಿಣೆಯನ್ನು ಪಡೆಯಲೆಂದು ಸೇದುಕ ದೊರೆಯ ಬಳಿ ಹೋದನು. ಅವನು ದೊರೆಯನ್ನು ಹರಸಿ ತನಗೆ ಗುರುದಕ್ಷಿಣೆಯೆಂದು ಒಂದು ಸಾವಿರ ಕುದುರೆಗಳನ್ನು ಕೊಡಬೇಕೆಂದು ಕೇಳಿದನು. ಸೇದುಕನು ಅವನಿಗೆ ಕುದುರೆಗಳನ್ನಂತೂ ಕೊಡಲೇ ಇಲ್ಲ ; ಅಲ್ಲದೆ ಬ್ರಾಹ್ಮಣನನ್ನು ವೃಷದರ್ಭನಲ್ಲಿಗೆ (ಅವನ ವ್ರತ ಗೊತ್ತಿದ್ದೂ) ಬೇಕೆಂದೇ ಕಳುಹಿಸಿಕೊಟ್ಟನು. ಬ್ರಾಹ್ಮಣನು ಆತನ ಬಳಿಗೆ ಹೋಗಿ ಒಂದು ಸಾವಿರ ಕುದುರೆಗಳಿಗಾಗಿ ಕೇಳಿದನು. ಅವನ ಬೇಡಿಕೆಯನ್ನು ಕೇಳಿದ ವೃಷದರ್ಭ ಆ

ಬ್ರಾಹ್ಮಣನನ್ನು ಚಾಟಿಯಿಂದ ಹೊಡೆಯಲು ಆರಂಭಿಸಿದನು. ಆಗ ಬ್ರಾಹ್ಮಣನು, 'ನಿರಪ ರಾಧಿಯಾದ ನನ್ನನ್ನು ಹೀಗೆ ಸುಮ್ಮನೆ ಹೊಡೆಯುವುದೇಕೆ ?' ಎಂದನು.

ಏವಮುಕ್ತ್ವಾ ತಂ ಶಪಂತಂ ರಾಜಾಽಽಹ ।
ವಿಪ್ರ ಕಿಂ ನ ದದಾತಿ ತುಭ್ಯಮುತಾಹೋಸ್ವಿದ್ ಬ್ರಾಹ್ಮಣ್ಯಮೇತತ್ ॥ ೧೦ ॥*

ಹೀಗೆಂದು ಆ ಬ್ರಾಹ್ಮಣ ರಾಜನನ್ನು ಶಪಿಸುವುದರಲ್ಲಿದ್ದನು. ಆಗ ವೃಷದರ್ಭನು, 'ನಿನ್ನಂತಹ ಬ್ರಾಹ್ಮಣನು ತನಗೆ ದಾನವನ್ನು ನೀಡದವನನ್ನು ಶಪಿಸುವುದು ಸರಿಯೆ ?' ಎಂದನು.

ಸೇದುಕರಾಜನು ತನ್ನನ್ನು ಆತನ ಬಳಿಗೆ ಕಳುಹಿಸಿದನೆಂದು ಬ್ರಾಹ್ಮಣನು ವೃಷದರ್ಭನಿಗೆ ಹೇಳಿದನು. ಅದನ್ನು ಕೇಳಿ ವೃಷದರ್ಭನು ಆತನಿಗೆ ತನ್ನ ಒಂದು ದಿನದ ಗಳಿಕೆಯನ್ನು ಸಲ್ಲಿಸಿದನು. ಅದು ಒಂದು ಸಾವಿರ ಕುದುರೆಗಳ ಬೆಲೆಗಿಂತ ಹೆಚ್ಚಿತ್ತು.

+ ಪ್ರತ್ಯಕ್ಷವಾಗಿ ಶಾಪವನ್ನಿತ್ತಿಲ್ಲ, ಶಪಿಸಲು ಉದ್ಯುಕ್ತವಾದ ಉಲ್ಲೇಖ ಮಾತ್ರವಿದೆ.

## ೬೭. ಕೌಶಿಕ > (ಹೆಣ್ಣು) ಬೆಳ್ಳಕ್ಕಿ ವನ/೨೦೬

ಮಾರ್ಕಂಡೇಯನು ಯುಧಿಷ್ಠಿರನಿಗೆ ಪತಿವ್ರತೆಯ ಹಿರಿಮೆಯನ್ನು ಕುರಿತು ಹೇಳುತ್ತಲಿದ್ದಾನೆ. ಮಡದಿಯು ತನ್ನ ಗಂಡನ ಸೇವಯನ್ನು ಕೈಕೊಂಡು ಅದರ ಮೂಲಕ ಸ್ವರ್ಗವನ್ನು ಗೆದ್ದುಕೊಳ್ಳಲು ಸಾಧ್ಯ. ಅದಕ್ಕಾಗಿ ಅವಳು ಯಜ್ಞಕರ್ಮ, ಶ್ರಾದ್ಧ, ಉಪವಾಸ ಮೊದಲಾದವುಗಳನ್ನು ಕೈಕೊಳ್ಳಬೇಕಿಲ್ಲ. ಕೌಶಿಕ ಬ್ರಾಹ್ಮಣನು ಭಿಕ್ಷೆ ಕೇಳಲು ಒಬ್ಬ ಪತಿವ್ರತೆಯ ಬಳಿಗೆ ಹೋಗಿದ್ದನು. ಆಗ ಅವಳು ಅವನಿಗೆ ಪತಿಯ ಸೇವೆಯ ಮರ್ಮವನ್ನು ತಿಳಿಸಿಹೇಳಿದಳು. ಅವಳನ್ನು ಕಾಣುವ ಮೊದಲು ನಡೆದುಹೋದ ಒಂದು ಚಿಕ್ಕ ಘಟನೆಯನ್ನು ಇಲ್ಲಿ ಕೊಡಲಾಗಿದೆ.

ಕೌಶಿಕನು ಒಬ್ಬ ವೇದಾಧ್ಯಯನಸಂಪನ್ನನೂ ತಪೋನಿಧಿಯೂ ಧರ್ಮಪರಾಯಣನೂ ಆದ ಮುನಿಯಾಗಿದ್ದನು. ಬ್ರಾಹ್ಮಣರೆಲ್ಲರೂ ಅವನನ್ನು ಶ್ರೇಷ್ಠನೆಂದು ತಿಳಿಯುತ್ತಿದ್ದರು. ಒಂದು ಸಲ ಅವನು ಒಂದು ಮರದಡಿಯಲ್ಲಿ ವೇದಾಧ್ಯಯನಕ್ಕಾಗಿ ಕುಳಿತಿದ್ದನು. ಆಗ ಮರದ ಮೇಲೆ ಕುಳಿತಿದ್ದ ಬೆಳ್ಳಕ್ಕಿಯ ಮಲ ಅವನ ಮೈಮೇಲೆ ಬಿದ್ದಿತು.

ತಾಮವೇಕ್ಷ್ಯ ತತಃ ಕ್ರುದ್ಧಃ ಸಮಪಧ್ಯಾಯತ ದ್ವಿಜಃ ।
ಭೃಶಂ ಕ್ರೋಧಾಭಿಭೂತೇನ ಬಲಾಕಾ ಸಾ ನಿರೀಕ್ಷಿತಾ ॥ ೪ ॥
ಅಪಧ್ಯಾತಾ ಚ ವಿಪ್ರೇಣ ನ್ಯಪತದ್ ಧರಣೀತಲೇ ।
ಬಲಾಕಾಂ ಪತಿತಾಂ ದೃಷ್ಟ್ವಾ ಗತಸತ್ತ್ವಾಮಚೇತನಾಮ್ ॥ ೫ ॥

---

* ನೀಲಕಂಠ ಟೀಕೆ : ಶಾಪಂತಂ ಶಾಪಂ ದಿತ್ಸಂತಮ್ । ಹೇ ವಿಪ್ರ ಯೋ ನ ದದಾತಿ ಸ್ವೀಯಂ ಧನಂ ತುಭ್ಯಂ ತಸ್ಮೈ ವಾ ಏತತ್ ಶಾಪದಾನಮುಚಿತಮ್ । ಉತಾಹೋಸ್ವಿತ ಏತದ್ ಬ್ರಾಹ್ಮಣ್ಯಂ ಬ್ರಾಹ್ಮಣಯೋಗ್ಯಂ ಸ್ವೀಯಮಪಿ ದಿತ್ಸನ್ ನ ಶಾಪಯೋಗ್ಯಃ । ನಾಪಿ ಶಾಂತಿಧರ್ಮಾ ಬ್ರಾಹ್ಮಣಃ ಶಾಪಂ ದಾತುಮರ್ಹತಿ ।

ಬ್ರಾಹ್ಮಣ ಬಲುಸಂತಪ್ತನಾದನು. ಅವನು ಆ ಹಕ್ಕಿಯ ಮೇಲೆ ಕಣ್ಣುನೆಟ್ಟು ಅದಕ್ಕೆ ಕೇಡನ್ನು ಬಯಸಿದನು. ಅದರಿಂದಾದ ಪರಿಣಾಮ ಎಂದರೆ ಅ ಹಕ್ಕಿ ಅಸು ನೀಗಿ ನೆಲಕ್ಕುರುಳಿತು.

ಆ ಹೆಣ್ಣುಹಕ್ಕಿಯ ಅವಸ್ಥೆಯನ್ನು ಕಂಡು ಅವನು ಮಮ್ಮಲಮರುಗಿದನು. ಅವನು ಪಶ್ಚಾತ್ತಾಪ ಪಟ್ಟನು. ತನ್ನ ಕೋಪಕ್ಕೆ ಕಡಿವಾಣ ಹಾಕಲಾಗದುದಕ್ಕಾಗಿ ಕೊರಗಿದನು.

+ ಇಲ್ಲಿ 'ಶಾಪ' ಎಂಬ ಪದವನ್ನು ಬಳಸಲಾಗದಿದ್ದರೂ ಕೋಪವನ್ನು ತಡೆಯಲಾಗದೆ ಇರುವುದು, ಕೇಡನ್ನು ಬಯಸುತ್ತ ಹಕ್ಕಿಯನ್ನು ನೋಡುವುದು, ಅದರಿಂದಾಗಿ ಹಕ್ಕಿ ಸಾವನ್ನಪ್ಪುವುದು ಮೊದಲಾದ ಸಂಗತಿಗಳನ್ನು ಗಮನಿಸಿದರೆ ಖಂಡಿತವಾಗಿಯೂ ಇದೊಂದು ಶಾಪವೇ ಸರಿ.

ಬೇರೆ ಶಾಪಗಳಿಗಿಂತ ಇದು ಬೇರೆ ಬಗೆಯದೆನ್ನಬಹುದಷ್ಟೆ. ಶಾಪ/ವರಗಳು ಮಾತಿನಲ್ಲಿ ಬರಬೇಕಾದವುಗಳು. ಶಾಪ/ವರಗಳನ್ನು ಬಾಯಿಂದ ಉಚ್ಚರಿಸದೆ ಹೋದರೆ ಅವು ಪರಿಣಾಮಕರವಲ್ಲ. ಆದರೆ ಇಲ್ಲಿ ಮಾತ್ರ ಮಾತಿನ ಕ್ರಿಯೆಯನ್ನು ಕಣ್ಣುನೋಟವೇ ಮಾಡಿದಂತಿದೆ.

## ೬೮. ? > ಸೌದಾಸ ವನ/೨೦೮

ಮಾರ್ಕಂಡೇಯನು ಯುಧಿಷ್ಠಿರನಿಗೆ ಧರ್ಮದ ನಿಜವಾದ ಸ್ವರೂಪ ತಿಳಿಯಲೆಂದು ಕೌಶಿಕ ಬ್ರಾಹ್ಮಣನ ಕಥೆಯನ್ನು ಹೇಳುತ್ತಲಿದ್ದಾನೆ. ಕೇಡನ್ನು ಚಿಂತಿಸಿ ಅವನು ಕಣ್ಣು ಹಾಯಿಸಿದ್ದರ ಪರಿಣಾಮದಿಂದಾಗಿ ಆ ಬೆಳ್ಳಕ್ಕಿಗೆ ಸಾವು ಬಂದಿತು. ಒಬ್ಬ ಪತಿವ್ರತೆಯು ತನ್ನ ನಡತೆಯಿಂದ ಅವನಿಗೆ ಧರ್ಮದ ನಿಜವಾದ ಸ್ವರೂಪವನ್ನು ವಿಶದಪಡಿಸಿದಳು. ಅಲ್ಲದೆ ಮಾಂಸವನ್ನು ಮಾರುವ ಬೇಡನೂ ಕೂಡ ಹೇಗೆ ಧರ್ಮಪರಾಯಣನಾಗಿರಲು ಸಾಧ್ಯ ಎಂಬ ಸಂಗತಿಯನ್ನು ಮನಗಂಡನು.

> ಸೌದಾಸೇನ ತದಾ ರಾಜ್ಞಾ ಮಾನುಷಾ ಭಕ್ಷಿತಾ ದ್ವಿಜ ।
> ಶಾಪಾಭಿಭೂತೇನ ಭೃಶಮತ್ರ ಕಿಂ ಪ್ರತಿಭಾತಿ ಮೇ ॥

ಎಲೈ ಬ್ರಾಹ್ಮಣನೇ ! ಶಾಪಗ್ರಸ್ತನಾದ ಸೌದಾಸ ದೊರೆ (ರಾಕ್ಷಸ) ಎಣಿಕೆಯಿಲ್ಲದಷ್ಟು ಜನರನ್ನು ತಿಂದಿದ್ದನು. ಅದನ್ನು ಕುರಿತು ಹೆಚ್ಚೇನು ಹೇಳಲಿ ?

ಹಣೆಯಲ್ಲಿ ಬರೆದಂತೆ ಕರ್ಮಗಳನ್ನು ಮಾಡುವಲ್ಲಿ ತಪ್ಪೇನೂ ಇಲ್ಲ, ಅಧರ್ಮವೂ ಇಲ್ಲ. ಇಂಥ ಕರ್ಮಗಳು ಎಷ್ಟೇ ಕ್ರೂರವೂ, ಹೇಸಿಗೆ ಹುಟ್ಟಿಸುವಂಥವಿದ್ದರೂ ಆದೀತು. ಬೇಡನು ಕೌಶಿಕನಿಗೆ ಈ ಸಂಗತಿಯನ್ನು ಮನಗಾಣಿಸಿದನು.

**ಆಶ್ವಮೇಧಿಕ/೫೬**

ಗೌತಮ ಋಷಿಯ ಮಡದಿ ಅಹಲ್ಯೆಯು ಉತ್ತಂಕನೆಂಬ ಶಿಷ್ಯನಿಗೆ ಸೌದಾಸನ ರಾಣಿಯು ತನ್ನ ಕಿವಿಗಳಿಗೆ ತೊಟ್ಟ ದಿವ್ಯಕುಂಡಲಗಳನ್ನು ಗುರುದಕ್ಷಿಣೆಯಾಗಿ ತನಗೆ ತಂದೊಪ್ಪಿಸಲು ಹೇಳಿದಳು. ಗೌತಮನಿಗೆ ಈ ಸಂಗತಿ ತಿಳಿದುಬರುತ್ತಲೇ ಅವನು ಅವಳಿಗೆ ಹೀಗೆಂದನು—

.. ...ಸ ನ ತೇ ಸಮ್ಯಗಿದಂ ಕೃತಮ್ ।
ಶಪ್ತಃ ಸ ಪಾರ್ಥಿವೋ ನೂನಂ ಬ್ರಾಹ್ಮಣಂ ತಂ ವಧಿಷ್ಯತಿ ॥ ೩೩ ॥

'ನೀನು ಹೀಗೆ ಮಾಡಿದುದು ಸರಿಯಲ್ಲ. ಸೌದಾಸ ದೊರೆ ಶಾಪದಿಂದಾಗಿ ರಕ್ಕಸನಾಗಿದ್ದಾನೆ. ಆತ ಬ್ರಾಹ್ಮಣ(ಉತ್ತಂಕ)ನನ್ನು ಕೊಂದುಬಿಡುವನು.'

**ಆಶ್ವಮೇಧಿಕ/೫೮**

ಸೌದಾಸ ಹಾಗೂ ಉತ್ತಂಕರಲ್ಲಿ ನಡೆದ ಸಂಭಾಷಣೆಯ ಕಾಲಕ್ಕೆ ಸೌದಾಸನೇ ತನಗೆ ದೊರೆತ ಶಾಪವನ್ನು ಕುರಿತು ಹೀಗೆ ಹೇಳಿದ್ದಾನೆ—

ಸೋಽಹಂ ದ್ವಿಜೇಭ್ಯಃ ಪ್ರಣತೋ ವಿಪ್ರಾದ್ ದೋಷಮವಾಪ್ತವಾನ್ ॥ ೬ ॥

ನಾನು ಬ್ರಾಹ್ಮಣರೊಂದಿಗೆ ಯಾವಾಗಲೂ ನಮ್ರತೆಯಿಂದಲೇ ನಡೆದುಕೊಳ್ಳುತ್ತಿದ್ದೆ, ಇಷ್ಟಾಗಿಯೂ ಒಬ್ಬ ಬ್ರಾಹ್ಮಣನ ಶಾಪದಿಂದಾಗಿ ನನಗೀ ಅವಸ್ಥೆ ಬಂದೊದಗಿದೆ.

+ ಇಲ್ಲಿ ಶಾಪವನ್ನಿತ್ತವನ ಹೆಸರನ್ನು ಉಲ್ಲೇಖಿಸಲಾಗಿಲ್ಲ.

ಈ ಶಾಪವನ್ನಿತ್ತವನು ವಸಿಷ್ಠನೆಂದು ವಾಲ್ಮೀಕಿರಾಮಾಯಣದಲ್ಲಿ ಬಣ್ಣಿಸಲಾಗಿದೆ.

ನೋಡಿ : ವಾಲ್ಮೀಕಿರಾಮಾಯಣ : ಶಾಪ ಮತ್ತು ವರ—ಶಾಪ ಕ್ರ. ೫೭

## ೬೯. ಋಷಿ > ಬ್ರಾಹ್ಮಣ (ಬೇಡನ ಮರುಹುಟ್ಟು) **ವನ/೨೧೫**

ಮಾರ್ಕಂಡೇಯ ಮುನಿಯು ಯುಧಿಷ್ಠಿರನಿಗೆ ಬೇಡನ ಮರುಹುಟ್ಟಿನ ಸಂಗತಿಯನ್ನು ಹೇಳಿದನು. ಅದನ್ನೇ ವೈಶಂಪಾಯನ ಜನಮೇಜಯರಾಜನಿಗೆ ಹೇಳುತ್ತಲಿದ್ದಾನೆ.

ಬೇಡನು ಕೌಶಿಕನಿಗೆ ಅವನ ಕಣ್ಣುನೋಟದಿಂದ ಬೆಳಕ್ಕಿಗೆ ಬಂದ ಸಾವು, ಪತಿಸೇವೆ, ಪತ್ನಿಯ ಧರ್ಮ, ತಾಯಿ-ತಂದೆಗಳ ಸೇವೆ, ಮಗನ ಧರ್ಮ ಮುಂತಾದ ಸಂಗತಿಗಳನ್ನು ಹೇಳಿದನು. ಅವನು ಒಪ್ಪಿದನು. ಆದರೂ ಧರ್ಮನಿಷ್ಠನಾಗಿ ನಡೆದುಕೊಂಡ ಆ ಬೇಡರವನಿಗೆ ಇಷ್ಟೊಂದು ಕೀಳುಯೋನಿ ಬರಲು ಕಾರಣವೇನು ?—ಎಂಬ ಬಗೆಗೆ ಅವನಲ್ಲಿ ಕುತೂಹಲ ಇತ್ತು. ಅವನು ಬೇಡನನ್ನು ಈ ಬಗೆಗೆ ಕೇಳಿದನು. ಆಗ ಬೇಡ ತನ್ನ ಹಿಂದಿನ ಜನ್ಮದ ಕಥೆಯನ್ನು ಹೇಳಿದನು.

'ಹಿಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿದ್ದೆ. ವೇದಾಧ್ಯಯನವನ್ನು ಮಾಡಿದ್ದೆ. ನಾನು ಹುಟ್ಟಿದುದು ಒಂದು ಶ್ರೇಷ್ಠ ಕುಲದಲ್ಲಿ. ಒಬ್ಬ ನಿಪುಣನಾದ ಧನುರ್ಧರ ರಾಜನೊಂದಿಗೆ ನನಗೆ ಗೆಳೆತನವಿತ್ತು. ಅವನಿಂದ ನಾನೂ ಆ ವಿದ್ಯೆಯನ್ನು ಕಲಿತುಕೊಳ್ಳತೊಡಗಿದೆ. ಒಂದು ಸಲ ಅವನೊಂದಿಗೆ ಬೇಟೆಗೆಂದು ಹೋದೆ. ನನ್ನ ಒಂದು ಬಾಣ ತಪ್ಪಿ ಋಷಿಗೆ ತಗಲಿತು ಅವನು ಅಸು ನೀಗಿದನು. ಸಾಯುವ ಮೊದಲು ಅವನು ಆಕ್ರೋಶಗೈದನು, ನನ್ನ ತಪ್ಪು ನನ್ನ ಗಮನಕ್ಕೆ ಬರುತ್ತಲೇ ಋಷಿಯ ಬಳಿಗೋಡಿದೆ. ಅವನನ್ನು ಕ್ಷಮೆ ಕೇಳಿದೆ. ತಪ್ಪೊಪ್ಪಿಗೆಯನ್ನಿತ್ತೆ. ಅಕಾರಣವಾಗಿ ತನಗೆ ಬಂದೊಗಿದ ಪ್ರಾಣಸಂಕಟದಿಂದಾಗಿ ಆ ಋಷಿಗೆ ಎಲ್ಲಿಲ್ಲದ ಕೋಪ ಬಂದಿತ್ತು. ಹೀಗಾಗಿ ಅವನೆಂದನು—

ವ್ಯಾಧಸ್ತ್ವಂ ಭವಿತಾ ಕ್ರೂರ ಶೂದ್ರಯೋನಾವಿತಿ ದ್ವಿಜ ॥ ೩೧ ॥

'ಎಲೈ ನಿಷ್ಠುರನಾದ ಬ್ರಾಹ್ಮಣನೇ ! ನೀನು ಶೂದ್ರಯೋನಿಯಲ್ಲಿ ಹುಟ್ಟಿ ಬೇಡನಾಗಲಿರುವೆ.'

**ವನ/೨೧೬**

ಏವಂ ಶಪ್ತೋಽಹಮೃಷಿಣಾ ತದಾ ದ್ವಿಜವರೋತ್ತಮ ॥ ೧ ॥

'ಎಲೈ ವಿಪ್ರಶ್ರೇಷ್ಠನೇ ! ಈ ರೀತಿಯಾಗಿ ಆ ಋಷಿಯು ನನ್ನನ್ನು ಶಪಿಸಿದನು. ನಡೆದ ತಪ್ಪಿಗಾಗಿ ಅವನನ್ನು ಕ್ಷಮೆ ಕೋರಿದೆ, 'ದಯೆತೋರಿ' ಎಂದೆ. ಆಗ ಋಷಿ ಹೀಗೆಂದನು—

ನಾನ್ಯಥಾ ಭವಿತಾ ಶಾಪ ಏವಮೇತದಸಂಶಯಮ್ ।
ಆನೃಶಂಸ್ಯಾತ್ ತ್ವಹಂ ಕಿಂಚಿತ್ ಕರ್ತಾನುಗ್ರಹಮದ್ಯ ತೇ ॥ ೩ ॥
ಶೂದ್ರಯೋನ್ಯಾಂ ವರ್ತಮಾನೋ ಧರ್ಮಜ್ಞೋ ಹಿ ಭವಿಷ್ಯಸಿ ।
ಮಾತಾಪಿತ್ರೋಶ್ಚ ಶುಶ್ರೂಷಾಂ ಕರಿಷ್ಯಸಿ ನ ಸಂಶಯಃ ॥ ೪ ॥
ತಯಾ ಶುಶ್ರೂಷಯಾ ಸಿದ್ಧಿಂ ಮಹತ್ತ್ವಂ ಸಮವಾಪ್ಸ್ಯಸಿ ।
ಜಾತಿಸ್ಮರಶ್ಚ ಭವಿತಾ ಸ್ವರ್ಗಂ ಚೈವ ಗಮಿಷ್ಯಸಿ ॥ ೫ ॥
ಶಾಪಕ್ಷಯೇ ತು ನಿರ್ವೃತ್ತೇ ಭವಿತಾಸಿ ಪುನರ್ದ್ವಿಜಃ ।

'ಈ ಶಾಪದ ಪರಿಣಾಮಗಳನ್ನು ತಪ್ಪಿಸಲಾಗದು. ಶಾಪದಂತೆ ಎಲ್ಲವೂ ಚಾಚೂ ತಪ್ಪದೆ ನಡೆಯಲಿದೆ. ನಾನು ಸ್ವಭಾವದಿಂದ ಕ್ರೂರಿಯಲ್ಲವಾದ್ದರಿಂದ ನಿನ್ನ ಮೇಲೆ ಅನುಗ್ರಹವನ್ನು ತೋರುತ್ತಲಿದ್ದೇನೆ. ನೀನು ಶೂದ್ರಯೋನಿಯಲ್ಲಿ ಹುಟ್ಟಿಬಂದರೂ ಧಾರ್ಮಿಕ ಪ್ರವೃತ್ತಿಯವನೇ ಆಗಿರುವೆ. ತಾಯಿ-ತಂದೆಗಳನ್ನು ಸೇವಿಸಲಿರುವೆ ಎಂಬಲ್ಲಿ ನನಗೆ ಸಂದೇಹವಿಲ್ಲ. ಈ ಸೇವೆಯ ಫಲದಿಂದಾಗಿ ಸಿದ್ಧಿ ಹಾಗೂ ದೊಡ್ಡಸ್ತಿಕೆಗಳು ಪ್ರಾಪ್ತವಾಗಲಿವೆ. ಹಿಂದಿನ ಜನ್ಮದ ಘಟನೆಗಳು ನಿನ್ನ ನೆನಪಿನಲ್ಲಿ ಉಳಿದಾವು. ನಿನಗೆ ಸ್ವರ್ಗಪ್ರಾಪ್ತಿಯಾದೀತು. ಶಾಪಕ್ಷಯವಾಗುತ್ತಲೂ ನಿನಗೆ ಮತ್ತೆ ಬ್ರಾಹ್ಮಣತ್ವ ಲಭಿಸೀತು.' —ಇಷ್ಟು ನುಡಿದು ಆ ಋಷಿಯು ಪ್ರಾಣವನ್ನು ಬಿಟ್ಟನು.

ಏವಂ ಶಪ್ತಃ ಪುರಾ ತೇನ ಋಷಿಣಾಸ್ಮ್ಯುಗ್ರತೇಜಸಾ ॥ ೬ ॥

ಆ ಉಗ್ರವಾದ ತೇಜಸ್ಸಿನ ಋಷಿಯು ಹಿಂದಕ್ಕೆ ನನ್ನನ್ನು ಈ ಬಗ್ಗೆಯಾಗಿ ಶಪಿಸಿದ್ದನು.

+ ಯಾಚಿತವಾದ ಉಃಶಾಪ.

## ೭೦. ಸಹ(ನೆಂಬ) ಅಗ್ನಿ > (ಸಮಸ್ತ) ಮೀನುಗಳು ವನ/೨೨೨

ಮಾರ್ಕಂಡೇಯ ಮುನಿಯು ಯುಧಿಷ್ಠಿರನಿಗೆ ಅಗ್ನಿವಂಶವನ್ನು ಕುರಿತು ಹೇಳಿದನು. ಅದನ್ನೇ ವೈಶಂಪಾಯನ ಜನಮೇಜಯರಾಜನಿಗೆ ಹೇಳುತ್ತಲಿದ್ದಾನೆ—

ಭರತ ಎನ್ನುವವನು ಅದ್ಭುತನೆಂಬ ಅಗ್ನಿಯ ಮಗನು. ಅವನು ಸತ್ತ ಪ್ರಾಣಿಗಳನ್ನು ಸುಡುತ್ತಾನೆ. ಅವನು ಯಾವಾಗಲೂ ಅಗ್ನಿಷ್ಟೋಮವೆಂಬ ಯಜ್ಞದಲ್ಲಿ ವಾಸವಾಗಿರುತ್ತಾನೆ. ಹೀಗಾಗಿ ಅವನನ್ನು 'ನಿಯತ' ಎಂದೂ ಕರೆಯಲಾಗುತ್ತದೆ. ಸಹನೆಂಬ ಅಗ್ನಿಯು ಬಲುಸಾಮರ್ಥ್ಯವುಳ್ಳವನು. ಒಂದು ಸಲ ದೇವತೆಗಳು ಅವನನ್ನು ಹುಡುಕ

ತೊಡಗುತ್ತಲೇ ಅವನು ಕಡಲಲ್ಲಿ ಅಡಗಿ ಕುಳಿತನು, ಅವರು ಅಲ್ಲಿಯೂ ಬೆನ್ನಟ್ಟಿ ಅವನನ್ನು ಕಂಡುಹಿಡಿದರು. ಆಗ ಸಹಸು ಅಥರ್ವನೆಂಬ ಅಗ್ನಿಗೆ ಅವರ ಹವಿರ್ಭಾಗ ವನ್ನು ತಂದೊಪ್ಪಿಸುವಂತೆ ಹೇಳಿದನು. ಅಲ್ಲದೆ ಅವನನ್ನೇ ಅಗ್ನಿಪದದ ಮೇಲೆ ಕುಳ್ಳಿರಿಸಿ ಅಂಗೀಕರಿಸಲಾದ ಕಾರ್ಯವನ್ನು ಮಾಡಲು ಹೇಳಿದನು. ಆಮೇಲೆ ಅವನು ಅಲ್ಲಿಂದ ಬೇರೆಡೆಗೆ ಹೊರಟುಹೋದನು. ಮೀನುಗಳು ಮಾತ್ರ ಅಥರ್ವನಿಗೆ ಆತನ ಗೊತ್ತು ಗುರಿಗಳನ್ನು ತಿಳಿಸಿದವು. ಹೀಗಾಗಿ,

> ಮತ್ಸ್ಯಾಸ್ತಸ್ಯ ಸಮಾಚಖ್ಯುಃ ಕ್ರುದ್ಧಸ್ತಾನಗ್ನಿರಬ್ರವೀತ್ ।
> ಭಕ್ಷ್ಯಾ ವೈ ವಿವಿಧೈರ್ಭಾವೈರ್ಭವಿಷ್ಯಥ ಶರೀರಿಣಾಮ್ ॥ ೧೦ ॥

ಹೀಗಾಗಿ ಸಹಸು ಸಿಟ್ಟಿಗೆದ್ದು ಆ ಮೀನುಗಳಿಗೆ, 'ನೀವು ಬಗೆಬಗೆಯ ಪ್ರಾಣಿಗಳಿಗೆ ಬೇಟೆಗಳಾಗುವಿರಿ' ಎಂದು ಶಾಪವನ್ನು ನೀಡಿದನು.

## ೭೧. ದುರ್ವಾಸ > ದುರ್ಯೋಧನ ವನ/೨೬೨

ದುರ್ಯೋಧನನು ತನ್ನಲ್ಲಿಗೆ ಅತಿಥಿಯಾಗಿ ಬಂದ ದುರ್ವಾಸ ಋಷಿಯನ್ನು ಹೇಗೆ ಪ್ರಸನ್ನ ಗೊಳಿಸಿದನೆಂಬುದನ್ನು ಕುರಿತು ವೈಶಂಪಾಯನ ಜನಮೇಜಯನ ರಾಜನಿಗೆ ಹೇಳುತ್ತ ಲಿದ್ದಾನೆ.

ಪಾಂಡವರು ವನವಾಸದ ಕಾಲದಲ್ಲಿ ಹೇಗೆ ಹೆಚ್ಚು ಹೆಚ್ಚಿನ ಬವಣೆಗೀಡಾಗಲು ಸಾಧ್ಯ? —ಎಂಬುದನ್ನು ಕುರಿತು ದುರ್ಯೋಧನ ಯೋಚನೆಯಲ್ಲಿದ್ದನು. ಅದೇ ಹೊತ್ತಿಗೆ ದುರ್ವಾಸ ಋಷಿ ತನ್ನ ಸಾವಿರ ಶಿಷ್ಯನೊಡನೆ ಅತಿಥಿಯಾಗಿ ಅಲ್ಲಿಗೆ ಬಂದನು. ದುರ್ವಾಸನ ಮುಂಗೋಪವನ್ನಂತೂ ಎಲ್ಲರೂ ಬಲ್ಲವರೇ. ಹೀಗಾಗಿ ದುರ್ಯೋಧನನು ಅವನನ್ನು ಸರಿಯಾಗಿ ಸತ್ಕರಿಸಿ ಒಬ್ಬ ತತ್ಪರನಾದ ಸೈನಿಕನಂತೆ ಬಲು ಎಚ್ಚರದಿಂದ ಅವನನ್ನು ಸೇವಿಸಿ ದನು. ಋಷಿ ಹೆಚ್ಚು ಕಾಲ ಅಲ್ಲಿದ್ದರೂ ಅವನತ್ತ ಅಲಕ್ಷ್ಯವಾಗದಂತೆ ನೋಡಿಕೊಂಡನು. ಏಕೆಂದರೆ—

> ತಂ ಚ ಪರ್ಯಚರದ್ ರಾಜಾ ದಿವಾರಾತ್ರಮತಂದ್ರಿತಃ ॥ ೧೦ ॥
> ದುರ್ಯೋಧನೋ ಮಹಾರಾಜ ಶಾಪಾತ್ ತಸ್ಯ ವಿಶಂಕಿತಃ ॥ ೧೧ ॥

ದುರ್ಯೋಧನ ರಾಜ ಆತನ ಶಾಪಕ್ಕೆ ಹೆದರುತ್ತಿದ್ದ ಕಾರಣ ಅವನನ್ನು ಹಗಲಿರುಳು ಎನ್ನದೆ ಸೇವೆಮಾಡಿದನು.

+ ಪ್ರತ್ಯಕ್ಷದಲ್ಲಿ ಶಾಪವನ್ನೀಯಲಾಗಿಲ್ಲ.

## ೭೨. ಕುಬೇರ > ರಾವಣ ವನ/೨೭೫

ಯುಧಿಷ್ಠಿರನು ಮಾರ್ಕಂಡೇಯ ಮುನಿಯನ್ನು 'ನನ್ನಂತಹ ದುರ್ದೈವಿಯನ್ನು ಇನ್ನೆಲ್ಲಾದರೂ ಈ ಮೊದಲು ಕಂಡಿರುವಿರಾ?' ಎಂದು ಕೇಳಿದನು. ಆ ಮುನಿಯು ಆಗ ಅವನಿಗೆ ರಾಮನ ಉಪಾಖ್ಯಾನವನ್ನು ಹೇಳಿದನು. ಅದನ್ನೀಗ ವೈಶಂಪಾಯನ ಜನಮೇಜಯ ರಾಜನಿಗೆ ಹೇಳುತ್ತಲಿದ್ದಾನೆ.

ರಾಕ್ಷಸಸ್ತು ವರಂ ಲಬ್ಧ್ವಾ ದಶಗ್ರೀವೋ ವಿಶಾಂಪತೇ ॥ ೩೨ ॥

ಬ್ರಹ್ಮದೇವನಿಂದ ವರವನ್ನು ಪಡೆದ ಬಳಿಕ ರಾವಣ ಮನಬಂದಂತೆ ಮೆರೆಯತೊಡಗಿದನು ಮೊದಲಿನಿಂದಲೂ ಕುಬೇರನ ವೈಭವ ಈತನ ಕಣ್ಣುಕುಕ್ಕುತ್ತಿತ್ತು. ಆದ್ದರಿಂದ ಅವನೊಂದಿಗೆ ಕಾದು ಆತನನ್ನು ಸೋಲಿಸಿದನು. ಕುಬೇರ ತನ್ನ ರಾಜ್ಯವನ್ನು ಕಳೆದುಕೊಂಡನು. ಹೀಗಾಗಿ ಅವನು ಲಂಕೆಯನ್ನು ತೊರೆದು ಯಕ್ಷ, ರಾಕ್ಷಸರೊಡನೆ ಗಂಧಮಾದನ ಪರ್ವತವನ್ನು ಆಶ್ರಯಿಸಬೇಕಾಯಿತು. ರಾವಣನು ಕುಬೇರನ ಪುಷ್ಪಕ ವಿಮಾನವನ್ನೂ ವಶಪಡಿಸಿಕೊಂಡುಬಿಟ್ಟನು. ಅದರಿಂದಾಗಿ ಕುಬೇರ ತುಂಬ ಕೆರಳಿದನು. ಮತ್ತೆ—

ಶಶಾಪ ತಂ ವೈಶ್ರವಣೋ ನ ತ್ವಾಮೇತದ್ ವಹಿಷ್ಯತಿ ॥ ೩೪ ॥
ಯಸ್ತು ತ್ವಾಂ ಸಮರೇ ಹಂತಾ ತಮೇವೈತದ್ ವಹಿಷ್ಯತಿ ।
ಅವಮನ್ಯ ಗುರುಂ ಮಾಂ ಚ ಕ್ಷಿಪ್ರಂ ತ್ವಂ ನ ಭವಿಷ್ಯಸಿ ॥ ೩೫ ॥

ಅವನು ರಾವಣನನ್ನು ಇಂತೆಂದು ಶಪಿಸಿದನು : 'ಈ ವಿಮಾನ ನಿನ್ನ ಕೆಲಸಕ್ಕೆ ಬಾರದು. ಯುದ್ಧದಲ್ಲಿ ನಿನ್ನನ್ನು ಯಮಸದನಕ್ಕೆ ಕಳಿಸುವವನಿಗೆ ಮಾತ್ರ ಇದು ದಕ್ಕೀತು. ನಾನು ನಿನ್ನ ಹಿರಿಯಣ್ಣನಾದುದರಿಂದ ನೀನು ನನ್ನೊಂದಿಗೆ ಸರಿಯಾಗಿ ನಡೆದುಕೊಳ್ಳತಕ್ಕದ್ದು. ಆದರೆ ನೀನು ನನ್ನನ್ನು ಅವಮಾನಗೊಳಿಸಿದೆ. ಹೀಗಾಗಿ ಇಷ್ಟರಲ್ಲಿಯೇ ನಾಶಹೊಂದುವಿ.'

+ ವಾಲ್ಮೀಕಿರಾಮಾಯಣದಲ್ಲಿ ಈ ಶಾಪವಿಲ್ಲ.

## ೭೩. ಸ್ಥೂಲಶಿರ (ಬ್ರಾಹ್ಮಣ) > (ಗಂಧರ್ವ) ವಿಶ್ವಾವಸು

**ವನ/೨೭೯**

ಮಾರ್ಕಂಡೇಯ ಋಷಿಯು ಯುಧಿಷ್ಠಿರನಿಗೆ ಶ್ರೀರಾಮನ ವನವಾಸವನ್ನು ಕುರಿತು ಹೇಳಿದನು. ಅದನ್ನೇ ವೈಶಂಪಾಯನ ಜನಮೇಜಯರಾಜನಿಗೆ ಹೇಳುತ್ತಲಿದ್ದಾನೆ.

ರಾಮಲಕ್ಷ್ಮಣರು ಸೀತೆಯನ್ನು ಹುಡುಕಲೆಂದು ದಕ್ಷಿಣದ ದಂಡಕಾರಣ್ಯದಲ್ಲಿ ಹೊರಟಿದ್ದರು. ದಾರಿಯಲ್ಲಿ ಒಂದು ಮಹಾಕಾಯ ಕಬಂಧ(ಧಡ)ವು ಲಕ್ಷ್ಮಣನ ಕೈಗಳನ್ನು ಹಿಡಿದುಕೊಂಡುಬಿಟ್ಟಿತು, ಅಲ್ಲದೆ ಲಕ್ಷ್ಮಣ ಹೆದರಿ ಕಂಗಾಲಾದನು. ವಿಲಾಪಿಸತೊಡಗಿದನು. ರಾಮನು ಅವನಿಗೆ ಧೃತಿಗೆಡದಿರಲು ಹೇಳಹತ್ತಿದನು. ಆ ಕಬಂಧವು ಒಬ್ಬ ರಾಕ್ಷಸನದಾಗಿತ್ತು. ರಾಮನು ಅದರ ಬಲಗೈಯನ್ನು ಕತ್ತರಿಸಿ ಚೆಲ್ಲಿಬಿಟ್ಟನು. ಬೆನ್ನಿನ ಮೇಲೆ ಗುದ್ದಿ ಗುದ್ದಿ, ರಾಕ್ಷಸನು ಪ್ರಾಣ ಕಳೆದುಕೊಳ್ಳುವ ಹೊತ್ತು ಬಂದಿತು. ಆಗ ಒಬ್ಬ ದಿವ್ಯರೂಪದ ಪುರುಷ ಆ ಕಬಂಧದಿಂದ ಹೊರಬಂದನು. ರಾಮ, 'ನೀನ್ಯಾರು ? ನಿನ್ನ ಗುರುತು ಹೇಳು' ಎಂದನು. ಆಗ—

ತಸ್ಯಾಚಚಕ್ಷೇ ಗಂಧರ್ವೋ ವಿಶ್ವಾವಸುರಹಂ ನೃಪ ।
ಪ್ರಾಪ್ತೋ ಬ್ರಾಹ್ಮಣಶಾಪೇನ ಯೋನಿಂ ರಾಕ್ಷಸಸೇವಿತಾಮ್ ॥ ೪೨ ॥

'ನಾನು ವಿಶ್ವಾವಸುವೆಂಬ ಗಂಧರ್ವ. ಒಬ್ಬ ಬ್ರಾಹ್ಮಣನ ಶಾಪದಿಂದಾಗಿ ನನಗೆ ರಾಕ್ಷಸ ಯೋನಿ ಬಂದಿತು' ಎಂದನು.

+ ಇಲ್ಲಿ ಶಾಪದ ಕಾರಣಗಳನ್ನು ನೀಡಲಾಗಿಲ್ಲ. ವಾಲ್ಮೀಕಿರಾಮಾಯಣದಲ್ಲಿ ಸ್ಥೂಲಶಿರ ಋಷಿಯು ಕೆರಳಲು ಕಾರಣಗಳನ್ನು ಕೊಡಲಾಗಿದೆ. ಅದೆಂದರೆ, (ಕಬಂಧವು) ಋಷಿಗಳಿಗೆ ಬೆದರಿಕೆ ಹಾಕುವುದು, ಪೀಡಿಸುವುದಲ್ಲದೆ ಅವರ ಮೇಲೆ ಏರಿಹೋಗುವುದು. ಶಾಪಮುಕ್ತಿಗಾಗಿ (ಕಬಂಧಕ್ಕೆ) ಉಪಾಯವನ್ನು ಹೇಳಲಾಗಿದೆ.

ನೋಡಿ : ವಾಲ್ಮೀಕಿರಾಮಾಯಣ : ಶಾಪ ಮತ್ತು ವರ—ಶಾಪ ಕ್ರ. ೨೮.

## ೭೪. ನಲಕೂಬರ > ರಾವಣ

**ವನ/೨೮೦**

ಮಾರ್ಕಂಡೇಯ ಮುನಿಯು ಯುಧಿಷ್ಠಿರನಿಗೆ ಸೀತೆ ಲಂಕೆಯಲ್ಲಿದ್ದುದನ್ನು ಕುರಿತು ಹೇಳಿದನು. ಅದನ್ನು ವೈಶಂಪಾಯನ ಜನಮೇಜಯರಾಜನಿಗೆ ಹೇಳುತ್ತಲಿದ್ದಾನೆ.

ರಾವಣನು ಅಶೋಕವನದಲ್ಲಿರುವ ಸೀತೆಯನ್ನು ಕಾಯಲೆಂದು ರಕ್ಕಸಿಯರನ್ನು ನೇಮಿಸಿದ್ದನು. ಅವರೆಲ್ಲ ಸೀತೆಯೊಂದಿಗೆ ಬಲುಕಠೋರರಾಗಿ ನಡೆದುಕೊಳ್ಳುತ್ತಿದ್ದರು. ಅವಳನ್ನು ಬೆದರಿಸುತ್ತಿದ್ದರು. ರಾವಣನನ್ನು ಅನುನಯಿಸಲು ಅವಳಿಗೆ ಹೇಳುತ್ತಿದ್ದರು. ಆದರೆ ಸೀತೆಯು, 'ಶ್ರೀರಾಮನನ್ನುಳಿದು ಇನ್ನಾವ ಗಂಡನನ್ನೂ ನೇವೆಮಾಡಲಾರೆ' ಎಂದು ಹೇಳಿಬಿಟ್ಟಳು. ತ್ರಿಜಟೆ ಒಬ್ಬಳನ್ನುಳಿದು ಉಳಿದ ರಕ್ಕಸಿಯರೆಲ್ಲ ಈ ಸಂಗತಿಯನ್ನು ಹೇಳಲೆಂದು ರಾವಣನ ಬಳಿಗೆ ಹೋದರು.

ತ್ರಿಜಟೆಯು ಸೀತೆಯ ನಂಬುಗೆಯನ್ನು ಗಳಿಸಿದ್ದಳು. ಅವಳು ಸೀತೆಯನ್ನು ರಮಿಸಲೆಂದು, 'ಎಲೈ ಸೀತೆಯೇ! ನೀನು ರಾವಣನಿಗೆ ಹೆದರಬೇಕಿಲ್ಲ' ಎಂದಳು. ಕಾರಣ ಏನೆಂದರೆ—

> ನಲಕೂಬರಶಾಪೇನ ರಕ್ಷಿತಾ ಹ್ಯಸಿ ನಂದಿನಿ ॥ ೫೯ ॥
> ಶಪ್ತೋ ಹ್ಯೇಷ ಪುರಾ ಪಾಪೋ ವಧೂಂ ರಂಭಾಂ ಪರಾಮೃಶನ್ ।
> ನ ಶಕ್ನೋತ್ಯವಶಾಂ ನಾರೀಮುಪೈತುಮಜಿತೇಂದ್ರಿಯಃ ॥ ೬೦ ॥

'ಎಲೆ ನಂದಿನಿ! ನಲಕೂಬರನು ರಾವಣನಿಗಿತ್ತ ಶಾಪದಿಂದಾಗಿ ನೀನು ಯಾವಾಗಲೂ ಸುರಕ್ಷಿತಳಾಗಿ ಉಳಿಯುವೆ. ಹಿಂದಕ್ಕೆ ಇದೇ ರಾವಣನು ತನ್ನ ಸೊಸೆಯಾದ ರಂಭೆಯನ್ನು—ಕುಬೇರನ ಮಗ ನಲಕೂಬರನ ಮಡದಿ—ಅವಳ ಇಚ್ಛೆಯ ವಿರುದ್ಧ ಸ್ಪರ್ಶಿಸಿದ್ದರಿಂದ ಶಾಪಹೊಂದಿದನು. ತನ್ನ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಳ್ಳಲಾಗದ ಈ ರಾವಣ (ಈ ಶಾಪದಿಂದಾಗಿ) ತನಗೆ ವಶವಾಗದ ಹೆಣ್ಣಿನ ಹತ್ತಿರಕ್ಕೂ ಸುಳಿಯಲಾರ.'

**ವನ/೨೯೧**

ರಾವಣನನ್ನು ಕೊಂದ ಬಳಿಕ ರಾಮನ ಮನದಲ್ಲಿ ಸೀತೆಯ ಶುದ್ಧತೆಯ ಬಗೆಗೆ ಶಂಕೆ ತಲೆದೋರಿತು. ಆಗ ಅವಳು ಸತ್ಯಕ್ರಿಯೆಯನ್ನು ಕೈಕೊಂಡಳು. ಅದನ್ನು ಕಂಡು ಬ್ರಹ್ಮದೇವನು, 'ಹಿಂದಕ್ಕೆ ನಾನು ವರವನ್ನಿತ್ತಕಾರಣ ರಾವಣನಿಗೆ (ಸೀಮಿತವಾದ) ಅಮರತ್ವ ಬಂದಿತ್ತು. ಅವನು ಅದನ್ನು ತಪ್ಪಾಗಿ ಬಳಸುತ್ತಿದ್ದನು. ಆದರೂ ನಾನು ಕೆಲಕಾಲ ತೆಪ್ಪಗಿದ್ದೆ. ಸೀತೆಯನ್ನು ಅಪಹರಿಸಿ ಮಾತ್ರ ಅವನು ತನ್ನ ಕೈಯಿಂದಲೇ ತನ್ನ ಕಾಲಮೇಲೆ ಬಂಡೆಗಲ್ಲನ್ನು ಚೆಲ್ಲಿಕೊಂಡಿದ್ದಾನೆ.' ಏಕೆಂದರೆ—

ನಲಕೂಬರಶಾಪೇನ ರಕ್ಷಾ ಚಾಸ್ಯಾಃ ಕೃತಾ ಮಯಾ ॥ ೩೩ ॥

ನಲಕೂಬರನಿಂದ ರಾವಣನನ್ನು ಶಪಿಸಹಚ್ಚಿ ನಾನು ಸೀತೆಯನ್ನು ಕಾಪಾಡುವ ವ್ಯವಸ್ಥೆಯನ್ನೇ ಮಾಡಿದ್ದೇನೆ.

ಯದಿ ಹ್ಯಕಾಮಾಂ ಸೇವೇತ ಸ್ತ್ರಿಯಮನ್ಯಾಮಪಿ ಧ್ರುವಮ್ ।
ಶತಧಾಸ್ಯ ಫಲೇನ್ಮೂರ್ಧಾ ಇತ್ಯುಕ್ತಃ ಸೋಽಭವತ್ ಪುರಾ ॥ ೩೪ ॥
ನಾತ್ರ ಶಂಕಾ ತ್ವಯಾ ಕಾರ್ಯಾ ಪ್ರತೀಚ್ಛೇಮಾಂ ಮಹಾದ್ಯುತೇ ॥ ೩೫ ॥

ರಾವಣನು ಯಾವಳೇ ಹೆಣ್ಣನ್ನು ಅವಳಿಚ್ಛೆಗೆ ವಿರುದ್ಧವಾಗಿ ಬಲಾತ್ಕರಿಸಲು ಯತ್ನಿಸಿದರೆ ಅವನ ತಲೆ ಒಡೆದು ನೂರಾರು ತುಣುಕುಗಳಾಗಲಿ—ಎಂಬ ಶಾಪವನ್ನೀಯಲಾಗಿದೆ, ಆದುದರಿಂದ, ಎಲೈ ಶ್ರೀರಾಮನೇ! ನೀನು ಸೀತೆಯ ಬಗೆಗೆ ಇನಿತೂ ಸಂದೇಹವನ್ನು ತಳೆಯದಿರು. ಅವಳನ್ನು ಸ್ವೀಕರಿಸು.

+ ನೋಡಿ : ವಾಲ್ಮೀಕಿರಾಮಾಯಣ : ಶಾಪ ಮತ್ತು ವರ, ಶಾಪ ಕ್ರ. ೪೬.

## ೭೫. ಬ್ರಾಹ್ಮಣ > ಪೃಥಾ (ಕುಂತಿ) ವನ/೩೦೫

ವೈಶಂಪಾಯನ ಜನಮೇಜಯರಾಜನಿಗೆ ಸೂರ್ಯನು ಕರ್ಣನಿಗೆ ಹೇಳಿರದ ಒಂದು ಗುಟ್ಟಿನ ಸಂಗತಿಯನ್ನು ಹೇಳುತ್ತಲಿದ್ದಾನೆ.

ಕುಂತಿಯು ತಂದೆಯ ಅಪ್ಪಣೆಯ ಮೇರೆಗೆ ಮನೆಗೆ ಬಂದ ಬ್ರಾಹ್ಮಣನನ್ನು ಸರಿಯಾಗಿ ಸೇವೆಗೈಯುತ್ತಾಳೆ. ಅವಳು ಅವನ ಮನಬಂದಂತಹ ನಡತೆ, ಸಿಟ್ಟು-ಕೋಪಗಳನ್ನೆಲ್ಲ ಕಾಯ್ದಳು. ಆದರಿಂದ ಅವನು ಸಂತುಷ್ಟನಾಗಿ ಅವಳಿಗೊಂದು ವರವನ್ನಿತ್ತನು. ಆದರೆ ಅವಳು ನಯವಾಗಿ ಅದು ತನಗೆ ಬೇಡೆಂದಳು. ಆಗ ಅವನು ವರ ಬೇಡವಾದರೆ ತಾನು ಮಂತ್ರವನ್ನು ಹೇಳಿಕೊಡುತ್ತಿರುವುದಾಗಿಯೂ ಅವಳು ಅದನ್ನು ಸ್ವೀಕರಿಸಬೇಕೆಂದೂ ಹೇಳಿದನು. ಆಗ ಅವಳು—

ನ ಶಶಾಕ ದ್ವಿತೀಯಂ ಸಾ ಪ್ರತ್ಯಾಖ್ಯಾತುಮನಿಂದಿತಾ ।
ತಂ ವೈ ದ್ವಿಜಾತಿಪ್ರವರಂ ತದಾ ಶಾಪಭಯಾನ್ನೃಪ ॥ ೧೯ ॥

'ಎರಡನೆಯ ಸಲಕ್ಕೆ ಮಾತ್ರ ಅವಳು ಬ್ರಾಹ್ಮಣನ ಬಯಕೆಯನ್ನು ತಿರಸ್ಕರಿಸದಾದಳು. ಅವನ ಹೇಳಿಕೆಯನ್ನು ಮನ್ನಿಸದಿದ್ದರೆ ಅವನು ಶಾಪವನ್ನಿತ್ತಾನೆಂಬ ಹೆದರಿಕೆ ಅವಳಲ್ಲಿ ಹುಟ್ಟಿತು,'

+ ಪ್ರತ್ಯಕ್ಷದಲ್ಲಿ ಶಾಪವನ್ನೀಯಲಾಗಿಲ್ಲ. ಶಾಪವನ್ನೀಯಬಹುದಾದ ಸಾಧ್ಯತೆ ಹಾಗೂ ಹೆದರಿಕೆಗಳು ವ್ಯಕ್ತಗೊಂಡಿವೆಯಷ್ಟೆ.

## ೭೬. ಸೂರ್ಯ > ಕುಂತಿ, ಕುಂತಿಭೋಜ ಹಾಗೂ ಬ್ರಾಹ್ಮಣ (ದುರ್ವಾಸ) ವನ/೩೦೬

ಒಬ್ಬ ಬ್ರಾಹ್ಮಣನು (ದುರ್ವಾಸನು) ಕುಂತಿಗಿತ್ತ ಮಂತ್ರವನ್ನು ಕುರಿತು, ಅದರ ಸಾಮರ್ಥ್ಯವನ್ನು ಕುರಿತು ವೈಶಂಪಾಯನ ಜನಮೇಜಯರಾಜನಿಗೆ ಹೇಳುತ್ತಲಿದ್ದಾನೆ.

ಬ್ರಾಹ್ಮಣನು ತನಗಿತ್ತ ಮಂತ್ರದ ಪ್ರಭಾವವನ್ನು ಪರೀಕ್ಷಿಸಿ ನೋಡಬೇಕೆಂಬ ಕುತೂಹಲ ಒಂದು ಸಲ ಕುಂತಿಯಲ್ಲಿ ಹುಟ್ಟಿಕೊಂಡಿತು. ಆಗವಳು ಕುಮಾರಿಯಾಗಿದ್ದು ಋತುಸ್ನಾನವಾಗಿತ್ತು. ಅವಳು ಮೂಡಣದ ಸೂರ್ಯನತ್ತ ಕಣ್ಣುಹಾಯಿಸುತ್ತಲೆ ಅವನು ಅವಳಿಗೆ ಕವಚ-ಕುಂಡಲಗಳನ್ನು ತೊಟ್ಟ ಗಂಡಾಗಿ ಕಂಡನು. ಅವಳ ನೋಟ ದಿವ್ಯತ್ವವನ್ನು ಪಡೆಯಿತು. ಅವಳು ಸೂರ್ಯನನ್ನು ಆವಾಹಿಸಿದಳು. ಆ ರೀತಿಯಾಗಿ ಅವನು ಅವಳೆದುರು ಪ್ರತ್ಯಕ್ಷನಾದನು. ಅವಳಿಗೆ, 'ನಿನ್ನ ಮಂತ್ರಸಾಮರ್ಥ್ಯವು ನನ್ನನ್ನು ಇಲ್ಲಿಗೆ ಕರೆತಂದಿತು. ನಿನಗೆ ಹಿಡಿಸುವಂತೆ ಏನನ್ನು ಮಾಡಲಿ, ಹೇಳು' ಎಂದನು. ಅವಳಿಗೆ ಇಂಥ ಪರಿಣಾಮಗಳ ಅರಿವು ಇರಲಿಲ್ಲ. ಅವಳು ಸಹಜವೆಂದೇ ಆವಾಹನೆಯನ್ನು ಗೈದಿದ್ದಳು. ಹೀಗಾಗಿ ಅವನಿಗೆ ಹಿಂತಿರುಗಿ ಹೋಗೆಂದಳು. ಆದರೆ ಅವನೊಪ್ಪಲಿಲ್ಲ. ಹೀಗೆಂದನು—

ತವಾಭಿಸಂಧಿಃ ಸುಭಗೇ ಸೂರ್ಯಾತ್ ಪುತ್ರೋ ಭವೇದಿತಿ ।
ವೀರ್ಯೇಣಾಪ್ರತಿಮೋ ಲೋಕೇ ಕವಚೀ ಕುಂಡಲೀತಿ ಚ ॥ ೧೪ ॥
ಸಾ ತ್ವಮಾತ್ಮಪ್ರದಾನಂ ವೈ ಕುರುಷ್ವ ಗಜಗಾಮಿನೀ ।
ಉತ್ಪತ್ಸ್ಯತಿ ಹಿ ಪುತ್ರಸ್ತೇ ಯಥಾಸಂಕಲ್ಪಮಂಗನೇ ॥ ೧೫ ॥
ಅಥ ಗಚ್ಛಾಮ್ಯಹಂ ಭದ್ರೇ ತ್ವಯಾ ಸಂಗಮ್ಯ ಸುಸ್ಮಿತೇ ।
ಯದಿ ತ್ವಂ ವಚನಂ ನಾದ್ಯ ಕರಿಷ್ಯಸಿ ಮಮ ಪ್ರಿಯಮ್ ॥ ೧೬ ॥
ಶಪಿಷ್ಯೇ ತ್ವಾಮಹಂ ಕ್ರುದ್ಧೋ ಬ್ರಾಹ್ಮಣಂ ಪಿತರಂ ಚ ತೇ ।
ತ್ವತ್ಕೃತೇ ತಾನ್ ಪ್ರಧಕ್ಷ್ಯಾಮಿ ಸರ್ವಾನಪಿ ನ ಸಂಶಯಃ ॥ ೧೭ ॥

'ನಿನಗೆ ನನ್ನಿಂದ ಹುಟ್ಟಿನಿಂದಲೇ ಕವಚಕುಂಡಲಗಳನ್ನು ತೊಟ್ಟಿರುವ ಒಬ್ಬ ಪರಾಕ್ರಮಿಯಾದ ಮಗನನ್ನು ಪಡೆಯುವ ಆಸೆಯಾಗಿದೆ (ಎಂಬುದನ್ನು ಬಲ್ಲೆ). ಎಲೆ ಗಜಗಾಮಿನಿಯೇ ! ನನಗೆ ವಶಳಾಗು. ಅಂದರೆ ನಿನಗೆ ನಿನ್ನ ಮನದಂತೆ ಮಗ ಹುಟ್ಟು ವನು. ನಿನ್ನೊಂದಿಗೆ ಸಮಾಗಮವನ್ನು ಕೈಕೊಂಡೇ ಮರಳಿ ಹೋಗುವವನು ನಾನು. ಎಲೆ ಕಲ್ಯಾಣಿ ! ನೀನು ನನ್ನ ಮಾತನ್ನು ಪಾಲಿಸದಿದ್ದರೆ ನಾನು ಕೆರಳಿ ನಿನಗೆ ಮಂತ್ರವನ್ನಿತ್ತ ಬ್ರಾಹ್ಮಣ, ನಿನ್ನ ತಂದೆ ಇವರನ್ನೆಲ್ಲ ಸುಟ್ಟು ಬೂದಿಯನ್ನಾಗಿ ಮಾಡುವೆ.

ಪಿತರಂ ಚೈವ ತೇ ಮೂಢಂ ಯೋ ನ ವೇತ್ತಿ ತವಾನಯಮ್ ।
ತಸ್ಯ ಚ ಬ್ರಾಹ್ಮಣಸ್ಯಾದ್ಯ ಯೋಽಸೌ ಮಂತ್ರಮದಾತ್ ತವ ॥ ೧೮ ॥

ನಿನ್ನ ಅನ್ಯಾಯವನ್ನು ಅರಿಯದ ನಿನ್ನ ಮೂರ್ಖನಾದ ತಂದೆಯನ್ನು ಸುಟ್ಟು ಬಿಡುವೆನು. ಅದೇ ರೀತಿಯಾಗಿ ನಿನ್ನ ಶೀಲ, ಸನ್ನಡತೆಗಳನ್ನು ಲೆಕ್ಕಿಸದೆಯೇ ನಿನಗೆ ಈ ಮಂತ್ರವನ್ನಿತ್ತ ಆ ಬ್ರಾಹ್ಮಣನನ್ನೂ ಶಿಕ್ಷಿಸುವೆ. ನಾನು ಬರಿಗೈಯಿಂದ ಹಿಂತಿರುಗಿದೆ ನಾದರೆ ಇಂದ್ರ ಮೊದಲಾದ ದೇವತೆಗಳೆಲ್ಲರ ಎದುರು ನಗೆಗೀಡಾಗುವೆ.

ಕುಂತಿ ಸೂರ್ಯನೆದುರು ತನ್ನ ತಪ್ಪೊಪ್ಪಿದಳು. ಕೇವಲ ಮಂತ್ರಸಾಮರ್ಥ್ಯವನ್ನು ಕಂಡುಕೊಳ್ಳುವ ಕುತೂಹಲದಿಂದಾಗಿ ತಾನು ಹಾಗೆ ಮಾಡಿದ್ದೆಂದಳು. ಅವಳು ಎಷ್ಟೇ ಕ್ಷಮೆ ಕೋರಿದರೂ ಸೂರ್ಯ ಮಾತ್ರ ಸೊಪ್ಪುಹಾಕಲಿಲ್ಲ. ಬದಲು ತನ್ನೊಂದಿಗೆ

ಸಮಾಗಮಕ್ಕೆ ಒಪ್ಪಿಕೊಂಡು ಮನಮೊಪ್ಪಿದಂತಹ ಮಗನನ್ನು ಪಡೆದು ಬೇರೆ ಹೆಂಗಳೆಯರಿಗಿಂತ ವಿಶಿಷ್ಟತೆಯಿಂದ ಕೂಡಿದ ಬೇರೆತನವನ್ನು ಪಡೆಯೆಂದು ಉಪದೇಶವನ್ನಿತ್ತನು.

**ವನ/೩೦೭**

ಸೂರ್ಯನ ನಿರ್ಧಾರವನ್ನು ಮಾರ್ಪಡಿಸಲಾಗಲಿಲ್ಲ.

ಭೀತಾ ಶಾಪಾತ್ ತತೋ ರಾಜನ್ ದಧ್ಯೌ ದೀರ್ಘಮಥಾಂತರಮ್ ॥ ೨ ॥
ಅನಾಗಸಃ ಪಿತುಃ ಶಾಪೋ ಬ್ರಾಹ್ಮಣಸ್ಯ ತಥೈವ ಚ ।
ಮನ್ನಿಮಿತ್ತಃ ಕಥಂ ನ ಸ್ಯಾತ್ ಕ್ರುದ್ಧಾದಸ್ಮಾದ್ ವಿಭಾವಸೋಃ ॥ ೩ ॥

ಅವಳು ತುಂಬ ಹೆದರಿಕೊಂಡಳು. ಬಹಳ ಹೊತ್ತಿನವರೆಗೆ ಹೌಹಾರಿ ಯೋಚನೆಗೆ ಈಡಾದಳು. ಇನ್ನೇನು ಮಾಡಬೇಕೆಂಬ ಸಮಸ್ಯೆ ಅವಳೆದುರು ಧುತ್ತೆಂದು ನಿಂತಿತು. ನನ್ನ ನಡತೆಯಿಂದಾಗಿ ನಿರಪರಾಧಿಗಳಾದ ತಂದೆ, ಬ್ರಾಹ್ಮಣರು ಸೂರ್ಯನ ಶಾಪಕ್ಕೆ ತುತ್ತಾಗಬಾರದಲ್ಲ! —(ಎಂದುಕೊಂಡಳು).

ನಾ ಸ್ಮ ಶಾಪಪರಿತ್ರಸ್ತಾ ಬಹುಚಿಂತಯಂತೀ ಹೃದಾ ।
ಮೋಹೇನಾಭಿಪರೀತಾಂಗೀ ಸ್ಮಯಮಾನಾ ಪುನಃಪುನಃ ॥ ೬ ॥
ತಂ ದೇವಮಬ್ರವೀದ್ ಭೀತಾ ಬಂಧೂನಾಂ ರಾಜಸತ್ತಮ ॥ ೭ ॥

ಕುಂತಿ ಶಾಪಕ್ಕೆ ತುಂಬ ಹೆದರುತ್ತಿದ್ದಳು. ಹಲವು ಬಗೆಗಳಲ್ಲಿ ಯೋಚಿಸಿ ನೋಡಿದಳು. ಅವಳ ದೇಹ ಮೋಹಕ್ಕೊಳಪಟ್ಟಿತ್ತು. ಅವಳಿಗೆ ಒಂದೇ ಸಮನೆ ಸೋಜಿಗ ಎನ್ನಿಸುತ್ತಿತ್ತು. ಒಂದು ಬದಿಗೆ ಶಾಪದ ಹೆದರಿಕೆ, ಇನ್ನೊಂದು ಬದಿಗೆ ಬಳಗದವರ ಭಯ—ಅವಳು ಇಕ್ಕಟ್ಟಿನಲ್ಲಿ ಸಿಕ್ಕಿಹಾಕಿಕೊಂಡಿದ್ದಳು.

ಸೂರ್ಯ ಅವಳಿಗೆ ಆಶ್ವಾಸನೆಯನ್ನಿತ್ತನು.

ಸಾ ಮಯಾ ಸಹ ಸಂಗಮ್ಯ ಪುನಃ ಕನ್ಯಾ ಭವಿಷ್ಯಸಿ ।
ಪುತ್ರಶ್ಚ ತೇ ಮಹಾಬಾಹುರ್ಭವಿಷ್ಯತಿ ಮಹಾಯಶಾಃ ॥ ೧೬ ॥

ನನ್ನೊಂದಿಗೆ ಕೂಡಿಕೊಂಡ ತರುವಾಯದಲ್ಲೂ ನೀನು ಕನ್ಯೆಯಾಗಿಯೇ ಉಳಿಯುವೆ, ನಿನಗೆ ಬಲು ಯಶಸ್ವಿಯಾದ, ಮಹಾಬಾಹುವಾದ ಮಗ ಹುಟ್ಟಲಿದ್ದಾನೆ.

**ಆಶ್ರಮ/೩೦**

ಜನಮೇಜಯನು ವೈಶಂಪಾಯನನಿಗೆ, ಅವನು ಧೃತರಾಷ್ಟ್ರನನ್ನು ಕಾಣಲೆಂದು ಆಶ್ರಮಕ್ಕೆ ತೆರಳಿದಾಗ ಅಲ್ಲಿ ಪಾಂಡವರು ಎಂಥ ಬದುಕನ್ನು ಸಾಗಿಸುತ್ತಿದ್ದರೆಂಬುದನ್ನು ಅರಿಯಲೆಂದು ಕೇಳಿದನು. ವೈಶಂಪಾಯನ ಅವನಿಗೆ ಹೀಗೆಂದು ಹೇಳುತ್ತಲಿದ್ದಾನೆ.

ವ್ಯಾಸನು ಕುಂತಿಗೆ ತನ್ನ ಮನದಿಚ್ಛೆಯನ್ನು ಹೇಳೆಂದು ಕೇಳುತ್ತಾನೆ. ಆಗ ಅವಳು ಬಲುಗೌರವದಿಂದ ಆವನಿಗೆ, 'ನಾನು ತವರಿನಲ್ಲಿದ್ದಾಗ ದುರ್ವಾಸರು ನನ್ನ ಸೇವೆಯಿಂದ ಸಂತುಷ್ಟರಾಗಿ ತಾವು ನೀಡಲಿರುವ ವರವನ್ನು ನಾನು ಸ್ವೀಕರಿಸಬೇಕೆಂದರು' ಎಂದಳು.

ತತಃ ಶಾಪಭಯಾದ್ ವಿಪ್ರಮವೋಚಂ ಪುನರೇವ ತಮ್ ॥ ೫ ॥

ಹೀಗಾಗಿ, ಅವರು ಶಾಪವನ್ನೀಯುವರೆಂಬ ಹೆದರಿಕೆಯಿಂದಾಗಿ ನಾನು ಬ್ರಹ್ಮರ್ಷಿಗಳಿಗೆ 'ಹಾಗೆಯೇ ಆಗಲಿ' ಎಂದೆಂದು ಒಪ್ಪಿಕೊಂಡೆ.

ದುರ್ವಾಸನು ಕುಂತಿಗೆ ವರವನ್ನಿತ್ತು ಮಾಯವಾದನು. ಕುತೂಹಲದಿಂದಾಗಿ ಒಂದು ಸಲ ಸೂರ್ಯನನ್ನು ಆವಾಹಿಸಿದೆ. ಅವನು ನನ್ನೆದುರು ಬಂದು ನಿಂತನು. ನಾನು ಅವನಿಗೆ ಮರಳಿ ಹೋಗಲು ಹೇಳಿದೆ. ಆಗ—

ಸ ಮಾಮುವಾಚ ತಿಗ್ಮಾಂಶುರ್ವ್ಯರ್ಥಾಽಽಹ್ವಾನಂ ನ ಮೇ ಕ್ಷಮಮ್ ।
ಧಕ್ಷ್ಯಾಮಿ ತ್ವಾಂ ಚ ವಿಪ್ರಂ ಚ ಯೇನ ದತ್ತೋ ವರಸ್ತವ ॥ ೧೨ ॥
ತಮಹಂ ರಕ್ಷತೀ ವಿಪ್ರಂ ಶಾಪಾದನಪಕಾರಿಣಮ್ ।
ಪುತ್ರೋ ಮೇ ತ್ವತ್ಸಮೋ ದೇವ ಭವೇದಿತಿ ತತೋಽಬ್ರುವಮ್ ॥ ೧೩ ॥

ಚಂಡಕಿರಣನಾದ ಆ ಸೂರ್ಯ ನನಗೆ ಹೀಗೆಂದನು : 'ನನ್ನ ಆವಾಹನೆ (ಆದೆಂದಿಗೂ) ವ್ಯರ್ಥವಾಗದು. ನಿನಗೆ ಬೇಕಿದ್ದ ವರವನ್ನು ಕೇಳು (ನಾನು ನೀಡುವೆ). ಇಲ್ಲದಿದ್ದರೆ ನಿನ್ನನ್ನೂ, ನಿನಗೆ ವರವನ್ನೀವ ಆ ಬ್ರಾಹ್ಮಣನನ್ನೂ ಸುಟ್ಟುಹಾಕುವೆನು. ನಿಷ್ಪಾಪಿಯಾದ ಆ ಬ್ರಾಹ್ಮಣನಿಗೆ ಶಾಪ ತಟ್ಟದಿರಲೆಂದು ನಾನು ಸೂರ್ಯನಿಗೆ, 'ಎಲೈ ಭಗವಂತನೇ! ನನಗೆ ನಿನ್ನಂತಹ ತೇಜಸ್ವಿಯಾದ ಮಗ ಹುಟ್ಟಲಿ' ಎಂದೆ.

+ ಪ್ರತ್ಯಕ್ಷದಲ್ಲಿ ಈ ಶಾಪವನ್ನೀಯಲಾಗಿಲ್ಲ. ತನ್ನ ಕೋರಿಕೆಯನ್ನು ಮನ್ನಿಸದಿದ್ದರೆ ಕುಂತಿಯನ್ನು ಶಪಿಸುವುದಾಗಿ ಸೂರ್ಯ ಅವಳಿಗೆ ಬೆದರಿಕೆಯನ್ನೊಡ್ಡುತ್ತಾನೆ. ಇತ್ತ ಕುಂತಿಗೆ (ತನಗಿಂತಲೂ) ತನ್ನ ತಂದೆ ಹಾಗೂ ಬ್ರಾಹ್ಮಣನಿಗೆ ಶಾಪದ ಪರಿಣಾಮ ತಟ್ಟೀತೆಂಬ ಭಯ. ಸೂರ್ಯನೊಡ್ಡಿದ ಬೆದರಿಕೆ ಶರತ್ತಿನದು. ಕುಂತಿಯು ಆ ಶರತ್ತನ್ನು ಪಾಲಿಸಿದ್ದರಿಂದ ಶಾಪವನ್ನೀಯುವ ಹೊತ್ತು ಬರಲಿಲ್ಲ. ಇದು ವರವೇ, ಇಲ್ಲವೆ **ಮಂತ್ರವೇ ?**

+ ಶರತ್ತಿನ (ಅನುಚ್ಚಾರಿತವಾದ) ಶಾಪ.

## ೭೭. ಪರಶುರಾಮ > ಕರ್ಣ **ಉದ್ಯೋಗ/೪೯**

ಸಂಜಯನು ಪಾಂಡವರಿಗೆ ಧೃತರಾಷ್ಟ್ರನ ಸಂದೇಶವನ್ನು ಹೇಳಿ, ಅವರ ಹೇಳಿಕೆಯನ್ನು ಕೇಳಿಕೊಂಡು ಹಿಂತಿರುಗಿ ಬಂದನು. ನಡೆದ ಸಂಗತಿಗಳನ್ನೆಲ್ಲ ಹೇಳಿದನು. ಭೀಷ್ಮ, ದ್ರೋಣ, ಕೃಪರಿಗೆ ಯುದ್ಧದ ಭಯಂಕರವಾದ ಪರಿಣಾಮಗಳು ಕಂಡುಬರುತ್ತಿದ್ದುದರಿಂದ ಅವರು ದುರ್ಯೋಧನನಿಗೆ ಉಪದೇಶವನ್ನೀಯುತ್ತಲಿದ್ದರು. ಭೀಷ್ಮನು ಯುದ್ಧದಲ್ಲಿ ಕೌರವರೆಲ್ಲರೂ ನಾಶವಾಗಲಿರುವರೆಂದನು. ಆದಕ್ಕಾಗಿ ಪರಶುರಾಮನು ಕರ್ಣನಿಗಿತ್ತ ಶಾಪವನ್ನು ಉಲ್ಲೇಖಿಸುತ್ತಾನೆ—

ರಾಮೇಣ ಚೈವ ಶಪ್ತಸ್ಯ ಕರ್ಣಸ್ಯ ಭರತರ್ಷಭ ॥ ೨೭ ॥

**ಉದ್ಯೋಗ/೬೨**

ಪರಶುರಾಮನು ಕರ್ಣನಿಗಿತ್ತ ಶಾಪವನ್ನು ಕುರಿತಾಗಿ ಕರ್ಣನೇ ದುರ್ಯೋಧನನಿಗೆ ಹೇಳಿದನು. ಅದನ್ನೇ ವೈಶಂಪಾಯನ ಜನಮೇಜಯರಾಜನಿಗೆ ಹೇಳುತ್ತಲಿದ್ದಾನೆ. ಯುದ್ಧಕ್ಕಾಗಿ ತವಕಗೊಂಡ ದುರ್ಯೋಧನನನ್ನು ಸಂತೋಷಪಡಿಸಲೆಂದು ಕರ್ಣ ಹೀಗೆನ್ನುತ್ತಾನೆ—

ಮಿಥ್ಯಾ ಪ್ರತಿಜ್ಞಾಯ ಮಯಾ ಯದಸ್ತ್ರಂ ರಾಮಾತ್ ಕೃತಂ
ಬ್ರಹ್ಮಮಯಂ ಪುರಸ್ತಾತ್ ।
ವಿಜ್ಞಾಯ ತೇನಾಸ್ಮಿ ತದೈವಮುಕ್ತಸ್ತೇನಾಂತಕಾಲೇ ಪ್ರತಿಭಾಸ್ಯತೀತಿ ॥ ೨ ॥
ಮಹಾಪರಾಧೇ ಹ್ಯಪಿ ಯನ್ನ ತೇನ ಮಹರ್ಷಿಣಾಹಂ ಗುರುಣಾ ಚ ಶಪ್ತಃ ।
ಶಕ್ತಃ ಪ್ರದಗ್ಧುಂ ಹ್ಯಪಿ ತಿಗ್ಮತೇಜಾಃ ಸಸಾಗರಾಮಪ್ಯವನಿಂ ಮಹರ್ಷಿಃ ॥ ೩ ॥
ಪ್ರಸಾದಿತಂ ಹ್ಯಸ್ಯ ಮಯಾ ಮನೋಽಭೂಚ್ಛುಶ್ರೂಷಯಾ ಸ್ವೇನ ಚ
ಪೌರುಷೇಣ ।
ತದಸ್ತಿ ಚಾಸ್ತ್ರಂ ಮಮ ಸಾವಶೇಷಂ ತಸ್ಮಾತ್ ಸಮರ್ಥೋಽಸ್ಮಿ
ಮಮೈಷ ಭಾರಃ ॥ ೪ ॥

"ಬ್ರಾಹ್ಮಣನಿದ್ದುದಾಗಿ ಸುಳ್ಳು ಹೇಳಿ ಪರಶುರಾಮನಿಂದ ಬ್ರಹ್ಮಾಸ್ತ್ರವನ್ನು ಪಡೆದಾಯಿತು. ಆದರೆ ನನ್ನ ಮೋಸ ಗಮನಕ್ಕೆ ಬರುತ್ತಲೇ 'ಕೊನೆಯಲ್ಲಿ ನಿನಗೆ ಈ ಅಸ್ತ್ರಗಳು ನೆನಪಿಗೆ ಬಾರವು' ಎಂದನು. ಹಾಗೆ ನೋಡಿದರೆ ನಾನು ಮಾಡಿದ್ದುದು ಘೋರವಾದ ಅಪರಾಧವನ್ನೇ. ನೆಲ-ಕಡಲುಗಳನ್ನೆಲ್ಲ ಸುಟ್ಟುಹಾಕುವ ಸಾಮರ್ಥ್ಯ ತೇಜಸ್ವಿಯಾದ ಆ ಋಷಿಯ ಬಳಿಯಿತ್ತು. ಹೀಗಿದ್ದೂ ಆತ ನನ್ನನ್ನು ಶಪಿಸಲಿಲ್ಲ. ಇದು ನನ್ನ ಮೇಲೆ ಅವನು ತೋರಿದ ಹಿರಿದಾದ ಕೃಪೆಯೇ ಎನ್ನಬೇಕು. ನಾನು ನನ್ನ ಶೌರ್ಯ ಹಾಗೂ ಸೇವೆಗಳಿಂದ ಅವನನ್ನು ಸಂತುಷ್ಟಪಡಿಸಿದ್ದೆ. (ನನ್ನ ಕೊನೆಗಾಲ ತುಂಬ ದೂರದಲ್ಲಿದೆ.) ನನ್ನ ಬಳಿ ಆ ಅಸ್ತ್ರದ ಸಾಮರ್ಥ್ಯವಿರುವುದರಿಂದ ಯುದ್ಧದಲ್ಲಿ ಅರ್ಜುನನನ್ನು ಸಹಜವಾಗಿ ಸೋಲಿಸಬಲ್ಲೆ."

+ ಪರಶುರಾಮನ ಮಾತುಗಳು ಶಾಪವಲ್ಲವೆಂಬ ಭ್ರಮೆ ಕರ್ಣನದು. ಅದು ಶಾಪವಾಣಿಯೇ ಸರಿ. ಆತ ತನ್ನ ದೊಡ್ಡಸ್ತಿಕೆಯನ್ನು ಮೆರೆಯಲೆಂದು ಬಡಾಯಿಕೊಚ್ಚಿಕೊಳ್ಳುತ್ತಿದ್ದಾನಷ್ಟೆ.

**ಉದ್ಯೋಗ/೧೬೮**

ಭೀಷ್ಮನು ದುರ್ಯೋಧನನಿಗೆ ತನ್ನ ಸೇನೆಯಲ್ಲಿದ್ದ ರಥಿ, ಮಹಾರಥಿಗಳನ್ನು ಕುರಿತು ಹೇಳುವಾಗ ಕರ್ಣನ ಬಗೆಗೆ,

ಅಭಿಶಾಪಾಚ್ಚ ರಾಮಸ್ಯ ಬ್ರಾಹ್ಮಣಸ್ಯ ಚ ಭಾಷಣಾತ್ ॥ ೬ ॥

ಪರಶುರಾಮ ಹಾಗೂ ಬ್ರಾಹ್ಮಣನ ಶಾಪಗಳಿಂದಾಗಿ ಅವನು ಅರ್ಧ ರಥಿಯೇ ಆಗಿದ್ದಾನೆ—ಎಂದು ಖಡಾಖಂಡಿತವಾಗಿ ಹೇಳುತ್ತಾನೆ,

**ಕರ್ಣ/೪೨**

ಕರ್ಣನು ತನ್ನ ಸಾಮರ್ಥ್ಯವನ್ನು ಕುರಿತು ಶಲ್ಯನಿಗೆ ಹೇಳುವಾಗ—

ಸಂತಾಪಯಂತ್ಯಭ್ಯಧಿಕಂ ನು ರಾಮಾಚ್ಛಾಪೋಽದ್ಯ ಮಾಂ
ಬ್ರಾಹ್ಮಣಸತ್ತಮಾಚ್ಚ ॥ ೩ ॥

ಪರಶುರಾಮ ಹಾಗೂ ಒಬ್ಬ ಬ್ರಾಹ್ಮಣನಿತ್ತ ಶಾಪಗಳ ಬಗೆಗೆ ಆತ ಹೇಳುತ್ತಾನೆ.

ಶ್ರೀಕೃಷ್ಣ ಹಾಗೂ ಅರ್ಜುನರನ್ನು ಸೋಲಿಸುವ ಸಾಮರ್ಥ್ಯ ತನ್ನ ಮೈಯಲ್ಲಿದ್ದು ಕೂಡ ಆ ಶಾಪಗಳು ತನ್ನನ್ನು ಪೀಡಿಸುತ್ತಿವೆ—ಎಂಬುದನ್ನು ಒಪ್ಪಿಕೊಳ್ಳುತ್ತಾನೆ.

ಪರಶುರಾಮನು ತನಗಿತ್ತ ಶಾಪವನ್ನು ಕುರಿತು ಕರ್ಣ ಶಲ್ಯನಿಗೆ ಹೇಳುತ್ತಲಿದ್ದಾನೆ : 'ಹಿಂದಕ್ಕೆ ಅಸ್ತ್ರವನ್ನು ಪಡೆಯಲೆಂದು ಬ್ರಾಹ್ಮಣವೇಷ ತೊಟ್ಟು ಪರಶುರಾಮನ ಬಳಿ ಇದ್ದೆ. ಒಂದು ದಿನ ಗುರುವರ್ಯರು ನನ್ನ ತೊಡೆಯ ಮೇಲೆ ತಲೆಯಿಟ್ಟು ನಿದ್ದೆ ಹೋದರು. ಆಗ ಅರ್ಜುನನ ಹಿತೈಷಿಯಾದ ಇಂದ್ರ ಒಂದು ದುಂಬಿಯ ಕೈಲಿ ನನ್ನ ತೊಡೆಯನ್ನು ಕೊರೆಯಹಚ್ಚಿದನು. ಅದರಿಂದಾದ ಗಾಯದಿಂದ ನೆತ್ತರು ಸುರಿದು ಅದರ ಸ್ಪರ್ಶದಿಂದಾಗಿ ಪರಶುರಾಮ ಎಚ್ಚೆತ್ತನು. ಇಷ್ಟೊಂದು ಸಹನೆ ಕ್ಷತ್ರಿಯನಲ್ಲಲ್ಲದೆ ಬ್ರಾಹ್ಮಣನಲ್ಲಿರಲಾರದು. ಹೀಗಾಗಿ ಅವನು ನನ್ನ ಮೋಸವನ್ನು ಕಂಡುಹಿಡಿದನು. ಅವನು ನನ್ನನ್ನು ಕೇಳುತ್ತಲೇ ತಪ್ಪೊಪ್ಪಿಕೊಂಡೆ. ಪರಶುರಾಮ ತುಂಬ ಕೆರಳಿ ರೊಚ್ಚಿಗೆದ್ದು,

ಸ ಮಾಂ ನಿಶಮ್ಯಾಥ ಮಹಾತಪಸ್ವೀ ಸಂಶಪ್ತವಾನ್ ರೋಷಪರೀತಚೇತಾಃ ।
ಸೂತೋಪಧಾವಾಪ್ತಮಿದಂ ತವಾಸ್ತ್ರಂ ನ ಕರ್ಮಕಾಲೇ
ಪ್ರತಿಭಾಸ್ಯತಿ ತ್ವಾಮ್ ॥ ೮ ॥

ನನ್ನನ್ನು ಹೀಗೆ ಶಪಿಸಿದನು : 'ಎಲೈ ಸೂತನೇ ! ನೀನು ಮೋಸದಿಂದ ನನ್ನ ಬ್ರಹ್ಮಾಸ್ತ್ರ ವನ್ನು ತಡೆದಿರುವೆ. ಹೊತ್ತುಬಂದಾಗ ಮಾತ್ರ ಅದು ನಿನ್ನ ನೆನಪಿಗೆ ಬರಲಾರದು.'

ಅನ್ಯತ್ರ ತಸ್ಮಾತ್ ತವ ಮೃತ್ಯುಕಾಲಾದಬ್ರಾಹ್ಮಣೇ ಬ್ರಹ್ಮ ನ ಹಿ
ಧ್ರುವಂ ಸ್ಯಾತ್ ॥ ೯ ॥

ಈ ಅಸ್ತ್ರವು ನಿನ್ನ ಮರಣದ ಹೊತ್ತು ಬಿಟ್ಟು ಉಳಿದ ವೇಳೆಗೆ ಮಾತ್ರ ಉಪಯುಕ್ತ ಎನ್ನಿಸೀತು. ಏಕೆಂದರೆ ಬ್ರಾಹ್ಮಣರಲ್ಲದವರಲ್ಲಿ ಈ ಅಸ್ತ್ರವು ಎಂದಿಗೂ ಸ್ಥಿರಗೊಳ್ಳ ಲಾರದು.

+ ಯುದ್ಧದಲ್ಲಿ ಅರ್ಜುನನಿಗೇನೇ ಯಶಸ್ಸು ದೊರಕಲೆಂದು ಈ ಶಾಪವನ್ನು ಯೋಜಿಸಲಾಗಿದೆ.

**ಶಾಂತಿ/೫**

ಯುಧಿಷ್ಠಿರನು ನಾರದನಿಗೆ ಕರ್ಣನ ವಧೆಯ ಕಾರಣಗಳನ್ನು ಕೇಳುತ್ತಾನೆ. ಅವನು ಹೇಳುತ್ತಾನೆ. ಅವುಗಳಲ್ಲಿ ಇದಲ್ಲದೆ ಬ್ರಾಹ್ಮಣನ ಶಾಪಗಳ ಉಲ್ಲೇಖವೂ ಇದೆ.

ಬ್ರಾಹ್ಮಣಸ್ಯಾಭಿಶಾಪೇನ ರಾಮಸ್ಯ ಚ ಮಹಾತ್ಮನಃ ।
ಕುಂತ್ಯಾಶ್ಚ ವರದಾನೇನ ಮಾಯಯಾ ಚ ಶತಕ್ರತೋಃ ॥ ೧೧ ॥
ಭೀಷ್ಮಾವಮಾನಾತ್ ಸಂಖ್ಯಾಯಾಂ ರಥಸ್ಯಾರ್ಧಾನುಕೀರ್ತನಾತ್ ।
ಶಲ್ಯಾತ್ ತೇಜೋವಧಾಚ್ಚಾಪಿ ವಾಸುದೇವನಯೇನ ಚ ॥ ೧೨ ॥
ರುದ್ರಸ್ಯ ದೇವರಾಜಸ್ಯ ಯಮಸ್ಯ ವರುಣಸ್ಯ ಚ ।
ಕುಬೇರದ್ರೋಣಯೋಶ್ಚೈವ ಕೃಪಸ್ಯ ಚ ಮಹಾತ್ಮನಃ ॥ ೧೩ ॥

ಅಸ್ತ್ರಾಣಿ ದಿವ್ಯಾನ್ಯಾದಾಯ ಯುಧಿ ಗಾಂಡೀವಧನ್ವನಾ ।
ಹತೋ ವೈಕರ್ತನಃ ಕರ್ಣೋ ದಿವಾಕರಸಮದ್ಯುತಿಃ ॥ ೧೪ ॥
ಏವಂ ಶಪ್ತಸ್ತವ ಭ್ರಾತಾ ಬಹುಭಿಶ್ಚಾಪಿ ವಂಚಿತಃ ॥ ೧೫ ॥

'ಒಂದೆಡೆ, ಅವನಿಗೆ ಅಗ್ನಿಹೋತ್ರಿಯಾದ ಬ್ರಾಹ್ಮಣನಿಂದ ಹಾಗೂ ಪರಶುರಾಮ ನಿಂದ ಶಾಪಗಳು ಸಿಕ್ಕಿದ್ದು ಇನ್ನೊಂದೆಡೆ, ಅವನು ಕುಂತಿಗೆ ಪಾಂಡವರಲ್ಲಿಯ ನಾಲ್ವರನ್ನು ಕಾಪಾಡುವುದಾಗಿ ಮಾತು ಕೊಟ್ಟಿದ್ದನು. ಇಂದ್ರನು ಕಪಟತನದಿಂದ ಅವನ ಕವಚ-ಕುಂಡಲುಗಳನ್ನು ಕಸಿದುಕೊಂಡನು. ಅವನೊಬ್ಬ ಮಹಾರಥಿಯಾಗಿದ್ದರೂ ಭೀಷ್ಮ ಆತನನ್ನು ಅರ್ಧರಥಿ ಎಂದು ನಿರ್ಧರಿಸಿ ಅಪಮಾನಕ್ಕೀಡುಮಾಡಿದನು. ಶಲ್ಯನಂತೂ ಒಂದೇ ಸಮನೆ ಅವನನ್ನು ಹೀಯಾಳಿಸುತ್ತ ಕಳೆಗುಂದುವಂತೆ ಮಾಡಿದನು. ಅಲ್ಲದೆ ಶ್ರೀಕೃಷ್ಣನ ರಣನೀತಿ ಆತನಿಗೆ ಅನುಕೂಲದ್ದಾಗಿರಲಿಲ್ಲ. ಇವೆಲ್ಲ ಕಾರಣಗಳಿಂದಾಗಿ ಆತ ಸೋಲುಣ್ಣುವಂತಾಯಿತು. ಇದಕ್ಕೆ ಬದಲಾಗಿ ಅರ್ಜುನನು ರುದ್ರ, ಇಂದ್ರ, ಯಮ, ವರುಣ, ಕುಬೇರ, ದ್ರೋಣ ಹಾಗೂ ಕೃಪರಿಂದ ದಿವ್ಯಾಸ್ತ್ರಗಳನ್ನು ಪಡೆದಿದ್ದನು. ಹೀಗಾಗಿ ಕರ್ಣ ಸೂರ್ಯನಂತೆ ತೇಜಸ್ವಿಯಾಗಿಯೂ ಅರ್ಜುನ ಆತನನ್ನು ಕೊಲ್ಲಲು ಸಾಧ್ಯವಾಯಿತು. ಎಲೈ ಯುಧಿಷ್ಠಿರನೇ! ಕರ್ಣನಂತೂ ಶಾಪಿತನಾಗಿದ್ದನು. ಅಲ್ಲದೆ ಹಲವರು ಅವನನ್ನು ಮೋಸಗೊಳಿಸಿದರು. ಆದರೆ ಅವನು ಯುದ್ಧದಲ್ಲಿ ಮಡಿದನಾದ್ದರಿಂದ ಅವನನ್ನು ಕುರಿತು ಶೋಕಪಡಬೇಡ.'

## ೭೮. ನಿಮಿ > ವಸಿಷ್ಠ — ಉದ್ಯೋಗ/೧೦೮

ನೀಚವೂ, ದುಷ್ಟವೂ ಆದ ಕೃತ್ಯಗಳಲ್ಲಿ ಮೈಮರೆತ ಕುಮಾರ್ಗಿಯಾದ ದುರ್ಯೋಧನನನ್ನು ಅವನ ಬಂಧುಬಳಗದವರಾಗಲಿ, ವ್ಯಾಸನಾಗಲಿ ಸರಿದಾರಿಗೆ ತರಲಿಲ್ಲವೇಕೆ?— ಎಂದು ಜನಮೇಜಯರಾಜನು ವೈಶಂಪಾಯನನನ್ನು ಕೇಳಿದನು. ಆಗ ಅವನು ರಾಜನಿಗೆ ವ್ಯಾಸ, ಭೀಷ್ಮ, ನಾರದ ಮೊದಲಾದವರು ಮಾಡಿದ ಉಪದೇಶಗಳನ್ನು ಕುರಿತು ಹೇಳುತ್ತಾನೆ. ಈ ಸಂದರ್ಭದಲ್ಲಿ ನಾರದನು ವಿಶ್ವಾಮಿತ್ರನ ಶಿಷ್ಯನಾದ ಗಾಲವನ ಗುರುದಕ್ಷಿಣೆಗೆ ಸಂಬಂಧಿಸಿದ ಕಥೆಯನ್ನು ಸವಿಸ್ತರವಾಗಿ ಹೇಳಿದ್ದಾನೆ. ಗುರುದಕ್ಷಿಣೆಯನ್ನು ಕಲೆಹಾಕಲೆಂದು ಹೊರಟ ಗಾಲವನನ್ನು ಗರುಡನು ಹಲವು ಜನ, ಹಲವು ದಿಸೆಯ ರಾಜರುಗಳಲ್ಲಿಗೆ ಕರೆದೊಯ್ಯುತ್ತಾನೆ. ಮೂಡಣದ ಪಯಣದ ಬಣ್ಣನೆ ಹೀಗಿದೆ—

ಅತ್ರ ಪೂರ್ವಂ ವಶಿಷ್ಠಸ್ಯ ಪೌರಾಣಸ್ಯ ದ್ವಿಜರ್ಷಭ ।
ಸೂತಿಶ್ಚೈವ ಪ್ರತಿಷ್ಠಾ ಚ ನಿಧನಂ ಚ ಪ್ರಕಾಶತೇ ॥ ೧೩ ॥

'ಎಲೈ ವಿಪ್ರಶ್ರೇಷ್ಠನೇ! ಬಲು ಹಿಂದೆ ಪುರಾಣಮಹರ್ಷಿಯಾದ ವಸಿಷ್ಠ ಹುಟ್ಟಿದುದು ಇದೇ ದಿಕ್ಕಿನಲ್ಲಿ. ಅವನಿಗೆ (ಸಪ್ತರ್ಷಿಗಳಲ್ಲಿ ಸ್ಥಾನ ದೊರೆತು) ಪ್ರತಿಷ್ಠೆ ದೊರೆಯಿತು. (ನಿಮಿಯ ಶಾಪದಿಂದಾಗಿ) ಅವನಿಗೆ ಸಾವು ಬಂದಿತು.'

(ನಿಮಿ ದೊರೆಯು ವಸಿಷ್ಠನನ್ನು ಒಂದು ದೀರ್ಘವಾದ ಯಜ್ಞಸತ್ರದ ಋತ್ವಿಕರಣವನ್ನು ಕೈಕೊಳ್ಳಲು ಕರೆ ನೀಡಿದನು. ಆದರೆ ಅವನು ಅದೇ ಸಮಯದಲ್ಲಿ ಇಂದ್ರನ

ಯಾಗವನ್ನು ಮಾಡುವುದರಲ್ಲಿ ತೊಡಗಿದ್ದನು. ಹೀಗಾಗಿ ಅವನು ಕೆಲಕಾಲ ಕಾಯಲು ನಿಮಿಗೆ ಹೇಳಿದನು. ಆಗ ನಿಮಿಯು ಗೌತಮ ಮುನಿಯ ಕೈಯಿಂದ ಯಾಗವನ್ನು ಮಾಡಿಸಿದನು. ಅದರಿಂದಾಗಿ ವಸಿಷ್ಠ ತುಂಬ ಕುಪಿತನಾಗಿ ಬಂದನು. ಆ ಹೊತ್ತಿನಲ್ಲಿ ನಿಮಿಯು ನಿದ್ರೆಹೋಗಿದ್ದನು. ವಸಿಷ್ಠನ ಪಿತ್ತ ನೆತ್ತಿಗೇರಿತು. ಅವನು ನಿದ್ರೆಯಲ್ಲಿದ್ದ ನಿಮಿಗೆ, 'ನಿನ್ನ ದೇಹ ಅಚೇತನಗೊಳ್ಳಲಿ' ಎಂದು ಭಯಂಕರವಾದ ಶಾಪವನ್ನಿತ್ತನು. ನಿದ್ರೆತಿಳಿದೆದ್ದಬಳಿಕ ನಿಮಿಗೆ ವಸಿಷ್ಠನ ಶಾಪದ ಬಗೆಗೆ ತಿಳಿಯಿತು. ಅವನಿಗೂ ತಡೆಯ ಲಾಗದ ಸಿಟ್ಟುಬಂದಿತು. ಅವನು ವಸಿಷ್ಠನಿಗೆ, 'ನಿನ್ನ ದೇಹ ತಪ್ಪದೆ ಅಚೇತನವಾಗಲಿದೆ' ಎಂದು ಮರುಶಾಪವನ್ನು ನೀಡಿದನು. ಇಬ್ಬರೂ ಅಚೇತನರಾಗಿ ಬಿದ್ದುಬಿಟ್ಟರು.)
—ಈ ಕಥೆ ರಾಮಾಯಣದಲ್ಲಿದೆ.

**ನೋಡಿ :** ವಾಲ್ಮೀಕಿರಾಮಾಯಣ, ಶಾಪ ಮತ್ತು ವರ, ಉತ್ತರಕಾಂಡ ೫೫, ಶಾಪ ಕ್ರ. ೫೦-೫೧.

+ ಇದೊಂದು ಬರಿ ಉಲ್ಲೇಖ ಮಾತ್ರ. ವಸಿಷ್ಠನ ಸಾವಿಗೆ ಕಾರಣವಾದ ನಿಮಿಯ ಶಾಪದ ಖಚಿತವಾದ ಉಲ್ಲೇಖವಿಲ್ಲ.

## ೭೯. ಪರಶುರಾಮ > ಭೀಷ್ಮ ಉದ್ಯೋಗ/೧೭೯

ವೈಶಂಪಾಯನ ಜನಮೇಜಯರಾಜನಿಗೆ ಅಂಬೋಪಾಖ್ಯಾನವನ್ನು ಹೇಳುತ್ತಲಿದ್ದಾನೆ. ಭೀಷ್ಮನು ತನ್ನ ಮೇಲೆ ಹೇಗೆ ಅನ್ಯಾಯವನ್ನು ಮಾಡಿದನೆಂದು ಅಂಬೆಯು ಪರಶುರಾಮ ನಿಗೆ ಹೇಳಿದಳು. ಹೀಗಾಗಿ ಭೀಷ್ಮನನ್ನು ಕಾಳಗದಲ್ಲಿ ಕೊಲ್ಲೆಂದು ಅವನನ್ನು ಬೇಡಿ ಕೊಂಡಳು. ಪರಶುರಾಮನು ಭೀಷ್ಮನಿಗೆ ಅಂಬೆಯನ್ನು ಸ್ವೀಕರಿಸಲು ಹೇಳಿದನು. ಭೀಷ್ಮ ಖಡಾಖಂಡಿತವಾಗಿ ಅವಳನ್ನು ನಿರಾಕರಿಸಿಬಿಟ್ಟನು. ಬ್ರಾಹ್ಮಣನೊಬ್ಬ ಕ್ಷತ್ರಿಯನಂತೆ ಕೈಯಲ್ಲಿ ಶಸ್ತ್ರವನ್ನು ಹಿಡಿದು ಮೇಲೇರಿಬಂದರೆ ಅಂಥವನು ತನ್ನ ಗುರುವೆನ್ನಿಸಿಯೂ ಅವನೊಂದಿಗೆ ಕಾದುವುದರಲ್ಲಿ ಧರ್ಮಶಾಸ್ತ್ರದ ಅಡೆತಡೆಯೇನೂ ಇಲ್ಲವೆಂದು ಭೀಷ್ಮನಿಗೆ ಗೊತ್ತಿತ್ತು. ಹೀಗಾಗಿ ಅವನು ಪರಶುರಾಮನಿಗೆ ಪಂಥಾಹ್ವಾನವನ್ನಿತ್ತನು. ಭೀಷ್ಮ ಕಾಳಗಕ್ಕೆ ಮೊದಲು ಗುರು ಪರಶುರಾಮನ ಹರಕೆಯನ್ನು ಕೇಳಲು ಹೋದನು. ಆಗ ಅವನಿಗೆ ಹೀಗೆಂದನು—

> ಯೋತ್ಸ್ಯೇ ತ್ವಯಾ ರಣೇ ರಾಮ ಸದೃಶೇನಾಧಿಕೇನ ವಾ ।
> ಗುರುಣಾ ಧರ್ಮಶೀಲೇನ ಜಯಮಾಶಾಸ್ವ ಮೇ ವಿಭೋ ॥ ೧೪ ॥

'ಎಲೈ ವಿಭುವೇ! ನೀವು ನನ್ನಷ್ಟೇ, ಅದೇಕೆ ನನಗಿಂತಲೂ ಬಲಶಾಲಿಗಳು. ನೀವು ನನ್ನ ಧರ್ಮಶೀಲರಾದ ಗುರುಗಳೂ ಅಹುದು. (ಇಷ್ಟಾಗಿಯೂ) ನಾನು ನಿಮ್ಮೊಂದಿಗೆ ಕಾದಾಡಲಿರುವೆ. ನನಗೆ ಯಶಸ್ಸು ದೊರಕಲೆಂದು ನಿಮ್ಮಿಂದ ಹರಕೆಗಾಗಿ (ನಿಮ್ಮಲ್ಲಿಗೆ ಬಂದಿಹೆನು).'

ಭೀಷ್ಮನ ಈ ಮಾತು ಪರಶುರಾಮನಿಗೆ ತುಂಬ ಹಿಡಿಸಿತು. ತಮಗಿಂತಲೂ ಉತ್ತಮ ಹಾಗೂ ಬಲಶಾಲಿಗಳೊಂದಿಗೆ ಕಾದಾಡುವುದು ಕ್ಷತ್ರಿಯಧರ್ಮಕ್ಕೆ ಸರಿಯಾದುದೇ.

ಶಪೇಯಂ ತ್ವಾಂ ನ ಚೇದೇವಮಾಗಚ್ಛೇಥಾ ವಿಶಾಂಪತೇ ॥ ೧೬ ॥

ನೀನು (ನನ್ನನ್ನು ಕಾಣಲು) ಬಾರದಿದ್ದರೆ ನಿನ್ನನ್ನು ಶಪಿಸುವವನಿದ್ದೆ. ಪರಶುರಾಮನು ಭೀಷ್ಮನಿಗೆ ಸಾಹಸದಿಂದ ಕಾದಾಡಲು ಹೇಳಿದನು. ಆದರೆ ಅವನನ್ನು ಸೋಲಿಸಲೆಂದೇ ತಾನು ಕಣಕ್ಕಿಳಿಯುವವನಿದ್ದಕಾರಣ ಭೀಷ್ಮ ಬಯಸಿದ ಹರಕೆಯನ್ನು ಮಾತ್ರ ಅವನಿಗೆ ನೀಡಲಿಲ್ಲ.

+ ಇದೊಂದು ಶರತ್ತಿನ ಶಾಪವೆನ್ನಿಸಿದ್ದರೂ ಅದನ್ನು ಪ್ರತ್ಯಕ್ಷವಾಗಿ ನೀಡಲಾಗಿಲ್ಲ. ಭೀಷ್ಮನು ಕಾಳಗಕ್ಕೆ ಮೊದಲು ಗುರು ಪರಶುರಾಮನನ್ನು ಅಭಿವಾದಿಸಿದ್ದರಿಂದ ಶಾಪಿತನಾಗುವ ಹೊತ್ತೇ ಬರಲಿಲ್ಲ.

## ೮೦. ಗಂಗೆ > ಅಂಬೆ ಉದ್ಯೋಗ/೧೮೬

ವೈಶಂಪಾಯನ ಜನಮೇಜಯನಿಗೆ ಅಂಬೆಯ ಉಪಾಖ್ಯಾನವನ್ನು ಹೇಳುತ್ತಲಿದ್ದಾನೆ. ಪರಶುರಾಮನಿಗೆ ಯುದ್ಧದಲ್ಲಿ ಭೀಷ್ಮನನ್ನು ಸೋಲಿಸಲಾಗಲಿಲ್ಲ. ಹೀಗಾಗಿ ಅವನು ಅಂಬೆಯೆದುರು ತನ್ನ ಅಸಮರ್ಥತೆಯನ್ನು ವ್ಯಕ್ತಪಡಿಸಿದನು. ಅಲ್ಲದೆ ಅವಳು ಮನಬಂದಲ್ಲಿಗೆ ಹೋಗಬಹುದೆಂದು ಹೇಳಿದನು. 'ಭೀಷ್ಮನನ್ನೇ ಮೊರೆಹೋಗು' ಎಂದು ಕೂಡ ಸೂಚಿಸಿದನು. ಅವಳು ಒಪ್ಪಲಿಲ್ಲ. ಭೀಷ್ಮನ ವಧೆಗಾಗಿ ಘೋರವಾದ ಅರಣ್ಯಕ್ಕೆ ಹೋಗಿ ಉಗ್ರವಾದ ತಪಸ್ಸನ್ನು ಆರಂಭಿಸಿದಳು. ಅವಳು ನೀರಲ್ಲಿ ನಿಂತು ತಪಸ್ಸನ್ನು ಆಚರಿಸುವಾಗ ಒಂದು ಸಲ ಗಂಗೆಯು ಮೂರ್ತಿಮಂತಳಾಗಿ ಅವಳೆದುರು ಬಂದಿಳಿದಳು. ತಪಸ್ಸಿನ ಕಾರಣ ಏನೆಂದು ಕೇಳಿದಳು. ಅಂಬೆ 'ಭೀಷ್ಮನ ವಧೆ' ಎಂದಳು. ಆಗ—

ತತೋಽಬ್ರವೀತ್ ಸಾಗರಗಾ ಜಿಹ್ಮಾಂ ಚರಸಿ ಭಾಮಿನೀ ।
ನೈಷಕಾಮೋಽತವದ್ಯಾಂಗಿ ಶಕ್ಯಃ ಪ್ರಾಪ್ತುಂ ತ್ವಯಾಬಲೇ ॥ ೩೪ ॥
ಯದಿ ಭೀಷ್ಮವಿನಾಶಾಯ ಕಾಶ್ಯೇ ಚರೆಸಿ ವೈ ವ್ರತಮ್ ।
ವ್ರತಸ್ಥಾ ಚ ಶರೀರಂ ತ್ವಂ ಯದಿ ನಾಮ ವಿಮೋಕ್ಷ್ಯಸಿ ॥ ೩೫ ॥
ನದೀ ಭವಿಷ್ಯಸಿ ಶುಭೇ ಕುಟಿಲಾ ವಾರ್ಷಿಕೋದಕಾ ।
ದುಸ್ತೀರ್ಥಾ ನ ತು ವಿಜ್ಞೇಯಾ ವಾರ್ಷಿಕೀ ನಾಷ್ಟಮಾಸಿಕೀ ॥ ೩೬ ॥
ಭೀಮಗ್ರಾಹವತೀ ಘೋರಾ ಸರ್ವಭೂತಭಯಂಕರೀ ॥ ೩೭ ॥

ಸಾಗರಗಾಮಿನಿ (ಗಂಗೆ) ಅವಳಿಗೆ ಹೀಗೆಂದಳು : 'ಎಲೆ ಭಾಮಿನಿಯೇ ! ನಿನ್ನ (ತಪಸ್ಸು) ಆಚರಣೆ ಕಪಟದ್ದು. ಎಲೆ ಚಾರುಶೀಲೆಯಾದ ಅಬಲೆಯೇ ! ಈ ಬಗೆಯ ತಪಸ್ಸಿನಿಂದ ನಿನ್ನ ಗುರಿಯು ಎಂದಿಗೂ ಕೈಗೂಡದು. ನೀನು ಈ ತಪಸ್ಸನ್ನು ಭೀಷ್ಮನ ವಧೆಗೆಂದೇ ಕೈಕೊಂಡಿದ್ದರೆ ನೀನು ನಿನ್ನ ಈ ದೇಹವನ್ನು ತೊರೆದು (ಮುಂದಿನ ಜನ್ಮದಲ್ಲಿ) ಅಂಕುಡೊಂಕಾಗಿ ಹರಿಯುವ ಮಳೆಗಾಲದ ಹೊಳೆಯಾಗುವೆ. ಮಳೆಗಾಲದಲ್ಲಿ ನಿನ್ನನ್ನು ದಾಟಿ ಹೋಗುವುದು ಅಸಾಧ್ಯವೆನ್ನಿಸಬಹುದು. ಆದರೆ ಉಳಿದ ಎಂಟು ತಿಂಗಳು ನೀನಿರುವುದನ್ನೇ ಯಾರೂ ಗಮನಿಸರು. ನಿನ್ನ ಪಾತ್ರದಲ್ಲಿ ಭಯಂಕರವಾದ ಮೊಸಳೆಗಳು ವಾಸ

ಮಾಡುವವು. ಅವುಗಳಿಂದಾಗಿ ಉಳಿದ ಪ್ರಾಣಿಮಾತ್ರರಿಗೂ ನಿನ್ನ ಬಗೆಗೆ ಭಯವೆನ್ನಿಸೀತು,' ಹೀಗಾಗಿ ಈ ದಾರಿಯನ್ನು ಹಿಡಿಯದಿರುವಂತೆ ಗಂಗೆಯು ಅವಳಿಗೆ ಹೇಳಿದಳು.

ಇಷ್ಟಾಗಿಯೂ ಅಂಬೆ ತಾನು ಹಿಡಿದ ವ್ರತವನ್ನು ಮುಂದುವರೆಸಿದಳು. ಅವಳಿಗೆ ದೇಹತ್ಯಾಗವನ್ನು ಕೈಕೊಳ್ಳಬೇಕಾಗಿ ಬಂದಿತು. ಅವಳು ಅಂಬೆಯೆಂಬ ಮಳೆಗಾಲದ (ಅರೆಮೈಯ) ಹೊಳೆಯಾದಳಲ್ಲದೆ ತಪಸ್ಸಿನ ಪ್ರಭಾವದಿಂದಾಗಿ (ತನ್ನ ಅರೆಮೈಯಿಂದ) ಕನ್ಯೆಯಾದಳು.

ಸಾ ನದೀ ವತ್ಸಭೂಮ್ಯಾಂ ತು ಪ್ರಥಿತಾಂಬೇತಿ ಭಾರತ ।
ವಾರ್ಷಿಕೀ ಗ್ರಾಹಬಹುಲಾ ದುಸ್ತೀರ್ಥಾ ಕುಟಿಲಾ ತಥಾ ॥ ೪೦ ॥
ಸಾ ಕನ್ಯಾ ತಪಸಾ ತೇನ ದೇಹಾರ್ಧೇನ ವ್ಯಜಾಯತ ।
ನದೀ ಚ ರಾಜನ್ ವತ್ಸೇಷು ಕನ್ಯಾ ಚೈವಾಭವತ್ ತದಾ ॥ ೪೧ ॥

+ ಈ ಶಾಪವು ಕೆಲಮಟ್ಟಿಗಷ್ಟೇ ಸಫಲವಾಗಿದೆ. ಗಂಗೆಯು, 'ನೀನು ಮಳೆಗಾಲದ ಹೊಳೆಯಾಗುವೆ' ಎನ್ನುವಲ್ಲಿ ಅರೆಮೈಯ ಉಲ್ಲೇಖವಿಲ್ಲ. ಅಂಬೆಯು ತಪಸ್ಸಿನಿಂದಾಗಿ ಅವಳಿಗೆ ಕನ್ಯತ್ವ ಪ್ರಾಪ್ತವಾಯಿತು ಎಂದಬಳಿಕ ಗಂಗೆಯ ಮಾತು ಅರೆಸತ್ಯವೆನ್ನಿಸಿತು. ಅಂಬೆಯ ದೇಹತ್ಯಾಗ (ಅರೆಮೈ ಏಕಾಗಲೊಲ್ಲದು), ಮಳೆಗಾಲದ ಹೊಳೆಯಾಗುವುದು, ಮಳೆಗಾಲದಲ್ಲಿ ಮಾತ್ರ ನೀರಿರುವುದು, ಮೊಸಳೆಗಳಿರುವುದು ಮೊದಲಾದ ಸಂಗತಿಗಳನ್ನು ಗಮನಿಸಿದರೆ ಗಂಗೆಯ ಮಾತಿನಲ್ಲಿ 'ಶಾಪ' ಎಂಬ ಉಲ್ಲೇಖವಿಲ್ಲದೆ ಹೋದರೂ ಅದೊಂದು ಶಾಪವೇ ಆಗಿದೆ.

## ೮೧. ಕುಬೇರ > ಸ್ಥೂಣಾಕರ್ಣ ಉದ್ಯೋಗ/೧೯೨

ವೈಶಂಪಾಯನ ಜನಮೇಜಯರಾಜನಿಗೆ ಅಂಬೆಯ ಉಪಾಖ್ಯಾನವನ್ನು ಹೇಳುತ್ತಲಿದ್ದಾನೆ—

ದ್ರುಪದನ ಮಗಳಾದ ಶಿಖಂಡಿನಿಯು ತನ್ನ ತಾಯಿತಂದೆಗಳಿಗೆ ತೊಂದರೆಯಾಗದಿರಲೆಂದು ಕಾಡಿಗೆ ಹೋಗಿ ಜೀವವನ್ನು ತೆರಲು ಸಿದ್ಧಳಾದಳು. ಆ ಕಾಡು ಸ್ಥೂಣಾಕರ್ಣನೆಂಬ ಯಕ್ಷನದಾಗಿತ್ತು. ಶಿಖಂಡಿನಿಯು ಉಪವಾಸವನ್ನು ಕೈಕೊಂಡು ನವೆಯುಹತ್ತಿದಳು. ಅದನ್ನು ಕಂಡು ಸ್ಥೂಣಾಕರ್ಣನಿಗೆ ಅವಳ ಮೇಲೆ ಮರುಕ ಬಂದಿತು. 'ನಿನಗೆ ಪ್ರಿಯವಾಗುವಂತೆ ಏನು ಮಾಡಲಿ ?' ಎಂದು ಅವಳನ್ನು ಕೇಳಿದನು. ಅದು ಅವನಿಂದ ಸಾಧ್ಯವಿಲ್ಲ —ಎಂದಳವಳು. ತಾನು ಕುಬೇರನ ಹಿಂಬಾಲಕನಿದ್ದ ಕಾರಣ ತಾನು ವರವನ್ನು ನೀಡಬಲ್ಲೆನೆಂದು ಅವನು ಹೇಳಿದನು. ಹೀಗಾಗಿ ಅವಳು ತನ್ನ ಬಯಕೆಯನ್ನು ಹೇಳಿದರೆ ತಾನದನ್ನು ಪೂರ್ತಿ ಮಾಡಬಲ್ಲೆಯೆಂದು ಮಾತುಕೊಟ್ಟನು. ಆಗ ಅವಳು, 'ನನ್ನ ತಂದೆಗೆ ಗಂಡು ಮಕ್ಕಳಿಲ್ಲ. ದಶಾರ್ಣದ ರಾಜನಾದ ಹಿರಣ್ಯವರ್ಮ ದಂಡೆತ್ತಿಬರಲಿದ್ದಾನೆ. ಅವನನ್ನು ಎದುರಿಸಲು ನಮ್ಮಿಂದಾಗದು. ನನ್ನ ತಾಯಿತಂದೆಗಳು ಪ್ರಾಣವನ್ನು ತೆರದೆ ಬೇರೆ ವಿಧಿಯಿಲ್ಲ. ಹೀಗಾಗಿ ಹಗೆಗಳನ್ನು ನದೆಬಡಿಯಲೆಂದು ನನಗೆ ನಿರ್ದೋಷವಾದ ಗಂಡುತನ ಬೇಕಿದೆ. ಅಂದರೆ ಮಾತ್ರ ನನ್ನ ತಾಯಿತಂದೆಗಳನ್ನು ಬದುಕಿಸಬಲ್ಲೆ' ಎಂದಳಲ್ಲದೆ ಯಕ್ಷನಿಗೆ ತನ್ನ ಮಾತನ್ನು ನಡೆಯಿಸಿಕೊಡುವಂತೆ ಹೇಳಿದಳು.

ಅವಳ ಬಯಕೆಯನ್ನು ಈಡೇರಿಸುವುದು ತುಂಬ ಕಷ್ಟದ್ದಾಗಿತ್ತು. ಆದರೂ ಅವನು ತನ್ನ ಮಾತನ್ನು ನೆನಪಿಗೆ ತಂದು ಅವಳನ್ನು ಕೆಲಕಾಲದವರೆಗೆ ಮಾತ್ರ ಗಂಡಾಗಿ ಮಾಡಲು ಒಪ್ಪಿಕೊಂಡನು. ಅವಳಿಗೆ ಗಂಡಸುತನವನ್ನು ನೀಡಿದನು. ಅವಳು ತನ್ನ ತಾಯಿತಂದೆಗಳನ್ನು ಕಾಪಾಡಿದಳು. ಮತ್ತೆ ಹೆಣ್ಣುತನವನ್ನು ಮರಳಿ ಪಡೆದಳು. ಸ್ಥೂಣಾಕರ್ಣ ಈ ಕಾಲಾವಧಿಯಲ್ಲಿ ಹೆಣ್ಣಾಗಿದ್ದನು.

ಒಂದು ಸಲ ಕುಬೇರನು ಸ್ಥೂಣಾಕರ್ಣನ ಕಾಡಿಗೆ ಬಂದನು. ಆಗ ಸ್ಥೂಣಾಕರ್ಣನನ್ನುಳಿದು ಬೇರೆ ಯಕ್ಷರೆಲ್ಲ ಕುಬೇರನನ್ನು ಯಥೋಚಿತವಾಗಿ ಸ್ವಾಗತಿಸಿದರು. ಕುಬೇರನು ಸ್ಥೂಣಾಕರ್ಣನಿಲ್ಲದುದನ್ನು ಗಮನಿಸಿದನು. ಅವನು ಈ ಬಗೆಗೆ ಅಲ್ಲಿದ್ದವರನ್ನು ವಿಚಾರಿಸಿದನು. 'ಸದ್ಯಕ್ಕೆ ಅವನು ಹೆಣ್ಣುತನವನ್ನು ಧರಿಸಿದ್ದರಿಂದ ಭೆಟ್ಟಿಗೆ ಬರಲು ಸಂಕೋಚಪಟ್ಟುಕೊಳ್ಳುತ್ತಿದ್ದಾನೆ' ಎಂದು ಹೇಳಲಾಯಿತು. ಅಲ್ಲದೆ ನಡೆದುದೆಲ್ಲವನ್ನೂ ನಿರೂಪಿಸಲಾಯಿತು. ಅದನ್ನು ಕೇಳಿ ಕುಬೇರ ಕಿಡಿಕಿಡಿಯಾದನು. ಸ್ಥೂಣಾಕರ್ಣನನ್ನು ತನ್ನೆದುರಿಗೆ ತರುವಂತೆ ಅಪ್ಪಣೆ ನೀಡಿದನು. ಸ್ಥೂಣಾಕರ್ಣ ನಾಚಿ ನೀರಾಗಿ ಕುಬೇರನೆದುರು ಬಂದು ನಿಂತನು. ಅವನನ್ನು ಕಂಡು—

> ತಂ ಶಶಾಪಾಥ ಸಂಕ್ರುದ್ಧೋ ಧನದಃ ಕುರುನಂದನ ।
> ಏವಮೇವ ಭವತ್ವದ್ಯ ಸ್ತ್ರೀತ್ವಂ ಪಾಪಸ್ಯ ಗುಹ್ಯಕಾಃ ॥ ೪೫ ॥
> ತತೋऽಬ್ರವೀದ್ ಯಕ್ಷಪತಿರ್ಮಹಾತ್ಮಾ ಯಸ್ಮಾದದಾಸ್ತ್ವವಮನ್ಯೇಹ ಯಕ್ಷಾನ್ ।
> ಶಿಖಂಡಿನೇ ಲಕ್ಷಣಂ ಪಾಪಬುದ್ಧೇ ಸ್ತ್ರೀಲಕ್ಷಣಂ ಚಾಗ್ರಹೀಃ ಪಾಪಕರ್ಮನ್ ॥ ೪೬ ॥
> ಅಪ್ರವೃತ್ತಂ ಸುದುರ್ಬುದ್ಧೇ ಯಸ್ಮಾದೇತತ್ ತ್ವಯಾ ಕೃತಮ್ ।
> ತಸ್ಮಾದದ್ಯ ಪ್ರಭೃತ್ಯೇವ ಸ್ತ್ರೀ ತ್ವಂ ಸಾ ಪುರುಷಸ್ತಥಾ ॥ ೪೭ ॥

ಕುಬೇರ ಕೆರಳಿ ಹೀಗೆಂದನು: 'ಎಲೈ ಗುಹ್ಯಕರೇ! ಇವನ ಹೆಣ್ಣುತನ ಹೀಗೆಯೇ ಉಳಿದುಬಿಡಲಿ.' ಮತ್ತೆ ಸ್ಥೂಣಾಕರ್ಣನಿಗೆ, 'ಎಲೈ ಪಾಪಬುದ್ಧಿಯೇ! ನೀನು ಶಿಖಂಡಿನಿಗೆ (ಅವಳಿಂದ ಹೆಣ್ಣುತನವನ್ನು ಪಡೆದು) ಗಂಡುತನವನ್ನಿತ್ತು ಯಕ್ಷರನ್ನು ಅವಮಾನಕ್ಕೀಡುಮಾಡಿರುವೆ. ನಿನ್ನೀ ನಡತೆ ಬಲು ನಿಂದ್ಯವಾದುದು. ಹೀಗಾಗಿ ಇನ್ನು ಮುಂದೆ ನೀನು ಹೆಣ್ಣಾಗಿಯೇ ಇರುವೆ. ಅಲ್ಲದೆ ಶಿಖಂಡಿನಿಯು (ಇನ್ನುಮುಂದೆ) ಗಂಡಾಗಿಯೇ ಉಳಿದುಕೊಳ್ಳುವಳು' ಎಂದನು.

ಈ ಭಯಂಕರವಾದ ಶಾಪವನ್ನು ಕೇಳಿ ಸ್ಥೂಣಾಕರ್ಣನಿಗಾಗಿ (ಅವನ ಕೋರಿಕೆಯ ಮೇರೆಗೆ) ಯಕ್ಷರೆಲ್ಲ ಕೂಡಿ ಈ ಶಾಪಕ್ಕೆ ಒಂದು ವಿಶಿಷ್ಟವಾದ ಕಾಲಮರ್ಯಾದೆ ಇರಲೆಂದು ಕುಬೇರನನ್ನು ಬೇಡಿಕೊಂಡರು. ಆಗ ಅವನು ಹೀಗೆಂದನು—

> ಶಿಖಂಡಿನಿ ಹತೇ ಯಕ್ಷಾಃ ಸ್ವಂ ರೂಪಂ ಪ್ರತಿಪತ್ಸ್ಯತೇ ।
> ಸ್ಥೂಣೋ ಯಕ್ಷೋ ನಿರುದ್ವೇಗೋ ಭವತ್ವಿತಿ ಮಹಾಮನಾಃ ॥ ೫೦ ॥
> ಸ್ಥೂಣಸ್ತು ಶಾಪಂ ಸಂಪ್ರಾಪ್ಯ ತತ್ರೈವ ನ್ಯವಸತ್ ತದಾ ॥ ೫೧ ॥

'ಎಲೈ ಯಕ್ಷರೇ ! ಶಿಖಂಡಿಯ ಮರಣದ ತರುವಾಯ ಸ್ಥೂಣಾಕರ್ಣನಿಗೆ ಮರಳಿ ಗಂಡಸುತನ ಬರಲಿದೆ. ಆದುದರಿಂದ ಆತ ಉದ್ವೇಗರಹಿತನಾಗಿ ಇರತಕ್ಕದ್ದು' ಎಂದು ಶಾಪವನ್ನೀಯುತ್ತಲೇ ಸ್ಥೂಣಾಕರ್ಣ (ಅದೇ ಅವಸ್ಥೆಯಲ್ಲಿ) ಅಲ್ಲಿಯೇ ಉಳಿದನು.

ತನ್ನ ಕೆಲಸ ಕೈಗೂಡುತ್ತಲೂ ಶಿಖಂಡಿನಿಯು ಸ್ಥೂಣಾಕರ್ಣನಿಗೆ ಅವನ ಗಂಡಸುತನವನ್ನು ಒಪ್ಪಿಸಿ ಅವನಿಂದ ತನ್ನ ಹೆಣ್ಣುತನವನ್ನು ಪಡೆಯಲೆಂದು ಬಂದಳು. ಸ್ಥೂಣಾಕರ್ಣ ಅವಳ ಪ್ರಾಮಾಣಿಕತೆಯಿಂದ ಸಂತೋಷಪಟ್ಟನು. ಅವಳಿಗೆ ಹೀಗೆಂದನು—

ಶಪ್ತೋ ವೈಶ್ರವಣೇನಾಹಂ ತ್ವತ್ಕೃತೇ ಪಾರ್ಥಿವಾತ್ಮಜ ।
ಗಚ್ಛೇದಾನೀಂ ಯಥಾಕಾಮಂ ಚರ ಲೋಕಾನ್ ಯಥಾಸುಖಮ್ ॥ ೫೫ ॥

'ಎಲೆ ಅರಸುಕುಮಾರಿಯೇ ! ನಿನ್ನಿಂದಾಗಿ ವೈಶ್ರವಣನು ನನ್ನನ್ನು ಶಪಿಸಿದನು (ಹೀಗಾಗಿ ನಾನು ಕಾಯಂ ಆಗಿ ಹೆಣ್ಣಾದೆ). ಇನ್ನು ನೀನು (ಇದೇ ಗಂಡಿನ ರೂಪದಲ್ಲಿ) ಮನಬಂದಲ್ಲಿ ಸುಖವಾಗಿರು.'

+ ಸ್ಥೂಣಾಕರ್ಣನು ತನ್ನ ಶಾಪಕ್ಕೆ ಕಾಲಮಿತಿಯನ್ನೀಯಲು ಕುಬೇರನನ್ನು ಕೇಳಿಕೊಂಡಿಲ್ಲ. ಉಳಿದ ಯಕ್ಷರೇ ಅವನಿಗಾಗಿ ಅದನ್ನು ಕೇಳಿಕೊಂಡಿರುವರು. ಇದು ಯಾಚಿತವಾದ ಉಃಶಾಪವು.

ಇದೊಂದು ಮುಖ್ಯವಾದ ಶಾಪ. ಭೀಷ್ಮನನ್ನು ಕೊಲ್ಲಲು ಶಿಖಂಡಿಗೆ ಗಂಡಸುತನ ದೊರಕುವುದು ಅಗತ್ಯದ್ದಾಗಿತ್ತು. ಅದು ಕಥೆಯ ಅಗತ್ಯವೂ ಆಗಿತ್ತು. ಶಿಖಂಡಿನಿಯ ಕೋರಿಕೆಯ ಮೇರೆಗೆ ಸ್ಥೂಣಾಕರ್ಣನು ಅವಳಿಗೆ ಅಲ್ಪಾವಧಿಗಾಗಿ ಗಂಡಸುತನವನ್ನು ನೀಡಿದ್ದನೆಂಬ ಘಟನೆಯಿಂದ ಈ ಸಂಗತಿ ಖಚಿತಗೊಳ್ಳುತ್ತದೆ. ಸ್ಥೂಣಾಕರ್ಣನಿಗೆ ಶಿಕ್ಷೆಯಾಗುವುದು ಸರಿಯೇ. ಆದರೆ ಶಿಖಂಡಿನಿಗೆ ಕಾಯಂ ಆಗಿ ಗಂಡಸುತನದ ಅಯಾಚಿತವಾದ ವರ(ಅವಳಿಲ್ಲದ ವೇಳೆಗೆ)ವನ್ನು ನೀಡಲು ಕಾರಣವೇನು ? ಇದೆಂದರೆ ಶಿಖಂಡಿನಿಯ ಮೇಲೆ ಬಂದೆರಗಿದ ವರವಾಗಿದೆ. ಕುಬೇರನು ಕಾರಣವಿಲ್ಲದೆಯೇ ಅವಳ ಅಲ್ಪಕಾಲದ ಗಂಡಸುತನಕ್ಕೆ ಮುದ್ರೆಯೊತ್ತಿದ್ದಾನೆ. ಇದರಿಂದಾಗಿ, ಕಥೆಯ ಆವಶ್ಯಕವಾದ ಭಾಗವೆಂದೇ ಈ ವರವನ್ನೀಯಲಾಗಿದೆ ಎಂಬುದು ಖಂಡಿತ.

## ೮೨. ಭೀಷ್ಮ > ಯುಧಿಷ್ಠಿರ ಭೀಷ್ಮ/೪೩

ಕೌರವ-ಪಾಂಡವರ ಸೈನ್ಯಪಡೆಗಳು ಕುರುಕ್ಷೇತ್ರದಲ್ಲಿ ಎದುರುಬದುರಾಗಿ ಕಾಳಗಕ್ಕೆ ಸಜ್ಜಾಗಿ ನಿಂತಿದ್ದವು. ಎದುರಿನ ಬಂಧುಬಳಗದ ಜನರನ್ನು ಕಂಡು ಅರ್ಜುನನಲ್ಲಿ ವಿಷಾದ ಹುಟ್ಟಿಕೊಂಡಿತು. ಅವನು ತನ್ನ ಗುರುಗಳ ಮೇಲೆ ಶಸ್ತ್ರಗಳನ್ನೆತ್ತಲು ಒಪ್ಪದಾದನು. ಆಗ ಶ್ರೀಕೃಷ್ಣನು ಅವನಿಗೆ ಗೀತೆಯನ್ನು ಹೇಳಿ ಅವನನ್ನು ಹೋರಾಟಕ್ಕೆ ಸನ್ನದ್ಧನನ್ನಾಗಿ ಮಾಡಿದನು. ಈ ವಾರ್ತೆಯನ್ನೆಲ್ಲ ಧೃತರಾಷ್ಟ್ರನಿಗೆ ಹೇಳುವವನು ಸಂಜಯ. ಅದನ್ನೇ ವೈಶಂಪಾಯನ ಜನಮೇಜಯ ದೊರೆಗೆ ಹೇಳುತ್ತಲಿದ್ದಾನೆ—

ಯುದ್ಧ ಶುರುವಾಗುವ ಮುನ್ನ ಯುಧಿಷ್ಠಿರನು (ಕೌರವಸೇನೆಯ ದಂಡನಾಯಕನಾದ) ಭೀಷ್ಮನನ್ನು ಶಸ್ತ್ರಗಳನ್ನು ಹಿಡಿಯದೆಯೇ ಹೋಗಿ ಕಂಡನು. ಯುದ್ಧವನ್ನು ಆರಂಭಿಸಲು ಅಪ್ಪಣೆ ಹಾಗೂ ಹರಕೆಗಳನ್ನು ಕೇಳಿದನು.

ಆಮಂತ್ರಯೇ ತ್ವಾಂ ದುರ್ಧರ್ಷ ತ್ವಯಾ ಯೋತ್ಸ್ಯಾಮಹೇ ಸಹ ।
ಅನುಜಾನೀಹಿ ಮಾಂ ತಾತ ಆಶಿಷಶ್ಚ ಪ್ರಯೋಜಯ ॥ ೩೭ ॥

ಯುಧಿಷ್ಠಿರನ ಈ ನಡತೆಯಿಂದಾಗಿ ಭೀಷ್ಮ ಸಂತುಷ್ಟನಾದನು. ಅವನು ಹೀಗೆಂದನು—

ಯದ್ಯೇವಂ ನಾಭಿಗಚ್ಛೇಥಾ ಯುಧಿ ಮಾಂ ಪೃಥಿವೀಪತೇ ।
ಶಪೇಯಂ ತ್ವಾಂ ಮಹಾರಾಜ ಪರಾಭಾವಾಯ ಭಾರತ ॥ ೩೮ ॥*

'ಎಲೈ ಪೃಥ್ವೀಪತಿಯೇ ! ನೀನು ಈ ರೀತಿಯಾಗಿ ಯುದ್ಧಕ್ಕಾಗಿ ನನ್ನ ಅಪ್ಪಣೆಯನ್ನು ಕೇಳಲು ಬಾರದೆ ಹೋಗಿದ್ದರೆ ನಾನು ನಿನಗೆ ಸಾವಿನ ಶಾಪವನ್ನೇ ಕೊಟ್ಟುಬಿಡುತ್ತಿದ್ದೆ. ಆದರೆ ನೀನು ಸರಿಯಾದುದನ್ನೇ ಮಾಡಿದ್ದರಿಂದ ನಾನು ಸಂತುಷ್ಟನಾಗಿದ್ದೇನೆ. ಯುದ್ಧದಲ್ಲಿ ನಿನಗೆ ಜಯವಾಗಲಿ ಎಂದು ನಿನ್ನನ್ನು ಹರಸುತ್ತೇನೆ. ಯುದ್ಧದಿಂದ ಇದಲ್ಲದೆ ಇನ್ನಾವ ಬಯಕೆಗಳಿದ್ದರೂ ಅವು ಕೈಗೂಡಲಿ.'

+ ಪ್ರತ್ಯಕ್ಷವಾಗಿ ಶಾಪವನ್ನು ಉಚ್ಚರಿಸಲಾಗಿಲ್ಲ. ಹಾಗೆ ಮಾಡುವ ಹೊತ್ತು ಬರಲಿಲ್ಲ. ಶಾಪವು ಶರತ್ತಿನದು. ಶರತ್ತನ್ನು ಸರಿಯಾಗಿ ಪಾಲಿಸಲಾಗಿದೆ.

## ೮೩. ದ್ರೋಣ > ಯುಧಿಷ್ಠಿರ

ಭೀಷ್ಮ/೪೩

ಸನ್ನಿವೇಶ ಹಾಗೂ ಮೊದಲ ಸಂದರ್ಭ : ಭೀಷ್ಮ > ಯುಧಿಷ್ಠಿರ ಶಾಪ.

ಯುಧಿಷ್ಠಿರನು ಭೀಷ್ಮನ ಆಶೀರ್ವಾದವನ್ನು ಪಡೆದಾದ ಬಳಿಕ ದ್ರೋಣನ ಬಳಿಗೆ ಹೋದನು. ಅವನಿಗೆ ಅಭಿವಾದನೆಯನ್ನು ಸಲ್ಲಿಸಿ ಇಂತೆಂದನು—

ಆಮಂತ್ರಯೇ ತ್ವಾಂ ಭಗವನ್ ಯೋತ್ಸ್ಯೇ ವಿಗತಕಲ್ಮಷಃ ।
ಕಥಂ ಜಯೇ ರಿಪೂನ್ ಸರ್ವಾನನುಜ್ಞಾತಸ್ತ್ವಯಾ ದ್ವಿಜ ॥ ೫೨ ॥

'ಎಲೈ ಭಗವಂತನೇ ! ಏನನ್ನು ಮಾಡಿ ನಾನು ಕೊಳೆಯಿಲ್ಲದ ಮನದಿಂದ ನಿಮ್ಮೊಡನೆ ಕಾದಬಲ್ಲೆ ಹಾಗೂ ವಿಪ್ರಶ್ರೇಷ್ಠರೇ, ನಿಮ್ಮ ಒಪ್ಪಿಗೆಯಿಂದ ನಾನೆಲ್ಲ ಹಗೆಗಳ ಮೇಲೆ ವಿಜಯವನ್ನು ಗಳಿಸಬಲ್ಲೆ—ಎಂಬುದನ್ನು ದಯವಿಟ್ಟು ಹೇಳುವಂಥವರಾಗಿ.'

ಯುಧಿಷ್ಠಿರನ ನಡತೆಯಿಂದ ಸಂತುಷ್ಟನಾದ ದ್ರೋಣ ಹೀಗೆಂದನು—

ಯದಿ ಮಾಂ ನಾಭಿಗಚ್ಛೇಥಾ ಯುದ್ಧಾಯ ಕೃತನಿಶ್ಚಯಃ ।
ಶಪೇಯಂ ತ್ವಾಂ ಮಹಾರಾಜ ಪರಾಭಾವಾಯ ಸರ್ವಶಃ ॥

'ಎಲೈ ಮಹಾರಾಜನೇ ! ಯುದ್ಧವನ್ನು ಮಾಡುವುದೆಂದು ನಿರ್ಧರಿಸಿಯೂ (ನೀನು ನನ್ನ) ಒಪ್ಪಿಗೆಯನ್ನು ಕೇಳಲು ಬಾರದಿದ್ದರೆ ನಾನು (ತಪ್ಪದೆ) ನಿನಗೆ ಸಾವಿನ ಶಾಪವನ್ನೀಯುತ್ತಿದ್ದೆ.'

---

*ಭೀಷ್ಮನ ಉದ್ಗಾರದಲ್ಲಿ 'ಸಾವು' ಎಂಬ ಪದವನ್ನು ಸೇರ್ಪಡಿಸಲಾಗಿಲ್ಲ. ಅವನು 'ಸೋಲು' ಬಂದೀತೆಂದನೆಂದುದನ್ನು ಕುರಿತು ನೀಲಕಂಠನ ಟೀಕೆ ಮುಂದಿನಂತಿದೆ—

ಪರಾಭಾವಾಯ ಪರಾಕೃತೇ ನಿರಸ್ತೋ ಭಾವಃ ಸತ್ತಾ ಯತ್ರ ಸಃ ತಸ್ಮೈ ಮರಣಾಯೇತ್ಯರ್ಥಃ ।
ಪರಶ್ಚಾಸಾವಭಾವಶ್ಚೇತಿ ನಿಗ್ರಹೇಽಪಿ ಸ ಏವಾರ್ಥಃ ।

ಆದರೆ ನಿನ್ನ ನಡತೆಯಿಂದಾಗಿ ನಾನು ಸಂತುಷ್ಟನಾಗಿದ್ದೇನೆ. ನೀನು ಸಂದೇಹರಹಿತನಾಗಿ ಕಾಳಗವನ್ನು ಹೂಡು, ನಿನಗೆ ಜಯ ದೊರಕಲಿ.

+ ಶಾಪವನ್ನು ನೀಡಲಾಗಿಲ್ಲ. ಶಾಪ ಶರತ್ತಿರದು. ಶರತ್ತನ್ನು ಪಾಲಿಸಲಾಗಿದೆ.

## ೮೪. ಕೃಪ > ಯುಧಿಷ್ಠಿರ ಭೀಷ್ಮ/೪೩

ಸನ್ನಿವೇಶ ಹಾಗೂ ಮೊದಲ ಸಂದರ್ಭ : ಭೀಷ್ಮ > ಯುಧಿಷ್ಠಿರ ಶಾಪ.

ದ್ರೋಣನ ಆಶೀರ್ವಾದವನ್ನು ಪಡೆದಾದಬಳಿಕ ಯುಧಿಷ್ಠಿರನು ಕೃಪನ ಬಳಿಗೆ ಹೋದನು. ಅವನನ್ನು ಅಭಿವಾದಿಸಿ ಹೀಗೆಂದನು—

ಅನುಮಾನಯೇ ತ್ವಾಂ ಯೋತ್ಸ್ಯೇಽಹಂ ಗುರೋ ವಿಗತಕಲ್ಮಷಃ ।
ಜಯೇಯಂ ಚ ರಿಪೂನ್ ಸರ್ವಾನನುಜ್ಞಾತಸ್ತ್ವಯಾನಘ ॥ ೬೯ ॥

'ಗುರುವರ್ಯರೇ ! ನಾನು ಪಾಪರಹಿತನಾಗಿ ನಿಮ್ಮೊಂದಿಗೆ ಕಾದಬಯಸುತ್ತೇನೆ. ನಿಮ್ಮ ಒಪ್ಪಿಗೆ ಇರಲಿ. ನಿಮ್ಮಾಶೀರ್ವಾದದಿಂದಾಗಿ ನಾನು ಹಗೆಗಳನ್ನೆಲ್ಲ ಗೆಲ್ಲುವಂತಾಗಲಿ.'

ಕೃಪನು ಸಂತುಷ್ಟನಾಗಿ ಹೀಗೆಂದನು—

ಯದಿ ಮಾಂ ನಾಭಿಗಚ್ಛೇಥಾ ಯುದ್ಧಾಯ ಕೃತನಿಶ್ಚಯಃ ।
ಶಪೇಯಂ ತ್ವಾಂ ಮಹಾರಾಜ ಪರಾಭಾವಾಯ ಸರ್ವಶಃ ॥ ೭೦ ॥

'ಎಲೈ ಮಹಾರಾಜನೇ ! ಯುದ್ಧಕ್ಕಿಳಿಯಲು ನಿರ್ಧರಿಸಿಯೂ (ನೀನು ನನ್ನ) ಅಪ್ಪಣೆಯನ್ನು ಪಡೆಯಲು ಬಾರದೆ ಹೋಗಿದ್ದೆಯಾದರೆ ನೀನು ಕೇಳಲು ಬಾರದಿದ್ದರೂ ನಿನಗೆ (ತಪ್ಪದೆ) ಸಾವಿನ ಶಾಪವನ್ನು ಕೊಡುತ್ತಿದ್ದೆ. ನೀನು ಬಂದುದರಿಂದ ಮಾತ್ರ ನನಗೆ ಸಂತೋಷವಾಗಿದೆ. ನೀನು ಜಯಶಾಲಿಯಾಗುವಿಯೆಂದು ಹಾರೈಸುತ್ತೇನೆ.'

+ ಇದು ಶರತ್ತಿನ ಶಾಪ, ಶರತ್ತನ್ನು ಪಾಲಿಸಲಾದ್ದರಿಂದ ಶಾಪೋದ್ಧಾರದ ಆವಶ್ಯಕತೆಯೇ ಉಳಿದಿಲ್ಲ. ಉಚ್ಚರಿಸದಿದ್ದ ಶಾಪವಿದು.

## ೮೫. ಶಲ್ಯ > ಯುಧಿಷ್ಠಿರ ಭೀಷ್ಮ/೪೩

ಸನ್ನಿವೇಶ ಹಾಗೂ ಮೊದಲ ಸಂದರ್ಭ : ಭೀಷ್ಮ > ಯುಧಿಷ್ಠಿರ ಶಾಪ.

ಯುಧಿಷ್ಠಿರನು ಮೂವರು ಆಚಾರ್ಯರಿಂದ ಹರಕೆಗಳನ್ನು ಪಡೆದು, ಯುದ್ಧಕ್ಕಾಗಿ ಅವರ ಒಪ್ಪಿಗೆಯನ್ನು ಪಡೆದು ಮದ್ರರಾಜ ಶಲ್ಯನಲ್ಲಿಗೆ ಹೋದನು. ಅವನನ್ನು ಅಭಿವಂದಿಸಿ ಹೀಗೆಂದನು—

ಅನುಮಾನಯೇ ತ್ವಾಂ ದುರ್ಧರ್ಷ ಯೋತ್ಸ್ಯೇ ವಿಗತಕಲ್ಮಷಃ ।
ಜಯೇಯಂ ಚ ಪರಾನ್ ರಾಜನ್ನನುಜ್ಞಾತಸ್ತ್ವಯಾ ರಿಪೂನ್ ॥ ೭೮ ॥

'ಎಲೈ ದುರ್ಧರ್ಷನೇ ! ನಾನು ನಿನ್ನೊಂದಿಗೆ ನಿಷ್ಪಾಪದಿಂದ ಕಾದಬಯಸುತ್ತೇನೆ. ನಿನ್ನ ಒಪ್ಪಿಗೆಯಿರಲಿ. ನಿನ್ನ ಅನುಜ್ಞೆಯಿಂದಾಗಿ ನನಗೆ ಹಗೆಗಳ ಮೇಲೆ ಜಯವಾಗಲಿ.'

ಆಗ ಶಲ್ಯ ಹೀಗೆಂದನು—

ಯದಿ ಮಾಂ ನಾಧಿಗಚ್ಛೇಥಾ ಯುದ್ಧಾಯ ಕೃತನಿಶ್ಚಯಃ ।
ಶಪೇಯಂ ತ್ವಾಂ ಮಹಾರಾಜ ಪರಾಭಾವಾಯ ವೈ ರಣೇ ॥ ೭೯ ॥

'ಎಲೈ ಮಹಾರಾಜನೇ! ಯುದ್ಧವನ್ನಾಡುವ ಸಂಕಲ್ಪವನ್ನು ಕೈಕೊಂಡು ಕೂಡ ನೀನು (ನನ್ನ) ಒಪ್ಪಿಗೆಯನ್ನು ಪಡೆಯಲು ಬಾರದೆ ಹೋಗಿದ್ದರೆ ನಾನು (ತಪ್ಪದೆ) ನಿನಗೆ ನಾಶದ ಶಾಪವನ್ನೀಯುತ್ತಿದ್ದೆ. ನಾನು ನಿನ್ನ ನಡತೆಯಿಂದಾಗಿ ಸಂತೋಷಗೊಂಡಿದ್ದೇನೆ. ನೀನು ಬೇಕಾದ ಹಾಗೆ ಹಗೆಗಳೊಂದಿಗೆ ಕಾದಾಡು, ಜಯಶಾಲಿಯಾಗು. ನಿನಗೆ ಇನ್ನೇನಾದರೂ ಬೇಕಿದ್ದರೆ ಹೇಳು. ಅವಶ್ಯವಾಗಿ ಅದನ್ನು ಪೂರೈಸುವೆ. ಆದರೆ ಆ ಸಂಗತಿ ಯುದ್ಧಕ್ಕೆ ಹೊರತಾದುದು ಆಗಿರತಕ್ಕದ್ದು.'

+ ಶಾಪ ಶರತ್ತಿನದಾಗಿದೆ. ಶರತ್ತಿನ ಪಾಲನೆಯಾದ್ದರಿಂದ ಶಾಪವನ್ನು ಉಚ್ಚರಿಸುವ ಅಗತ್ಯ ಕಂಡುಬಂದಿಲ್ಲ. ಹೀಗಾಗಿ ಶಾಪವನ್ನೀಯಲಾಗಿಲ್ಲ.

## ೮೬. ಭೀಷ್ಮ > ಅರ್ಜುನ ಭೀಷ್ಮ/೧೨೦

ಭೀಷ್ಮ ಉತ್ತರಾಯಣಕ್ಕಾಗಿ ಕಾಯುತ್ತ ಶರಪಂಜರದ ಮೇಲೆ ಮಲಗಿದ್ದನು. ಕೌರವ-ಪಾಂಡವರು ಯುದ್ಧವನ್ನು ನಿಲ್ಲಿಸಿ ಅವನನ್ನು ಕಾಣಲೆಂದು ಹೋದರು, ಅವನ ಗೋಣು ಜೋತುಬಿದ್ದಿತ್ತು. ಅವನಿಗೆ ತಲೆದಿಂಬು ಬೇಕಿತ್ತು. ಹಲವು ಬಗೆಯ ದಿಂಬುಗಳನ್ನು ತರಲಾಯಿತು. ಆದರೆ ಭೀಷ್ಮ ಅವುಗಳಲ್ಲಿ ಒಂದನ್ನೂ ಸ್ವೀಕರಿಸಲಿಲ್ಲ. ಆಗ ಅರ್ಜುನ, ಶ್ರೇಷ್ಠವೀರನಿಗೆ ಎಂಥ ದಿಂಬು ಸರಿಯಾದುದೆಂಬುದನ್ನರಿತು, ಮೂರು ಬಾಣಗಳಿಂದ ದಿಂಬನ್ನು ತಯಾರಿಸಿ ಜೋತುಬಿದ್ದಿದ್ದ ಆ ಗೋಣಿಗೆ ಆಧಾರವನ್ನು ಒದಗಿಸಿದನು. ಅರ್ಜುನನ ಈ ಕೃತಿಯಿಂದಾಗಿ ಭೀಷ್ಮ ಬಲು ಸಂತಸಪಟ್ಟನು. ಅರ್ಜುನನಿಗೆ ಹೀಗೆಂದನು—

ಶಯನಸ್ಯಾನುರೂಪಂ ಮೇ ಪಾಂಡವೋಪಹಿತಂ ತ್ವಯಾ ।
ಯದ್ಯನ್ಯಥಾ ಪ್ರಪದ್ಯೇಥಾಃ ಶಪೇಯಂ ತ್ವಾಮಹಂ ರುಷಾ ॥ ೪೮ ॥

'ಎಲೈ ಪಾಂಡುಪುತ್ರನೇ! ನೀನು ನನಗೆ ಸರಿಯಾದ ದಿಂಬನ್ನೇ (ತಯಾರಿಸಿ) ಕೊಟ್ಟೆ. ಬದಲು ನೀನು ನನಗೆ ಇನ್ನೇನಾದರೂ ಕೊಟ್ಟಿದ್ದರೆ ನಾನು ಕ್ರುದ್ಧನಾಗಿ ನಿನ್ನನ್ನು ಶಪಿಸುತ್ತಿದ್ದೆ.'

+ ಶಾಪ ಶರತ್ತಿನದು. ಶರತ್ತನ್ನು ಸರಿಯಾಗಿ ಪಾಲಿಸಲಾಗಿದೆ. ಹೀಗಾಗಿ ಶಾಪವನ್ನೀಯಲಾಗಿಲ್ಲ.

## ೮೭. ಬ್ರಹ್ಮದೇವ > ಮೃತ್ಯುದೇವಿ ದ್ರೋಣ/೫೪

ಅಭಿಮನ್ಯುವಿನ ನಾಶದಿಂದಾಗಿ ಯುಧಿಷ್ಠಿರ ದುಃಖಿತನಾಗಿದ್ದನು. ವ್ಯಾಸನು ಅವನನ್ನು ಸಮಾಧಾನಪಡಿಸಿದನು. ಹಿಂದಕ್ಕೆ ನಾರದನು ಹೇಳಿದ ಅಕಂಪನರಾಜನ ಕಥೆ ಹಾಗೂ ಮೃತ್ಯುದೇವಿಯ ಉಪಾಖ್ಯಾನಗಳನ್ನು ಹೇಳಿ ಅವನು ಯುಧಿಷ್ಠಿರನ ದುಃಖವನ್ನು ಕಡಿಮೆ ಮಾಡಲು ಯತ್ನಿಸಿದನು. ಈ ಸಂದರ್ಭದಲ್ಲಿ ಈ ಮುಂದಿನ ಉಲ್ಲೇಖ ಬಂದಿದೆ—

ಬ್ರಹ್ಮದೇವನು ಪ್ರಜೆಗಳನ್ನು ಸಂಹರಿಸುವ ಕೆಲಸವನ್ನು ಮೃತ್ಯುದೇವಿಗೆ ಒಪ್ಪಿಸಲು ಅವಳು ಅದನ್ನು ನಿರಾಕರಿಸಿಬಿಟ್ಟಳು. ಅವಳು ಅಧರ್ಮಕ್ಕೆ ಹೆದರುತ್ತಿದ್ದಳು. ಅದೇ ರೀತಿಯಾಗಿ—

ನಾ ವೈ ಭೀತಾ ಮೃತ್ಯುಸಂಜ್ಞೋಪದೇಶಾಚ್ಛಾಪಾದ್ ಭೀತಾ
ಬಾಢಮಿತ್ಯಬ್ರವೀತ್ ತಮ್ ‖ ೪೪ ‖

ಮೃತ್ಯು ಎಂಬ ಈ (ಭಯಂಕರವಾದ) ಹೆಸರು ಹಾಗೂ ಬ್ರಹ್ಮದೇವನ ಶಾಪಕ್ಕೆ ಹೆದರುತ್ತ ಅವಳು ಹೀಗೆಂದಳು,

+ ಶಾಪವನ್ನೀಯಲಾಗಿಲ್ಲ. ಬರಿ ಹೆದರಿಕೆಯನ್ನಷ್ಟೇ ವ್ಯಕ್ತಪಡಿಸಲಾಗಿದೆ.

**ಶಾಂತಿ/೨೫೮**

ಯುಧಿಷ್ಠಿರ ಕೇಳಿದ್ದರಿಂದ ಭೀಷ್ಮ ಆತನಿಗೆ ಸಾವನ್ನು ಕುರಿತು ಹೇಳುತ್ತಲಿದ್ದಾನೆ. ಪ್ರಜೆಗಳ ಸಂಖ್ಯೆ ಹೆಚ್ಚಾಗಿ ಆ ಭಾರ ಪೃಥ್ವಿಗೆ ಸಹಿಸದಂತಾಯಿತು. ಅದನ್ನು ಕಡಿಮೆ ಮಾಡಲೆಂದು ಬ್ರಹ್ಮದೇವ ತನ್ನ ದೇಹದಿಂದ ಬೆಂಕಿಯನ್ನು ಹೊರಡಿಸಿದನು. ಅದು ಪೃಥ್ವಿಯನ್ನು ಸುಡಹತ್ತಿತು. ಆಗ ಶಂಕರನು ಪ್ರಜೆಗಳ ಮುಂದುವರಿಕೆಯನ್ನು ಉಳಿಸಲೆಂದು ಎಚ್ಚರ ವಹಿಸುವಂತೆ ಕೋರಿದನು. ಆ ರೀತಿಯಾಗಿ ಹುಟ್ಟು-ಸಾವುಗಳನ್ನು ನಿರ್ಮಿಸಲಾಯಿತು. ಬ್ರಹ್ಮದೇವನು ತನ್ನ ದೇಹದಿಂದ ಮೃತ್ಯುದೇವಿ ಎಂಬ ಹೆಣ್ಣನ್ನು ಹುಟ್ಟುಹಾಕಿದನು. ಅವಳಿಗೆ ಪ್ರಜೆಗಳನ್ನು ಸಂಹರಿಸುವ ಕೆಲಸವನ್ನು ಒಪ್ಪಿಸಿದನು. ಅವಳದನ್ನು ನಿರಾಕರಿಸಿಬಿಟ್ಟಳು. ಅವಳು ತುಂಬ ಹೆದರಿಕೊಂಡಿದ್ದಳು. ಸಂಹಾರದಿಂದಾಗಿ ತನ್ನ ಕೈಯಿಂದ ಅಧರ್ಮವಾದೀತೆಂಬ ಹೆದರಿಕೆ ಅವಳದು. ಅವಳು ಬ್ರಹ್ಮದೇವನಿಗೆ ಹೀಗೆಂದಳು—

ಪ್ರಿಯಾನ್ ಪುತ್ರಾನ್ ವಯಸ್ಯಾಂಶ್ಚ ಭ್ರಾತೄನ್ ಮಾತೄಃ ಪಿತೄನಪಿ ।
ಅಪಧ್ಯಾಸ್ಯಂತಿ ಯದ್ಯೇವಂ ಮೃತಾನ್ತೇಷಾಂ ಬಿಭೇಮ್ಯಹಮ್ ‖ ೫ ‖

'ನಾನು ಪುತ್ರ, ಮಿತ್ರ, ಬಂಧು-ಬಾಂಧವರು. ಮಾತಾ, ಪಿತರಂತಹ ವ್ಯಕ್ತಿಗಳನ್ನು ಕೊಲ್ಲಲಾರೆ. ನಾನವರ ಸಾವಿಗೆ ಕಾರಣಳಾದೆನೆಂದರೆ ಅವರು ನನ್ನನ್ನು ಶಪಿಸದಿರರು.' ಇಷ್ಟಾಗಿಯೂ ಬ್ರಹ್ಮದೇವನು ಸಾವಿನ ಕೆಲಸವನ್ನು ಅವಳಿಗೇ ಒಪ್ಪಿಸಿದನು. ಅವಳ ಹೆದರಿಕೆ ನಿರಾಧಾರವಾದದ್ದೆಂದು ಹೇಳಿ ಅವಳಿಂದ ಅಧರ್ಮ ನಡೆಯದಿರಲೆಂದು ವರವನ್ನೂ ಇತ್ತನು. ಆದರೆ—

ತಾಮಧರ್ಮಭಯಾದ್ ಭೀತಾಂ ಪುನರೇವ ಪ್ರಯಾಚತೀಮ್ ‖ ೨೭ ‖

ಭಯಭೀತಳಾದ ಮೃತ್ಯುದೇವಿಯು ತನ್ನ ಮೇಲೆ ದಯೆ ತೋರಬೇಕೆಂದು ಬ್ರಹ್ಮದೇವನನ್ನು ಕೇಳಿಕೊಳ್ಳಲಾಗಿ ಅವನು ಹೀಗೆಂದನು—

ಅಧರ್ಮೋ ನಾಸ್ತಿ ತೇ ಮೃತ್ಯೋ ಸಂಯಚ್ಛೇಮಾಃ ಪ್ರಜಾಃ ಶುಭೇ ।
ಮಯಾ ಹ್ಯುಕ್ತಂ ಮೃಷಾ ಭದ್ರೇ ಭವಿತಾ ನೇಹ ಕಿಂಚನ ‖ ೨೮ ‖

'ಎಲೆ ಮೃತ್ಯುದೇವತೆಯೇ ! ಸಂಹಾರಕಾರ್ಯವನ್ನು ಕೈಕೊಳ್ಳುವುದರಿಂದ ನಿನಗೆ

ಅಧರ್ಮ (ಪಾಪ) ತಟ್ಟಿದು. ಆದ್ದರಿಂದ ನೀನು ನಂಹಾರವನ್ನೆನಗು. ನನ್ನ ಮಾತು ಎಂದಿಗೂ ಸುಳ್ಳಾಗದು.'

+ ಶಾಪವನ್ನು ಉಚ್ಚರಿಸಲಾಗಿಲ್ಲ. ಶಾಪದ ಹೆದರಿಕೆಯಷ್ಟೇ ವ್ಯಕ್ತಗೊಂಡಿದೆ.

## ೭೭. ಪರ್ವತ (ಋಷಿ) > ನಾರದ ದ್ರೋಣ/೫೫

ಯುಧಿಷ್ಠಿರನ ಕೇಳಿಕೆಯ ಮೇರೆಗೆ ವ್ಯಾಸನು ಅವನಿಗೆ ಪುಣ್ಯಶೀಲನಾದ ರಾಜರ್ಷಿಯ ಬಗೆಗೆ ಹೇಳುತ್ತಲಿದ್ದಾನೆ.

ನಾರದ ಹಾಗೂ ಪರ್ವತ ಋಷಿ ಈ ಸೋದರಮಾವ ಹಾಗೂ ಸೋದರಳಿಯರು ಶೈಬ್ಯನ ಮಗನಾದ ಸೃಂಜಯನನ್ನು ಕಾಣಲು ಅವನ ಮನೆಗೆ ಹೋಗುತ್ತಾರೆ. ಸೃಂಜಯನು ಅವರನ್ನು ಯಥೋಚಿತವಾಗಿ ಬರಮಾಡಿಕೊಂಡನು. ಅಲ್ಲಿ ಅವರು ಸೃಂಜಯನ ಅಂದಗಾತಿಯಾದ ಮಗಳನ್ನು ಕಂಡರು. ಪರ್ವತನು ತಕ್ಷಣ ಅವಳನ್ನು ಮನದಲ್ಲೇ ವರಿಸಿದನು. ನಾರದನು ಅವಳ ಚೆಲುವಿಗೆ ಮನಸೋತು ತನಗೆ 'ಕನ್ಯೆಯನ್ನು ದಾನ ಮಾಡಲು' ಸೃಂಜಯನಿಗೆ ಹೇಳಿದನು. ಅವನು ಕೂಡಲೇ ಒಪ್ಪಿಕೊಂಡನು. ಪರ್ವತ ಕೋಪದಿಂದ ಕಿಡಿಕಿಡಿಯಾದನು. ಅವನು ಹೀಗೆಂದನು—

ಹೃದಯೇನ ಮಯಾ ಪೂರ್ವಂ ವೃತಾಂ ವೈ ವೃತವಾನಸಿ ।
ಯಸ್ಮಾದ್ ವೃತಾ ತ್ವಯಾ ವಿಪ್ರ ಮಾ ಗಾಃ ಸ್ವರ್ಗಂ ಯಥೇಪ್ಸಯಾ ॥ ೧೪ ॥

'ನಾನು ಮೊದಲೇ ಇವಳಿಗೆ ಮನದಲ್ಲಿಯೇ ಮಾರುಹೋಗಿದ್ದೇನೆ. ಹೀಗಿರುವಲ್ಲಿ ನೀನು (ಮತ್ತೆ) ಅವಳನ್ನು ಸ್ವೀಕರಿಸುತ್ತಿರುವೆ. ನಾನು ಬಯಸಿದ ಹೆಣ್ಣಿಗೆ ನೀನು ಒಲಿದೆಯೆಂದಬಳಿಕ ನೀನು ಸ್ವರ್ಗವನ್ನು ಪಡೆಯಲಾರೆ.'

ಶಾಂತಿ/೩೦

ನಾರದ ಹಾಗು ಪರ್ವತರೆಂಬ ಈ ಶ್ರೇಷ್ಠರಾದ ಋಷಿಗಳಿಬ್ಬರು ಭೂಮಿಗೆ ಬಂದಿಳಿದು ಮಾನವರ ಸುಖೋಪಭೋಗಗಳನ್ನು ಸವಿಯುತ್ತ ಮಾನವರಲ್ಲಿ ಸಂಚರಿಸುತ್ತಿದ್ದರು. ಅವರಿಬ್ಬರೂ ತಮ್ಮ ಮನದಲ್ಲಿ ಹುಟ್ಟಿಕೊಳ್ಳುವ ಸುಷ್ಟ-ದುಷ್ಟ, ಯೋಗ್ಯ-ಅಯೋಗ್ಯ, ಒಳ್ಳೆಯದು-ಕೆಟ್ಟದ್ದು ಎಂಬ ಯಾವುದೇ ಬಗೆಯ ಯೋಚನೆಯನ್ನು ಒಬ್ಬರಿಗೊಬ್ಬರು ಹೇಳುವುದಾಗಿ ನಿರ್ಧರಿಸಿಕೊಂಡಿದ್ದರು. ಹಾಗೆ ಹೇಳದಿದ್ದವನಿಗೆ ಇನ್ನೊಬ್ಬನ ಶಾಪ ತಟ್ಟಲಿತ್ತು.

ಯೋ ಭವೇದ್ಧದಿ ನಂಕಲ್ಪಃ ಶುಭೋ ವಾ ಯದಿ ವಾಶುಭಃ ॥ ೮ ॥
ಅನ್ಯೋನ್ಯಸ್ಯ ಸ ಆಖ್ಯೇಯೋ ಮೃಷಾ ಶಾಪೋಽನ್ಯಥಾ ಭವೇತ್ ॥ ೯ ॥

ಈ ಶೈಬ್ಯನ ಮಕ್ಕಳು ಸೃಂಜಯನಲ್ಲಿಗೆ ಬಂದಾಗ ಅವನು ಅವರನ್ನು ಬಲು ಮರ್ಯಾದೆಯಿಂದ ಕಂಡನು. ಅವರನ್ನು ತಂದೆಯಂತೆ ಸೇವೆಗೈಯಲು ತನ್ನ ಲಾವಣ್ಯವತಿಯಾದ ಮಗಳಿಗೆ ಹೇಳಿದನು. ಅವಳು ತನ್ನ ತಂದೆಯ ಅಪ್ಪಣೆಯನ್ನು ಅಚ್ಚುಕಟ್ಟಿನಿಂದ ಪಾಲಿಸಹತ್ತಿದಳು. ಆಗ ನಾರದನ ಮನದಲ್ಲಿ ಅವಳ ಬಗೆಗೆ ಕಾಮವಾಸನೆ ಹುಟ್ಟಿತು. ಒಪ್ಪಂದದಂತೆ ನಾರದನು ಈ ಸಂಗತಿಯನ್ನು ಪರ್ವತನಿಗೆ ಹೇಳಬೇಕಿತ್ತು.

ಆದರೆ ಹೇಳಲಿಲ್ಲ. ಪರ್ವತನಿಗೆ ಅವನ ತಪಸ್ಸಿನ ಬಲದಿಂದಾಗಿ ನಾರದನ ಮನದಲ್ಲಿಯ ಈ ಸಂಗತಿ ತಿಳಿಯಿತು. ನಾರದನ ಹಾವಭಾವಗಳಿಂದಲೂ ಅವನ ಮನದಲ್ಲಿಯ ಗೊಂದಲ ಎದ್ದುಕಾಣುತ್ತಿತ್ತು. ಪರ್ವತನಿಗೆ ನಾರದನ ನಡತೆ ಹಿಡಿಸಲಿಲ್ಲ.

> ಕಾಮಾರ್ತಂ ನಾರದಂ ಕ್ರುದ್ಧಃ ಶಶಾಪೈನಂ ತತೋ ಭೃಶಮ್ ।
> ಕೃತ್ವಾ ಸಮಯಮವ್ಯಗ್ರೋ ಭವಾನ್ ವೈ ಸಹಿತೋ ಮಯಾ ॥ ೨೦ ॥
> ಯೋ ಭವೇದ್ಧದಿ ಸಂಕಲ್ಪಃ ಶುಭೋ ವಾ ಯದಿ ವಾಶುಭಃ ।
> ಅನ್ಯೋನ್ಯಸ್ಯ ಸ ಆಖ್ಯೇಯ ಇತಿ ತದ್ ವೈ ಮೃಷಾ ಕೃತಮ್ ॥ ೨೧ ॥
> ಭವತಾ ವಚನಂ ಬ್ರಹ್ಮಂಸ್ತಸ್ಮಾದೇಷ ಶಪಾಮ್ಯಹಮ್ ।
> ನ ಹಿ ಕಾಮಂ ಪ್ರವರ್ತಂತಂ ಭವಾನಾಚಷ್ಟ ಮೇ ಪುರಾ ॥ ೨೨ ॥
> ಸುಕುಮಾರ್ಯಾಂ ಕುಮಾರ್ಯಾಂ ತೇ ತಸ್ಮಾದೇಷ ಶಪಾಮ್ಯಹಮ್ ।
> ಬ್ರಹ್ಮಚಾರೀ ಗುರುರ್ಯಸ್ಮಾತ್ ತಪಸ್ವೀ ಬ್ರಾಹ್ಮಣಶ್ಚ ಸನ್ ॥ ೨೩ ॥
> ಅಕಾರ್ಷೀಃ ಸಮಯಭ್ರಂಶಮಾವಾಭ್ಯಾಂ ಯಃ ಕೃತೋ ಮಿಥಃ ।
> ಶಪ್ಸ್ಯೇ ತಸ್ಮಾತ್ ಸುಸಂಕ್ರುದ್ಧೋ ಭವಂತಂ ತಂ ನಿಬೋಧ ಮೇ ॥ ೨೪ ॥
> ಸುಕುಮಾರೀ ಚ ತೇ ಭಾರ್ಯಾ ಭವಿಷ್ಯತಿ ನ ಸಂಶಯಃ ।
> ವಾನರಂ ಚೈವ ತೇ ರೂಪಂ ವಿವಾಹಾತ್ ಪ್ರಭೃತಿ ಪ್ರಭೋ ॥ ೨೫ ॥
> ಸಂದ್ರಕ್ಷ್ಯಂತಿ ನರಾಶ್ಚಾನ್ಯೇ ಸ್ವರೂಪೇಣ ವಿನಾಕೃತಮ್ ॥ ೨೬ ॥

ಪರ್ವತ ತುಂಬ ಕೆರಳಿದನು. ಕಾಮವಿಹ್ವಲನಾದ ನಾರದನಿಗೆ ಇಂತೆಂದನು: 'ನಮ್ಮಿರ್ವರ ಮನಗಳಲ್ಲಿ ಹುಟ್ಟಿಬರುವ ಒಳ್ಳೆಯ-ಕೇಡಿನ ಯೋಚನೆಗಳನ್ನೆಲ್ಲ ಒಬ್ಬರಿಗೊಬ್ಬರು ಹೇಳುವುದೆಂದು ಮೊದಲೇ ನಿರ್ಧರಿಸಲಾಗಿತ್ತು. ಆದರೆ (ನೀನು ನಿನ್ನ ಮನದ ಮಾತನ್ನು ಹೇಳದ್ದರಿಂದ) ನಮ್ಮ ಆ ಮಾತನ್ನು ವ್ಯರ್ಥಗೊಳಿಸಿದೆ ನೀನು. ಆದ್ದರಿಂದ ನಿನ್ನನ್ನು ಶಪಿಸುವೆನು. ಈ ಸೌಂದರ್ಯ ತುಂಬಿ ತುಳುಕುವ ಕುಮಾರಿಯ ಬಗೆಗೆ ನಿನ್ನ ಮನದಲ್ಲಿ ಕಾಮವಿಕಾರ ಹುಟ್ಟಿಕೊಂಡುದನ್ನು ನೀನು ನನಗೆ ಹೇಳಲಿಲ್ಲ. ಹೀಗಾಗಿ ನಿನ್ನನ್ನು ಶಪಿಸಲಿರುವೆನು. ನೀನೊಬ್ಬ ಬ್ರಹ್ಮಚಾರಿ, ಹಿರಿಯ, ತಪಸ್ವಿ ಹಾಗೂ ಬ್ರಾಹ್ಮಣನು. ಆದರೆ ನೀನು ನಮ್ಮ ಒಪ್ಪಂದವನ್ನು ಮುರಿದೆ. ಹೀಗಾಗಿ ನಾನು ಕೋಪದಿಂದ ನಿನ್ನನ್ನು ಶಪಿಸುವೆನು. ಲಾವಣ್ಯವತಿಯಾದ ಈ ಕನ್ಯೆ ನಿನ್ನ ಮಡದಿಯಾಗುವಳೆಂಬುದು ಖಂಡಿತ. ಆದರೆ ನಿನ್ನ ಮದುವೆಯಾಗುತ್ತಲೇ ನೀನು ಉಳಿದವರಿಗೆಲ್ಲ ಮಂಗನ ಮೋರೆಯವನಾಗಿ ಕಾಣಲಿರುವೆ. ನಿನ್ನೀ ಈಗಿನ ಅಂದ ಹಾಳಾದೀತು.'

ಸೃಂಜಯನ ಮಗಳೊಂದಿಗೆ ನಾರದನ ಮದುವೆ ನಡೆಯಿತು. ಮದುವೆಯ ಮಂತ್ರೋಚ್ಚಾರವನ್ನು ಕೇಳುತ್ತಲೇ ನಾರದ ಅವಳಿಗೆ ಕಪಿಯಾಗಿ ಕಾಣತೊಡಗಿದನು. ಆದರೂ ಅವಳು ಅವನನ್ನು ತಿರಸ್ಕರಿಸದೆ ಪತಿವ್ರತೆಯ ಧರ್ಮದಿಂದ ನಡೆದುಕೊಂಡಳು.

+ ಶಾಂತಿಪರ್ವದಲ್ಲಿ ಪರ್ವತ ಮೊದಲೇ ಅವಳನ್ನು ಮನದಲ್ಲಿ ವರಿಸಿದನೆಂಬ ಉಲ್ಲೇಖವಿಲ್ಲ. ಒಪ್ಪಂದವನ್ನು ಮುರಿದದ್ದರಿಂದ ಶಾಪವನ್ನು ಕೊಡುತ್ತಿರುವುದರ ಖಚಿತವಾದ ಉಲ್ಲೇಖವಿದೆ. ಎರಡೂ ಪರ್ವಗಳಲ್ಲಿ ಶಾಪದ ಭಿನ್ನಭಿನ್ನ ಕಾರಣಗಳನ್ನು ಕೊಡಲಾಗಿದೆ.

## ೮೯. ನಾರದ > ಪರ್ವತ

**ದ್ರೋಣ/೫೫**

ಮೊದಲ ಸಂದರ್ಭ : ನೋಡಿ : ಶಾಪ—ಪರ್ವತ > ನಾರದ.

ಪರ್ವತನು ನಾರದನನ್ನು ಶಪಿಸುತ್ತಲೇ ಅವನು, 'ನೀನು ಅವಳನ್ನು ಮನದಲ್ಲಿಯೇ ವರಿಸಿದ್ದರೂ ಅವಳೊಂದಿಗೆ ಪಾಣಿಗ್ರಹಣವಾಗಿಲ್ಲ. ಮದುವೆಯ ಮುಖ್ಯ ಲಕ್ಷಣ ಸಪ್ತಪದಿ. ಅದು ಆಗಿರದೇ ಇರುವಾಗ ನೀನು ನನ್ನನ್ನು ಶಪಿಸಿದೆ. ಇದು ದೊಡ್ಡ ತಪ್ಪು. ಆದ್ದರಿಂದ,

ತಸ್ಮಾತ್ ತ್ವಮಪಿ ನ ಸ್ವರ್ಗಂ ಗಮಿಷ್ಯಸಿ ಮಯಾ ವಿನಾ ॥ ೧೭ ॥
ಅನ್ಯೋನ್ಯಮೇವಂ ಶಪ್ತ್ವಾ ವೈ ತಸ್ಥತುಸ್ತತ್ರ ತೌ ತದಾ ॥ ೧೮ ॥

'ನೀನು ನಾನಿಲ್ಲದೆ ಸ್ವರ್ಗಕ್ಕೆ ಹೋಗಲಾರೆ (ಎಂದು ನಿನ್ನನ್ನು ಶಪಿಸುತ್ತೇನೆ)' ಎಂದು ಒಬ್ಬರನ್ನೊಬ್ಬರು ಶಪಿಸಿ ಅವರಿಬ್ಬರೂ (ಭೂಮಿಯಲ್ಲಿಯೇ) ಉಳಿದುಕೊಂಡರು.

**ಶಾಂತಿ/೩೦**

ಪರ್ವತನ ಶಾಪದ ನುಡಿಯನ್ನು ಕೇಳಿ ನಾರದನು ಕೆರಳಿ—

ಅಶಪತ್ ತಮಪಿ ಕ್ರೋಧಾತ್ ಭಾಗಿನೇಯಂ ಸ ಮಾತುಲಃ ।
ತಪಸಾ ಬ್ರಹ್ಮಚರ್ಯೇಣ ಸತ್ಯೇನ ಚ ದಮೇನ ಚ ॥ ೨೭ ॥
ಯುಕ್ತೋಽಪಿ ನಿತ್ಯಧರ್ಮಾಶ್ಚ ನ ವೈ ಸ್ವರ್ಗಮವಾಪ್ಸ್ಯಸಿ ।
ತೌ ತು ಶಪ್ತ್ವಾ ಭೃಶಂ ಕ್ರುದ್ಧೌ ಪರಸ್ಪರಮಮರ್ಷಣೌ ॥ ೨೮ ॥

ತನ್ನ ಸೋದರಳಿಯನಾದ ಪರ್ವತನನ್ನು ಹೀಗೆಂದು ಶಪಿಸಿದನು : 'ನೀನು ತಪಸ್ಸು, ಬ್ರಹ್ಮಚರ್ಯ, ಸತ್ಯ ಹಾಗೂ ಇಂದ್ರಿಯನಿಗ್ರಹಗಳಿಂದ ಒಡಗೂಡಿದವನಾದರೂ, ಧರ್ಮದಂತೆ ನಡೆದುಕೊಳ್ಳುವವನಾಗಿದ್ದರೂ ನಿನಗೆ ಸ್ವರ್ಗ ಸಿಕ್ಕಲಾರದು.' ಹೀಗೆ ಅವರಿಬ್ಬರೂ ಕೆರಳಿ ಒಬ್ಬರನ್ನೊಬ್ಬರು ಶಪಿಸಿದರು.

ಕಾಲಾಂತರದಲ್ಲಿ ಅವರಿಬ್ಬರೂ ಭೆಟ್ಟಿಯಾದರು. ಆಗ ಪರ್ವತನ ಅಸಹಾಯಕತೆ ಹಾಗೂ ದೈನ್ಯಾವಸ್ಥೆಗಳು ಕಂಡುಬಂದವು. ನಾರದನು ಪರ್ವತನಿಗೆ, 'ನೀನು ಮೊದಲು ನನ್ನನ್ನು ಶಪಿಸಿದೆ. ಆದ್ದರಿಂದ ಕೆರಳಿ ನಾನೂ ನಿನ್ನನ್ನು ಶಪಿಸಿದೆ' ಎಂದನು. ಅದಕ್ಕೆ ಪರ್ವತನು ನಾರದನಿಗ ಹೀಗೆಂದನು—

ಭವಾನ್ ಪ್ರಸಾದಂ ಕುರುತಾತ್ ಸ್ವರ್ಗಾದೇಶಾಯ ಮೇ ಪ್ರಭೋ ॥ ೩೭ ॥

'ಎಲೈ ಭಗವಂತನೇ! ನನ್ನ ಮೇಲೆ ದಯೆ ತೋರು. ನನಗೆ ಸ್ವರ್ಗಪ್ರಾಪ್ತಿ ಆಗಲಿ.' ನಾರದ ಪರ್ವತನ ಕೋರಿಕೆಯನ್ನು ಮನ್ನಿಸಿದನು. ಅವರಿಬ್ಬರೂ—

ನ್ಯವರ್ತಯೇತಾಂ ತೌ ಶಾಪಾವನ್ಯೋನ್ಯೇನ ತದಾ ಮುನೀ ॥ ೩೯ ॥

ಪರಸ್ಪರರ ಶಾಪಗಳನ್ನು ನಿವಾರಿಸಿದರು.

ನಾರದನಿಗೆ ಮೊದಲಿನ ರೂಪು ಬರುತ್ತಲೇ ಸೃಂಜಯನ ಮಗಳು ಅವನಾವನೋ ಪರಪುರುಷನೆಂದುಕೊಂಡು ಅವನನ್ನು ತಪ್ಪಿಸಲು ಆರಂಭಿಸಿದಳು. ಪರ್ವತನು ಅವಳಿಗೆ ತಿಳಿಹೇಳಿ ನಾರದನೇ ಅವಳ ಗಂಡನೆಂಬುದನ್ನು ಮನಗಾಣಿಸಿದನು.

ಶಾಪದೋಷಂ ಚ ತಂ ಭರ್ತುಃ ಶ್ರುತ್ವಾ ಪ್ರಕೃತಿಮಾಗತಾ ॥ ೪೩ ॥

ಶಾಪದೋಷದಿಂದಾಗಿ ಗಂಡ ಹೀಗಾಗಿದ್ದನೆಂಬುದನ್ನು (ಕೋತಿಯಾಗಿದ್ದನು) ಅರಿತು ಅವಳು ಸಮಾಧಾನ ತಳೆದಳು.

+ ಮರುಶಾಪ.

ಪರ್ವತ ಸ್ವರ್ಗವನ್ನು ಪಡೆಯಲೆಂದು ನಾರದನನ್ನು ಬೇಡಿಕೊಳ್ಳುವುದು—ಯಾಚಿತ ವಾದ ಉಃಶಾಪ.

ನಾರದನು ಪರ್ವತನನ್ನು ಕೇಳಿಕೊಂಡಿಲ್ಲ. ಹೀಗಾಗಿ ಆತನ ಶಾಪದ ನಿವಾರಣೆಯು ಪರ್ವತನ ಔದಾರ್ಯದಿಂದಾಗಿ ಆಗಿರಲು ಸಾಕು. ನಾರದನ ದೊಡ್ಡ ಮನಸ್ಸಿನಿಂದಾಗಿ ಪರ್ವತ ಪ್ರಭಾವಿತನಾಗಿರಬಹುದು. ನಾರದನ ಸಂದರ್ಭದಲ್ಲಿ ಶಾಪವಿಮೋಚನೆಯೇ ಉಃಶಾಪವೆನ್ನಿಸಿದೆ—ಎಂದು ಖಂಡಿತವಾಗಿ ಹೇಳಲಾಗದು. ಅಲ್ಲದೆ ಅದನ್ನು ಉಃಶಾಪ ವೆಂದು ಅನ್ನುವುದೇ ಆದರೆ ಅದು ಅಯಾಚಿತವಾದುದು.

## ೯೦. ಬ್ರಾಹ್ಮಣ > ಕರ್ಣ

ಕರ್ಣ/೪೨

ಶಲ್ಯನು ಕರ್ಣನಿಗೆ ಹಂಸ-ಕಾಗೆಗಳ ಕಥೆಯನ್ನು ಹೇಳಿ ಅವನಿಗೆ ಅವನ ನಿಜವಾದ ಸ್ಥಾನ ಹಾಗೂ ಯೋಗ್ಯತೆಯನ್ನು ತೋರಿಸಿಕೊಟ್ಟನು. ಕರ್ಣನೂ ಕೂಡ ಶಲ್ಯನಿಗೆ ಶ್ರೀಕೃಷ್ಣ-ಅರ್ಜುನರ ಸಾಮರ್ಥ್ಯದ ಬಗೆಗೆ ಅವನಿಗಿಂತಲೂ ತನಗೆ ಹೆಚ್ಚಿಗೆ ಗೊತ್ತೆಂದು ಹೇಳಿ ತಾನು ಅವರೊಂದಿಗೆ ಕಾದಾಡಬಯಸುವೆನೆಂದು ನುಡಿದನು. ಈ ಸಂದರ್ಭದಲ್ಲಿ ಕರ್ಣನು—

ಸಂತಾಪಯತ್ಯಭ್ಯಧಿಕಂ ನು ರಾಮಾಚ್ಛಾಪೋಽದ್ಯ ಮಾಂ
ಬ್ರಾಹ್ಮಣಸತ್ತಮಾಚ್ಚ ॥ ೩ ॥

ಪರಶುರಾಮನ ಶಾಪದಂತೆಯೇ ಬ್ರಾಹ್ಮಣನ ಶಾಪವನ್ನು ಉಲ್ಲೇಖಿಸಲಾಗಿದೆ.

ಕರ್ಣನು ಬ್ರಾಹ್ಮಣನ ಶಾಪದ ಪರಿಣಾಮಕ್ಕೆ ಹೆದರುತ್ತಿದ್ದನು. ಅವನು ಶಲ್ಯನಿಗೆ ಹೀಗೆಂದನು : 'ಹಿಂದಕ್ಕೆ ಒಂದು ಸಲ ನಾನು ಒಬ್ಬ ಬ್ರಾಹ್ಮಣನ ಆಶ್ರಮದ ಬಳಿಯಲ್ಲಿ ಹೊರಟಿದ್ದೆ. ಆಗ ನಾನೆಸೆದ ಒಂದು ಬಾಣವು ಬ್ರಾಹ್ಮಣನ ಹೋಮದ ಹಸುವಿನ ಕರುವಿಗೆ ತಾಗಿ ಅದು ಸತ್ತುಹೋಯಿತು. ಆಗ ಮರಣಾಸನ್ನವಾದ ಆ ಕರುವನ್ನು ಕಂಡು ಆ ಬ್ರಾಹ್ಮಣನು ನನಗೆ ಇಂತೆಂದನು—

ಯಸ್ಮಾತ್ ತ್ವಯಾ ಪ್ರಮತ್ತೇನ ಹೋಮಧೇನ್ವಾ ಹತಃ ಸುತಃ ॥ ೪೦ ॥
ಶ್ವಭ್ರೇ ತೇ ಪತತಾಂ ಚಕ್ರಮಿತಿ ಮಾಂ ಬ್ರಾಹ್ಮಣೋಽಬ್ರವೀತ್ ।
ಯುಧ್ಯಮಾನಸ್ಯ ಸಂಗ್ರಾಮೇ ಪ್ರಾಪ್ತಸ್ಯೈಕಾಯನಂ ಭಯಮ್ ॥ ೪೧ ॥
ತಸ್ಮಾದ್ ಬಿಭೇಮಿ ಬಲವದ್ ಬ್ರಾಹ್ಮಣವ್ಯಾಹತಾದಹಮ್ ।
ಏತೇ ಹಿ ಸೋಮರಾಜಾನ ಈಶ್ವರಾಃ ಸುಖದುಃಖಯೋಃ ॥ ೪೨ ॥

'ನೀನು ನನ್ನ ಹೋಮಧೇನುವಿನ ಕರುವನ್ನು ಕೊಂದು ದೊಡ್ಡ ತಪ್ಪುಮಾಡಿರುವೆ. ಅದರಿಂದಾಗಿ, ನೀನು ಯುದ್ಧವನ್ನು ಮಾಡುವಾಗ ನೀನು ತುಂಬ ಹೆದರಿಕೊಂಡ ಕ್ಷಣ ದಲ್ಲಿಯೇ ನೆಲವು ನಿನ್ನ ರಥದ ಗಾಲಿಯನ್ನು ನುಂಗಿಹಾಕಲಿದೆ.' ನನಗೆ (ಹಗೆಯು

ಸಾಮರ್ಥ್ಯದ ಹೆದರಿಕೆಯಿರದೆ) ಬ್ರಾಹ್ಮಣನ ಶಾಪದ (ಅದರ ಘೋರವಾದ ಪರಿಣಾಮದ) ಹೆದರಿಕೆಯಿದೆ. ಯಾರ ದೊರೆ ಚಂದ್ರನಾಗಿರುವನೋ ಅಂಥ ಈ ಬ್ರಾಹ್ಮಣ ತನ್ನ ಶಾಪ ಹಾಗೂ ವರಗಳನ್ನೀಯುವ ಸಾಮರ್ಥ್ಯದಿಂದಾಗಿ ಬೇರೆಯವರಿಗೆ ಸುಖ, ದುಃಖಗಳನ್ನು ನೀಡಲು ಸಮರ್ಥನಾಗಿದ್ದಾನೆ. ಅವನ ಕೃಪೆಯನ್ನು ಸಂಪಾದಿಸಲೆಂದು ಅವನಿಗೆ ಆಕಳು, ಎತ್ತು, ಆನೆ, ದಾಸದಾಸಿಯರನ್ನೆಲ್ಲ ಕೊಡಮಾಡಿದೆ. ಇಷ್ಟಾಗಿಯೂ ಅವನು ನನಗೆ ದಯೆ ತೋರಲಿಲ್ಲ. ನನ್ನ ಅಪರಾಧವನ್ನು ಒಪ್ಪಿಕೊಂಡು ಅವನನ್ನು ಕ್ಷಮೆ ಕೇಳಿದೆ. ಅದಕ್ಕೆ ಅವನು, 'ನಾನಾಡಿದುದು ಸುಳ್ಳಾಗಲಾರದು. ಪರಿಣಾಮವನ್ನು ತಪ್ಪಿಸಲಾಗದು' ಎಂದನು.

ಮಾ ತ್ವಂ ಬ್ರಹ್ಮಗತಿಂ ಹಿಂಸ್ಯಾಃ ಪ್ರಾಯಶ್ಚಿತ್ತಂ ಕೃತಂ ತ್ವಯಾ ।
ಮದ್ವಾಕ್ಯಂ ನಾನೃತಂ ಲೋಕೇ ಕಶ್ಚಿತ್ ಕುರ್ಯಾತ್ ಸಮಾಪ್ನುಹಿ ॥ ೪೯ ॥

ನನಗೆ ಸಲ್ಲದ ಆಸೆಗಳನ್ನು ತೋರಿಸಿ ನಾನು ಪಡೆದುಬಂದ ಈ ಬ್ರಾಹ್ಮಣ ಜನ್ಮವನ್ನು ಹಾಳುಮಾಡಬೇಡ ನಿನಗೆ. ಪಶ್ಚಾತ್ತಾಪ ಆಗಿದೆ. ನೀನು ದಾನಾದಿಗಳಿಂದ ಪ್ರಾಯಶ್ಚಿತ್ತವನ್ನೂ ಮಾಡಿಕೊಂಡಿರುವೆ. ನನ್ನ ಮಾತನ್ನು ಈ ಜಗತ್ತಿನಲ್ಲಿಯ ಯಾವನೂ ಸುಳ್ಳಾಗಿಸಲಾರನು. ಹೀಗಾಗಿ ನನ್ನ ಶಾಪ ನಿನಗೆ ತಟ್ಟದಿರದು.

**ಕರ್ಣ/೯೦**

ಸಂಜಯ ಧೃತರಾಷ್ಟ್ರನಿಗೆ ಕರ್ಣವಧೆಯ ವೃತ್ತಾಂತವನ್ನು ಹೇಳುತ್ತಲಿದ್ದಾನೆ,

ಕರ್ಣನ ವಧೆ ಹತ್ತಿರ ಬರಹತ್ತಿದಂತೆ ಭಾರ್ಗವ ಪರಶುರಾಮನು ಅವನಿಗಿತ್ತ ಬ್ರಹ್ಮಾಸ್ತ್ರವು ಮರೆಯಾಗಹತ್ತಿತು. ರಥದ ಎಡಗಾಲಿಯು ನೆಲದಲ್ಲಿ ಹೂತುಕೊಳ್ಳ ತೊಡಗಿತು. ಆಗ—

ತತೋ ರಥೋ ಘೂರ್ಣಿತವಾನ್ ನರೇಂದ್ರ ಶಾಪಾತ್ತದಾ
ಬ್ರಾಹ್ಮಣಸತ್ತಮಸ್ಯ ॥ ೮೩ ॥

ಬ್ರಾಹ್ಮಣನ ಶಾಪದಿಂದಾಗಿ ಕರ್ಣನ ರಥ ಅತ್ತಿತ್ತ ಹೊಯ್ದಾಡಹತ್ತಿತು.

ಘೂರ್ಣೇ ರಥೇ ಬ್ರಾಹ್ಮಣಸ್ಯಾಭಿಶಾಪಾದ್ ರಾಮಾದುಪಾತ್ತೇ
ತ್ವವಿಭಾತಿ ಚಾಸ್ತ್ರೇ ॥ ೮೪ ॥

ಬ್ರಾಹ್ಮಣನ ಶಾಪದಿಂದಾಗಿ ರಥವು ಹೊಯ್ದಾಡತೊಡಗುತ್ತಲೇ ಅವನು ಪರಶುರಾಮನಿಂದ ಪಡೆದ ಅಸ್ತ್ರವನ್ನೂ ಮರೆಯಹತ್ತಿದನು, ಅದೇ ಕ್ಷಣಕ್ಕೆ ಅರ್ಜುನನು ಅವನ ಸರ್ಪಾಸ್ತ್ರವನ್ನು ಛೇದಿಸಿದನು. ಇವೆಲ್ಲ ಕಾರಣಗಳಿಂದಾಗಿ ಕರ್ಣನಲ್ಲಿ ಖಿನ್ನತೆಯು ಹುಟ್ಟಿಕೊಂಡಿತು.

**ಸ್ತ್ರೀ೯/೨೧**

ಗಾಂಧಾರಿಯು ಶ್ರೀಕೃಷ್ಣನಿಗೆ ಕರ್ಣವಧೆಯನಂತರ ಸ್ತ್ರೀಯರು ಗೈದ ಆಕ್ರೋಶ ಹಾಗೂ ಕರುಣ-ವಿಲಾಪಗಳನ್ನು ಕುರಿತು ಹೇಳುತ್ತಲಿದ್ದಾಳೆ. ಕರ್ಣನ ಮಡದಿ ಹಾಗೂ ವೃಷಸೇನನ ತಾಯಿ ನೆಲದ ಮೇಲೆ ಹೊರಳಾಡುತ್ತ ಬಡಬಡಿಸುತ್ತಲಿದ್ದಾರೆ.

ಆಚಾರ್ಯಶಾಪೋಽನುಗತೋ ಧ್ರುವಂ ತ್ವಾಂ ಯದಗ್ರಸಚ್ಚಕ್ರಮಿದಂ
ಧರಿತ್ರೀ ॥ ೧೧ ॥

'ಆಚಾರ್ಯರಿತ್ತ ಶಾಪವೇ ನಿಮ್ಮನ್ನು ಖಂಡಿತವಾಗಿಯೂ ಪೀಡಿಸುತ್ತಲಿದೆ ಹಾಗೆಂದೇ ನೆಲವು ರಥದ ಗಾಲಿಯನ್ನು ನುಂಗಿಹಾಕುತ್ತಲಿದೆ '

**ಶಾಂತಿ/೧**

ಯುಧಿಷ್ಠಿರನು ನಾರದನಿಗೆ ಕರ್ಣನು ಪಡೆದ ಶಾಪವನ್ನು ಕುರಿತು ಕೇಳುತ್ತಲಿದ್ದಾನೆ.

ಕಥಂ ನು ಶಪ್ತೋ ಭ್ರಾತಾ ಮೇ ತತ್ ತ್ವಂ ವಕ್ತುಮಿಹಾರ್ಹಸಿ ॥ ೪೪ ॥

ನನ್ನ ಅಣ್ಣನಿಗೆ ಶಾಪ ದೊರೆತುದು ಹೇಗೆಂಬುದನ್ನು ನನಗೆ ಹೇಳುವಂಥವರಾಗಿ. ನಾನದನ್ನು ಅರಿಯಬಯಸುತ್ತೇನೆ

**ಶಾಂತಿ/೨**

ಆಗ ನಾರದನು ಅವನಿಗೆ ಕರ್ಣನ ಶಾಪಕಥೆಯನ್ನು ಹೇಳಹತ್ತಿದನು. ಅದರಲ್ಲಿ ಮುಂದಿನ ಉಲ್ಲೇಖ ಇದೆ. ಕರ್ಣನ ಕೈಯಿಂದ ಬ್ರಾಹ್ಮಣನ ಹೋಮಧೇನುವಿನ ಕರು ಕೊಲ್ಲಲ್ಪಡುತ್ತಲೇ ಆ ಬ್ರಾಹ್ಮಣ ಸಂತಪ್ತನಾಗಿ ಕರ್ಣನಿಗೆ ಹೀಗೆಂದನು—

ದುರಾಚಾರ ವಧಾರ್ಹಸ್ತ್ವಂ ಫಲು ಪ್ರಾಪ್ನುಹಿ ದುರ್ಮತೇ ॥ ೨೩ ॥
ಯೇನ ವಿಸ್ಪರ್ಧಸೇ ನಿತ್ಯಂ ಯದರ್ಥಂ ಘಟಸೇಽನಿಶಮ್ ।
ಯುದ್ಧತಸ್ತೇನ ತೇ ಪಾಪ ಭೂಮಿಶ್ಚಕ್ರಂ ಗ್ರಸಿಷ್ಯತಿ ॥ ೨೪ ॥
ತತಶ್ಚಕ್ರೇ ಮಹೀಗ್ರಸ್ತೇ ಮೂರ್ಧಾನಂ ತೇ ವಿಚೇತಸಃ ।
ಪಾತಯಿಷ್ಯತಿ ವಿಕ್ರಮ್ಯ ಶತ್ರುರ್ಗಚ್ಛ ನರಾಧಮ ॥ ೨೫ ॥
ಯಥೇಯಂ ಗೌರ್ಹತಾ ಮೂಢ ಪ್ರಮತ್ತೇನ ತ್ವಯಾ ಮಮ ।
ಪ್ರಮತ್ತಸ್ಯ ತಥಾ ರಾತಿಃ ಶಿರಸ್ತೇ ಪಾತಯಿಷ್ಯತಿ ॥ ೨೬ ॥
ಶಪ್ತಃ ಪ್ರಸಾದಯಾಮಾಸ ಕರ್ಣಸ್ತಂ ದ್ವಿಜಸತ್ತಮಮ್ ॥ ೨೭ ॥

'ಎಲೈ ಪಾಪಿಯೇ! ನಿನ್ನೀ ದುರಾಚಾರದಿಂದಾಗಿ ನಿನಗೆ ಸಾವು ಬರುವುದೇ ಸರಿಯಾದದ್ದು. ಎಲೈ ದುರ್ಬುದ್ಧಿಯವನೇ! ನಿನ್ನ ಪಾಪದ ಫಲ ನಿನಗೆ ದೊರೆಕಲೇ ಬೇಕು. ಯಾವನನ್ನು ಕುರಿತು ನೀನು ಯಾವಾಗಲೂ ಹೊಟ್ಟೆಕಿಚ್ಚುಪಡುವೆಯೋ, ಯಾವನ ಸೋಲಿಗಾಗಿ ನೀನು ಹಗಲಿರುಳು ಸಂಕಟದಿಂದ ಕಾತರಿಸುವೆಯೋ ಅವನೊಂದಿಗೆ ಹೋರಾಡುವಾಗ ನಿನ್ನ ರಥದ ಗಾಲಿ ನೆಲದಲ್ಲಿ ಹೂತುಕೊಳ್ಳುವುದು. ಎಲೈ ನರಾಧಾಮನೇ! ನಿನ್ನ ರಥದ ಗಾಲಿಯು ನೆಲದಲ್ಲಿ ಹೂತುಕೊಂಡು ನೀನು ವೈಮನಸ್ಯೆ ಕ್ಷಣದಲ್ಲಿಯೇ ಹಗೆಯು ತನ್ನ ಸಾಮರ್ಥ್ಯವನ್ನು ಪ್ರಕಟಿಸಿ ನಿನ್ನ ರುಂಡವನ್ನೇ ಕತ್ತರಿಸಿ ಹಾಕುವನು. ಇಲ್ಲಿಂದ ತೊಲಗಾಚೆ. ಎಲೈ ನೀಚನೇ! ನೀನು ನನ್ನ ಹಸುವಿನ ಕರುವನ್ನು ಕೊಂದಂತೆಯೇ ಸೊಕ್ಕೇರಿದ ನಿನ್ನೀ ರುಂಡವನ್ನು ನಿನ್ನ ಹಗೆಯು ಮುಂಡದಿಂದ ಬೇರ್ಪಡಿಸಿಯಾನು.'

ಶಾಪದ ಉಪಶಮನ ದೊರೆಕಲೆಂದು ಕರ್ಣನು ಬ್ರಾಹ್ಮಣನಿಗೆ ಹಸು, ಎತ್ತು, ರತ್ನಗಳು, ದ್ರವ್ಯ ಮುಂತಾಗಿ ಕೊಡಮಾಡಿದನು. ಅವನ ಕಾಲಿಗೆ ಬಿದ್ದನು. ಆದರೆ ಬ್ರಾಹ್ಮಣನ ಮನಸ್ಸು ಕರಗಲಿಲ್ಲ. ಬ್ರಾಹಣನು ಅವನಿಗೆ ಹೀಗೆಂದನು—

ನ ಹಿ ಮೇಽವ್ಯಾಹತಂ ಕುರ್ಯಾತ್ ಸರ್ವಲೋಕೋಽಪಿ ಕೇವಲಮ್ ।
ಗಚ್ಛ ವಾ ತಿಷ್ಠ ವಾ ಯದ್ ಕಾರ್ಯಂ ತೇ ತತ್ ಸಮಾಚರ ॥ ೨೮ ॥

'ಈ ಜಗತ್ತಿನಲ್ಲಿ ನನ್ನ ಮಾತು ಸುಳ್ಳಾಗಲಾರದು. ನೀನು ಇಲ್ಲಿರು, ಇನ್ನೆಲ್ಲಿಗೋ ಹೋಗು ಇಲ್ಲವೆ ನಿನಗೇನು ಮಾಡುವದಿದೆಯೋ ಅದನ್ನು ಮಾಡು!'

ಇದು ಬೇರೊಂದು ಉಲ್ಲೇಖ ಮಾತ್ರ. ನೋಡಿ—ಶಾಪ: ಪರಶುರಾಮ > ಕರ್ಣ. ಶಾಂತಿ/೫-೧೧ರಿಂದ ೧೫.

+ ಅರ್ಜುನನಿಗೆ ಕರ್ಣನ ದಾರಿ ಹಗುರಾಗಲೆಂದು ಈ ಶಾಪವನ್ನು ಆಯೋಜಿಸ ಲಾಗಿದೆಯೆಂದು ಕಾಣುತ್ತದೆ.

## ೯೧. ಸಾಧ್ವಿ > ಕಳ್ಳರು

**ಕರ್ಣ/೪೫**

ಶಲ್ಯನು ಕರ್ಣನ ಸಾರಥ್ಯವನ್ನು ಒಪ್ಪಿಕೊಂಡಿದ್ದನಾದರೂ ಕರ್ಣನಿಗೆ ಇರಿಯುವಂತೆ ಮಾತನಾಡುತ್ತ ಅವನನ್ನು ಒಂದೇ ಸವನೆ ಕಳೆಗುಂದುವಂತೆ ಮಾಡುತ್ತಿದ್ದನು. ಶಲ್ಯ ಮಂದ್ರ ದೇಶದ ದೊರೆಯಾಗಿದ್ದನು. ಕರ್ಣನು ಮಂದ್ರನಾಡು. ಗಾಂಧಾರ, ಆರಟ್ಟ, ಸಿಂಧು, ಸೌವೀರ ಮೊದಲಾದೆಡೆಗಳಲ್ಲಿಯ ಜನರ ಯೋಗ್ಯತೆಯೆಷ್ಟು ಎಂಬುದನ್ನು ಕುರಿತು ಶಲ್ಯನಿಗೆ ಹಲವಾರು ಕಥೆಗಳ ಮೂಲಕ ಮಾರುತ್ತರಗಳನ್ನು ನೀಡುತ್ತಲಿದ್ದನು.

ಹಿಂದಕ್ಕೆ ಆರಟ್ಟ ದೇಶದ ಒಬ್ಬ ಸಾಧ್ವಿಯನ್ನು ಕಳ್ಳರು ಅಪಹರಿಸಿ ಅವಳ ಮೇಲೆ ಅತ್ಯಾಚಾರವನ್ನೆಸಗಿದರು.

......ಸಾ ತಾನಭ್ಯಶಪತ್ ತತಃ ॥ ೧೧ ॥
ಬಾಲಾಂ ಬಂಧುಮತೀಂ ಯನ್ಮಾಮಧರ್ಮೇಣೋಪಗಚ್ಛಥ ।
ತಸ್ಮಾನ್ನಾರ್ಯೋ ಭವಿಷ್ಯಂತಿ ಬಂಧಕ್ಯೋ ವೈ ಕುಲಸ್ಯ ಚ ॥ ೧೨ ॥
ನ ಚೈವಾಸ್ಮಾತ್ ಪ್ರಮೋಕ್ಷಧ್ವಂ ಘೋರಾತ್ ಪಾಪಾನ್ನರಾಧಮಾಃ ।
ತಸ್ಮಾತ್ ತೇಷಾಂ ಭಾಗಹರಾ ಭಾಗಿನೇಯಾ ನ ಸೂನವಃ ॥ ೧೩ ॥

'ನಾನಿನ್ನೂ ಬಾಲಿಕೆಯಾಗಿರಲು, ನನ್ನ ಬಂಧುಬಳಗವೆಲ್ಲ ಬದುಕಿರಲು ನೀವೆಲ್ಲರೂ ಅಧರ್ಮದಿಂದ ನನ್ನೊಡನೆ ಸಮಾಗಮವನ್ನು ಮಾಡಿರುವಿರಿ. ಹೀಗಾಗಿ ನಿಮ್ಮ ಕುಲದ ಹೆಣ್ಣುಗಳೆಲ್ಲ ಹಾದರಗಿತ್ತಿಯರಾಗಲಿ. ಎಲೋ ನೀಚರೇ! ನಿಮ್ಮೀ ಪಾಪಕೃತ್ಯದಿಂದ ನಿಮಗೆ ಬಿಡುಗಡೆ ಎಂಬುದೇ ಇಲ್ಲ. ನಿಮ್ಮ ದುಡ್ಡುದುಗ್ಗಾಣಿಯ ಲಾಭ ನಿಮ್ಮ ಸೋದರಳಿಯಂದಿರಿಗೆ ದೊರೆಯಲಿ, ನಿಮ್ಮ ಮಕ್ಕಳಿಗಲ್ಲ.'

+ ಈ ಶಾಪದ ಬಿಸಿ ಕಳ್ಳರಿಗೆ ತಲುಪದೆ ಅವರ ಕುಲದ ನಿರಪರಾಧಿಗಳಾದ ಹೆಣ್ಣು ಗಳಿಗೆ ತಲುಪಿದೆ.

## ೯೨. ದಕ್ಷ > ಸೋಮ (ಚಂದ್ರ)

**ಶಲ್ಯ/೩೫**

ವೈಶಂಪಾಯನ ಜನಮೇಜಯ ದೊರೆಗೆ ಬಲರಾಮನು ಪ್ರಭಾಸಕ್ಷೇತ್ರಕ್ಕೆ ಬಂದುದು, ಅವನ ತೀರ್ಥಯಾತ್ರೆ, ಬೇರೆ ಬೇರೆ ತೀರ್ಥಗಳ ಹುಟ್ಟು, ಅವುಗಳ ಹೆಗ್ಗಳಿಕೆ, ಅವುಗಳಿಂದ

ಪುಣ್ಯಫಲ ಮುಂತಾದ ಸಂಗತಿಗಳನ್ನು ಕುರಿತು ಹೇಳುತ್ತಿರುವಾಗಲೇ ಸೋಮನಿಗೆ ಕ್ಷಯದ ಬೇನೆಯಾದುದನ್ನೂ ಹೇಳಿದನು. ಆಗ ರಾಜನು ಅವನಿಗೆ ಕ್ಷಯಬೇನೆ ಬಂದುದು ಹೇಗೆಂದು ಕೇಳಿದನು. ವೈಶಂಪಾಯನ ಆ ಕಥೆಯನ್ನು ಸವಿಸ್ತರವಾಗಿ ಹೇಳಿದನು. ಅವನು ಪ್ರಭಾಸ ಕ್ಷೇತ್ರವನ್ನು ಕುರಿತು ಹೀಗೆ ಹೇಳುತ್ತಾನೆ—

ಪುಣ್ಯಂ ಪ್ರಭಾಸಂ ಸಮುಪಾಜಗಾಮ ಯತ್ರೋಡುರಾಡ್
ಯಕ್ಷ್ಮಣಾ ಕ್ಲಿಶ್ಯಮಾನಃ ॥ ೪೧ ॥
ವಿಮುಕ್ತಶಾಪಃ ಪುನರಾಪ್ಯ ತೇಜಃ ಸರ್ವಂ ಜಗದ್
ಭಾಸಯತೇ ನರೇಂದ್ರ ॥ ೪೨ ॥

ರಾಜಯಕ್ಷ್ಮ(ಕ್ಷಯಬೇನೆ)ದಿಂದ ಬಳಲುತ್ತಿದ್ದ ಸೋಮ(ಚಂದ್ರ) ಪ್ರಭಾಸಕ್ಷೇತ್ರ ದಲ್ಲಿ ಶಾಪಮುಕ್ತನಾಗಿ ತನ್ನ ಮೊದಲಿನ ತೇಜಸ್ಸಿನಿಂದ ಜಗತ್ತನ್ನು ಬೆಳಗತೊಡಗಿದನು. ಬಲರಾಮ ಹೋದದ್ದು ಇದೇ ಕ್ಷೇತ್ರಕ್ಕೆ. ಇದನ್ನು ಆಲಿಸಿದ ಜನಮೇಜಯನು ಸೋಮನಿಗೆ ಶಾಪ ಬರಲು ಕಾರಣವೇನು ? ಎಂದನು. ವೈಶಂಪಾಯನ ಹೀಗೆಂದು ಉತ್ತರಿಸಿದನು—

ಪ್ರಜಾಪತಿ ದಕ್ಷನಿಗೆ ಹಲವು ಜನ ಮಕ್ಕಳು. ಆತನ ಇಪ್ಪತ್ತೇಳು ಜನ ಕನ್ಯೆಯರು ಸೋಮನ ಮಡದಿಯರು. ರೋಹಿಣಿ ಎಲ್ಲರಿಗಿಂತಲೂ ಬಲುಚೆಲುವೆ. ಹೀಗಾಗಿ ಅವನಿಗೆ ಅವಳೇ ತುಂಬ ಹಿಡಿಸುತ್ತಿದ್ದಳು. ಅವನು ಅವಳ ಜೊತೆಗೆ ಹೆಚ್ಚಿನ ಹೊತ್ತು ಇರುತ್ತಿದ್ದನು. ಆದ್ದರಿಂದ ಉಳಿದ ಮಡದಿಯರು ಕುಪಿತರಾದರು. ಅವರೆಲ್ಲ ತಮ್ಮ ತಂದೆಯ ಬಳಿಗೆ ಹೋಗಿ ಇನ್ನು ತಾವೆಲ್ಲ ತಪಸ್ಸನ್ನಾಚರಿಸುತ್ತ ತಮ್ಮ ಬದುಕನ್ನು ಸವೆಯಿಸುವುದಾಗಿ ನುಡಿದರು. ದಕ್ಷನು ಚಂದ್ರನಿಗೆ ಮಡದಿಯರೆಲ್ಲರೊಂದಿಗೂ ಸರಿಸಮ ನಾಗಿ ನಡೆದುಕೊಳ್ಳುವಂತೆ ಬುದ್ಧಿ ಹೇಳಿ ಅವರನ್ನೆಲ್ಲ ಅವನಲ್ಲಿಗೆ ಕಳಿಸಿಕೊಟ್ಟನು. ಇಷ್ಟಾಗಿಯೂ ಸೋಮನ ನಡತೆಯಲ್ಲಿ ಏರುಪೇರಾಗಲಿಲ್ಲ. ಅವರೆಲ್ಲ ಮತ್ತೆ ತಮ್ಮ ತಂದೆಯ ಬಳಿಗೆ ಬಂದು ಚಂದ್ರನ ಬಗೆಗೆ ದೂರಿಕೊಂಡರು. ಆಗ ದಕ್ಷನೆಂದನು—

ಸಮಂ ವರ್ತಸ್ವ ಭಾರ್ಯಾಸು ಮಾ ತ್ವಾಂ ಶಪ್ಸ್ಯೇ ವಿರೋಚನ ॥ ೫೭ ॥

'ಎಲೈ ವಿರೋಚನನೇ ! ನೀನು ನಿನ್ನೆಲ್ಲ ಮಡದಿಯರೊಂದಿಗೆ ಸರಿಸಮನಾಗಿ ನಡೆದು ಕೊಳ್ಳದಿದ್ದರೆ ನಾನು ನಿನ್ನನ್ನು ಶಪಿಸಬೇಕಾದೀತು.' ದಕ್ಷನ ಈ ಬೆದರಿಕೆಯಿಂದಾಗಿಯೂ ತನ್ನ ನಡತೆಯನ್ನು ಮಾರ್ಪಡಿಸಿಕೊಳ್ಳುವ ಅಗತ್ಯ ಚಂದ್ರನಿಗೆ ಕಾಣಲಿಲ್ಲ. ಅವನು ಬರಿ ರೋಹಿಣಿಯನ್ನಷ್ಟೇ ತನ್ನ ಹತ್ತಿರಕ್ಕೆ ಸೇರಿಸುತ್ತಿದ್ದನು. ಅದರಿಂದಾಗಿ ಉಳಿದವರೆಲ್ಲರಲ್ಲ ಅಸೂಯೆ ಹುಟ್ಟಿಕೊಂಡಿತು. ಅವರು ತಮ್ಮ ದುಗುಡವನ್ನು ತಂದೆಯೆದುರು ತೋಡಿ ಕೊಂಡರು. ಅವನನ್ನು ತಮಗಾಸರೆ ನೀಡೆಂದು ಕೇಳಿಕೊಂಡರು. ದಕ್ಷ ತುಂಬ ಕೆರಳಿಬಿಟ್ಟನು. ಚಂದ್ರನಿಗೆ ಬುದ್ಧಿ ಕಲಿಸಲೆಂದು ಅವನು ರಾಜಯಕ್ಷ್ಮದ ಬೇನೆಯನ್ನು ಹುಟ್ಟುಹಾಕಿ ಅದನ್ನು ಚಂದ್ರನ ದೇಹದಲ್ಲಿ ಹೊಗಿಸಿದನು. ಅದರಿಂದಾಗಿ ಚಂದ್ರ ಕ್ಷೀಣಿಸತೊಡಗಿದನು. ಅವನ ಹೊಳಪು ಇಳಿಮುಖವಾಯಿತು. ಕ್ಷಯಬೇನೆಯಿಂದ ಬಿಡಿಸಿಕೊಳ್ಳುವ ಆತನ ಯತ್ನಗಳು ಫಲ ನೀಡಲಿಲ್ಲ. ಯಜ್ಞಯಾಗಗಳನ್ನು ಮಾಡಿಯೂ ಫಲ ಸಿಕ್ಕಲಿಲ್ಲ.

ನ ಚಾಮುಚ್ಯತ ಶಾಪಾದ್ ವೈ ಕ್ಷಯಂ ಚೈವಾಭ್ಯಗಚ್ಛತ ॥ ೬೪ ॥

ಅವನು ಶಾಪದಿಂದ ಬಿಡುಗಡೆಹೊಂದಲಾಗಲಿಲ್ಲ. ಚಂದ್ರನ ಕ್ಷೀಣತೆಯ ಪರಿಣಾಮ ಸಸ್ಯ, ಪ್ರಾಣಿಗಳೆಲ್ಲವುಗಳ ಮೇಲೂ ಉಂಟಾಗಹತ್ತಿತು. ಹೀಗಾಗಿ ದೇವತೆಗಳು ಅವನ ಕ್ಷಯದ ಕಾರಣವನ್ನು ಕೇಳಿ ತಮ್ಮ ಕೈಲಾದ ನೆರವು ನೀಡಲು ಮುಂದೆ ಬಂದರು. ಆಗ ಚಂದ್ರನು ಅವರಿಗೆ ಶಾಪದ ಕಾರಣವನ್ನು ಹೇಳಿದನು—

ಶಾಪಸ್ಯ ಲಕ್ಷಣಂ ಚೈವ ಯಕ್ಷ್ಮಾಣಂ ಚ ತಥಾಽಽತ್ಮನಃ ॥ ೬೯ ॥

ಅಲ್ಲದೆ ಕ್ಷಯದ ಹುಟ್ಟಿನ ಬಗೆಗೂ ಹೇಳಿದನು. ದೇವತೆಗಳು ದಕ್ಷನಲ್ಲಿಗೆ ಹೋದರು. ಚಂದ್ರನಿಗಿತ್ತ ಶಾಪವನ್ನು ಹಿಂತೆಗೆದುಕೊಳ್ಳುವಂತೆ ಅವನನ್ನು ಕೋರಿದರು. ಅವನ ಕ್ಷೀಣತೆಯಿಂದಾಗಿ ಜೀವಸೃಷ್ಟಿಯೆಲ್ಲ ಬವಣೆಗೀಡಾಗಿದ್ದುದನ್ನೂ ಹೇಳಿದರು. ಅವರಿಗೆ ದಕ್ಷನು ಹೀಗೆಂದು ಉತ್ತರಿಸಿದನು—

ನೈತಚ್ಛಕ್ಯಂ ಮಮ ವಚೋ ವ್ಯಾವರ್ತಯಿತುಮನ್ಯಥಾ ॥ ೭೩ ॥
ಹೇತುನಾ ತು ಮಹಾಭಾಗಾ ನಿವರ್ತಿಷ್ಯತಿ ಕೇನಚಿತ್ ।
ಸಮಂ ವರ್ತತು ಸರ್ವಾಸು ಶಶೀ ಭಾರ್ಯಾಸು ನಿತ್ಯಶಃ ॥ ೭೪ ॥
ಸರಸ್ವತ್ಯಾ ವರೇ ತೀರ್ಥೇ ಉನ್ಮಜ್ಜಂಶಶಲಕ್ಷಣಃ ।
ಪುನರ್ವರ್ಧಿಷ್ಯತೇ ದೇವಾಸ್ತದ್ ವೈ ಸತ್ಯಂ ವಚೋ ಮಮ ॥ ೭೫ ॥
ಮಾಸಾರ್ಧಂ ಚ ಕ್ಷಯಂ ಸೋಮೋ ನಿತ್ಯಮೇವ ಗಮಿಷ್ಯತಿ ।
ಮಾಸಾರ್ಧಂ ತು ಸದಾ ವೃದ್ಧಿಂ ಸತ್ಯಮೇತದ್ ವಚೋ ಮಮ ॥ ೭೬ ॥
ಸಮುದ್ರಂ ಪಶ್ಚಿಮಂ ಗತ್ವಾ ಸರಸ್ವತ್ಯಬ್ಧಿಸಂಗಮಮ್ ।
ಆರಾಧಯತು ದೇವೇಶಂ ತತಃ ಕಾಂತಿಮವಾಪ್ಸ್ಯತಿ ॥ ೭೭ ॥

'ಮಹಾಭಾಗರಾದ ದೇವತೆಗಳೇ! ನಾನು ಹೇಳಿದುದರಲ್ಲಿ ಎಂಥ ಮಾರ್ಪಾಟಿಗೂ ಅವಕಾಶವಿಲ್ಲ. ಯಾವುದಾದರೋ ಕಾರಣದಿಂದಾಗಿ ಈ ವಚನ ತಾನಾಗಿಯೇ ಕೊನೆಗೊಳ್ಳಲಿದೆ. ಸೋಮನು ತನ್ನೆಲ್ಲ ಮಡದಿಯರೊಂದಿಗೆ ಸರಿಸಮನಾಗಿ ನಡೆದುಕೊಳ್ಳುವುದಾದರೆ, ಹಾಗೂ ಸರಸ್ವತಿಯ ದಡದಲ್ಲಿರುವ ತೀರ್ಥಕ್ಷೇತ್ರದಲ್ಲಿ ಸ್ನಾನಮಾಡಿದರೆ ಅವನು ಮತ್ತೆ ಗಟ್ಟಿಮುಟ್ಟಾದ ಆಳಾಗುವನು. ನಾನೀಗ ಹೇಳಿದುದು ಮಾತ್ರ ತಪ್ಪದೇ ನಿಜವಾದೀತು. ಚಂದ್ರನು ಅರ್ಧತಿಂಗಳ ಕಾಲ ದಿನದಿನಕ್ಕೆ ಕೊಂಚ ಕೊಂಚ ಕ್ಷೀಣಿಸುತ್ತ ಹೋಗುವನು. ಮುಂದೆ ಉಳಿದರ್ಧತಿಂಗಳು ಕ್ರಮವಾಗಿ .ಬೆಳವಣಿಗೆಯನ್ನು ಹೊಂದುವನು. ನಿಜವಾದುದನ್ನೇ ಇಲ್ಲಿಯೂ ಹೇಳುತ್ತಲಿದ್ದೇನೆ. ಪಡುವಣದ ಕಡಲತೀರದಲ್ಲಿ ಸರಸ್ವತಿಯು ಕಡಲಿನೊಂದಿಗೆ ಸೇರಿಕೊಳ್ಳುವಲ್ಲಿ ಸೋಮನು ಶಂಕರನನ್ನು ಆರಾಧಿಸತಕ್ಕದ್ದು. ಅಂದರೆ ಮಾತ್ರ ಅವನು ತನ್ನ ಮೊದಲಿನ ತೇಜಸ್ಸನ್ನು ಹೊಂದುವನು.'

ದಕ್ಷನ ಹೇಳಿಕೆಯ ಮೇರೆಗೆ ಚಂದ್ರನು ಪ್ರಭಾಸಕ್ಷೇತ್ರದಲ್ಲಿ ಅಮಾವಾಸ್ಯೆಯಂದು ಮಿಂದನು. ಹೀಗಾಗಿ ತನ್ನ ಮೊದಲಿನ ತೇಜಸ್ಸನ್ನು ಪಡೆದನು. ಅವನ ಕಿರಣಗಳಿಗೆ ಶೀತಲತೆ ಪ್ರಾಪ್ತವಾಯಿತು. ಅವನು ದಕ್ಷನನ್ನು ಕಾಣಲೆಂದು ಹೋದನು. ಆಗ ಅವನು ಸ್ತ್ರೀಯರನ್ನು ಹಾಗೂ ಬ್ರಾಹ್ಮಣರನ್ನು ಎಂದಿಗೂ ಅಸಡ್ಡೆಮಾಡಬಾರದೆಂದು ಉಪದೇಶಿಸಿದನು.

ಇಷ್ಟೆಲ್ಲವನ್ನು ಹೇಳಿಯಾದಬಳಿಕ ವೈಶಂಪಾಯನ ಜನಮೇಜಯನಿಗೆ ಇಂತೆಂದನು—

ಏವಂ ಚ ತೇ ಸರ್ವಮಾಖ್ಯಾತಂ ಯಥಾ ಶಪ್ತೋ ನಿಶಾಕರಃ ॥ ೮೪ ॥

+ ಇದು ಶರತ್ತಿನ ಉಃಶಾಪವಾಗಿದೆ. ಅದನ್ನು ಕೇಳುವವನು ಚಂದ್ರನಾಗಿರದೆ ದೇವತೆಗಳು ಅವನಿಗಾಗಿ ಕೇಳಿದುದು.

**ಶಾಂತಿ/೩೪೨**

ಅಗ್ನಿ ಹಾಗೂ ಸೋಮ ಇವರ ಹುಟ್ಟಿನ ಕಥೆಗಳನ್ನು ಹೇಳೆಂದು ಅರ್ಜುನ ಶ್ರೀಕೃಷ್ಣನನ್ನು ಬೇಡಿಕೊಂಡನು, ಅವನು ಅದನ್ನು ಹೇಳಿದನು. ಅದನ್ನೇ ವೈಶಂಪಾಯನ ಜನಮೇಜಯ ದೊರೆಗೆ ಹೇಳುತ್ತಲಿದ್ದಾನೆ. ಅದರಲ್ಲಿ ಈ ಶಾಪದ ಉಲ್ಲೇಖವಿದೆ.

......ಸೋಽಬ್ರವೀದ್ ಯಕ್ಷ್ಮೈನಮಾವಿಶ್ಯೇತೇತಿ ದಕ್ಷಶಾಪಾತ್
ಸೋಮಂ ರಾಜಾನಂ ಯಕ್ಷ್ಮಾ ವಿವೇಶ ಸ ಯಕ್ಷ್ಮಣಾಽಽವಿಷ್ಟೋ
ದಶಮಗಾದ್ ದಕ್ಷಶ್ಚೈನಮಬ್ರವೀನ್ನ ಸಮಂ ವರ್ತಯಸೀತಿ ॥ ೫೭ ॥

ಅವನಿಗೆ ಕ್ಷಯ(ಬೇನೆ) ಆದೀತೆಂದನು (ದಕ್ಷ). ಅವನ ಹೇಳಿಕೆಯಂತೆ ಚಂದ್ರ ಕ್ಷಯವಾಗಹತ್ತಿದನು. ಕ್ಷಯನಾದ ಚಂದ್ರ ದಕ್ಷನಲ್ಲಿಗೆ ಹೋಗುತ್ತಲೇ ಅವನು, 'ನೀನು ನಿನ್ನೆಲ್ಲ ಮಡದಿಯರೊಂದಿಗೆ ಸರಿಸಮಾನವಾಗಿ ನಡೆದುಕೊಳ್ಳುತ್ತಿಲ್ಲ' ಎಂಬುದನ್ನು ಚಂದ್ರನ ಗಮನಕ್ಕೆ ತಂದುಕೊಟ್ಟನು. ಹಾಗೆಂದೇ—

ತಚ್ಛಾಪಾದದ್ಯಾಪಿ ಕ್ಷೀಯತೇ ಸೋಮೋಽಮಾವಾಸ್ಯಾಂತರಸ್ಥಃ
ಪೌರ್ಣಮಾಸೀಮಾತ್ರೇಽಧಿಷ್ಠಿತೋ ॥ ೫೮ ॥

ಚಂದ್ರ ಇಂದಿಗೂ ಕೃಷ್ಣಪಕ್ಷದಲ್ಲಿ ಅಮಾವಾಸ್ಯೆಯವರೆಗೆ ಕ್ಷೀಣಿಸುತ್ತ ಹೋಗುತ್ತಾನೆ. ಶುಕ್ಲಪಕ್ಷದಲ್ಲಿ ಹುಣ್ಣಿಮೆಯವರೆಗೆ ಅವನ ತೇಜಸ್ಸು ಹೆಚ್ಚುತ್ತಹೋಗುತ್ತದೆ.

## ೯೩. ತ್ರಿತ > ಏಕತ, ದ್ವಿತ **ಶಲ್ಯ/೩೬**

ಮೊದಲ ಸಂದರ್ಭ : ನೋಡಿ : ಶಾಪ—ದಕ್ಷ > ಸೋಮ (ಚಂದ್ರ).

ಬಲರಾಮ ಉದಪಾನಕ್ಷೇತ್ರಕ್ಕೆ ಹೋಗಿದ್ದನು. ವೈಶಂಪಾಯನ ಈ ಸಂಗತಿಯ ಮಹತ್ವವನ್ನು ಜನಮೇಜಯರಾಜನಿಗೆ ಹೇಳುತ್ತಲಿದ್ದಾನೆ.

ಉದಪಾನಕ್ಷೇತ್ರದಲ್ಲಿ ಚಿತ್ರನೆಂಬ ಒಬ್ಬ ಧರ್ಮಪರಾಯಣನಾದ ಮುನಿ ತನ್ನಿಬ್ಬರು ಸೋದರರೊಡನೆ ವಾಸವಾಗಿದ್ದನು. ಒಂದು ಸಲ ಅವನು ಒಂದು ಯಜ್ಞವನ್ನು ಮುಗಿಸಿಕೊಂಡು ಹಿಂತಿರುಗುವಾಗ ಒಂದು ತೋಳದ ಕೂಗನ್ನು ಕೇಳಿ ಓಡೋಡುತ್ತ ಹೊರಟಾಗ ಅವನು ಒಂದು ಬಾವಿಗೆ ಬಿದ್ದನು. ಅವನ ಸೋದರರು ತೋಳದ ಹೆದರಿಕೆ ಹಾಗೂ ಹಣದಾಸೆಯಿಂದಾಗಿ ಅವನನ್ನು ಅಲ್ಲಿಯೇ ಬಿಟ್ಟು ಓಡಿದರು.

ತತಸ್ತೌ ವೈ ಶಶಾಪಾಥ ತ್ರಿತೋ ಬ್ರಾಹ್ಮಣಸತ್ತಮಃ ॥ ೪ ॥

ಆದುದರಿಂದ ಆ ಶ್ರೇಷ್ಠ ಬ್ರಾಹ್ಮಣನಾದ ತ್ರಿತನು ತನ್ನಿಬ್ಬರೂ ಸೋದರರಿಗೆ ಶಾಪವನ್ನಿತ್ತನು. ಜನಮೇಜಯನು ಈ ಕಥೆಯನ್ನು ವಿಸ್ತಾರದಿಂದ ಕೇಳಬಯಸಿದನು. ವೈಶಂಪಾಯನ ಅದನ್ನು ಆತನಿಗೆ ಹೇಳಿದನು—

ಏಕತ, ದ್ವಿತ ಹಾಗೂ ತ್ರಿತರು ಒಡಹುಟ್ಟಿದವರು, ಬ್ರಹ್ಮವೇತ್ತರು, ಒಟ್ಟಿಗೇ ವಾಸವಾಗಿದ್ದವರು. ಈ ಮೂವರಲ್ಲೂ ತ್ರಿತ ಹೆಚ್ಚು ಗೌರವಾನ್ವಿತನು. ಅವರೆಲ್ಲರ ತಂದೆ ಗೌತಮರಿಗೆ ಸಮಾಜದಲ್ಲಿ ಮನ್ನಣೆಯಿತ್ತು, ಅವರನ್ನು ಮರ್ಯಾದೆಯಿಂದ ಕಾಣಲಾಗುತ್ತಿತ್ತು. ತಂದೆಯ ತರುವಾಯ ಜನ ತ್ರಿತನನ್ನು ಗೌರವದಿಂದ ಕಾಣತೊಡಗಿದರು. ಮೂವರೂ ಒಡಹುಟ್ಟಿದವರು ಕೂಡಿಕೊಂಡೇ ಯಜ್ಞಯಾಗಾದಿಗಳನ್ನೆಲ್ಲ ನಿರ್ವಹಿಸುತ್ತಿದ್ದರು. ದುಡ್ಡು ಗಳಿಸುವ ಬಯಕೆಯಿಂದಾಗಿ ಮೂವರೂ ಕೂಡಿ ಯಜ್ಞವನ್ನು ಹೂಡಿದರು. ತ್ರಿತನ ಬಗೆಗೆ ಜನರಲ್ಲಿ ಗೌರವಭಾವವಂತೂ ಇದ್ದೇ ಇತ್ತು. ಯಜ್ಞವನ್ನು ತೀರಿಸಿಕೊಂಡು ತುಂಬ ಪಶುಧನದೊಂದಿಗೆ ಹಿಂತಿರುಗಿ ಬರುತ್ತಿದ್ದರು. ಆಗ ಏಕತ ಹಾಗೂ ದ್ವಿತರಲ್ಲಿ ಪಾಪಬುದ್ಧಿ ಹುಟ್ಟಿಕೊಂಡಿತು. ಹೇಗೂ ತ್ರಿತ ತನ್ನ ಗುಣಸಂಪನ್ನತೆಯಿಂದಾಗಿ ಬೇಕಷ್ಟು ಸಂಪತ್ತನ್ನು ಕಲೆಹಾಕಬಲ್ಲನು. ಹೀಗಾಗಿ ಕಲೆತ ಧನವನ್ನು ತಾವಿಬ್ಬರಲ್ಲಿಯೇ ಹಂಚಿಕೊಳ್ಳಬೇಕೆಂದು ಅವರಿಬ್ಬರೂ ಸಂಚುಹೂಡಿದರು. ತೋಳನ ಕೂಗನ್ನು ಕೇಳಿ ತ್ರಿತ ಓಟಕಿತ್ತನು. ಓಡುವಾಗಲೇ ಒಂದು ಬಾವಿಗೆ ಬಿದ್ದನು. ಉಳಿದವರಿಬ್ಬರೂ ಅವನನ್ನು ಬಾವಿಯಿಂದ ಹೊರಕ್ಕೆ ತೆಗೆಯುವ ಗೋಜಿಗೆ ಹೋಗಲಿಲ್ಲ. ಬದಲು ಇದ್ದ ಸಂಪತ್ತನ್ನೆಲ್ಲ ಎತ್ತಿಕೊಂಡು ಹೋಗಿಬಿಟ್ಟರು. ಅಂತಹ ಬಿಕ್ಕಟ್ಟಿನ ಹೊತ್ತಿನಲ್ಲಿ ತ್ರಿತನು ಕೈಗೆಟಕಿದ ಸಾಧನಗಳಿಂದ ಯಜ್ಞವನ್ನು ಕೈಕೊಂಡನು. ಸೋಮರಸವನ್ನು ತಯಾರಿಸಿ ಅಗ್ನಿಗೆ ಸಮರ್ಪಿಸಿದನು. ತಾನೂ ಪ್ರಾಶನಮಾಡಿದನು. ಆ ಯಶಸ್ಸಿನಿಂದಾಗಿ ಬೃಹಸ್ಪತಿಯನ್ನು ಮೊದಲಗೊಂಡು ದೇವತೆಗಳಿಗೆಲ್ಲ ತುಂಬ ಹೆದರಿಕೆಯಾಯಿತು. ಅವರೆಲ್ಲ ಯಜ್ಞಸ್ಥಳಕ್ಕೆ ಹೋಗಿ ತಮ್ಮ ತಮ್ಮ ಹವಿರ್ಭಾಗಗಳಿಗಾಗಿ ಅವನನ್ನು ಕೇಳಿದರು. ತ್ರಿತನು ಮಂತ್ರೋಚ್ಚಾರದೊಂದಿಗೆ ಅವನ್ನವರಿಗೆ ಅರ್ಪಿಸಿದನು. ಅವರೆಲ್ಲ ಸಂತುಷ್ಟರಾಗಿ ಅವನಿಗೆ ವರವನ್ನಿತ್ತರು. ಈ ವರಪ್ರಾಪ್ತಿಯಿಂದಾಗಿ ಆತನಿಗೆ ಆ ಬಾವಿಯಿಂದ ಹೊರಬರಲು ಸಾಧ್ಯವಾಯಿತು. ಅವನು ಮನೆಗೆ ಮರಳಿ ಬಂದು ತನ್ನ ಸೋದರರಿಗೆ ಬಲುಕಠೋರವಾದ ನುಡಿಗಳಲ್ಲಿ ಹೀಗೆಂದನು—

> ಉವಾಚ ಪರುಷಂ ವಾಕ್ಯಂ ಶಶಾಪ ಚ ಮಹಾತಪಾಃ ।
> ಪಶುಲುಬ್ಧೌ ಯುವಾಂ ಯಸ್ಮಾನ್ಮಾಮುತ್ಸೃಜ್ಯ ಪ್ರಧಾವಿತೌ ॥ ೫೦ ॥
> ತಸ್ಮಾದ್ ವೃಕಾಕೃತೀ ರೌದ್ರೌ ದಂಷ್ಟ್ರಿಣಾವಭಿತಶ್ಚರೌ ।
> ಭವಿತಾರೌ ಮಯಾ ಶಪ್ತೌ ಪಾಪೇನಾನೇನ ಕರ್ಮಣಾ ॥ ೫೧ ॥
> ಪ್ರಸವಶ್ಚೈವ ಯುವಯೋರ್ಗೋಲಾಂಗೂಲರ್ಕ್ಷವಾನರಾಃ ।
> ಇತ್ಯುಕ್ತೇನ ತದಾ ತೇನ ಕ್ಷಣಾದೇವ ವಿಶಾಂಪತೇ ॥ ೫೨ ॥

'ನೀವಿಬ್ಬರೂ ಪಶುಸಂಪತ್ತಿನ ಆಸೆಯಿಂದಾಗಿ ನನ್ನನ್ನು (ಅಂಥ ಅವಸ್ಥೆಯಲ್ಲಿ) ಬಿಟ್ಟು ಓಡಿಹೋದಿರಿ. ನಿಮ್ಮೀ ಪಾಪಕ್ಕಾಗಿ ನಿಮ್ಮನ್ನು ಶಪಿಸುವೆನು. ನಿಮಗೆ ಭಯಂಕರವಾದ ತೋಳಗಳ ರೂಪ ಬರಲಿ. ನಿಮ್ಮ ಕೋರೆಹಲ್ಲುಗಳು ಬಲು ಹರಿತಾಗಿರಲಿ. ನೀವು ಒಂದೇ ಸಮನೆ ಅಂಡಲೆಯುತ್ತಿರಿ. ನಿಮ್ಮ ಮಕ್ಕಳು ಕಾಡುಕೋಣ. ಗೋಲಾಂಗೂಲ (ಕೋತಿ), ಕರಡಿ, ಮಂಗನಂತಹ ಪ್ರಾಣಿಗಳಂತಾಗಲಿ.' ತ್ರಿತನು ಇಷ್ಟನ್ನು ಹೇಳುತ್ತಲೇ ಅವನ ಒಡಹುಟ್ಟಿದವರಿಬ್ಬರೂ ತೋಳಗಳಾಗಿಬಿಟ್ಟರು.

## ೯೪. ವಸಿಷ್ಠ > ಸರಸ್ವತಿ

ಶಲ್ಯ/೪೨

ವೈಶಂಪಾಯನನು ಜನಮೇಜಯರಾಜನ ಕೇಳಿಕೆಯ ಮೇರೆಗೆ ಅವನಿಗೆ ವಸಿಷ್ಠಾಪವಾಹ ತೀರ್ಥದ ಮಾಹಾತ್ಮ್ಯೆಯನ್ನು ಹೇಳುತ್ತಲಿದ್ದಾನೆ.

ಭಗವಾನ್ ಶಂಕರನು ಹಿಂದಕ್ಕೆ ಸರಸ್ವತಿಯ ದಡದಲ್ಲಿ ತಪಸ್ಸನ್ನು ಆಚರಿಸಿದನು. ದೇವತೆಗಳು ಸ್ಕಂದನಿಗೆ ದಂಡನಾಯಕನೆಂದು ಅಭಿಷೇಕಮಾಡಿದರು. ಅದುವೇ ಸ್ಥಾಣು ತೀರ್ಥ ಎಂದು ಹೆಸರಾಯಿತು. ಸ್ಥಾಣುತೀರ್ಥದಲ್ಲಿ ಸರಸ್ವತಿ ಹೊಳೆಯ ಮೂಡಣದ ದಡದಲ್ಲಿ ವಸಿಷ್ಠರ ಆಶ್ರಮವಿದ್ದರೆ ಪಡುವಣದ ದಡದಲ್ಲಿ ವಿಶ್ವಾಮಿತ್ರನದಿತ್ತು. ಇಬ್ಬರೂ ಉಗ್ರತಪಸ್ವಿಗಳು. ಅವರಿಬ್ಬರಲ್ಲಿ ತುಂಬ ಸ್ಪರ್ಧೆಯಿತ್ತು. ವಿಶ್ವಾಮಿತ್ರನು ಧರ್ಮಪರಾಯಣನಾಗಿದ್ದನಾದರೂ ಅವನಿಂದ ವಸಿಷ್ಠನ ತೇಜಸ್ಸನ್ನು ಕಾಣಲಾಗುತ್ತಿರ ಲಿಲ್ಲ. ಸರಸ್ವತಿಯು ವಸಿಷ್ಠನನ್ನು ಅಪಹರಿಸಿ ಕೊಂಡು ತಂದರೆ ಆತನನ್ನು ಕೊಂದುಬಿಡಬಹು ದೆಂಬ ಹನ್ನಾರ ವಿಶ್ವಾಮಿತ್ರನದು. ಅವಳಿಗೆ ಹಾಗೆ ಮಾಡೆಂದನು. ಅವಳು ವಿಶ್ವಾಮಿತ್ರನ ಕೋಪವನ್ನು ಬಲ್ಲವಳೇ. ಅವಳು ಸಂಕಟಕ್ಕೊಳಗಾದಳು. ಆತನ ಮಾತು ಅವಳಿಗೆ ಎಳ್ಳಷ್ಟೂ ಹಿಡಿಸಿರಲಿಲ್ಲ, ಅವನ ಪಾಪದ ಆಲೋಚನೆಯನ್ನು ಕಂಡು ಅವಳ ಮೈ ನಡುಗಿತು. ಅವಳು ವಿಶ್ವಾಮಿತ್ರನ ಮಾತನ್ನು ಇದ್ದಕ್ಕಿದ್ದಂತೆಯೇ ವಸಿಷ್ಠನಿಗೆ ಹೇಳಿ ಬಿಟ್ಟಳು. ಅವಳು ಆತನ ಸಾಮರ್ಥ್ಯನವನ್ನರಿತವಳು.

> ಉಭಯೋಃ ಶಾಪಯೋರ್ಭೀತಾ ವೇಪಮಾನಾ ಪುನಃಪುನಃ
> ಚಿಂತಯಿತ್ವಾ ಮಹಾಶಾಪಮೃಷಿವಿತ್ರಾಸಿತಾ ಭೃಶಮ್ ॥ ೨೨ ॥

'ಆಕೆ ಅವರಿಬ್ಬರ ಶಾಪಗಳಿಗೆ ಹೆದರುತ್ತಿದ್ದಳು. ಹೀಗಾಗಿ ಅವಳಲ್ಲಿ ಮೈನಡುಕ ಹುಟ್ಟಿ ಕೊಂಡಿತು, ಆ ಶಾಪಗಳ ಆಲೋಚನೆಯಲ್ಲಿ ಅವಳು ವಿಶ್ವಾಮಿತ್ರನಿಗೆ ಹೆದರಿದ್ದುದೇ ಹೆಚ್ಚಿಗೆ.'

ವಸಿಷ್ಠನು ಅವಳನ್ನು ಶಪಿಸಲಿಲ್ಲ. ಬದಲು ವಿಶ್ವಾಮಿತ್ರ ಅವಳನ್ನು ಶಪಿಸದಿರಲೆಂದು ತನ್ನನ್ನು ಕರೆದೊಯ್ಯಲು ಅವಳಿಗೆ ಹೇಳಿದನು.

+ ನೀಡದಿದ್ದ ಶಾಪ. ಶಾಪದ ಹೆದರಿಕೆ ಸರಸ್ವತಿಗೆ ಇತ್ತಷ್ಟೆ.

## ೯೫. ವಿಶ್ವಾಮಿತ್ರ > ಸರಸ್ವತಿ

ಶಲ್ಯ/೪೨

ಮೊದಲ ಸಂದರ್ಭ ಹಾಗೂ ಪ್ರಸಂಗ : ನೋಡಿ : ಶಾಪ—ವಸಿಷ್ಠ > ಸರಸ್ವತಿ.

ವಿಶ್ವಾಮಿತ್ರನ ಮನದಂತೆ ತಾನು ನಡೆದುಕೊಳ್ಳದಿದ್ದರೆ ಅವನ ಶಾಪಕ್ಕೆ ಗುರಿಯಾಗು ವೆನೆಂಬ ಹೆದರಿಕೆ ಸರಸ್ವತಿಯಲ್ಲಿತ್ತು. ವಸಿಷ್ಠನಿಗೂ ಆ ಹೆದರಿಕೆ ಇದ್ದೇ ಇತ್ತು. ಅದನ್ನು ಅವನು ಸರಸ್ವತಿಗೆ ಆಡಿ ತೋರಿಸಿದನು.

> ವಿಶ್ವಾಮಿತ್ರಃ ಶಪೇದ್ಧಿ ತ್ವಾಂ ಮಾ ಕೃಥಾಸ್ತ್ವಂ ವಿಚಾರಣಾಮ್ ॥ ೨೪ ॥

'ವಿಶ್ವಾಮಿತ್ರನು ನಿನ್ನನ್ನು ಶಪಿಸುವನು. ಹೀಗಾಗಿ ನೀನೇನೂ ಯೋಚಿಸದೆ ಆದಷ್ಟು ಶೀಘ್ರ ನನ್ನನ್ನು ಅವನಲ್ಲಿಗೆ ಕರೆದೊಯ್ದು ನಿನ್ನನ್ನು ಕಾಪಾಡಿಕೋ.'

ದಯಾಳುವಾದ ವಸಿಷ್ಠನ ಮಾತು ಕೇಳಿ ಸರಸ್ವತಿಯು ಅವನಿಗೆ ಏನಾದರೂ ಒಳ್ಳೆಯು ದನ್ನು ಮಾಡಬೇಕೆಂದುಕೊಂಡಳು. ಅವಳು ಆತನನ್ನು ತನ್ನ ಹೊನಲ (ಪ್ರವಾಹದ)ಮೇಲೆ ಹೊತ್ತು ವಿಶ್ವಾಮಿತ್ರನಲ್ಲಿಗೆ ಕರೆತಂದಳು. ವಿಶ್ವಾಮಿತ್ರನು ವಸಿಷ್ಠ ಬರುತ್ತಿರುವುದನ್ನು ಕಂಡು ಅವನನ್ನು ಕೊಲ್ಲುವ ಸಂಚುಹೂಡತೊಡಗಿದನು. ಅವನು ಕೆರಳಿ ಕೆಂಡವಾಗಿದ್ದನು. ಹೊನಲ ಮೇಲೆ ತೇಲಿಬರುವಾಗ ವಸಿಷ್ಠನು ಸರಸ್ವತಿಗೆ ತಿಳಿಹೇಳಿ ಅವಳನ್ನ ಸಮಾಧಾನ ಪಡಿಸಿದನು. ಅವನಿಗೆ ಹಿತವಾಗಲೆಂದು ಅವಳು ಮತ್ತೆ ಮೂಡಣದತ್ತ ಹರಿಯತೊಡಗಿ ದಳು. ಅದರಿಂದಾಗಿ ವಸಿಷ್ಠ ವಿಶ್ವಾಮಿತ್ರನಿಂದ ದೂರ ಹೊರಟನು. ವಿಶ್ವಾಮಿತ್ರನ ಕೋಪ ಇನ್ನಷ್ಟು ಕೆರಳಿತು. ಮತ್ತೆ,

> ಯಸ್ಮಾನ್ಮಾಂ ತ್ವಂ ಸರಿಚ್ಛ್ರೇಷ್ಠೇ ವಂಚಯಿತ್ವಾ ಪುನರ್ಗತಾ ॥ ೩೮ ॥
> ಶೋಣಿತಂ ವಹ ಕಲ್ಯಾಣಿ ರಕ್ಷೋಗ್ರಾಮಣಿಸಮ್ಮತಮ್ ।
> ತತಃ ಸರಸ್ವತೀ ಶಪ್ತಾ ವಿಶ್ವಾಮಿತ್ರೇಣ ಧೀಮತಾ ॥ ೩೯ ॥

ಬುದ್ಧಿವಂತನಾದ ಆ ವಿಶ್ವಾಮಿತ್ರನು ಹೀಗೆಂದು ಶಾಪವಾಣಿಯನ್ನು ಉಚ್ಚರಿಸಿದನು: 'ಹೊಳೆಗಳಲ್ಲೆಲ್ಲ ಶ್ರೇಷ್ಠಳೂ, ಕಲ್ಯಾಣಕರಳೂ ಆದ ಸರಸ್ವತಿಯೇ! ನೀನು ನನ್ನನ್ನು ಮೋಸಗೊಳಿಸಿದೆ. ನೀನು (ಹತ್ತಿರಕ್ಕೆ ಬಂದವಳು) ಮತ್ತೆ ದೂರಕ್ಕೆ ಸರಿದೆ. ಹೀಗಾಗಿ ನಿನ್ನಲ್ಲಿ ನೀರಿನ ಬದಲು ರಕ್ಕಸರಿಗೆ ಪ್ರಿಯವೆನಿಸುವ ನೆತ್ತರು ಹರಿಯಲಿ.'

ವಿಶ್ವಾಮಿತ್ರನ ಶಾಪದ ಪರಿಣಾಮವೆಂದು ಸರಸ್ವತಿ ಹೊಳೆಯಲ್ಲಿ ಒಂದು ವರ್ಷದ ಕಾಲ—

> ಅವಹಚ್ಛೋಣಿತೋನ್ಮಿಶ್ರಂ ತೋಯಂ ಸಂವತ್ಸರಂ ತದಾ ॥ ೪೦ ॥

ನೆತ್ತರಿನಿಂದ ಕೂಡಿದ ನೀರು ಹರಿಯುತ್ತಿತ್ತು. ದೇವತೆಗಳಿಂದಲೂ ಅವಳ ಆ ಅವಸ್ಥೆ ಯನ್ನು ನೋಡಲಾಗುತ್ತಿರಲಿಲ್ಲ. ವಸಿಷ್ಠನನ್ನು ತೇಲಿಸಿ ಕರೆದೊಯ್ದ ತರುವಾಯ ಅವಳು ಮತ್ತೆ ಮೊದಲಿನಂತೆ ಹರಿಯತೊಡಗಿದಳು. ಹೀಗಾಗಿ ಈ ಕ್ಷೇತ್ರಕ್ಕೆ 'ವಸಿಷ್ಠಾಪವಾಹ' ಎಂದು ಹೆಸರುಬಂದಿತು.

**ಶಲ್ಯ/೪೩**

> ಸಾ ಶಪ್ತಾ ತೇನ ಕ್ರುದ್ಧೇನ ವಿಶ್ವಾಮಿತ್ರೇಣ ಧೀಮತಾ ।
> ತಸ್ಮಿಂಸ್ತೀರ್ಥವರೇ ಶುಭ್ರೇ ಶೋಣಿತಂ ಸಮುಪಾವಹತ್ ॥ ೧ ॥

ಆ ಕ್ರುದ್ಧನಾದ ಧೀಮಂತನು ಸರಸ್ವತಿಗೆ ಶಾಪವನ್ನೀಯುತ್ತಲೇ ಶ್ರೇಷ್ಠವೂ, ತೇಜಸ್ವಿನಿಯೂ ಆದ ಆ ಹೊಳೆಯಲ್ಲಿ ನೆತ್ತರು ಹರಿಯತೊಡಗಿತು.

ನೆತ್ತರಿನಿಂದ ಕೂಡಿದ ಆ ನೀರಿನಿಂದಾಗಿ ರಾಕ್ಷಸರಿಗೆ ಬೇಕಿದ್ದುದೇ ಸಿಗುವಂತಾಯಿತು. ಅವರಿಗೆ ಸ್ವರ್ಗ ಸಿಕ್ಕಷ್ಟು ಸಂತೋಷವಾಯಿತು. ಅದನ್ನು ಕಂಡು ಮುನಿಗಳು ವ್ಯಥಿತ ರಾದರು. ಅವರು ಸರಸ್ವತಿಯನ್ನು ಹಸನುಗೊಳಿಸಲು ಯತ್ನಿಸಹತ್ತಿದರು. ಅವಳಿಗೆ ಇಂಥ ಅವಸ್ಥೆ ಬಂದುದು ಹೇಗೆಂದು ಅವರು ಅವಳನ್ನು ಕೇಳಿದರು. ಅವಳು ನಡೆದುದನ್ನೆಲ್ಲ ಅವರಿಗೆ ಹೇಳಿದಳು. ಅದನ್ನು ಕೇಳಿ ಮುನಿಗಳು ಇಂತೆಂದರು—

> ಕಾರಣಂ ಶ್ರುತಮಸ್ಮಾಭಿಃ ಶಾಪಶ್ಚೈವ ಶ್ರುತೋಽನಘೇ!
> ಕರಿಷ್ಯಂತಿ ತು ಯತ್ ಪ್ರಾಪ್ತಂ ಸರ್ವ ಏವ ತಪೋಧನಾಃ ॥ ೧೨ ॥

ಏವಮುಕ್ತ್ವಾ ಸರಿಚ್ಛ್ರೇಷ್ಠಾಮೂಚುಸ್ತೇಽಥ ಪರಸ್ಪರಮ್ ।
ವಿಮೋಚಯಾಮಹೇ ಸರ್ವೇ ಶಾಪಾದೇತಾಂ ಸರಸ್ವತೀಮ್ ॥ ೧೩ ॥

'ಎಲೆ ಅನಘೆಯಾದ ಸರಸ್ವತಿಯೇ ! ನಾವು ಶಾಪದ ಕಾರಣ ಹಾಗೂ ಶಾಪವನ್ನು ಕುರಿತು ಆಲಿಸಿದೆವು. ಈ ತಪಸ್ವಿಗಳೆಲ್ಲ ಕಾಲಕ್ಕೆ ತಕ್ಕಂತೆ ಎಲ್ಲವನ್ನೂ ಮಾಡಿಯಾರು' ಎಂದು ಸರಸ್ವತಿಯನ್ನು ಶಾಪದಿಂದ ಬಿಡುಗಡೆಗೊಳಿಸುವುದನ್ನು ಕುರಿತು ತಮ್ಮತಮ್ಮಲ್ಲಿ ಚರ್ಚಿಸಿದರು. ಆ ತಪೋನಿಧಿಗಳೆಲ್ಲ ತಪಸ್ಸು, ನಿಯಮ, ವ್ರತ, ಸಂಯಮ, ಉಪವಾಸಾದಿ ಬಗೆಬಗೆಯ ದಾರಿಗಳಿಂದ ತಮ್ಮನ್ನು ಪೀಡೆಗೊಳಪಡಿಸಿಕೊಂಡು ಭಗವಾನ್ ಶಂಕರನನ್ನು ಪ್ರಸನ್ನಗೊಳಿಸಿದರು. ಮತ್ತೆ—

ತಾಂ ದೇವೀಂ ಮೋಕ್ಷಯಾಮಾಸುಃ ಸರಿಚ್ಛ್ರೇಷ್ಠಾಂ ಸರಸ್ವತೀಮ್ ॥ ೧೫ ॥

ಹೊಳೆಗಳಲ್ಲೆಲ್ಲ ಶ್ರೇಷ್ಠವಾದ ಆ ಸರಸ್ವತಿಯನ್ನು ಶಾಪಮುಕ್ತಗೊಳಿಸಿದರು.

+ ವಿಶ್ವಾಮಿತ್ರನ ಅಪ್ಪಣೆಯನ್ನು ಪಾಲಿಸದಿದ್ದರೆ ಅವನು ಶಪಿಸುವನೆಂಬ ಹೆದರಿಕೆ ಸರಸ್ವತಿ ಹಾಗೂ ವಸಿಷ್ಠ ಇವರಿಬ್ಬರಲ್ಲೂ ಇತ್ತು. ಅದನ್ನು ಪಾಲಿಸಿದರೆ ವಸಿಷ್ಠನ ಮೇಲೆ ಅನ್ಯಾಯವನ್ನು ಎಸಗಿದಂತಾಗುವುದು ಎಂಬ ಆತಂಕ ಸರಸ್ವತಿಯದು. ಹೀಗಾಗಿ ಅವಳು ತೋರಿಕೆಗೆ ಮಾತ್ರ ಅಪ್ಪಣೆಯನ್ನು ಪಾಲಿಸಿದಳು. ವಸಿಷ್ಠನಿಗೆ ಹಿತವಾಗಲೆಂದು ವಿಶ್ವಾಮಿತ್ರನ ಕಣ್ಣುತಪ್ಪಿಸಿದಳು. ಶಾಪಕ್ಕೆ ಕಾರಣ ಅಪ್ಪಣೆಯನ್ನು ಮೀರಿದುದಾಗಿರದೆ ಮೋಸಮಾಡಿದುದಾಗಿದೆ. ಮಹರ್ಷಿಗಳ ಯತ್ನಗಳೇ ಶಾಪಮುಕ್ತಿಗೆ ಕಾರಣ.

## ೯೬. ಅಶ್ವತ್ಥಾಮ > ಶ್ರೀಕೃಷ್ಣ

ಸ್ತ್ರೀ/೧

ಜನಮೇಜಯರಾಜನು ವೈಶಂಪಾಯನನಿಗೆ ಹೀಗೆಂದನು—

ಅಶ್ವತ್ಥಾಮ್ನಃ ಶ್ರುತಂ ಕರ್ಮ ಶಾಪಾದನ್ಯೋನ್ಯಕಾರಿತಾತ್ ॥ ೩ ॥

(ಶ್ರೀಕೃಷ್ಣನು) ಅಶ್ವತ್ಥಾಮನಿಗಿತ್ತ ಹಾಗೂ (ಅಶ್ವತ್ಥಾಮನು) ಶ್ರೀಕೃಷ್ಣನಿಗಿತ್ತ ಶಾಪಗಳನ್ನು ಕುರಿತು ಕೇಳಿದ್ದೇನೆ. ಮುಂದೇನಾಯಿತು ಎಂಬುದನ್ನು ಕುರಿತು ಹೇಳು ಪಂಥವನಾಗು

ಸ್ತ್ರೀ/೯

ಇಂಥದೇ ಇನ್ನೊಂದು ಉಲ್ಲೇಖ—

ಅಶ್ವತ್ಥಾಮ್ನಃ ಶ್ರುತಂ ಕರ್ಮ ಶಾಪಶ್ಚಾನ್ಯೋನ್ಯಕಾರಿತಃ ॥ ೩ ॥

+ ಮರುಶಾಪ.

ಅಶ್ವತ್ಥಾಮನಿತ್ತ ಶಾಪ ಯಾವುದೆಂಬುದು ನಿಖರವಾಗಿಲ್ಲ. ಭೀಮನು ದುರ್ಯೋಧನನನ್ನು ಅಧರ್ಮದಿಂದ ಕೊಂದ ಕಾರಣ ಪಾಂಡವರು ನಿರ್ವಂಶರಾಗಲೆಂದು ಇರುವ ಸಾಧ್ಯತೆಯಿದೆ. ಹಾಗೆಂದೇ ಅವನು ಉತ್ತರೆಯ ಬಸಿರಿನ ಮೇಲೆ ಬ್ರಹ್ಮಾಸ್ತ್ರವನ್ನು ಎಸೆಯಲು ಯೋಚಿಸಿರಲು ಸಾಕು.

ಇವೆರಡೂ ಶ್ಲೋಕಗಳ ಪದಗಳು ಒಂದೇ ಆಗಿವೆ.

## ೯೭. ಗಾಂಧಾರಿ > ಯುಧಿಷ್ಠಿರ ಸ್ತ್ರೀ/೧೪

ಯುದ್ಧದಲ್ಲಿ ತಮ್ಮ ಗಂಡ, ತಂದೆ, ಮಕ್ಕಳು, ಬಂಧುಗಳು, ಬಳಗದವರೆಲ್ಲರ ಭಯಂಕರ ವಾದ ವಧೆಯಾದ್ದರಿಂದ ಹೆಂಗಳೆಯರೆಲ್ಲ ಎತ್ತರದ ದನಿಯಲ್ಲಿ ಅತ್ತು ಆಕ್ರೋಶಗೈಯು ಹತ್ತಿದ್ದರು. ಶ್ರೀಕೃಷ್ಣನು ಪಾಂಡವರೊಂದಿಗೆ ಗಾಂಧಾರಿಯನ್ನು ಕಾಣಲು ಹೋದನು. ವೈಶಂಪಾಯನ ಇವೆರಡೂ ಸಂಗತಿಗಳನ್ನು ಕುರಿತು ಜನಮೇಜಯನಿಗೆ ಹೇಳುತ್ತ ಲಿದ್ದಾನೆ.

ಗಾಂಧಾರಿ ಮಕ್ಕಳ ಸಾವಿನಿಂದಾಗಿ ಮೊದಲೇ ಬಲುವ್ಯಾಕುಲಳಾಗಿದ್ದಳು. ಯುಧಿಷ್ಠಿರ ಹತ್ತಿರಕ್ಕೆ ಬಂದುದು ತಿಳಿಯುತ್ತಲೇ,

ಗಾಂಧಾರೀ ಪುತ್ರಶೋಕಾರ್ತಾ ಶಪ್ತುಮೈಚ್ಛದನಿಂದಿತಾ ॥ ೨ ॥

ಅವಳು ಅವನನ್ನು ಶಪಿಸಬಯಸಿದಳು. ಮಹರ್ಷಿ ವ್ಯಾಸನು ತನ್ನ ದಿವ್ಯದೃಷ್ಟಿಯಿಂದ ಗಾಂಧಾರಿಯ ಉದ್ದೇಶವನ್ನು ಅರಿತನು. ಅವನು ಅವಳಿಗೆ ಹೀಗೆಂದನು—

ಶಾಪಕಾಲಮುಪಾಕ್ಷಿಪ್ಯ ಶಮಕಾಲಮುದೀರಯನ್ ॥ ೬ ॥
ನ ಕೋಪಃ ಪಾಂಡವೇ ಕಾರ್ಯೋ ಗಾಂಧಾರಿ ಶಮಮಾಪ್ನುಹಿ ॥ ೭ ॥

'ಇದು ಶಾಪವನ್ನೀಯುವ ಹೊತ್ತಾಗಿರದೆ (ಮನಸ್ಸನ್ನು ಹದದಲ್ಲಿ ಇಟ್ಟುಕೊಳ್ಳುವ) ಹೊತ್ತಾಗಿದೆ. ನೀನು ಶಾಂತಳಾಗು. ಪಾಂಡುಸುತನಾದ ಯುಧಿಷ್ಠಿರನ ಮೇಲೆ ಸಿಟ್ಟು ಮಾಡಿಕೊಳ್ಳಬೇಡ.' ಅಲ್ಲದೆ ಯುದ್ಧ ನಾಗಿದ ಕಾಲಕ್ಕೆ ಗೆಲವಿಗಾಗಿ ದುರ್ಯೋಧನ ದಿನಾಲು ಅವಳ ಹರಕೆಯನ್ನು ಪಡೆಯಲು ಬರುತ್ತಿದ್ದನು. ಆಗ ಅವಳು ಅವನಿಗೆ ಏನೆಂದು ಹೇಳುತ್ತಿದ್ದಳು ಎಂಬುದನ್ನು ಅವಳಿಗೆ ನೆನಪು ಮಾಡಿಕೊಟ್ಟನು. ಅವಳು ಮಗನನ್ನು,

ಯತೋ ಧರ್ಮಸ್ತತೋ ಜಯಃ ॥

ಎಂದು ಹರಸುತ್ತಿದ್ದಳು. 'ಹೀಗಾಗಿ ಧರ್ಮ ಹಾಗೂ ಸತ್ಯಗಳನ್ನು ಸ್ಮರಿಸಿ ಕೋಪಕ್ಕೆ ಕಡಿವಾಣ ಹಾಕು. ಧರ್ಮದಂತೆಯೇ ಜಯ ದೊರೆತ ಕಾರಣ ನೀನು ಶಾಪವನ್ನೀಯು ವುದು ಸರಿಯಲ್ಲ' ಎಂದು ಅವಳನ್ನು ಉಪದೇಶಿಸಿದನು,

ಗಾಂಧಾರಿಯು ವ್ಯಾಸನ ಹೇಳಿಕೆಯನ್ನು ಒಪ್ಪಿ ಶಾಪವನ್ನೀಯಲಿಲ್ಲ. ಆದರೆ ಅವಳು ಪುತ್ರಶೋಕದಿಂದ ಬಲು ಬಳಲಿದ್ದಳು. ಅವಳು ತನ್ನ ನೂರೂ ಜನ ಮಕ್ಕಳನ್ನು ಕೊಂದ ವನಾದ ಭೀಮನನ್ನು ಉದ್ದೇಶಿಸಿ ಹೀಗೆಂದಳು : 'ನಮ್ಮ ಮುಪ್ಪಿನ ಕಾಲದ ಊರು ಗೋಲೆಂದು ನನ್ನ ಒಬ್ಬ ಮಗನನ್ನಾದರೂ ನೀನು ಉಳಿಸಬೇಕಿರಲಿಲ್ಲವೇ ?' ಭೀಮ ಅವಳಿಗೆ ಇದ್ದ ಪರಿಸ್ಥಿತಿಯನ್ನು ತಿಳಿಸಿಹೇಳಲು ಯತ್ನಿಸಿದನು. ಆದರೂ ಅವಳ ಕೋಪ ಇಳಿಯಲೊಲ್ಲದಾಗಿತ್ತು.

+ ಪ್ರತ್ಯಕ್ಷದಲ್ಲಿ ಶಾಪವನ್ನೀಯಲಾಗಿಲ್ಲ.

ಸ್ತ್ರೀ/೧೫

ಗಾಂಧಾರಿಯು, 'ಎಲ್ಲಿದ್ದಾನೆ ಆ ಯುಧಿಷ್ಠಿರ ?' ಎಂದಳು. ಅದಕ್ಕೆ ಯುಧಿಷ್ಠಿರನು ಹೀಗೆಂದನು—

ಪುತ್ರಹಂತಾ ನೃಶಂಸೋಽಹಂ ತವ ದೇವಿ ಯುಧಿಷ್ಠಿರಃ ।
ಶಾಪಾರ್ಹಃ ಪೃಥಿವೀನಾಶೇ ಹೇತುಭೂತಃ ಶಪಸ್ವ ಮಾಮ್ ॥ ೨೬ ॥

'ಭೂಮಿಯ ಮೇಲಿನ ರಾಜರುಗಳನ್ನೂ ನಿನ್ನ ಮಕ್ಕಳನ್ನೂ ಯಮಸದನಕ್ಕೆ ನೂಕಿರುವ ನಾನೇ ಬಲುಕ್ರೂರಕರ್ಮಿಯು. ಹೀಗಾಗಿ ನಾನು ಶಾಪಿತನಾಗಲು ಸರಿಯಾದವನೇ. ನೀನು ನನ್ನನ್ನು ಶಪಿಸು.'

+ ಮಹಾಭಾರತದಲ್ಲಿ ಕೇಳಿಕೊಳ್ಳಲಾದ ಒಂದೇ ಒಂದು ಶಾಪ ಇದು. ಒಂದು ಅಪವಾದವೇ ಸರಿ.

## ೯೮. ಗಾಂಧಾರಿ > ಶ್ರೀಕೃಷ್ಣ ಸ್ತ್ರೀ/೨೫

ಗಾಂಧಾರಿಯು ಶ್ರೀಕೃಷ್ಣನೆದುರು ಯುದ್ಧದಲ್ಲಿ ಮಡಿದವರ ವೀರರ ಮಡದಿಯರು ಅದೆಷ್ಟು ವ್ಯಾಕುಲರಾಗಿದ್ದರೆಂಬ ಬಲುಹೃದಯವಿದ್ರಾವಕ ಚಿತ್ರವನ್ನು ಕಣ್ಣಿಗೆ ಕಟ್ಟು ವಂತೆ ಬಣ್ಣಿಸಿದಳು. ಅವಳು ಅವನಿಗೆ, 'ನೀನು ವೇದಗಳನ್ನು ಬಲ್ಲವನು. ಶಾಸ್ತ್ರಗಳ ಅರಿವು ನಿನಗುಂಟು. ಎರಡೂ ಬದಿಗಳವರಲ್ಲಿದ್ದ ಭಿನ್ನಾಭಿಪ್ರಾಯಗಳನ್ನು ತೊಡೆದುಹಾಕಿ ಭಯಂಕರವಾದ ಈ ನರಸಂಹಾರವನ್ನು ತಪ್ಪಿಸುವದು ನಿನ್ನ ಕೈಯಲ್ಲಿತ್ತು. ಆದರೆ ಅದೊಂದು ಕುಲದ ನಾಶ ಮಾತ್ರವೆಂದು ಬಗೆದು ನೀನು ತೆಪ್ಪಗಿದ್ದೆ. ಇದು ನಿನ್ನಿಂದಾದ ಬಲುದೊಡ್ಡ ತಪ್ಪು. ನಿನಗೆ ಶಿಕ್ಷೆಯಾಗಲೇಬೇಕು.

ಪತಿಶುಶ್ರೂಷಯಾ ಯನ್ಮೇ ತಪಃ ಕಿಂಚಿದುಪಾರ್ಜಿತಮ್ ।
ತೇನ ತ್ವಾ ದುರವಾಪೇನ ಶಪ್ಸ್ಯೇ ಚಕ್ರಗದಾಧರ ॥ ೪೨ ॥
ಯಸ್ಮಾತ್ ಪರಸ್ಪರಂ ಘ್ನಂತೋ ಜ್ಞಾತಯಃ ಕುರುಪಾಂಡವಾಃ ।
ಉಪೇಕ್ಷಿತಾಸ್ತೇ ಗೋವಿಂದ ತಸ್ಮಾಜ್ಜ್ಞಾತೀನ್ ವಧಿಷ್ಯಸಿ ॥ ೪೩ ॥
ತ್ವಮಪ್ಯುಪಸ್ಥಿತೇ ವರ್ಷೇ ಷಟ್‌ತ್ರಿಂಶೇ ಮಧುಸೂದನ ।
ಹತಜ್ಞಾತಿರ್ಹತಾಮಾತ್ಯೋ ಹತಪುತ್ರೋ ವನೇಚರಃ ॥ ೪೪ ॥
ಅನಾಥವದವಿಜ್ಞಾತೋ ಲೋಕೇಷ್ವನಭಿಲಕ್ಷಿತಃ ।
ಕುತ್ಸಿತೇನಾಭ್ಯುಪಾಯೇನ ನಿಧನಂ ಸಮವಾಪ್ಸ್ಯಸಿ ॥ ೪೫ ॥
ತವಾಪ್ಯೇವಂ ಹತಸುತಾ ನಿಹತಜ್ಞಾತಿಬಾಂಧವಾಃ ।
ಸ್ತ್ರಿಯಃ ಪರಿಪತಿಷ್ಯಂತಿ ಯಥೈತಾ ಭರತಸ್ತ್ರಿಯಃ ॥ ೪೬ ॥

'ಎಲೈ ಚಕ್ರಧರ, ಗದಾಧರ ಕೃಷ್ಣನೇ! ಪತಿಸೇವೆಯಿಂದಾಗಿ ನನ್ನಿಂದ ತುಸುವಷ್ಟಾ ಗಾದರೂ ತಪಸ್ಸು ಆಗಿದ್ದರೆ ನಾನು ಅದೇ ತಪಸ್ಸಾಮರ್ಥ್ಯದಿಂದ ನಿನ್ನನ್ನು ಶಪಿಸುವೆನು. ನೀನು ತಮ್ಮತಮ್ಮಲ್ಲಿ ಕಾದಾಡುತ್ತಿದ್ದ ಕೌರವ-ಪಾಂಡವರನ್ನು ಕಡೆಗಣಿಸಿದೆ. ಆದ್ದರಿಂದ ನಿನ್ನ ಕೈಯಿಂದಲೇ ನಿನ್ನ ಬಂಧುಬಳಗದವರು (ಇದೇ ಬಗೆಯಾಗಿ) ನಾಶಹೊಂದಲಿರು ವರು. ಎಲೈ ಮಧುಸೂದನನೇ! ಇಂದಿನಿಂದ ಮೂವತ್ತಾರನೆಯ ವರ್ಷ ನಿನ್ನ ನೆಂಟ ರಿಷ್ಟರು, ಅಮಾತ್ಯರು, ಗಂಡುಮಕ್ಕಳೆಲ್ಲ ಒಬ್ಬರೊಬ್ಬರೊಡನೆ ಕಾದಾಡಿ ಸಾಯಲಿರು ವರು. ನೀನು ಎಲ್ಲೆಲ್ಲೂ ಅಲಕ್ಷ್ಯಕ್ಕೀಡಾಗುವೆ. ಅನಾಥನಂತೆ ಕಾಡುಮೇಡುಗಳನ್ನು

ಅಲೆಯುವೆ. ಹೀಗೆ ಅಲೆದಾಡುತ್ತಿರುವಾಗಲೇ ನಿನಗೆ ಬಲು ಕೀಳುಸಾವು ಬಂದೀತು. (ಇಂದು) ಭರತವಂಶದ ಸ್ತ್ರೀಯರೆಲ್ಲ (ದೊಡ್ಡದಾಗಿ) ಅಳುತ್ತ ಆಕ್ರೋಶಗೈಯುತ್ತಿರುವಂತೆಯೇ ನಿನ್ನ ಕುಲದ ಸ್ತ್ರೀಯರೆಲ್ಲರೂ (ಹೀಗೆಯೇ) ತಮ್ಮ ಗಂಡುಮಕ್ಕಳು, ಬಂಧುಬಳಗದವರ ಸಾವಿನ ತರುವಾಯ ಅವರ ಹೆಣಗಳ ಮೇಲೆ ಬಿದ್ದು ಉರುಳಾಡುವರು.'

ಶ್ರೀಕೃಷ್ಣನು ಶಾಂತಿಯಿಂದ ಶಾಪವನ್ನು ಕೇಳಿಕೊಂಡು, 'ಹೀಗೇ ಆಗಲಿದೆ' ಎಂದನು.

**ಮೌಸಲ/೨**

ಶ್ರೀಕೃಷ್ಣನು ತಮ್ಮತಮ್ಮಲ್ಲಿ ಕಾದಾಡುವ ಯಾದವವೀರರನ್ನು ಉದ್ದೇಶಿಸಿ ಮಾತನಾಡಿದನು. ವೈಶಂಪಾಯನ ಅದನ್ನೇ ಜನಮೇಜಯರಾಜನಿಗೆ ಹೇಳುತ್ತಲಿದ್ದಾನೆ. ಅವನು, 'ಈ ದಿನ ಚತುರ್ದಶಿಯಂದೇ ಅಮಾವಾಸ್ಯೆ ಬಂದಿದೆ. ಹೀಗಾಗಿ ಇಂದೂ ಕೂಡ ಮಹಾಭಾರತಕಾಲದಂತಹದೇ ಯೋಗವಿದೆ. ಆದ್ದರಿಂದ ನಮ್ಮ ನಾಶ ಕಟ್ಟಿಟ್ಟ ಬುತ್ತಿ. ಭಾರತಯುದ್ಧಕ್ಕೆ ಮೂವತ್ತೈದು ವರ್ಷಗಳು ಸಂದಿವೆ. ಈಗ ಮೂವತ್ತಾರನೆಯದು ಶುರುವಾಗಿದೆ. ತನ್ನ ಪರಿವಾರದವರ ಸಂಹಾರ ನಡೆದುದನ್ನು ಕಂಡು ಕ್ರುದ್ಧಳಾದ ಗಾಂಧಾರಿಯು—

> ಪುತ್ರಶೋಕಾಭಿಸಂತಪ್ತಾ ಗಾಂಧಾರೀ ಹತಬಾಂಧವಾ ।
> ಯದನುವ್ಯಾಜಹಾರಾರ್ತಾ ತದಿದಂ ಸಮುಪಾಗತಮ್ ॥ ೨೦ ॥

'ಗಾಂಧಾರಿಯು ಪುತ್ರಶೋಕದಿಂದ ಸಂತಪ್ತಳಾಗಿ ನಮ್ಮ ಕುಲಕ್ಕೆ ಇತ್ತ ಶಾಪವು ಇಂದು ಪೂರ್ತಿಗೊಳ್ಳುವ ಹೊತ್ತು ಬಂದಿದೆ.'

ಗಾಂಧಾರಿಯ ಮಾತನ್ನು ನಿಜಗೊಳಿಸಲೆಂದು ಅವನು ಯಾದವರೆಲ್ಲರಿಗೂ ಕಡಲಿನತ್ತ ತೀರ್ಥಯಾತ್ರೆಗೆಂದು ಹೋಗಲು ಹೇಳಿದನು.

**ಮೌಸಲ/೬**

ಶ್ರೀಕೃಷ್ಣನ ಹೇಳಿಕೆಯ ಮೇರೆಗೆ ಅರ್ಜುನ ದ್ವಾರಕೆಗೆ ಹೋದನು. ಆಗ ವಾಸುದೇವ ಬಲುಶೋಕಮಗ್ನನಾಗಿ ಕಂಡನು. ಅವನು ಅರ್ಜುನನಿಗೆ ಹೀಗೆಂದನು—

> ಗಾಂಧಾರ್ಯಾ ವಚನಂ ಯತ್ ತದೃಷೀಣಾಂ ಚ ಪರಂತಪ ॥ ೧೫ ॥
> ತನ್ಮೂನಮನ್ಯಥಾ ಕರ್ತುಂ ನೈಚ್ಛತ್ ನ ಜಗತಃ ಪ್ರಭುಃ ॥ ೧೬ ॥

ನನ್ನ ಹೊಟ್ಟೆಯಿಂದ ಮಗನ ರೂಪದಲ್ಲಿ ಅವತರಿಸಿಬಂದ ಪರಮೇಶ್ವರನು ಗಾಂಧಾರಿ ಹಾಗೂ ಋಷಿಗಳ ಶಾಪಗಳನ್ನು ತಿರುಗುಮುರುಗಾಗಿಸಲು ಬಯಸುತ್ತಿಲ್ಲವೆಂದು ಕಾಣುತ್ತದೆ. ಅಂತೆಯೇ ಅವನು ಅಲಕ್ಷ್ಯ ತೋರಿರಲು ಸಾಕು.

+ ಋಷಿಗಳು ಶಾಪವನ್ನಿತ್ತ ಉಲ್ಲೇಖ ಮೌಸಲ-೬/೧೫ರಲ್ಲಿದೆ. ಆದರೆ ಅದರ ಸ್ವರೂಪ ಮಾತ್ರ ಸ್ಫುಟವಾಗಿಲ್ಲ.

## ೯೯. ಯುಧಿಷ್ಠಿರ > ಹೆಣ್ಣುಜಾತಿ

**ಸ್ತ್ರೀ/೨೭**

ಪಾಂಡವರು ತಮ್ಮ ಮೃತರಾದ ನೆಂಟರಿಷ್ಟರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸಲೆಂದು ಗಂಗೆಯ ದಡಕ್ಕೆ ತೆರಳಿದರು. ಕುರುಕುಲದ ಶೋಕಾರ್ತರಾದ ಸ್ತ್ರೀಯರೆಲ್ಲರೂ ಅವರ

ಜೊತೆಗಿದ್ದರು. ಕುಂತಿಯು ಕರ್ಣನ ಹುಟ್ಟಿನ ಗುಟ್ಟನ್ನು ಯುದ್ಧದ ಮೊದಲೇ ಹೇಳಿದ್ದಳಾದರೆ ಇಷ್ಟೆಲ್ಲ ನರಸಂಹಾರವನ್ನು ಸಹಜವಾಗಿಯೇ ತಪ್ಪಿಸಬಹುದಿತ್ತೆಂದು ಧರ್ಮನು ಬಗೆದಿದ್ದನು. ಕುಂತಿ ಈ ಗುಟ್ಟನ್ನು ಇಷ್ಟೊಂದು ದೀರ್ಘಕಾಲದವರೆಗೆ ಬಚ್ಚಿಡಬಾರದಿತ್ತು. ಈ ತಪ್ಪು ಕುಂತಿಯೊಬ್ಬಳದು ಮಾತ್ರವಾಗಿರದೆ ಇಡಿಯ ಹೆಣ್ಣುಜಾತಿಯದೇ ಆಗಿದ್ದಿತು. ಹೀಗೆನ್ನಿಸಿದ್ದರಿಂದ ಅವನು ಇಡಿಯ ಹೆಣ್ಣುಜಾತಿಗೆಂದೇ ಈ ಶಾಪವನ್ನಿತ್ತನು—

> ಪಾಪೇನಾಸೌ ಮಯಾ ಶ್ರೇಷ್ಠೋ ಭ್ರಾತಾ ಜ್ಞಾತಿರ್ನಿಪಾತಿತಃ ।
> ಅತೋ ಮನಸಿ ಯದ್ಗುಹ್ಯಂ ಸ್ತ್ರೀಣಾಂ ತನ್ನ ಭವಿಷ್ಯತಿ ॥ ೨೯ ॥

'ನಾನು ಪಾಪಿ. (ಕರ್ಣನ ಹುಟ್ಟಿನ) ಗುಟ್ಟನ್ನರಿಯದ್ದರಿಂದಲೇ ನನ್ನ ಅಣ್ಣನನ್ನು ಕೊಲ್ಲಿಸಿದೆ. ಹೀಗಾಗಿ ಇಂದಿನಿಂದ ಹೆಣ್ಣುಗಳ ಮನದಲ್ಲಿ ಯಾವುದೇ ಗುಟ್ಟು ಉಳಿಯದಂತಾಗಲಿ.'

**ಶಾಂತಿ/೬**

ವೈಶಂಪಾಯನ ಜನಮೇಜಯರಾಜನಿಗೆ ಯುಧಿಷ್ಠಿರನು ಹೆಣ್ಣುಜಾತಿಗಿತ್ತ ಶಾಪವನ್ನು ಕುರಿತು ಹೇಳುತ್ತಲಿದ್ದಾನೆ.

ಕುಂತಿಯು ಯುಧಿಷ್ಠಿರನಿಗೆ ಕರ್ಣನ ಸಾವಿನ ಬಗೆಗೆ ದುಃಖಿಸದಿರಲು ಹೇಳುತ್ತಾಳೆ. ಅದೇ ರೀತಿಯಾಗಿ ಕರ್ಣನ ಹುಟ್ಟನ್ನು ಗುಟ್ಟಾಗಿರಿಸಲು ಕಾರಣವೇನೆಂಬುದನ್ನೂ ಹೇಳುತ್ತಾಳೆ. ಅದನ್ನು ಕೇಳಿದ ಒಳಿಕ ಯುಧಿಷ್ಠಿರನು ಅವಳ ನಡತೆಯಿಂದಾಗಿ ಬಲುದುಃಖಿತನಾದನು.

> ಶಶಾಪ ಚ ಮಹಾತೇಜಾಃ ಸರ್ವಲೋಕೇಷು ಯೋಷಿತಃ ।
> ನ ಗುಹ್ಯಂ ಧಾರಯಿಷ್ಯಂತೀತ್ಯೇವಂ ದುಃಖಸಮನ್ವಿತಃ ॥ ೧೧ ॥

'ಈ ಜಗತ್ತಿನಲ್ಲಿಯ ಹೆಣ್ಣುಗಳು ಯಾವುದೇ ಗುಟ್ಟನ್ನು ಉಳಿಸಿಕೊಳ್ಳಲಾರರು' ಎಂದು ಅವನು ಶಾಪವನ್ನಿತ್ತನು.

## ೧೦೦. ಭೃಗು > ದಂಶ (ಅಲರ್ಕ) **ಶಾಂತಿ/೩**

ಯುಧಿಷ್ಠಿರನ ಕೇಳಿಕೆಯಂತೆ ನಾರದನು ಪರಶುರಾಮನಿಂದ ಕರ್ಣನಿಗೆ ಶಾಪ ದೊರೆತುದು ಹೇಗೆಂಬುದನ್ನು ಹೇಳಿದನು. ಅದರಲ್ಲಿ ಭೃಗುವು ದಂಶನಿಗಿತ್ತ ಶಾಪದ ವೃತ್ತಾಂತವೂ ಇದೆ.

ಪರಶುರಾಮನು ಕರ್ಣನ ತಪೋನಿಷ್ಠೆ ಹಾಗೂ ಗುರುಸೇವೆಗಳಿಂದ ಸಂತೃಪ್ತನಾಗಿ ಅವನಿಗೆ ಬ್ರಹ್ಮಾಸ್ತ್ರದ ಸಂಪೂರ್ಣವಾದ ಜ್ಞಾನವನ್ನಿತ್ತನು. ಕರ್ಣ ಭೃಗುವಿನ ಆಶ್ರಮದಲ್ಲಿ ಬಿಲ್ಲುವಿದ್ಯೆಯನ್ನು ಕಲಿಯುತ್ತಿದ್ದನು. ಒಂದು ದಿನ ಪರಶುರಾಮ ದಣಿದುಹೋಗಿ ಕರ್ಣನ ತೊಡೆಯ ಮೇಲೆ ತನ್ನ ತಲೆಯಿಟ್ಟು ಮಲಗಿ ನಿದ್ದೆಹೋದನು. ಆಗ ಯಾವುದೋ ಒಂದು ಕ್ಷುದ್ರವಾದ ಕೀಟಕವು ನೆತ್ತರಿನ ಆಸೆಯಿಂದ ಕರ್ಣನ ತೊಡೆಯನ್ನು ಕೊರೆಯಿತು. ಕರ್ಣನಿಗೆ ಸಹಿಸಲಸಾಧ್ಯವಾದ ವೇದನೆಯಾಗುತ್ತಿತ್ತು. ತೊಡೆಯಿಂದ ನೆತ್ತರು ಸೋರು

ತ್ತಿತ್ತು. ಅವನು ಗುರುವಿನ ನಿದ್ರೆಗೆ ಬಾಧೆತಟ್ಟದಿರಲೆಂದು ನೋವನ್ನೆಲ್ಲ ಹೇಗೋ ಸಹಿಸಿ ಕೊಂಡಿದ್ದನು. ಪರಶುರಾಮ ಎಚ್ಚೆತ್ತು ನಡೆದುದನ್ನೆಲ್ಲ ಕಂಡನು. ತಾನು ಅಪವಿತ್ರನಾದೆ ನೆಂಬ ಭಾವನೆಯಿಂದ ಅವನು ತುಂಬ ಕೆರಳಿದನು. ನಿಜವೇನೆಂದು ಕರ್ಣನನ್ನು ಕೇಳಿದನು. ಕರ್ಣನ ತೊಡೆಯನ್ನು ಕೊರೆಯುವ ಆ ಹುಳುವನ್ನು ಪರಶುರಾಮ ಕಣ್ಣಿಟ್ಟು ನೋಡು ತ್ತಲೇ ಅದು ತಕ್ಷಣ ಸಾವನ್ನಪ್ಪಿತು. ಅದರ ದೇಹ ಹಂದಿಯಂತಿತ್ತು. ಅದಕ್ಕೆ ಎಂಟು ಕಾಲುಗಳಿದ್ದವು. ಬಲು ಹರಿತವಾದ ಕೋರೆಹಲ್ಲುಗಳಿದ್ದವು. ದೇಹದ ಮೇಲೆಲ್ಲ ಹದನಾದ ಕೂದಲುಗಳಿದ್ದವು. ತುಸು ಹೊತ್ತಿನಲ್ಲಿಯೇ ಮುಗಿಲಲ್ಲಿ ಒಬ್ಬ ರಕ್ಕಸ ಕಂಡು ಬಂದನು. ಅವನ ದೇಹವೆಲ್ಲ ಕಡುಗಪ್ಪು ಬಣ್ಣದ್ದಿದ್ದು ಅವನು ಮೋಡವನ್ನೇರಿ ಬಂದನು. ಅವನು ಪರಶುರಾಮನನ್ನು ವಂದಿಸಿ ಹೀಗೆಂದನು: 'ಗುರುವರ್ಯರೇ! ನಿಮ್ಮಿಂದಾಗಿ ನಾನು ನರಕವಾಸದಿಂದ ಬಿಡುಗಡೆಹೊಂದಿದೆ. ನೀವು ನನಗೆ ಕಲ್ಯಾಣವನ್ನು ಮಾಡಿದಿರಿ. ನಿಮಗೂ ಕಲ್ಯಾಣವಾಗಲಿ.' ಪರಶುರಾಮನು ಅವನನ್ನು, 'ನೀನಾರು?' ಎಂದು ಕೇಳಿದನು. ಅಲ್ಲದೆ ಆತನ ನರಕವಾಸಕ್ಕೆ ಕಾರಣವೇನೆಂಬುದನ್ನೂ ಕೇಳಿದನು. ಅದಕ್ಕೆ ಆ ರಕ್ಕಸನು—

> ಅಹಮಾಸಂ ಪ್ರಾಗ್ ದಂಶೋ ನಾಮ ಮಹಾಸುರಃ ।
> ಪುರಾ ದೇವಯುಗೇ ತಾತ ಭೃಗೋಸ್ತುಲ್ಯವಯಾ ಇವ ॥ ೧೯ ॥
> ಸೋಽಹಂ ಭೃಗೋಃ ಸುದಯಿತಾಂ ಭಾರ್ಯಾಮಪಹರಂ ಬಲಾತ್ ।
> ಮಹರ್ಷೇರಭಿಶಾಪೇನ ಕೃಮಿಭೂತೋಽಪತಂ ಭುವಿ ॥ ೨೦ ॥
> ಅಬ್ರವೀದ್ಧಿ ಸ ಮಾಂ ಕ್ರುದ್ಧಸ್ತವ ಪೂರ್ವಪಿತಾಮಹಃ ।
> ಮೂತ್ರಶ್ಲೇಷ್ಮಾಶನಃ ಪಾಪ ನಿರಯಂ ಪ್ರತಿಪತ್ಸ್ಯಸೇ ॥ ೨೧ ॥
> ಶಾಪಸ್ಯಾಂತೋ ಭವೇದ್ ಬ್ರಹ್ಮನ್ನಿತ್ಯೇವಂ ತಮಥಾಬ್ರುವಮ್ ।
> ಭವಿತಾ ಭಾರ್ಗವಾದ್ ರಾಮಾದಿತಿ ಮಾಮಬ್ರವೀದ್ ಭೃಗುಃ ॥ ೨೨ ॥
> ಸೋಽಹಮೇನಾಂ ಗತಿಂ ಪ್ರಾಪ್ತೋ ಯಥಾ ನ ಕುಶಲಂ ತಥಾ ।
> ತ್ವಯಾ ಸಾಧೋ ಸಮಾಗಮ್ಯ ವಿಮುಕ್ತಃ ಪಾಪಯೋನಿತಃ ॥ ೨೩ ॥

'ಎಲೈ ತಾತನೇ! ಹಿಂದಕ್ಕೆ ಸತ್ಯಯುಗದಲ್ಲಿ ನಾನು ದಂಶನೆಂಬ ರಾಕ್ಷಸನಾಗಿದ್ದೆನು. ಭೃಗು ಹಾಗೂ ನನ್ನ ವಯಸ್ಸು ಒಂದೇ ಆಗಿತ್ತು. ಅವನ ಮಡದಿಯನ್ನು ನಾನು ಅಪಹರಿಸಿದೆನು. ಅವನ ಶಾಪದಿಂದಾಗಿ ಕೀಟವಾಗಿ ನೆಲಕ್ಕೆ ಬಂದು ಬಿದ್ದೆನು. ನಿನ್ನ ಪೂರ್ವಜನು ಬಲುಕ್ರುದ್ಧನಾಗಿ ಅಂದಿದ್ದನು: 'ಎಲೋ ನೀಚನೇ! ನೀನು ನರಕಕ್ಕೆ ಹೋಗುವೆ. ಅಲ್ಲಿ ಕಫ, ಮೂತ್ರಗಳನ್ನು ಸೇವಿಸುವೆ.' ಆಗ ನಾನು ಅವನನ್ನು ಶಾಪ ವಿಮೋಚನೆಗಾಗಿ ಕೋರಿದೆನು. ಅದಕ್ಕೆ ಅವನು, '(ನನ್ನ ಕುಲದಲ್ಲಿಯೇ ಹುಟ್ಟಿಬರಲಿರುವ) ಭಾರ್ಗವ ಕುಲದಲ್ಲಿ ಹುಟ್ಟಿ ಬರಲಿರುವ ಪರಶುರಾಮನಿಂದಾಗಿ ನಿನ್ನೀ ಶಾಪದಿಂದ ಬಿಡುಗಡೆ ಹೊಂದುವೆ' ಎಂದನು.

'ಈ ರೀತಿಯಾಗಿ ನನಗೆ ಇಂತಹ ಅಮಂಗಲಸ್ಥಿತಿ ಪ್ರಾಪ್ತವಾಗಿತ್ತು. ನಿನ್ನಿಂದಾಗಿ ಈ ನೀಚಯೋನಿಯಿಂದ ಬಿಡುಗಡೆಹೊಂದಿದೆನು.'

+ ಕೇಳಿಕೊಳ್ಳಲಾದ ಉಃಶಾಪ.

## ೧೦೧. ವಸಿಷ್ಠ > ಕಾರ್ತವೀರ್ಯ (ಅರ್ಜುನ) ಶಾಂತಿ/೪೯

ಶ್ರೀಕೃಷ್ಣನು ಯುಧಿಷ್ಠಿರನಿಗೆ ಅವನ ಕೇಳಿಕೆಯ ಮೇರೆಗೆ ಪರಶುರಾಮನ ಹುಟ್ಟು, ಅವನ ಅತುಲನೀಯವಾದ ಶೌರ್ಯ ಹಾಗೂ ವಿಲಕ್ಷಣವಾದ ಕ್ಷತ್ರಿಯರ ಸಂಹಾರವನ್ನು ಕುರಿತು ಹೇಳುತ್ತಲಿದ್ದಾನೆ.

ಗಾಧಿ ಇವನಿಗೆ ಗಂಡುಮಗುವಾಗಿರಲಿಲ್ಲ. ಅವನ ಮಗಳಾದ ಸತ್ಯವತಿ ಭೃಗುವಿನ ಮಗನಾದ ಋಚಿಕನ ಮಡದಿ. ತನಗೊಬ್ಬ ಬ್ರಹ್ಮತೇಜಸ್ಸಿನ ಮಗ ಹುಟ್ಟಬೇಕೆಂದು ಅವಳು ತುಂಬಾ ಹಂಬಲಿಸಿದ್ದಳು. ಅವಳು ತನಗಾಗಿಯೂ, ತನ್ನ ತಾಯಿಗಾಗಿಯೂ ಗಂಡುಮಗು ಬೇಕೆಂದು ಋಚಿಕನೆದುರು ತೋಡಿಕೊಂಡಳು. ಅವನು ಅಭಿಮಂತ್ರಿತ ಎರಡು ಚರುವನ್ನು ಅವಳಿಗೊಪ್ಪಿಸಿದನು. ಪ್ರತಿಯೊಂದು ಚರುವಿನ ವೈಶಿಷ್ಟ್ಯ ಹಾಗೂ ಸಾಮರ್ಥ್ಯಗಳು ಬೇರೆಬೇರೆಯಾಗಿದ್ದವು. ಯಾವಳು ಯಾವ ಚರುವನ್ನು ಸೇವಿಸತಕ್ಕದ್ದೆಂಬುದನ್ನು ಅವುಗಳ ಗುಣವೈಶಿಷ್ಟ್ಯಗಳೊಂದಿಗೆ ಅವಳಿಗೆ ತಿಳಿಸಿ ಹೇಳಿದನು. ಆದರೆ ಸತ್ಯವತಿಯ ತಾಯಿಯು ಮೋಸದಿಂದ ಚರುಗಳನ್ನು ಅದಲುಬದಲು ಮಾಡಿಟ್ಟಳು. ಹೀಗಾಗಿ ಅವಳಿಗೆ ಬ್ರಹ್ಮತೇಜಸ್ಸಿನ ಮಗ ಹುಟ್ಟಿದನು, ಅವನೇ ವಿಶ್ವಾಮಿತ್ರ. ಕ್ಷಾತ್ರ ತೇಜದ ಚರುವಿನ ಸೇವನೆಯಿಂದಾಗಿ ಸತ್ಯವತಿಯ ಹೊಟ್ಟೆಯಿಂದ ಮಾತ್ರ ಒಬ್ಬ ದುಷ್ಟನಾದ ಬ್ರಾಹ್ಮಣಕುವರ ಹುಟ್ಟಿಬರಲಿದ್ದನು. ಅಂಥವನು ತನಗೆ ಮಗನಾಗದೆ ಮೊಮ್ಮಗನಾಗಲಿ ಎಂದು ಅವಳು ಬೇಡಿಕೊಂಡ ಕಾರಣ ಅವಳ ಹೊಟ್ಟೆಯಿಂದ ಜಮದಗ್ನಿ ಹುಟ್ಟಿ ಬಂದನು. ಅವನ ಮಗನೇ ಪರಶುರಾಮ. ಅವನು ಬಿಲ್ಲುವಿದ್ಯೆಯಲ್ಲಿ ಪಳಗಿದ್ದನು. ಅವನು ಶಂಕರನನ್ನು ಪ್ರಸನ್ನಗೊಳಿಸಿ ಅವನಿಂದ ಹಲವು ಅಸ್ತ್ರಗಳನ್ನು ಸಂಪಾದಿಸಿದನು. ಹೈಹಯರ ರಾಜನಾದ ಕಾರ್ತವೀರ್ಯ ಅರ್ಜುನನೂ ಬಲುಪರಾಕ್ರಮಿಯಾಗಿದ್ದನು. ದತ್ತಾತ್ರಯನ ಕೃಪಾಪ್ರಸಾದದಿಂದಾಗಿ ಅವನಿಗೆ ಸಹಸ್ರ ಬಾಹುಗಳು ದೊರೆತಿದ್ದವು. ಅವನು ಅಶ್ವಮೇಧದಂತಹ ಯಜ್ಞಗಳನ್ನು ಕೈಕೊಂಡು ಭೂಮಿಯ ಮೇಲಿನ ರಾಜ್ಯವನ್ನು ಗಳಿಸಿಕೊಂಡನು. ಬ್ರಾಹ್ಮಣನಿಗೆ ದಾನಗಳನ್ನು ನೀಡಿದನು. ಅಗ್ನಿಯು ಭಿಕ್ಷೆಯನ್ನು ಕೇಳುತ್ತಲೆ ಅವನಿಗೆ ಹಲವಾರು ಪಟ್ಟಣಗಳನ್ನು, ನಾಡುಗಳನ್ನು ಕೊಟ್ಟನು. ಅದರಿಂದಾಗಿ ಅಗ್ನಿ ಕಂಡುದನ್ನೆಲ್ಲ ಸುಟ್ಟು ಬೂದಿಯನ್ನಾಗಿ ಮಾಡಹತ್ತಿದನು. ಅವನು ಕಾರ್ತವೀರ್ಯನ ನೆರವಿನಿಂದ ಹಲವು ಪರ್ವತಗಳು, ಮರಗಳ ಕಾಡುಗಳನ್ನು ಸುಟ್ಟುಬಿಟ್ಟನು. ಅದರಲ್ಲಿಯೇ ವಸಿಷ್ಠನ ಆಶ್ರಮವೂ ಸುಟ್ಟು ಬೂದಿಯಾಯಿತು.

> ಆಪವಸ್ತು ತತೋ ರೋಷಾಚ್ಛಶಾಪಾರ್ಜುನಮಚ್ಯುತ ।
> ದಗ್ಧೇಽಽಶ್ರಮೇ ಮಹಾಬಾಹೋ ಕಾರ್ತವೀರ್ಯೇಣ ವೀರ್ಯವಾನ್ ॥ ೪೨ ॥
> ತ್ವಯಾ ನ ವರ್ಜಿತಂ ಯಸ್ಮಾನ್ಮಮೇದಂ ಹಿ ಮಹದ್ ವನಮ್ ।
> ದಗ್ಧಂ ತಸ್ಮಾದ್ ರಣೇ ರಾಮೋ ಬಾಹೂಂಸ್ತೇ ಛೇತ್ಸ್ಯತೇಽರ್ಜುನ ॥ ೪೩ ॥

ಅದರಿಂದಾಗಿ ಆಪವ ಮುನಿ ವಸಿಷ್ಠ ಬಲು ಕಿಡಿಕಿಡಿಯಾದನು. ಅವನು ಕಾರ್ತವೀರ್ಯ ಅರ್ಜುನನನ್ನು ಈ ರೀತಿ ಶಪಿಸಿದನು : 'ಎಲೋ ಅರ್ಜುನಾ ! ನೀನು ವಿಶಾಲವಾದ ನನ್ನ ಈ ಕಾಡನ್ನು ಕಾಪಾಡದೆ ಅದು ಬೆಂಕಿಯ ಬಾಯಿಗೆ ಬೀಳುವಂತೆ ಮಾಡಿದೆ.

ಅಂದಬಳಿಕ ಯುದ್ಧದಲ್ಲಿ ಪರಶುರಾಮ ನಿನ್ನ ಈ ಸಹಸ್ರಬಾಹುಗಳನ್ನು ಕತ್ತರಿಸದೆ ಬಿಡಲಾರ.'

ಕಾರ್ತವೀರ್ಯನಾದರೋ ಈ ಶಾಪದತ್ತ ಅಲಕ್ಷ್ಯತೋರಿದನು.

ನಾಚಿಂತಯತ್ ತದಾ ಶಾಪಂ ತೇನ ದತ್ತಂ ಮಹಾತ್ಮನಾ ।
ತಸ್ಯ ಪುತ್ರಾಸ್ತು ಬಲಿನಃ ಶಾಪೇನಾಸನ್ ಪಿತುರ್ವಧೇ ॥ ೪೫ ॥

ಆ ಶಾಪದಿಂದಾಗಿ ಅವನ ಬಲಶಾಲಿಗಳಾದ ಗಂಡುಮಕ್ಕಳು ಜಮದಗ್ನಿಯ ಕೊಲೆಗೆ ಕಾರಣನಾದರು.

ಶಾಪದಿಂದಾಗಿ ಕಾರ್ತವೀರ್ಯನ ಮಕ್ಕಳು ಸೊಕ್ಕೇರಿದರು. ಅವರು ಜಮದಗ್ನಿಯ ಹಸುವಿನ ಕರುವನ್ನು ಕಳವು ಮಾಡಿ ತಂದರು. ಈ ಸಂಗತಿ ಕಾರ್ತವೀರ್ಯನಿಗೆ ತಿಳಿದಿರ ಲಿಲ್ಲ. ಪರಶುರಾಮ ಹಾಗೂ ಕಾರ್ತವೀರ್ಯರ ನಡುವೆ ಕಾಳಗ ನಡೆಯಿತು. ಆಗ ಪರಶು ರಾಮನು ಅರ್ಜುನನ ಸಹಸ್ರಬಾಹುಗಳನ್ನು ಕತ್ತರಿಸಿ ಚೆಲ್ಲಿದನು. ಕರುವನ್ನು ಬಿಡಿಸಿ ಕೊಂಡು ಬಂದನು. ಪರಶುರಾಮನು ಆಶ್ರಮದಲ್ಲಿಲ್ಲದ ಹೊತ್ತಿನಲ್ಲಿ ಕಾರ್ತವೀರ್ಯನ ಮಕ್ಕಳು ಜಮದಗ್ನಿಯ ತಲೆ ಹಾರಿಸಿದರು. ತನ್ನ ತಂದೆಯ ಕೊಲೆಯ ವಾರ್ತೆಯನ್ನು ಕೇಳಿದವನೇ ಪರಶುರಾಮನಲ್ಲಿ ಒಮ್ಮೆಲೆ ಕೋಪ ಭುಗಿಲ್ಲೆಂದು ಹೊತ್ತಿಯುರಿದು ಅವನು ಈ ಪೃಥ್ವಿಯನ್ನು ನಿಃಕ್ಷತ್ರಿಯವನ್ನಾಗಿ ಮಾಡುವೆನೆಂದು ಪಣ ತೊಟ್ಟನು.

## ೧೦೨. ಮುನಿ > ಶರಭ (ಶ್ವಾನ) ಶಾಂತಿ/೧೧೭

ಯುಧಿಷ್ಠಿರನು ಭೀಷ್ಮನನ್ನು ಪ್ರಜೆಗಳ ಬಗೆಗೆ ದೊರೆಯಾದವನ ಧೋರಣೆ ಹೇಗಿರ ತಕ್ಕದ್ದು ?—ಎಂದು ಕೇಳಿದನು. ಭೀಷ್ಮ ಅದನ್ನವನಿಗೆ ಹೇಳಿದನು. ಹಿಂದಕ್ಕೆ ಶ್ರೇಷ್ಠ ರಾದ ಋಷಿಗಳು ಇದೇ ದೃಷ್ಟಾಂತವನ್ನು ಪರಶುರಾಮನಿಗೆ ಹೇಳಿದ್ದರು.

ಒಬ್ಬ ಋಷಿ ನಿರ್ಜನವಾದ ಕಾಡಿನಲ್ಲಿ ಕಂದಮೂಲಗಳನ್ನು ತಿಂದುಕೊಂಡು ವಾಸ ವಾಗಿದ್ದನು. ಅವನು ಸಂಯಮಿಯೂ, ವ್ರತನಿಷ್ಠನೂ ಆಗಿದ್ದನು. ಅವನ ಶುದ್ಧ ಭಾವವನ್ನರಿತ ಹಲವು ಕಾಡುಪ್ರಾಣಿಗಳು ಅವನ ಸುತ್ತಲೂ ವಾಸವಾಗಿದ್ದವು. ಅವುಗಳಲ್ಲಿ ಒಂದು ನಾಯಿ ಆತನ ಭಕ್ತನಾಗಿತ್ತು. ಅದು ಮಾನವರಂತೆಯೇ ಆ ಋಷಿಯ ಮೇಲೆ ಮಮತೆಯನ್ನು ತೋರುತ್ತಿತ್ತು. ಅದು ಅವನನ್ನು ಬಿಟ್ಟು ಕದಲುತ್ತಿರಲಿಲ್ಲ. ಹೀಗಿರುತ್ತ ಒಂದು ದಿನ ಒಂದು ಚಿರತೆಯು ನೆತ್ತರವನ್ನು ಕುಡಿವ ಬಯಕೆಯಿಂದ ಅಲ್ಲಿಗೆ ಬಂದಿತು. ಅದು ಬಾಯಾರಿಕೆಯಿಂದ ಬಳಲಿತ್ತು. ಅದರ ಕಣ್ಣು ನಾಯಿಯತ್ತ ಹೋಯಿತು. ನಾಯಿ ಹೆದರಿತು. ತನ್ನನ್ನು ಚಿರತೆಯಿಂದ ಕಾಪಾಡಬೇಕೆಂದು ಆ ಋಷಿ ಯನ್ನು ಮೊರೆಹೊಕ್ಕಿತು. ಅವನು ಅದಕ್ಕೆ ಅಭಯವನ್ನಿತ್ತನು. ಅಲ್ಲದೆ ಚಿರತೆ ಅಲ್ಲಿಗೆ ಬರುತ್ತಲೇ ನಾಯಿಗೂ ಚಿರತೆಯ ರೂಪವನ್ನೇ ದಯಪಾಲಿಸಿಬಿಟ್ಟನು. ಅದರಿಂದಾಗಿ ಅಲ್ಲಿಗೆ ಬಂದ ಚಿರತೆಯು ತನ್ನಂತಿರುವ ಈ ಚಿರತೆಯೊಂದಿಗೆ ನಲಿಗೆಯಿಂದಿರಲು ಯತ್ನ ಮಾಡಿತು. ಅಷ್ಟರಲ್ಲಿ ಅಲ್ಲಿಗೊಂದು ಹುಲಿ ಬಂದಿತು. ಬಂದುಂದೇ ಚಿರತೆಯಾದ ನಾಯಿಯ ಮೇಲೆ ಹಾರಿತು. ಮುನಿಯು ಆಗ ಅದಕ್ಕೆ ಹುಲಿಯ ರೂಪವನ್ನು ನೀಡಿ ಅದನ್ನು

ಸಂಕಟದಿಂದ ಪಾರುಮಾಡಿದನು. ಇದೇ ರೀತಿಯಾಗಿ ಅವನು ಆ ನಾಯಿಯನ್ನು ಸಿಂಹ, ಆನೆ, ಶರಭ ಮೊದಲಾದ ಪ್ರಾಣಿಗಳಿಂದಲೂ ಕಾಪಾಡಿದನು.

ತನಗೆ ಶರಭನ ರೂಪು ದೊರೆಯುತ್ತಲೂ ಅದು ಆ ಮುನಿಯನ್ನೇ ತಿಂದುಹಾಕಲು ಬಯಸಿತು. ಮುನಿ ಅದನ್ನರಿತನು. ಅವನು ಹೀಗೆಂದನು—

> ಶ್ವಾ ತ್ವಂ ದ್ವೀಪಿತ್ವಮಾಪನ್ನೋ ದ್ವೀಪೀ ವ್ಯಾಘ್ರತ್ವಮಾಗತಃ ॥ ೨೦ ॥
> ವ್ಯಾಘ್ರಾನ್ನಾಗೋ ಮದಪಟುರ್ನಾಗಃ ಸಿಂಹತ್ವಮಾಗತಃ ।
> ಸಿಂಹಸ್ತ್ವಂ ಬಲಮಾಪನ್ನೋ ಭೂಯಃ ಶರಭತಾಂ ಗತಃ ॥ ೨೧ ॥
> ಮಯಾ ಸ್ನೇಹಪರೀತೇನ ವಿಸ್ಮೃಷ್ಟೋ ನ ಕುಲಾನ್ವಯಃ ।
> ಯಸ್ಮಾದೇವಮಪಾಪಂ ಮಾಂ ಪಾಪ ಹಿಂಸಿತುಮಿಚ್ಛಸಿ ॥ ೨೨ ॥
> ತತೋ ಮುನಿಜನದ್ವೇಷ್ಟಾ ದುಷ್ಟಾತ್ಮಾ ಪ್ರಾಕೃತೋಽಬುಧಃ ।
> ಋಷೀಣಾಂ ಶರಭಃ ಶಪ್ತಾಸ್ತದ್ರೂಪಂ ಪುನರಾಪ್ತವಾನ್ ॥ ೨೩ ॥

'ಎಲೋ! ನೀನಂತೂ ಹುಟ್ಟು ನಾಯಿ. (ಬೇರೆ ಪ್ರಾಣಿಗಳಿಂದ ನಿನ್ನನ್ನು ಕಾಪಾಡಲೆಂದು) ನಾನು ನಿನ್ನನ್ನು ಚಿರತೆಯನ್ನಾಗಿ ಮಾಡಿದೆ. ಚಿರತೆಯಿಂದ ಹುಲಿಯನ್ನಾಗಿ ಮಾಡಿದೆ. ಮದ್ದಾನೆಯನ್ನಾಗಿ ಮಾಡಿದೆ. ಆನೆಯಿಂದ ಸಿಂಹವನ್ನಾಗಿ ಮಾಡಿದೆ. ಮತ್ತೆ ಅದರಿಂದ ನಿನ್ನನ್ನು ಶರಭನನ್ನಾಗಿ ಮಾಡಿದೆ. ನೀನು ಕೀಳುಕುಲದವನಿದ್ದರೂ ಕೂಡ ನಾನು ನಿನ್ನ ಮೇಲಿನ ಮಮತೆಯಿಂದಾಗಿ ನಿನ್ನನ್ನು ಬೇರೆ ಶ್ರೇಷ್ಠವಾದ ಕುಲಗಳ ಪ್ರಾಣಿಗಳ ರೂಪಗಳನ್ನು ನೀಡಿದೆ. ಆದರೆ ಎಷ್ಟೆ ನೀಚನೇ ನೀನು! (ಇದೆಲ್ಲವನ್ನು ಲೆಕ್ಕಿಸುತ್ತಿಲ್ಲ) ನನಗೇ ಎದುರುಬಿದ್ದೆ! (ನೀನು ಕೃತಘ್ನ. ಆದ್ದರಿಂದ) ನಿನಗೆ ನಿನ್ನ ಮೂಲದ ನಾಯಿ ಹುಟ್ಟೇ ದೊರೆಕಲಿದೆ. ನೀನು ನಾಯಿಯಾಗಿರುವುದೇ ಸರಿ. ಋಷಿ, ಮುನಿಗಳನ್ನು ದ್ವೇಷಿಸುವ (ಕೃತಘ್ನನಾದ) ಆ ಶರಭನಿಗೆ ಆ ಮುನಿಯ ಶಾಪದಿಂದಾಗಿ ಮತ್ತೆ ನಾಯಿಯ ರೂಪ ಬಂದಿತು.

**ಶಾಂತಿ/೧೧೮**

> ಸ ಶ್ವಾ ಪ್ರಕೃತಿಮಾಪನ್ನಃ ಪರಂ ದೈನ್ಯಮುಪಾಗತಃ ।
> ಋಷಿಣಾ ಹುಂಕೃತಃ ಪಾಪಸ್ತಪೋವನಬಹಿಷ್ಕೃತಃ ॥ ೧ ॥

ಶರಭನಿಗೆ ಮತ್ತೆ ನಾಯಿಯ ರೂಪ ಬರುತ್ತಲೇ ಅದರ ಅವಸ್ಥೆ ಬಲು ದಯನೀಯವಾಯಿತು. ಮುನಿಯು ಆ ಪಾಪಿಯನ್ನು ತಪೋವನದಿಂದ ಹೊರತಳ್ಳಿದನು.

## ೧೦೩. ಇಂದ್ರೋತ > ಜನಮೇಜಯ **ಶಾಂತಿ/೧೫೦**

ಅರಿವಿಲ್ಲದೆಯೇ ಮಾಡಿದ ಪಾಪದಿಂದ ಬಿಡುಗಡೆ ಹೊಂದುವುದು ಹೇಗೆ?—ಎಂದು ಯುಧಿಷ್ಠಿರನು ಭೀಷ್ಮನನ್ನು ಕೇಳಿದನು. ಆಗ ಭೀಷ್ಮನು ಶೌನಕ ಕುಲದಲ್ಲಿ ಹುಟ್ಟಿಬಂದ ಇಂದ್ರೋತನು ಜನಮೇಜಯನಿಗೆ ಹೇಳಿದ ಕಥೆಯನ್ನೇ ಅವನಿಗೆ ಹೇಳಿದನು.

ಪರೀಕ್ಷಿತನ ಮಗ ಜನಮೇಜಯನಿಂದ ತಪ್ಪಿ ಬ್ರಹ್ಮಹತ್ಯೆ ನಡೆಯಿತು. ಹೀಗಾಗಿ ಅವನ ಪುರೋಹಿತನನ್ನು ಹಿಡಿದು ಬ್ರಾಹ್ಮಣರೆಲ್ಲ ಅವನನ್ನು ತೊರೆದರು. ಪ್ರಜೆಗಳೂ

ಅವನನ್ನು ತೊರೆದುಹೋದರು. ಅವನಿಗೆ ಬಲು ಕೆಡಕೆನಿಸಿತು. ಅವನು ಕಾಡಿನಲ್ಲಿದ್ದು ಹಲವಾರು ಒಳ್ಳೆಯ ಕೆಲಸಗಳನ್ನು ಮಾಡಿದನು. ತಪಸ್ಸನ್ನಾಚರಿಸಿದನು. ಅವನು ಹಲವು ಜನ ಬ್ರಾಹ್ಮಣರಿಂದ ತನ್ನ ಪಾಪವನ್ನು ತೊಳೆಯುವ ಉಪಾಯಗಳನ್ನು ಅರಿಯ ಬಯಸಿದನು. ಅವನು ಇಂದ್ರೋತನಿಗೆ ಶರಣುಹೋದನು. ಆದರೆ ಇಂದ್ರೋತನು ಅವನನ್ನು ತುಂಬ ಹೀಯಾಳಿಸಿದನು. 'ನಿನ್ನನ್ನು ನೋಡುವುದು ಕೂಡ ಅಮಂಗಲ. ಇಲ್ಲಿಂದ ತೊಲಗು' ಎಂದು ಕೂಡ ಅಬ್ಬರಿಸಿದನು. ಪೂರ್ವಜರ ಹಿರಿಮೆಯನ್ನು ಹೊಗಳಿ ಅವನ ಪಾಪಕ್ಕಾಗಿ ಅವನನ್ನು ತೆಗಳಿದನು. 'ನಿನ್ನ ನಡತೆಯಿಂದಾಗಿ ಪಿತೃಗಳೆಲ್ಲ ನರಕಕ್ಕೆ ಹೋದರು. ಅವರ ಆಸೆ-ಆಕಾಂಕ್ಷೆಗಳೆಲ್ಲ ಹಾಳಾದವು' ಎಂದು ಖಂಡಿತವಾಗಿ ಹೇಳಿ ಬಿಟ್ಟನು. ನೀನು ಒಂದೇ ಸವನೆ ಬ್ರಾಹ್ಮಣರನ್ನು ದ್ವೇಷಿಸುತ್ತಿರುವೆ. ಆದ್ದರಿಂದ—

ಇಮಂ ಲೋಕಂ ವಿಮುಚ್ಯ ತ್ವಮಂಗ್ಮೂರ್ಧಾ ಪತಿಷ್ಯಸಿ ।
ಅಶಾಶ್ವತೀಃ ಶಾಶ್ವತೀಶ್ಚ ಸಮಾಃ ಪಾಪೇನ ಕರ್ಮಣಾ ॥ ೧೭ ॥
ಅರ್ಥ್ಯಮಾನೋ ಯತ್ರ ಗೃಧ್ರೈಃ ಶಿತಿಕಂಠೈರಯೋಮುಖೈಃ ।
ತತಶ್ಚ ಪುನರಾವೃತ್ತಃ ಪಾಪಯೋನಿಂ ಗಮಿಷ್ಯಸಿ ॥ ೧೮ ॥
ಯದಿದಂ ಮನ್ಯಸೇ ರಾಜನ್ ನಾಯಮಸ್ತಿ ಕುತಃ ಪರಃ ।
ಪ್ರತಿಸ್ಮಾರಯಿತಾರಸ್ತ್ವಾಂ ಯಮದೂತಾ ಯಮಕ್ಷಯೇ ॥ ೧೯ ॥

'ಈ ಮೃತ್ಯುಲೋಕದ ತರುವಾಯದಲ್ಲಿ ನೀನು ನಿನ್ನ ಪಾಪಕರ್ಮಗಳಿಂದಾಗಿ ಬಲು ದೀರ್ಘಕಾಲದವರೆಗೆ ತಲೆಕೆಳಗಾಗಿ (ಕಾಲು ಮೇಲಾಗಿ) ನರಕದಲ್ಲಿ ಕೊಳೆಯುತ್ತ ಬಿದ್ದು ಕೊಳ್ಳುವೆ. ಅಲ್ಲಿ ಶಿತಿಕಂಠ ಹಾಗೂ ಲೋಹಮುಖಿಯೆಂಬ ಹದ್ದುಗಳು ನಿನ್ನನ್ನು ಪೀಡಿಸು ವವು. ನರಕವಾಸದ ತರುವಾಯ ನಿನಗೆ ಮತ್ತೆ ಬೇರೆ ಪಾಪಯೋನಿಗಳಲ್ಲಿ ಮರುಹುಟ್ಟು ಬರುವುದು. ಈ ಜನ್ಮದಲ್ಲಿಲ್ಲ ಎಂದಬಳಿಕ ಪರಲೋಕದಲ್ಲಾದರೂ ಹೇಗಾದೀತೆಂಬ ಚಿಂತೆ ನಿನಗಿದೆ. (ಅದು ಸರಿಯೇ !) ನೀನು ಯಮಲೋಕಕ್ಕೆ ಹೋದ ತರುವಾಯ ಯಮದೂತರು ನಿನಗೆ ಈ ಸಂಗತಿಯನ್ನು ನೆನಪು ಮಾಡಿಕೊಡುವರು.'

ಇಂದ್ರೋತನು ಜನಮೇಜಯನ ಕೋರಿಕೆಯ ಮೇರೆಗೆ ಅವನಿಂದ ಅಶ್ವಮೇಧಯಜ್ಞ ವನ್ನು ಮಾಡಿಸಿದನು. ಅದರಿಂದಾಗಿ ಅವನ ಪಾಪ ಕಳೆದು ಅವನಿಗೆ ನಿಗಿನಿಗಿಯಾದ ಕೆಂಡ ದಂತಹ ತೇಜಸ್ಸು ಪ್ರಾಪ್ತವಾಯಿತು.

ಶಾಪದ ಖಚಿತವಾದ ಉಲ್ಲೇಖವಿಲ್ಲದೆ ಹೋದರೂ ಇಂದ್ರೋತನ ಮಾತು ಶಾಪ ದಂತೆಯೇ ಇವೆ.

**ಶಾಂತಿ/೧೫೧**

ಜನಮೇಜಯು ಈ ಮಾತನ್ನು 'ಶಾಪೋದ್ಧಾರ' ಎಂದಿದ್ದಾನೆ. ಅವನು ಇಂದ್ರೋತ ನನ್ನು ಬೇಡಿಕೊಳ್ಳುವಾಗ ಹೀಗೆಂದಿರುವನು—

ನ ಹಿ ನೋ ಬ್ರಹ್ಮಶಪ್ತಾನಾಂ ಶೇಷಂ ಭವಿತುಮರ್ಹತಿ ॥ ೭ ॥

'ಬ್ರಾಹ್ಮಣರು ಶಾಪವನ್ನಿತ್ತರೆಂದಬಳಿಕ ನಮ್ಮ ಕುಲದ್ದೆನ್ನುವುದೇನೂ ಉಳಿದು ಕೊಳ್ಳಲಾರದು.'

# ೧೦೪. ಬ್ರಹ್ಮದೇವ > ರಾಜಧರ್ಮ (ನೀರುಗೋಳಿ)

**ಶಾಂತಿ/೧೭೩**

ಕೃತಘ್ನತೆ ಹಾಗೂ ಮಿತ್ರದ್ರೋಹಗಳ ಪರಿಣಾಮಗಳನ್ನು ಕುರಿತು ಭೀಷ್ಮನು ಯುಧಿಷ್ಠಿರನಿಗೆ ಗೌತಮ ಬ್ರಾಹ್ಮಣ ಹಾಗೂ ರಾಜಧರ್ಮನ ಕಥೆಯನ್ನು ಹೇಳುತ್ತಾನೆ.

ಗೌತಮನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನ ಮೇಲೆ ಯಾವುದೇ ಬಗೆಯ ಬ್ರಾಹ್ಮಣ ಸಂಸ್ಕಾರಗಳು ಆಗಿರಲಿಲ್ಲ. ಅವನು ಬಡವನಾಗಿದ್ದನು. ಭಿಕ್ಷೆ ಬೇಡುತ್ತ ಅಲೆದಾಡುತ್ತಿದ್ದನು. ಒಂದು ಸಲ ಅವನು ಒಬ್ಬ ದಸ್ಯುವಿನಲ್ಲಿ ಭಿಕ್ಷೆಕೇಳಲು ಹೋದನು. ಆ ದಸ್ಯುವು ಹಣವಂತನೂ, ದಾನಶೂರನೂ ಹಾಗೂ ಬ್ರಾಹ್ಮಣರ ಬಗೆಗೆ ಗೌರವವನ್ನು ತಳೆದವನೂ ಆಗಿದ್ದನು. ಅವನು ಈ ಬ್ರಾಹ್ಮಣನಿಗೆ ವಾಸಿಸಲು ಆಸರೆ, ವರ್ಷವಿಡೀ ಸಾಲುವಷ್ಟು ಕಾಳುಕಡಿ ಹಾಗೂ ಸೇವೆಗಾಗಿ ಒಬ್ಬಳು ಹರೆಯದ ಹೆಣ್ಣನ್ನು ಅವನಿಗೆ ಕೊಟ್ಟನು. ಅವನು ಅವಳ ಗಂಡನಂತೆ ಸುಖದಿಂದ ಕಾಲಕಳೆಯಹತ್ತಿದನು. ಒಂದು ಸಲ ಇನ್ನೊಬ್ಬ ಸದಾಚಾರಿಯಾದ ಬ್ರಾಹ್ಮಣ ಆ ಊರಿಗೆ ಬಂದನು. ಗೌತಮನ ಅಧಃಪತನವನ್ನು ಕಂಡು ಅವನಿಗೆ ಬಲು ಕೆಡಕೆನ್ನಿಸಿತು. ಅವನು ಗೌತಮನಿಗೆ ಉಪದೇಶವನ್ನು ನೀಡಿದನು. ಗೌತಮನ ಆತಿಥ್ಯವನ್ನು ಸ್ವೀಕರಿಸದೆಯೇ ಹೊರಟುಹೋದನು. ಗೌತಮನು ಒಂದು ಸಲ ಹಣ ಗಳಿಕೆಗಾಗಿ ಒಂದು ವ್ಯಾಪಾರಿಗಳ ಸಂಘದೊಂದಿಗೆ ಕತ್ತಲಿನತ್ತ ಹೊರಟಿದ್ದನು. ಒಂದು ಗವಿಯಲ್ಲಿ ಮದ್ದಾನೆಯೊಂದು ಅವರೆಲ್ಲರನ್ನು ಕಾಡಿ ದುರ್ದೆಸೆಗೆ ತಂದಿತು. ಗೌತಮ ಹೇಗೋ ಜೀವದೊಂದಿಗೆ ಪಾರಾದನು. ಆದರೆ ಕಾಡಿನಲ್ಲಿ ದಾರಿ ತಪ್ಪಿದನು. ಅಲ್ಲಿ ರಾಜಧರ್ಮನೆಂಬ ನೀರುಗೋಳಿಯಿತ್ತು. ಅದು ಗೌತಮನೊಂದಿಗೆ ಗೆಳೆತನ ಮಾಡಿಕೊಂಡು ಅವನಿಗೆ ಹಲವು ಬಗೆಯಿಂದ ನೆರವು ನೀಡಿತು. ವಿರೂಪಾಕ್ಷನೆಂಬ ರಾಕ್ಷಸನಿಂದ ಗೌತಮನಿಗೆ ಸಾಕಷ್ಟು ಹಣವನ್ನು ದೊರಕಿಸಿಕೊಟ್ಟಿತು. ಗೌತಮನಾದರೋ ಬಲು ಕೃತಘ್ನನೂ. ನೀಚನೂ ಆಗಿದ್ದನಾದ್ದರಿಂದ ಅವನು ತನ್ನ ಹಸಿವನ್ನು ಹಿಂಗಿಸಲು ರಾಜಧರ್ಮನನ್ನೇ ಕೊಂದುಬಿಟ್ಟನು. ಈ ಸಂಗತಿ ವಿರೂಪಾಕ್ಷನಿಗೆ ತಿಳಿದು ಬರುತ್ತಲೇ ಅವನು ಗೌತಮನನ್ನು ಕಡಿದು ತುಂಡುತುಂಡಾಗಿ ಮಾಡಿದನು. ಅವನ ಮಾಂಸವನ್ನು ಅನಾರ್ಯರಿಗೆ ನೀಡಲಾಗಿ ಅವರೂ ಕೂಡ ಅದನ್ನು ನಿರಾಕರಿಸಿಬಿಟ್ಟರು. ಗೌತಮನು ಪಾಪಿಯಾಗಿದ್ದನೆಂಬುದು ಅವರಿಗೂ ಗೊತ್ತಿತ್ತು. ಬ್ರಹ್ಮಹತ್ಯೆಯನ್ನು ಮಾಡುವವನು, ಮದ್ಯಸೇವನೆ ಮಾಡುವವನು, ಕಳ್ಳ, ವ್ರತಭಂಗವನ್ನು ಮಾಡುವವನು ಕೂಡ ಪ್ರಾಯಶ್ಚಿತ್ತದಿಂದಾಗಿ ಶುದ್ಧನಾಗಬಲ್ಲನು. ಆದರೆ ಮಿತ್ರದ್ರೋಹಿ. ಕೃತಘ್ನ ಹಾಗೂ ಕ್ರೂರನಾದ ನರಾಧಮನಿಗೆ ಪ್ರಾಯಶ್ಚಿತ್ತ ಎಂಬುದಿಲ್ಲ.

ವಿರೂಪಾಕ್ಷನು ರಾಜಧರ್ಮನ ದೇಹದ ತುಣುಕುಗಳನ್ನೆಲ್ಲ ಒಂದೆಡೆ ಕಲೆಹಾಕಿ ಅಂತ್ಯಸಂಸ್ಕಾರವನ್ನು ಮಾಡಿದನು. ಆಗ ಮುಗಿಲಿನಿಂದ ಕಾಮಧೇನುವು ನೊರೆಹಾಲನ್ನು ಆ ಮೃತದೇಹದ ಮೇಲೆ ಸಿಂಪಡಿಸಿತು. ಅದರಿಂದಾಗಿ ರಾಜಧರ್ಮನು ಮತ್ತೆ ಜೀವ ತಳೆದನು. ಒಂದು ನೀರುಗೋಳಿಗೆ ಜೀವವನ್ನು ಮರಳಿ ಕೊಡಿಸಿದ ವಿರೂಪಾಕ್ಷನನ್ನು ಕಂಡು ಇಂದ್ರ ಸಂತುಷ್ಟನಾದನು. ಅವನು ವಿರೂಪಾಕ್ಷನಿಗೆ ಇಂತೆಂದನು—

ಶ್ರಾವಯಾಮಾಸ ಚೇಂದ್ರಸ್ತಂ ವಿರೂಪಾಕ್ಷಂ ಪುರಾತನಮ್ ।
ಯಥಾ ಶಾಪಃ ಪುರಾ ದತ್ತೋ ಬ್ರಹ್ಮಣಾ ರಾಜಧರ್ಮಣಃ ॥ ೭ ॥
ಯದಾ ಬಕಪತೀ ರಾಜನ್ ಬ್ರಹ್ಮಾಣಂ ನೋಪಸರ್ಪತಿ ।
ತತೋ ರೋಷಾದಿದಂ ಪ್ರಾಹ ಖಗೇಂದ್ರಾಯ ಪಿತಾಮಹಃ ॥ ೮ ॥
ಯಸ್ಮಾನ್ಮೂಢೋ ಮಮ ಸಭಾಂ ನಾಗತೋಽಸೌ ಬಕಾಧಮಃ ।
ತಸ್ಮಾದ್ ವಧಂ ಸ ದುಷ್ಟಾತ್ಮಾ ನ ಚಿರಾತ್ ಸಮವಾಪ್ಸ್ಯತಿ ॥ ೯ ॥
ತದಯಂ ತಸ್ಯ ವಚನಾನ್ನಿಹತೋ ಗೌತಮೇನ ವೈ ।
ತೇನೈವಾಮೃತಸಿಕ್ತಶ್ಚ ಪುನಃ ಸಂಜೀವಿತೋ ಬಕಃ ॥ ೧೦ ॥

"ಹಿಂದಕ್ಕೆ ಬ್ರಹ್ಮನು ರಾಜಧರ್ಮನಿಗೆ ಶಾಪವನ್ನಿತ್ತಿದ್ದನು. ಎಲ್ಲರೂ ಬ್ರಹ್ಮದೇವನ ಸಭೆಗೆ ಹಾಜರಿದ್ದರು. ಬಕಪಕ್ಷಿ ಮಾತ್ರ ಹೋಗಿರಲಿಲ್ಲ. ಅದರಿಂದಾಗಿ ಪಿತಾಮಹನಿಗೆ ತುಂಬ ಕೋಪ ಬಂದಿತು. ಅವನು ರಾಜಧರ್ಮನಿಗೆ, 'ಎಲವೋ ತಿಳಿಗೇಡಿಯಾದ ಬಕಪತಿಯೇ ! ನನ್ನ ಸಭೆಗೆ ಬಾರದ್ದರಿಂದ ಶೀಘ್ರದಲ್ಲಿಯೇ ಆತನ ವಧೆಯಾಗಲಿದೆ' ಎಂದನು. ಅವನ ಅಪ್ಪಣೆಯ ಮೇರೆಗೆ ಗೌತಮನು ನೀರುಗೋಳಿ ರಾಜಧರ್ಮನನ್ನು ಕೊಲೆಗೈದನು. ಬ್ರಹ್ಮದೇವನು ಆದರ ಮೈಮೇಲೆ ಅಮೃತವನ್ನು ಸಿಂಚನಗೈದು ಅದನ್ನು ಮತ್ತೆ ಜೀವಂತಗೊಳಿಸಿದನು."

ಬ್ರಹ್ಮದೇವನು ಇಂದ್ರನ ಕೋರಿಕೆಯಂತೆ ಗೌತಮನನ್ನೂ ಮತ್ತೆ ಜೀವಂತವನ್ನಾಗಿ ಮಾಡಿದನು.

+ ಅಮೃತವನ್ನು ಸಿಂಪಡಿಸುವುದರಿಂದ ರಾಜಧರ್ಮನಿಗೆ ಪುನರ್ಜೀವ ಬರುವುದು ಶಾಪಮುಕ್ತಿಯೇ ಸರಿ. ಆದರೆ ಇದು ಉಃಶಾಪವಲ್ಲ. ಶಾಪಮುಕ್ತಿಯನ್ನೇ ಉಃಶಾಪ ಎಂದು ಬಗೆಯುವುದಾದರೆ ಅದು ಅಯಾಚಿತವಾದ ಉಃಶಾಪ ಎನ್ನಿಸೀತು.

## ೧೦೫. ದೇವ(ಗಣ) > ಗೌತಮ   ಶಾಂತಿ/೧೭೩

ಮೊದಲ ಸಂದರ್ಭ : ನೋಡಿ : ಬ್ರಹ್ಮದೇವ > ರಾಜಧರ್ಮನ ಶಾಪ.

ಗೌತಮನ ಪುನರ್ಜನ್ಮವಾಗುತ್ತಲೂ ಅವನು ಶಬರಗೃಹಕ್ಕೆ ಹೋದನು. ಅವನಿಂದ ಆ ಶೂದ್ರಹೆಣ್ಣಿಗೆ ಪಾಪಾಚರಣೆಯುಳ್ಳ ಮಗನು ಹುಟ್ಟಿದನು. ಏಕೆಂದರೆ.

ಶಾಪಶ್ಚ ಸುಮಹಾಂಸ್ತಸ್ಯ ದತ್ತಃ ಸುರಗಣೈಸ್ತದಾ ।
ಕುಕ್ಷೌ ಪುನರ್ಭ್ವಾಃ ಪಾಪೋಽಯಂ ಜನಯಿತ್ವಾ ಚಿರಾತ್ ಸುತಾನ್ ॥ ೧೭ ॥
ನಿರಯಂ ಪ್ರಾಪ್ಸ್ಯತಿ ಮಹತ್ ಕೃತಘ್ನೋಽಯಮಿತಿ ಪ್ರಭೋ ॥ ೧೮ ॥

ಸುರಗಣವು ಗೌತಮನಿಗೆ ಶಾಪವನ್ನೀಯುತ್ತ ಹೀಗೆಂದಿತು—

'ಈತ ಕೃತಘ್ನನೂ ಪಾಪಿಯೂ ಆದ ಮನುಷ್ಯನು. ಬೇರೆ ಗಂಡುಗಳೊಂದಿಗೆ ಕೂಡಿಕೊಳ್ಳುವ ಶೂದ್ರಹೆಣ್ಣಿನಿಂದ ಈತ ಬಲುಕಾಲ ಮಕ್ಕಳನ್ನು ಪಡೆಯುವನು. ಮುಂದೆ ನರಕಕ್ಕೆ ಹೋಗುವನು.'

## ೧೦೬. ಕೌಶಿಕ > ಇಕ್ಷ್ವಾಕು ಶಾಂತಿ/೧೯೯

ಕೌಶಿಕ ಬ್ರಾಹ್ಮಣ, ಯಮ, ಕಾಲ, ಮೃತ್ಯು ಹಾಗೂ ಧರ್ಮ ಇವರಲ್ಲಿ ಮಾತುಕತನಾಗಿದಾಗ ಇಕ್ಷ್ವಾಕುರಾಜನು ಅಲ್ಲಿಗೆ ಬಂದನು. ಬಂದು ಕೌಶಿಕನು ಜಪದಿಂದ ಪಡೆದ ಫಲವನ್ನು ಅವನಿಂದ ಕೇಳಿದನು. ಕೌಶಿಕನೂ ಅದನ್ನು ಕೊಡಲೊಪ್ಪಿದನು. ಆದರೆ ಬೇಡುವುದು ಕ್ಷಾತ್ರಧರ್ಮಕ್ಕೆ ಹೊರತಾದುದರಿಂದ ಶರುವಾಯದಲ್ಲಿ ಅವನು ಅದನ್ನು ತಪ್ಪಿಸತೊಡಗಿದನು. ಭೀಷ್ಮನು ಯುಧಿಷ್ಠಿರನಿಗೆ ಈ ಸಂಗತಿಯನ್ನು ಕುರಿತು ಹೇಳುತ್ತಲಿದ್ದಾನೆ.

ಇಕ್ಷ್ವಾಕುವು ಫಲವನ್ನು ಪಡೆಯದಂತಾಗಲು ಕೌಶಿಕನು ಅವನಿಗೆ ಹೀಗೆಂದನು : 'ನೀನು ಕೇಳಿದುದನ್ನು ನಿನಗೆ ಕೊಡುವೆನೆಂದು ಮಾತುಕೊಟ್ಟಿರುವೆನು. ನೀನು ಸತ್ಯವಚನನಾಗಿದ್ದರೆ ಕೊಟ್ಟ ಮಾತಿಗೆ ತಪ್ಪಲಾರೆ.' ಅವರಿಬ್ಬರಲ್ಲೂ ತುಂಬ ವಾದಕ್ಕಿಟ್ಟುಕೊಂಡಿತು. ಕೌಶಿಕ ತನ್ನ ಮಾತು ಮುರಿಯದಂತೆ ಎಚ್ಚರದಿಂದಿದ್ದನು. ಆದರೆ ಕ್ಷತ್ರಿಯನಿಗೆ ಸರಿಕಾಣದ ನಡತೆ ತನ್ನಿಂದಾಗಕೂಡದೆಂದು ಇಕ್ಷ್ವಾಕುರಾಜ ಹಿಂದೇಟುಹಾಕುತ್ತಲಿದ್ದನು. ಕೊನೆಗೆ ಕೌಶಿಕನು ಇಕ್ಷ್ವಾಕುವಿಗೆ ಕೊನೆಯ ಮಾತೆಂದು ಹೀಗೆ ನುಡಿದನು—

> ಗೃಹಾಣ ಧಾರಯೇಽಹಂ ಚ ಯಾಚಿತಂ ಸಂಶ್ರುತಂ ಮಯಾ ।
> ನ ಚೇದ್ ಗ್ರಹೀಷ್ಯಸೇ ರಾಜಂಶಾಪಿಷ್ಯೇ ತ್ವಾಂ ನ ಸಂಶಯಃ ॥ ೧೧೦ ॥

'(ನನ್ನ ಮಾತಿನಂತೆ) ನಾನು ನಿನಗ ಕೊಡಲೇಬೇಕು. ನೀನು ನನಗೆ ಕೇಳಿದ್ದನ್ನು ನಾನು ನಿನಗೆ ಕೊಡಲೇಬೇಕೆಂಬ ಮಾತಿಗೆ ಕಟ್ಟಿಕೊಂಡಿರುವೆನು. ನೀನು ಅದನ್ನು ಸ್ವೀಕರಿಸದಿದ್ದರೆ ನಾನು (ಖಂಡಿತ) ನಿನ್ನನ್ನು ಶಪಿಸುವೆನು—ಎಂಬದನ್ನು ನೆನಪಿನಲ್ಲಿಡು.'

ರಾಜನು ಶಾಪದ ಹೆದರಿಕೆಯಿಂದಾಗಿ ಆ ಬ್ರಾಹ್ಮಣನು ಕೊಡಮಾಡಿದ ಜಪದ ಫಲವನ್ನು ಸ್ವೀಕರಿಸಿದನು.

+ ಈ ಶಾಪ ಶರತ್ತಿನದು. ಶರತ್ತನ್ನು ಪಾಲಿಸಿದ್ದರಿಂದ ಶಾಪವನ್ನೀಯುವ ಹೊತ್ತು ಬಂದಿಲ್ಲ. ನೀಡಿರದ ಶಾಪವಿದು.

## ೧೦೭. ಸತ್ಯ > ಪುಷ್ಪಧಾರಿಣಿ ಶಾಂತಿ/೨೭೨

ಭೀಷ್ಮನು ಯುಧಿಷ್ಠಿರನ ಕೇಳಿಕೆಯಂತೆ ಅವನಿಗೆ ಧರ್ಮಕ್ಕಾಗಿ ಮಾಡಲಾಗುವ ಯಜ್ಞದ ಸ್ವರೂಪವನ್ನು ತಿಳಿಹೇಳುತ್ತಲಿದ್ದಾನೆ.

ಸತ್ಯನೆಂಬ ಒಬ್ಬ ಬ್ರಾಹ್ಮಣ ಮನಬಂದಂತೆ ನಡೆದುಕೊಳ್ಳುವವನಾಗಿದ್ದನು. ಅವನೆಂದಿಗೂ ಹಿಂಸೆಗೆ ಕೈಹಾಕಿದವನಲ್ಲ. ಆದರೆ ಒಂದು ಸಲ ಮಾತ್ರ ಒಂದು ಹಿಂಸಾಪ್ರಧಾನವಾದ ಯಜ್ಞವನ್ನು ಕೈಕೊಳ್ಳಬೇಕೆಂದು ಅವನ ಮನದಲ್ಲಿ ಬಂದಿತು. ಅವನ ಮಡದಿ ಪುಷ್ಪಧಾರಿಣಿಯು ಶುದ್ಧ ಅಂತಃಕರಣದ ಹೆಂಗಸಾಗಿದ್ದಳು. ಅವಳಿಗೆ ಗಂಡನ ಈ ಹಿಂಸೆಯಿಂದ ಕೂಡಿದ ಯಜ್ಞ ಬೇಕಿರಲಿಲ್ಲ. ಆದರೆ ಯಜ್ಞಪತ್ನಿಯಾಗಿ ಗಂಡನೊಂದಿಗೆ ಭಾಗವಹಿಸುವುದು ಅಗತ್ಯದ್ದಾಗಿತ್ತು. ಅಲ್ಲದೆ.

ಸಾ ತು ಶಾಪಪರಿತ್ರಸ್ತಾ ತತ್ಸ್ವಭಾವಾನುವರ್ತಿನೀ ॥ ೭ ॥
ಅಕಾಮಯಾ ಕೃತಸ್ತತ್ರ ಯಜ್ಞೋ ಹೋತ್ರನುಶಾಸನಾತ್ ॥ ೮ ॥

(ಗಂಡನ ಮನದಂತೆ ತಾನು ನಡೆಯದಿದ್ದರೆ) ಅವನು ತನಗೆ ಶಾಪವನ್ನೀಯುವನೆಂಬ ಹೆದರಿಕೆಯಿಂದಾಗಿ ಅವಳು ತನ್ನ ಮನಸ್ಸಿನ ವಿರುದ್ಧವಾಗಿ ಯಜ್ಞದಲ್ಲಿ ಪಾಲ್ಗೊಂಡಳು.

+ ಪ್ರತ್ಯಕ್ಷದಲ್ಲಿ ಶಾಪವನ್ನೀಯಲಾಗಿಲ್ಲ. ಶಾಪ ದೊರೆತೀತೆಂಬ ಹೆದರಿಕೆ ಮಾತ್ರ ಇದೆ.

## ೧೦೮. ಬ್ರಾಹ್ಮಣ > ಉಪರಿಚರ ವಸು ಶಾಂತಿ/೩೩೭

ಉಪರಿಚರ ವಸು ದೊರೆಯು ಪರಮವಿಷ್ಣುಭಕ್ತನಾಗಿದ್ದೂ ಸ್ವರ್ಗದಿಂದ ಪಾತಾಳಕ್ಕ ಬಂದು ಬಿದ್ದುದು ಹೇಗೆ ?—ಎಂದು ಯುಧಿಷ್ಠಿರನು ಭೀಷ್ಮನನ್ನು ಕೇಳಿದನು. ಆಗ ಭೀಷ್ಮನು ಅವನಿಗೆ ವಸುವಿನ ಕಥೆಯನ್ನು ಹೇಳಿದನು.

ಉಪರಿಚರ ವಸುವು ಪೃಥ್ವೀಪತಿಯಾಗಿದ್ದನು. ಅವನು ಇಂದ್ರನ ಸ್ನೇಹಿತನು. ನಾರಾಯಣಭಕ್ತನು. ಒಂದು ಸಲ ದೇವತೆಗಳು ಹಾಗೂ ಬ್ರಾಹ್ಮಣರಲ್ಲಿ (ಋಷಿಗಳಲ್ಲಿ) ಯಜ್ಞದ ಮೇಕೆಬಲಿಯನ್ನು ಕುರಿತು ಚರ್ಚೆ ಶುರುವಾಯಿತು. ಋಷಿಗಳು ಉಪರಿಚರ ವಸುವಿನ ಅಭಿಪ್ರಾಯವನ್ನು ಕೇಳಿದರು. ಅವನು ದೇವತೆಗಳ ಪಕ್ಷ ವಹಿಸಿ ಮಾತಾಡಿದನು. ಯಜ್ಞದ ಕಾಲಕ್ಕೆ ಪಶುವನ್ನು ಹಿಂಸಿಸಿ ಬಲಿಕೊಡಬೇಕೆಂಬುದು ಅವನ ಹೇಳಿಕೆಯಾಗಿತ್ತು. ಋಷಿಗಳಿಗೆ ಹಿಂಸೆ ಒಪ್ಪಿಗೆಯಾಗಿರಲಿಲ್ಲ. ಅವರಿಗೆ ಬಲು ಕೋಪ ಬಂದು ಬಿಟ್ಟಿತು. ಅವರು ವಸುವಿಗೆ ಹೀಗೆಂದರು—

ಸುರಪಕ್ಷೋ ಗೃಹೀತಸ್ತೇ ಯಸ್ಮಾದ್ ತಸ್ಮಾದ್ ದಿವಃ ಪತ ॥ ೧೫ ॥
ಅದ್ಯಪ್ರಭೃತಿ ತೇ ರಾಜನ್ನಾಕಾಶೇ ವಿಹತಾ ಗತಿಃ ।
ಅಸ್ಮಚ್ಛಾಪಾಭಿಘಾತೇನ ಮಹೀಂ ಭಿತ್ತ್ವಾ ಪ್ರವೇಕ್ಷ್ಯಸಿ ॥ ೧೬ ॥
ತತಸ್ತಸ್ಮಿನ್ ಮುಹೂರ್ತೇಽಥ ರಾಜೋಪರಿಚರಸ್ತದಾ ।
ಅಧೋ ವೈ ಸಂಬಭೂವಾಶು ಭೂಮೇರ್ವಿವರಗೋ ನೃಪ ॥ ೧೭ ॥
ಸ್ಮೃತಿಸ್ತ್ವೇನಂ ನ ಹಿ ಜಹೌ ತದಾ ನಾರಾಯಣಾಜ್ಞಯಾ ।
ದೇವಾಸ್ತು ಸಹಿತಾಃ ಸರ್ವೇ ವಸೋಃ ಶಾಪವಿಮೋಕ್ಷಣಮ್ ॥ ೧೮ ॥

(ಅಜ ಎಂಬ ಪದಕ್ಕೆ ಎರಡು ಅರ್ಥಗಳಿವೆ—ಒಂದು ಮೇಕೆ, ಇನ್ನೊಂದು ಸಸ್ಯ. ನೀನಿದನ್ನು ಅರಿತವನೇ ಆದರೂ) 'ನೀನು ದೇವತೆಗಳ ಪಕ್ಷವನ್ನು ವಹಿಸಿದೆಯಾದ್ದರಿಂದ ನೀನು ಸ್ವರ್ಗದಿಂದ ಪತನಹೊಂದಲಿರುವೆ. ಇಂದಿನಿಂದ ನೀನು ಸ್ವರ್ಗದಲ್ಲಿ ಸಂಚರಿಸುವ ಸಾಮರ್ಥ್ಯವನ್ನು ಕಳೆದುಕೊಳ್ಳುವೆ. ನಮ್ಮ ಶಾಪದ ಪ್ರಭಾವದಿಂದಾಗಿ ನೀನು ನೆಲವನ್ನು ಭೇದಿಸಿ ಪಾತಾಳಕ್ಕೆ ಹೋಗುವೆ.'

ಬ್ರಾಹ್ಮಣರ ಶಬ್ದೋಚ್ಚಾರದೊಡನೆಯೇ ಉಪರಿಚರ ರಾಜನು ಆಕಾಶದಿಂದ ನೆಲಕ್ಕೆ ಬಿದ್ದನು. ಅದರ ಹೊದರಿನ ಮೂಲಕ ಪಾತಾಳವನ್ನು ತಲಪಿದನು. ನಾರಾಯಣನ ಅಪ್ಪಣೆಯ ಮೇರೆಗೆ ಅವನ ನೆನಪಿನ ಶಕ್ತಿ ಹಾಗೆಯೇ ಉಳಿದುಕೊಂಡಿತು. ತಮ್ಮಿಂದಾಗಿ

ಉಪರಿಚರ ರಾಜನಿಗೆ ಶಾಪ ಬಂದಿತೆಂದು ದೇವತೆಗಳಿಗೆ ಕೆಡಕೆನಿಸಿತು. ಅವರು ಅವನನ್ನು ಶಾಪದಿಂದ ಬಿಡುಗಡೆಗೊಳಿಸಲು ಹವಣಿಸಿದರು.

ಉಪರಿಚರ ರಾಜನ ಮನದಲ್ಲಿ ದೇವಬ್ರಾಹ್ಮಣರನ್ನು ಕುರಿತು ತುಂಬುಗೌರವವಿತ್ತು. ದೇವತೆಗಳು ಋಷಿಗಳ ಮರ್ಯಾದೆಯನ್ನು ಕಾಪಾಡಿ ಅವನಿಗೆ ಒಂದು ಮಾತುಕೊಟ್ಟರು. ಅದೆಂದರೆ, ಅವನು ಪಾತಾಳದಲ್ಲಿ ಇರುವಾಗ ತಾನು ಚಿಂತಿಸುತ್ತಲೇ ಬ್ರಾಹ್ಮಣರು ತಯಾರಿಸಿದ ಯಜ್ಞದಲ್ಲಿಯ 'ವಸುಂಧಾರಾ' ಅವನಿಗೆ ಸಿಕ್ಕೀತು. ಅದರಿಂದಾಗಿ ಹಸಿವು ನೀರಡಿಕೆಗಳಿಂದ ಬಾಧೆ ತಟ್ಟದು, ಎಂಬುದು.

ದೇವತೆಗಳ ಈ ಆಶ್ವಾಸನೆ ಎಂದರೆ ವರದಾನವೇ ಸರಿ. ವಸುವು ಕೂಡ ಪಾತಾಳದಲ್ಲಿ ಐದು ಸಲ ಯಜ್ಞವನ್ನು ಕೈಕೊಂಡು ವಿಷ್ಣುವನ್ನು ಪ್ರಸನ್ನಗೊಳಿಸಿದನು. ವಿಷ್ಣುವು ವಸುವನ್ನು ಪಾತಾಳಲೋಕದಿಂದ ಬಿಡಿಸಿ ಗುಟ್ಟಾಗಿ ಮುಗಿಲುದಾರಿಯಾಗಿ ಕರೆತರು ವಂತೆ ಗರುಡನಿಗೆ ಅಪ್ಪಣೆಯಿತ್ತನು. ಅದರಿಂದಾಗಿ ಉಪರಿಚರ ವಸುವಿಗೆ ಸದೇಹ ಬ್ರಹ್ಮಲೋಕ ಸಿಕ್ಕಿತು.

ಭೀಷ್ಮನು ಯುಧಿಷ್ಠಿರನಿಗೆ ಇಷ್ಟು ಕಥೆಯನ್ನು ಹೇಳಿ ಅದರ ಸಮಾರೋಪವನ್ನು ಈ ಮುಂದಿನಂತೆ ಮಾಡಿದನು—

> ಏವಂ ತೇನಾಪಿ ಕೌಂತೇಯ ವಾಗ್ವ್ಯೋಷಾದ್ ದೇವತಾಜ್ಞಯಾ ।
> ಪ್ರಾಪ್ತಾ ಗತಿರಧಸ್ತಾತ್ ತು ದ್ವಿಜಶಾಪಾನ್ಮಹಾತ್ಮನಾ ॥ ೩೯ ॥

ಎಲೈ ಕೌಂತೇಯನೇ ! ವಸುವಿನ ಮಾತಿನ ತಪ್ಪಿಗಾಗಿ ದೇವತೆಗಳ ಅಪ್ಪಣೆ ಹಾಗೂ ಬ್ರಾಹ್ಮಣರ ಶಾಪದ ಮೇರೆಗೆ ಅವನಿಗೆ ಅಧೋಗತಿ ಬಂದಿತು.

+ ಶಾಪಮುಕ್ತಿಯೆಂದರೆ ಉಃಶಾಪವಲ್ಲ. ದೇವತೆಗಳು ವರವಿತ್ತ ಕಾರಣ ಶಾಪದಿಂದ ಬಿಡುಗಡೆ ದೊರೆತಿದೆ.

## ೧೦೯. ಗೌತಮ > ಇಂದ್ರ  ಶಾಂತಿ/೩೪೨

ಅರ್ಜುನನು ಭಗವಂತನನ್ನು ಅಗ್ನಿ ಹಾಗೂ ಸೋಮ ಇವರಿಬ್ಬರ ಹುಟ್ಟುಗಳು ಒಂದೆಡೆ ಯಲ್ಲಿಯೇ ಆದುದು ಹೇಗೆಂದು ಕೇಳಿದನು. ಭಗವಂತನು ಅದನ್ನು ಕುರಿತು ಹೇಳಿದನು. ಅದರಲ್ಲಿ ಗೌತಮನು ಇಂದ್ರನಿಗಿತ್ತ ಶಾಪದ ಉಲ್ಲೇಖ ಹೀಗಿದೆ—

> ಅಹಲ್ಯಾಧರ್ಷಣನಿಮಿತ್ತಂ ಹಿ ಗೌತಮಾದ್ಧರಿಶ್ಮಶ್ರುತಾಮಿಂದ್ರಃ ಪ್ರಾಪ್ತಃ ॥ ೨೩ ॥

ಇಂದ್ರನು ಅಹಲ್ಯೆಯ ಮೇಲೆ ಅತ್ಯಾಚಾರವನ್ನು ಎಸಗಿ ಗೌತಮನ ಶಾಪಕ್ಕೀಡಾದ್ದ ರಿಂದ ಅವನ ತಲೆಗೂದಲುಗಳು ಕಂದುಬಣ್ಣದ್ದಾದವು.

ವಾಲ್ಮೀಕಿರಾಮಾಯಣದಲ್ಲಿ ಗೌತಮನ ಶಾಪವನ್ನು ವಿಸ್ತಾರದಿಂದ ಬಣ್ಣಿಸಲಾಗಿದೆ.

+ ನೋಡಿ : ವಾಲ್ಮೀಕಿರಾಮಾಯಣ : ಶಾಪ ಮತ್ತು ವರ : ಶಾಪ–೧೨.

**ಅನುಶಾಸನ/೧೫೩**

> ಅಥ ಶಪ್ತಶ್ಚ ಭಗವಾನ್ ಗೌತಮೇನ ಪುರಂದರಃ ।
> ಅಹಲ್ಯಾಂ ಕಾಮಯಾನೋ ವೈ ಧರ್ಮಾರ್ಥಂ ಚ ನ ಹಿಂಸಿತಃ ॥ ೬ ॥

ಮಹರ್ಷಿ ಗೌತಮನು ಅಹಲ್ಯೆಯಲ್ಲಿ ಆಸಕ್ತಿಯನ್ನು ತಳೆದ ಇಂದ್ರನಿಗೆ ಶಾಪವನ್ನಿತ್ತನು. ಆದರೆ ಧರ್ಮವನ್ನು ಕುರಿತು ಯೋಚಿಸಿ ಅವನನ್ನು ನಾಶಪಡಿಸಲಿಲ್ಲ.

## ೧೧೦. ಕೌಶಿಕ > ಇಂದ್ರ

ಶಾಂತಿ/೩೪೨

ಮೊದಲ ಸಂದರ್ಭ : ನೋಡಿ : ಶಾಪ–ಗೌತಮ > ಇಂದ್ರ.

ಕೌಶಿಕನಿಮಿತ್ತಂ ಚೇಂದ್ರೋ ಮುಷ್ಕವಿಯೋಗಂ ಮೇಷವೃಷಣತ್ವಂ
ಚಾವಾಪ ॥ ೨೩ ॥

ಇದೇ ರೀತಿಯಾಗಿ ಕೌಶಿಕನ ಶಾಪದಿಂದಾಗಿ ಅವನ ವೃಷಣಗಳು ಕಳಚಿಬಿದ್ದವು. ಆಮೇಲೆ ಅವನಿಗೆ ಟಗರಿನ ವೃಷಣಗಳು ದೊರೆತವು.

ಕೌಶಿಕನು ಇಂದ್ರನನ್ನು ಶಪಿಸಿದ ಉಲ್ಲೇಖವು ರಾಮಾಯಣದಲ್ಲಿಲ್ಲ. ಇಂದ್ರ ಟಗರಿನ ವೃಷಣವನಾದುದು ಗೌತಮನಿಂದಾಗಿ.

ಇಂದ್ರಸ್ತು ಮೇಷವೃಷಣಸ್ತದಾಪ್ರಭೃತಿ ರಾಘವ ।
ಗೌತಮಸ್ಯ ಪ್ರಭಾವೇಣ ತಪಸಾ ಚ ಮಹಾತ್ಮನಃ ॥

—ವಾಲ್ಮೀಕಿರಾಮಾಯಣ, ಬಾಲಕಾಂಡ-೪೯/೧೦

## ೧೧೧. ಬೃಹಸ್ಪತಿ > ಜಲ

ಶಾಂತಿ/೩೪೨

ಮೊದಲ ಸಂದರ್ಭ : ನೋಡಿ : ಶಾಪ–ಗೌತಮ > ಇಂದ್ರ.

ಅಮೃತೋತ್ಪಾದನೇ ಪುರಶ್ಚರಣತಾಮುಪಗತಸ್ಯಾಂಗಿರಸೋ, ಬೃಹಸ್ಪತೇರೂಪಸ್ಪೃಶತೋ ನ ಪ್ರಸಾದಂ ಗತವತ್ಯಃ ಕಿಲಾಪಃ, ಅಥ ಬೃಹಸ್ಪತಿರಪಾಂ ಚುಕ್ರೋಧ ಯಸ್ಮಾನ್ಮಮೋಪಸ್ಪೃಶತಃ ಕಲುಷೀಭೂತಾ ನ ಚ ಪ್ರಸಾದಮುಪಗತಾಸ್ತಸ್ಮಾದದ್ಯಪ್ರಭೃತಿ ಝುಷಮಕರಕಚ್ಛಪ ಜಂತುಭಿಃ ಕಲುಷೀಭವತೇತಿ, ತದಾ ಪ್ರಭೃತ್ಯಾಪೋ ಯಾದೋಭಿಃ ಸಂಕೀರ್ಣಾಃ ಸಂಪ್ರವೃತ್ತಾಃ ॥ ೨೭ ॥

ಅಂಗಿರಸನ ಮಗನಾದ ಬೃಹಸ್ಪತಿಯು ಅಮೃತವನ್ನು ತಯಾರಿಸುವ ಹೊತ್ತಿಗೆ ಪುರಶ್ಚರಣವನ್ನು ಮಾಡಲು ಆರಂಭಿಸಿದನು. ಆಚಮನವನ್ನು ಮಾಡುವಾಗ ಅವನಿಗೆ ನೀರು ಹೊಲಸಾಗಿರುವುದು ಕಂಡಿತು. ಅವನು ಆ ನೀರಿನ (ಜಲ) ಮೇಲೆ ಕೆರಳಿದನು. ಅವನು ಆ ನೀರಿಗೆ, 'ನಾನು ಆಚಮನವನ್ನು ಮಾಡುವಾಗ ನೀನು ಹಸನಾಗಿರದೆ ರಾಡಿ ನೀರಾಗಿದ್ದೆ. ಹೀಗಾಗಿ ಇಂದಿನಿಂದ ನಿನ್ನಲ್ಲಿ ಮೀನುಗಳು, ಮೊಸಳೆಗಳು ಹಾಗೂ ಆಮೆಗಳು ಮೊದಲಾದ ನೀರುಪ್ರಾಣಿಗಳಿಂದಾಗಿ ನೀನು ಯಾವಾಗಲೂ ಕದಡಿಯೇ ಇರುವೆ' ಎಂದಂದನು. ಅಂದಿನಿಂದ ಜಲಚರಪ್ರಾಣಿಗಳು ನೀರಲ್ಲಿ ಇರಹತ್ತಿದವು.

'ಶಾಪ'ವೆಂಬ ಪ್ರತ್ಯಕ್ಷವಾದ ಉಲ್ಲೇಖ ಇಲ್ಲದಿದ್ದರೂ ಈ ಮಾತುಗಳು ಶಾಪಗಳಂತೆಯೇ ಇವೆ.

## ೧೧೩. ಬುಧ > ಅದಿತಿ

ಶಾಂತಿ/೩೪೨

ಮೊದಲ ಸಂದರ್ಭ : ನೋಡಿ : ಶಾಪ-ಗೌತಮ > ಇಂದ್ರ.

ಅದಿತಿಯು ದೇವತೆಗಳಿಗೆಂದು ಅಡುಗೆಯನ್ನು ಮಾಡಹತ್ತಿದ್ದಳು. ಬುಧನು ಅಸುರ ರನ್ನು ಕೊಲ್ಲಲೆಂದು ಕೈಕೊಂಡ ತನ್ನ ವ್ರತವನ್ನು ಪೂರೈಸಿ ಆಹಾರಕ್ಕಾಗಿ ಬಂದಿದ್ದನು. ಅವನು ಅದಿತಿಯ ಬಳಿ ಭಿಕ್ಷೆಯನ್ನು ಕೇಳಿದನು. ಅವಳು, 'ಈ ಆಹಾರವನ್ನು ದೇವತೆ ಗಳೇ ಮೊದಲಿಗೆ ಸೇವಿಸಬೇಕಿದೆ, ಬೇರೆಯವರಲ್ಲ' ಎಂದು ನುಡಿದು ಆತನಿಗೆ ಭಿಕ್ಷೆಯನ್ನು ಇಕ್ಕಲಿಲ್ಲ. ಆಗ—

......ಭಿಕ್ಷಾಪ್ರತ್ಯಾಖ್ಯಾನ ರುಷಿತೇನ ಬುಧೇನ
ಬ್ರಹ್ಮಭೂತೇನಾದಿತಿಃ ಶಪ್ತಾ ಆದಿತೇರುದರೇ ಭವಿಷ್ಯತಿ ವ್ಯಥಾ
ವಿವಸ್ವತೋ ದ್ವಿತೀಯಜನ್ಮನ್ಯಂಡಸಂಜ್ಞಿತಸ್ಯ......|| ೫೬ ||

ಬ್ರಹ್ಮರೂಪನಾದ ಬುಧನು ಸಂತಪ್ತನಾಗಿ ಅದಿತಿಯನ್ನು (ಹೀಗೆಂದು) ಶಪಿಸಿದನು : 'ವಿವಸ್ವಾನನು ತನ್ನ ಎರಡನೆಯ ಜನ್ಮದ ಕಾಲಕ್ಕೆ ಅಂಡರೂಪನಾಗಿ ಅದಿತಿಯ ಬಸಿರಲ್ಲಿ ಇರುವಾಗ ಅವಳಿಗೆ ಕಷ್ಟವಾದೀತು.'

## ೧೧೪. ಸ್ಥೂಲಶಿರ > ಮರ

ಶಾಂತಿ/೩೪೨

ಮೊದಲ ಸಂದರ್ಭ : ನೋಡಿ : ಶಾಪ-ಗೌತಮ > ಇಂದ್ರ.

ಪುರಾತನ ಕಾಲದಲ್ಲಿ ಸ್ಥೂಲಶಿರನೆಂಬ ಋಷಿಯು ಮೇರುಪರ್ವತದ ಮೇಲೆ ತಪಸ್ಸನ್ನು ಆಚರಿಸುತ್ತಿದ್ದನು. ಅವನ ದೇಹ ತಪಸ್ಸಿನಿಂದಾಗಿ ಸೋತಿತ್ತು. ಹೀಗಿರುವಲ್ಲಿ ಹಲವು ಬಗೆಯ ಕಂಪನ್ನು ಹೊತ್ತು ಗಾಳಿ ಬೀಸುತ್ತ ಅಲ್ಲಿಗೆ ಬಂದಿತು. ಅದರ ಸ್ಪರ್ಶದಿಂದ ಸ್ಥೂಲ ಶಿರನು ಸಂತುಷ್ಟನಾದನು. ಅದೇ ಹೊತ್ತಿಗೆ ಗಿಡಗಳ ಮೇಲೆ ಅರಳಿನಿಂತ ಹೂಗಳು ಕಂಡವು. ಆಗ ಅವನು ಕೋಪದಿಂದ,

......ಏತಾಂಶಶಾಪ ನ ಸರ್ವಕಾಲಂ ಪುಷ್ಪವಂತೋ ಭವಿಷ್ಯಥೇತಿ || ೫೯ ||

'ನಿಮಗೆ ಎಲ್ಲ ಋತುಗಳಲ್ಲೂ ಹೂವಾಗದಿರಲಿ' ಎಂದು ಗಿಡಗಳಿಗೆ ಶಪಿಸಿದನು.

ಇದು ಶಾಪವನ್ನೀಯಲು ಸರಿಯಾದ ಕಾರಣ ಎನ್ನಿಸದು.

## ೧೧೫. ವಡವಾಮುಖ > ಕಡಲು

ಶಾಂತಿ/೩೪೨

ಮೊದಲ ಸಂದರ್ಭ : ನೋಡಿ : ಶಾಪ-ಗೌತಮ > ಇಂದ್ರ.

ನಾರಾಯಣನು ಲೋಕದ ಹಿತಕ್ಕಾಗಿ ಎಂದು ವಡವಾಮುಖನ ಜನ್ಮವನ್ನು ತಳೆದನು. ಅವನು ಮೇರುಪರ್ವತದ ಮೇಲೆ ತಪಸ್ಸನ್ನು ಆಚರಿಸುತ್ತಿದ್ದನು. ಒಮ್ಮೆ ಕಡಲನ್ನು ತನ್ನ ಬಳಿಗೆ ಬರಹೇಳಿದನು. ಆದರೆ ಕಡಲು ಬರಲಿಲ್ಲ. ಅದರಿಂದ ಕುಪಿತನಾಗಿ ಆತನು ತನ್ನ ದೇಹದ ಶಾಖದಿಂದ ಕಡಲಿನ ನೀರನ್ನು ಅಟ್ಟಿಸಿ ಅದನ್ನು ಬೆವರಿನ ಹಾಗೆಯೇ ಉಪ್ಪುಪ್ಪಾಗಿ ಮಾಡಿಬಿಟ್ಟನು. ಅಲ್ಲದೆ ಕಡಲಿಗೆ ಹೀಗೆಂದನು—

ಉಕ್ತಶ್ಚಾಪ್ಯಮೇಯೋ ಭವಿಷ್ಯನ್ತ್ಯೇತಚ್ಚ ತೇ ತೋಯಂ ವಡವಾಮುಖ
ಸಂಜ್ಞಿತೇನ ಪೀಯಮಾನಂ ಮಧುರಂ ಭವಿಷ್ಯತಿ... . ॥ ೬೧ ॥

'ನಿನ್ನ ನೀರು ಕುಡಿಯಲು ಸವಿಯಾಗಿರದು. ಆದರೆ ವಡವಾಮುಖನು ಸೇವಿಸಿದರೆ ಮಾತ್ರ ಅದು ಸವಿಯೆನ್ನಿಸೀತು.'

## ೧೧೬. ಭೃಗು > ಹಿಮವತ್ ಶಾಂತಿ/೩೪೨

ಮೊದಲ ಸಂದರ್ಭ : ನೋಡಿ : ಶಾಪ–ಗೌತಮ > ಇಂದ್ರ.

ಹಿಮಾಲಯನ ಮಗಳು ಉಮೆ. ರುದ್ರನಿಗೆ ಅವಳ ಮೇಲೆ ಮನಸ್ಸಿತ್ತು. ಭೃಗುವು ಹಿಮಾಲಯನನ್ನು ಅವಳಿಗಾಗಿ ಕೇಳಿದನು. ಆಗ ಹಿಮಾಲಯನು ರುದ್ರನೊಂದಿಗೆ ಅವಳ ಮದುವೆ ಮೊದಲೇ ಗೊತ್ತಾಗಿದೆ ಎಂದು ಅವನಿಗೆ ಹೇಳಿದನು. ಅದನ್ನು ಕೇಳಿ ಭೃಗುವಿಗೆ ಕೋಪ ಬಂದಿತು. ಅವನು ಹೀಗೆಂದನು—

..... ಯಸ್ಮಾತ್ ತ್ವಯಾಹಂ ಕನ್ಯಾವರಣಕೃತಭಾವಃ ಪ್ರತ್ಯಾಖ್ಯಾತಸ್ತಸ್ಮಾನ್ನ
ರತ್ನಾನಾಂ ಭವಾನ್ ಭಾಜನಂ ಭವಿಷ್ಯತೀತಿ ॥ ೬೨ ॥

ನಾನು ನಿನ್ನ ಮಗಳನ್ನು ಮದುವೆಯಾಗಲೆಂದು ಇಲ್ಲಿಗೆ ಬಂದೆ. ಆದರೆ ನೀನು ನನಗೆ ಅಲಕ್ಷ್ಯ ತೋರುತ್ತಿರುವೆ. (ಆದುದರಿಂದ) ನಿನ್ನಲ್ಲಿ ರತ್ನಗಳು ಇರದಂತಾಗಲಿ (ಎಂದು ನಿನ್ನನ್ನು ಶಪಿಸುತ್ತೇನೆ).

ಇಲ್ಲಿ 'ಶಾಪ'ವೆಂಬ ಖಚಿತವಾದ ಹೇಳಿಕೆಯಿಲ್ಲದಿದ್ದರೂ ಭೃಗುವಿನ ಮಾತುಗಳು ಶಾಪದಂತೆಯೇ ಇವೆ.

## ೧೧೭. ವಿಶ್ವಾಮಿತ್ರ > (ಅವನ) ಐವತ್ತು ಜನ ಮಕ್ಕಳು

**ಅನುಶಾಸನ/೩**

ಬ್ರಾಹ್ಮಣ್ಯ ಪಡೆಯಲು ಬಲು ಕಷ್ಟದ್ದು. ಹೀಗಿರುವಲ್ಲಿ ಹುಟ್ಟುಕ್ಷತ್ರಿಯನಾದ ವಿಶ್ವಾಮಿತ್ರನಿಗೆ ಅದು ದೊರೆತುದು ಹೇಗೆ ?—ಎಂದು ಯುಧಿಷ್ಠಿರನು ಭೀಷ್ಮನನ್ನು ಕೇಳಿದನು. ಆಗ ಅವನು ಯುಧಿಷ್ಠಿರನಿಗೆ ವಿಶ್ವಾಮಿತ್ರನ ಹುಟ್ಟಿನ ಕಥೆಯನ್ನು ಹೇಳಿದನು. ಅದರಲ್ಲಿ ಶುನಃಶೇಪನ ಕಥೆಯೂ ಇದೆ.

ವಿಶ್ವಾಮಿತ್ರನಲ್ಲಿ ಅಪಾರವಾದ ಸಾಮರ್ಥ್ಯವಿತ್ತು. ಅದರಿಂದ ಅವನು ಹಲವು ಜನ ರಾಕ್ಷಸರನ್ನು ನಿರ್ಮಿಸಿದನು. ವಸಿಷ್ಠನ ನೂರುಜನ ಗಂಡುಮಕ್ಕಳನ್ನು ಕೊಲೆಮಾಡಿಸಿದನು. ಅಲ್ಲದೆ ಹೊಗಳಿಕೆಗೆ ಪಾತ್ರವಾದ ಕುಶಿಕವಂಶವನ್ನು ಸ್ಥಾಪಿಸಿದನು. ಇದೂ ಅಲ್ಲದೆ—

ಋಚೀಕಸ್ಯಾತ್ಮಜಶ್ಚೈವ ಶುನಃಶೇಪೋ ಮಹಾತಪಾಃ ।
ವಿಮೋಕ್ಷಿತೋ ಮಹಾಸತ್ರಾತ್ ಪಶುತಾಮಪ್ಯುಪಾಗತಃ ॥ ೬ ॥
ಹರಿಶ್ಚಂದ್ರಕ್ರತೌ ದೇವಾಂಸ್ತೋಷಯಿತ್ವಾಽಽತ್ಮತೇಜಸಾ ।
ಪುತ್ರತಾಮನುಸಂಪ್ರಾಪ್ತೋ ವಿಶ್ವಾಮಿತ್ರಸ್ಯ ಧೀಮತಃ ॥ ೭ ॥

ನಾಭಿವಾದಯತೇ ಜ್ಯೇಷ್ಠಂ ದೇವರಾತಂ ನರಾಧಿಪ ।
ಪುತ್ರಾಃ ಪಂಚಾಶದೇವಾಪಿ ಶಪ್ತಾಃ ಶ್ವಪಚತಾಂ ಗತಾಃ ॥ ೮ ॥

ಋಚೀಕನ (ಅಜೀಗರ್ತನ) ಮಗನಾದ ಶುನಃಶೇಪನನ್ನು ಯಜ್ಞಪಶುವೆಂದು ತರಲಾಗಿತ್ತು. ವಿಶ್ವಾಮಿತ್ರನು ತನ್ನ ಅತುಲನೀಯವಾದ ಸಾಮರ್ಥ್ಯದಿಂದ ಅವನನ್ನು ಆ ಮಹಾಸತ್ರದಿಂದ ಬಿಡುಗಡೆಗೊಳಿಸಿದನು. ಹರಿಶ್ಚಂದ್ರನ ಆ ಯಜ್ಞದಲ್ಲಿ ವಿಶ್ವಾಮಿತ್ರನು ದೇವತೆಗಳನ್ನು ಸಂತುಷ್ಟಪಡಿಸಿದನು. ಅಲ್ಲದೆ ಅವನಿಗೆ ಜೀವದಾನವನ್ನು ದೊರಕಿಸಿಕೊಟ್ಟು ಅವನನ್ನು ತನ್ನ ಹಿರಿಯ ಮಗನೆಂದೇ ಬಗೆದನು. (ಅವನಿಗೆ ದೇವರಾತನೆಂದು ಹೆಸರಿಟ್ಟನು) ವಿಶ್ವಾಮಿತ್ರನ ಮಕ್ಕಳಾದರೋ ಆತನನ್ನು ತಮ್ಮ ಹಿರಿಯಣ್ಣನೆಂದು ಒಪ್ಪದಾದರು (ಹೀಗಾಗಿ ಕೆರಳಿ) ಅವನು ತನ್ನ ಮಕ್ಕಳಿಗೆ ಶಾಪವನ್ನಿತ್ತು ಅವರನ್ನು ಚಂಡಾಲರನ್ನಾಗಿ ಮಾಡಿದನು.

+ ಮಹಾಭಾರತದಲ್ಲಿ ಈ ಶಾಪವನ್ನು ಕುರಿತು ಇಷ್ಟು ಮಾತ್ರ ಉಲ್ಲೇಖವಿದೆ.

ವಾಲ್ಮೀಕಿರಾಮಾಯಣದಲ್ಲಿ ಈ ಶಾಪವನ್ನು ಸವಿಸ್ತಾರವಾಗಿ ಬಣ್ಣಿಸಲಾಗಿದೆ. ಅಲ್ಲದೆ ಅಲ್ಲಿಯ ಕಥೆಯೂ ಬೇರೆ ಬಗೆಯದಾಗಿದೆ. ವಿಶ್ವಾಮಿತ್ರ ತನ್ನ ಐವತ್ತು ಜನ ಗಂಡು ಮಕ್ಕಳಿಗೆ ಹೀಗೆಂದನು : 'ಋಷಿಯ ಮಗನಾದ ಈ ಬಾಲಕ (ಶುನಃಶೇಪ) ನನ್ನಿಂದ ರಕ್ಷಣೆಯನ್ನು ಪಡೆಯಲು ಬಯಸುತ್ತಾನೆ, ಆದುದರಿಂದ ನೀವೆಲ್ಲ ಅವನಿಗೆ ಜೀವದಾನವನ್ನು ನೀಡಿ ಅವನ ಬಯಕೆಯನ್ನು ಈಡೇರಿಸತಕ್ಕದ್ದು. ನೀವೆಲ್ಲರೂ ಧರ್ಮನಿಷ್ಠರೂ, ಸತ್ಕರ್ಮಿಗಳೂ ಆಗಿರುವಿರಿ. ನೀವು ಸ್ವತಃ ಯಜ್ಞಪಶುಗಳಾಗಿ ಅಂಬರೀಷರಾಜನ ಯಜ್ಞಾಗ್ನಿಯನ್ನು ತೃಪ್ತಿಪಡಿಸಿರಿ. ಅದರಿಂದಾಗಿ ದೇವತೆಗಳು ಸಂತುಷ್ಟರಾಗುವರು. ಯಜ್ಞವು ನಿರ್ವಿಘ್ನವಾಗಿ ನಡೆದೀತು. ಅಲ್ಲದೆ ಶುನಃಶೇಪ ಅನಾಥನೆನ್ನಿಸಲಾರ.' ವಿಶ್ವಾಮಿತ್ರನ ಈ ಮಾತುಗಳನ್ನು ಕೇಳಿ ಅವನ ಮಕ್ಕಳು ನಕ್ಕು ನುಡಿದರು : 'ಎಲೈ ಪ್ರಭು ! ನೀನು ನಿನ್ನ ಮಕ್ಕಳನ್ನು ಇಲ್ಲದಂತೆ ಮಾಡಿ ಬೇರೊಬ್ಬರ ಮಗನನ್ನು ಕಾಪಾಡುವುದೇಕೆ ? ಇದಾದರೆ ಊಟದಲ್ಲಿ ನಾಯಿಯ ಮಾಂಸವನ್ನು ಬಳಸಿದಷ್ಟು ಅಯೋಗ್ಯವಾದ ಕೆಲಸ.' ವಿಶ್ವಾಮಿತ್ರನು ಮಕ್ಕಳ ಮಾತು ಕೇಳಿ, ಕೆರಳಿ ಅವರನ್ನು ಹೀಗೆಂದು ಶಪಿಸಿದನು : 'ನನ್ನ ಮಾತು ಮೀರಿ ನೀವೆಲ್ಲ ನನ್ನ ಮೈಮೇಲೆ ಮುಳ್ಳೇಳುವಂತೆ ಮಾತನಾಡಿರುವಿರಿ. ನನ್ನ ಹೆದರಿಕೆಯಿಲ್ಲದೆಯೇ ಮಾತನಾಡಿರುವಿರಿ ಧರ್ಮದ ದೃಷ್ಟಿಯಿಂದಲೂ ನೀವಾಡಿದ ಮಾತುಗಳು ನಿಂದನೀಯವಾದವುಗಳು. ಆದುದರಿಂದ ನೀವೆಲ್ಲ ನಾಯಿಯ ಮಾಂಸವನ್ನು ತಿಂದು ಕೀಳುಜನ್ಮವನ್ನು ಪಡೆಯುವಿರಿ ಅಲ್ಲದೆ ವಸಿಷ್ಠನ ಮಕ್ಕಳಂತೆ ಒಂದು ಸಾವಿರ ವರ್ಷಗಳ ಕಾಲ ಭೂಮಿಯ ಮೇಲೆ ವಾಸಿಸುವಿರಿ.*

+ ವಾಲ್ಮೀಕಿರಾಮಾಯಣದಲ್ಲಿ ಅಂಬರೀಷನ ಯಜ್ಞದ ಉಲ್ಲೇಖ ಇದ್ದು ಮಹಾಭಾರತದಲ್ಲಿ ಹರಿಶ್ಚಂದ್ರನ ಯಜ್ಞವೆಂದು ಬಣ್ಣಿಸಲಾಗಿದೆ.

---

* ನಿಃಸಾಧ್ವಸಮಿದಂ ಪ್ರೋಕ್ತಂ ಧರ್ಮಾದಪಿ ವಿಗರ್ಹಿತಮ್ ।
ಅತಿಕ್ರಮ್ಯ ತು ಮದ್ವಾಕ್ಯಂ ದಾರುಣಂ ರೋಮಹರ್ಷಣಮ್ ॥ ೧೬ ॥
ಶ್ವಮಾಂಸಭೋಜಿನಃ ಸರ್ವೇ ವಾಸಿಷ್ಠಾ ಇವ ಜಾತಿಷು ।
ಪೂರ್ಣಂ ವರ್ಷಸಹಸ್ರಂ ತು ಪೃಥಿವ್ಯಾಮನುವತ್ಸ್ಯಥ ॥ ೧೭ ॥

—ವಾಲ್ಮೀಕಿರಾಮಾಯಣ, ಬಾಲಕಾಂಡ/೬೨

## ೧೧೮. ವಿಶ್ವಾಮಿತ್ರ > ರಂಭೆ   ಅನುಶಾಸನ

ಮೊದಲ ಸಂದರ್ಭ : ನೋಡಿ : ಶಾಪ–ವಿಶ್ವಾಮಿತ್ರ >(ಅವನ) ಐವತ್ತು ಜನ ಮಕ್ಕಳು. ವಿಶ್ವಾಮಿತ್ರನ ಶಾಪದಿಂದಾಗಿ ರಂಭೆ ಕಲ್ಲಾದ ಒಂದು ಉಲ್ಲೇಖವಿದೆ.

ತಪೋವಿಘ್ನಕರೀ ಚೈವ ಪಂಚಚೂಡಾ ಸುಸಮ್ಮತಾ ।
ರಂಭಾನಾಮಾಪ್ಸರಾಃ ಶಾಪಾದ್ ಯಸ್ಯ ಶೈಲತ್ವಮಾಗತಾ ॥ ೧೧ ॥*

ಪಂಚಚೂಡಗಳನ್ನು ತೊಡುವ ರಂಭೆಯೆಂಬ ಅಪ್ಸರೆಯು ವಿಶ್ವಾಮಿತ್ರನ ತಪಸ್ಸನ್ನು ಭಂಗಮಾಡಲು ಬಂದು ಅವನ ಶಾಪಕ್ಕೆ ಗುರಿಯಾಗಿ ಕಲ್ಲಾದಳು.

ವಾಲ್ಮೀಕಿರಾಮಾಯಣದಲ್ಲಿ ಈ ಶಾಪವನ್ನು ವಿಸ್ತಾರದಿಂದ ಕೊಡಲಾಗಿದೆ. ಶಾಪ ಹೀಗಿದೆ—

ಯನ್ಮಾಂ ಲೋಭಯಸೇ ರಂಭೇ ಕಾಮಕ್ರೋಧಜಯೈಷಿಣಮ್ ।
ದಶವರ್ಷಸಹಸ್ರಾಣಿ ಶೈಲೀ ಸ್ಥಾಸ್ಯಸಿ ದುರ್ಭಗೇ ॥ ೧೨ ॥
ಬ್ರಾಹ್ಮಣಃ ಸುಮಹಾತೇಜಾಸ್ತಪೋಬಲಸಮನ್ವಿತಃ ।
ಉದ್ಧರಿಷ್ಯತಿ ರಂಭೇ ತ್ವಾಂ ಮತ್ಕ್ರೋಧಕಲುಷೀಕೃತಾಮ್ ॥ ೧೩ ॥

—ವಾಲ್ಮೀಕಿರಾಮಾಯಣ, ಬಾಲಕಾಂಡ/೬೪

'ಎಲೆ ರಂಭೇ ! ನಾನು ಕಾಮ, ಕ್ರೋಧಗಳನ್ನು ಗೆಲ್ಲಲು ಹೆಣಗುತ್ತಿರುವೆ. ಹೀಗಿರುವಲ್ಲಿ, ನೀನು ನನ್ನನ್ನು ಮೋಹಿತನನ್ನಾಗಿ ಮಾಡಲೆಳಸಿರುವೆ. ಅಂದಬಳಿಕ ಎಲೆ ದುರ್ಭಗೆಯೇ ! ನೀನು ಹತ್ತುಸಾವಿರ ವರ್ಷಗಳ ಕಾಲ ಕಲ್ಲುಬಂಡೆಯಾಗಿಯೇ ಬೀಳಲಿರುವೆ. ನನ್ನೀ ಕ್ರೋಧದಿಂದ ಬವಣೆಗೀಡಾದ ನಿನ್ನನ್ನು ತೇಜಸ್ವಿಯಾದ ಒಬ್ಬ ಬ್ರಾಹ್ಮಣ ತನ್ನ ತಪಸ್ಸಾಮರ್ಥ್ಯದಿಂದ ಉದ್ಧರಿಸಲಿರುವನು.' ಶಾಪದ ಉತ್ತರಾರ್ಧವು ಉಃಶಾಪವಾಗಿದೆ. ಅದು ಪಶ್ಚಾತ್ತಾಪದಂತಿದೆ. ರಂಭೆಯು ಉಃಶಾಪವನ್ನು ಕೇಳಿಲ್ಲ. ಹೀಗಾಗಿ ಇದು ಅಯಾಚಿತವಾದುದು.

ನೋಡಿ : ವಾಲ್ಮೀಕಿರಾಮಾಯಣ : ಶಾಪ ಮತ್ತು ವರ, ಶಾಪ-೧೮.

## ೧೧೯. ವಸಿಷ್ಠರ ಮಕ್ಕಳು > ವಿಶ್ವಾಮಿತ್ರ   ಅನುಶಾಸನ/೩

ಮೊದಲ ಸಂದರ್ಭ : ನೋಡಿ : ಶಾಪ–ವಿಶ್ವಾಮಿತ್ರ >(ಅವನ) ಐವತ್ತು ಜನ ಮಕ್ಕಳು. ವಿಶ್ವಾಮಿತ್ರನ ಸಾಮರ್ಥ್ಯದ ಬಣ್ಣನೆಯಲ್ಲಿ ಶಾಪಮುಕ್ತಿಯ ಉಲ್ಲೇಖ ಮಾತ್ರ ಇದೆ. ಶಾಪವನ್ನು ನೀಡಲಾಗಿಲ್ಲ. ಶಾಪಮುಕ್ತಿಯ ಉಲ್ಲೇಖ ಬಂದುದರಿಂದ ಮೊದಲಿಗೆ ಶಾಪವನ್ನೀಯಲಾಗಿರುವಂತಿದೆ.

ವಾಗ್ಭಿಶ್ಚ ಭಗವಾನ್ ಯೇನ ದೇವಸೇನಾಗ್ರಗಃ ಪ್ರಭುಃ ।
ಸ್ತುತಃ ಪ್ರೀತಮನಾಶ್ಚಾಸೀಚ್ಛಾಪಾಚ್ಚೈನಮಮುಂಚತ ॥ ೧೪ ॥

---

* ರಾ. ಭಿ ದಾತಾರ ಮತ್ತು ಯ. ಗ. ಫಡಕೆಯವರ ಮರಾಠಿ ಅನುವಾದಗಳಲ್ಲಿ 'ಪಂಚಚೂಡ' ಒಂದು ಬಗೆಯ ಕಂಕಣವಾಗಿದೆ ಎಂದು ಅಡಿಟಿಪ್ಪಣಿಯನ್ನು ನೀಡಲಾಗಿದೆ. ಡಾ. ಪಾಳಂಬೆಯವರು 'ಕೇಶವಲಯಗಳು' ಎಂಬುದಾಗಿ ಅನುವಾದಿಸಿದ್ದಾರೆ.

(ವಿಶ್ವಾಮಿತ್ರನು ನಾಯಿಯ ಕಾಲನ್ನು ಕದ್ದು ತಂದಿದ್ದನು. ಇಂದ್ರ ಅದನ್ನು ಹಾರಿಸಿ ತಂದನು. ಆಗ) ಅವನು ಇಂದ್ರನನ್ನು ಸ್ತುತಿಗೈದನು. ಅವನು ವಿಶ್ವಾಮಿತ್ರನ ಮೇಲೆ ಸಂತುಷ್ಟನಾದನು. ಅವನು (ವಸಿಷ್ಠಪುತ್ರರು ವಿಶ್ವಾಮಿತ್ರನಿಗಿತ್ತ) ಶಾಪದಿಂದ ಅವನನ್ನು ಬಿಡುಗಡೆ ಮಾಡಿದನು.

ಶಾಪಕ್ಕೆ ಕಾರಣವೇನು, ಅದರ ಸ್ವರೂಪ ಎಂಥದು, ಅದರ ಪರಿಣಾಮ ಏನು ? —ಎಂಬ ಯಾವ ಸಂಗತಿಗಳೂ ಅರ್ಥವಾಗುತ್ತಿಲ್ಲ.

+ವಾಲ್ಮೀಕಿರಾಮಾಯಣದಲ್ಲಿ (ಬಾಲಕಾಂಡ ೫೯/೧೭-೨೨) ವಿಶ್ವಾಮಿತ್ರನು ವಸಿಷ್ಠನ ಮಕ್ಕಳಿಗೆ ಶಾಪವನ್ನಿತ್ತುದು ಕಂಡುಬರುತ್ತದೆ, ಆದರೆ ವಸಿಷ್ಠನ ಮಕ್ಕಳಿಗೆ ವಿಶ್ವಾಮಿತ್ರನಿಗೆ ಶಾಪವನ್ನಿತ್ತ ಉಲ್ಲೇಖವಿಲ್ಲ. ಮಹಾಭಾರತದಲ್ಲಿಯ ಶಾಪಮುಕ್ತಿಯ ಉಲ್ಲೇಖದಿಂದಾಗಿ ವಸಿಷ್ಠನ ಮಕ್ಕಳಿತ್ತ ಶಾಪ ಮರುಶಾಪವಾಗಿರಬಹುದೆನ್ನಿಸುತ್ತದೆ.

+ ನೋಡಿ : ವಾಲ್ಮೀಕಿರಾಮಾಯಣ : ಶಾಪ ಮತ್ತು ವರ, ಶಾಪ-೧೫.

## ೧೨೦. ಋಚೀಕ > ಗಾಧಿ

**ಅನುಶಾಸನ**/೪

ಮೊದಲ ಸಂದರ್ಭ : ನೋಡಿ : ಶಾಪ-ವಿಶ್ವಾಮಿತ್ರ >(ಅವನ) ಐವತ್ತು ಜನ ಮಕ್ಕಳು.

ಕುಶಿಕನ ಮಗ ಗಾಧಿ ಒಬ್ಬ ಐಶ್ವರ್ಯಸಂಪನ್ನನಾದ ದೊರೆಯಾಗಿದ್ದನು. ಅವನಿಗೆ ಮಕ್ಕಳಿರಲಿಲ್ಲ. ಮಕ್ಕಳನ್ನು ಪಡೆಯಲೆಂದು ಕಾಡಿನಲ್ಲಿ ವಾಸಿಸತೊಡಗಿದನು. ಅವನಿಗೆ ಬಲು ರೂಪವತಿಯಾದ ಮಗಳು ಹುಟ್ಟಿದಳು. ಅವಳ ಹೆಸರು ಸತ್ಯವತಿ. ಚ್ಯವನ ಭಾರ್ಗವನ ಮಗ ಋಚೀಕನು ದೊಡ್ಡ ತಪಸ್ವಿಯಾಗಿದ್ದನು. ಅವನು ತನಗೆ ಸತ್ಯವತಿ ಯನ್ನು ಕೊಡಬೇಕೆಂದು ಗಾಧಿಯನ್ನು ಕೇಳಿದನು. ಈತನ ಬಡತನವನ್ನು ಗಮನಿಸಿದ ಗಾಧಿಯು ಆ ಕೇಳಿಕೆಯನ್ನು ನಿರಾಕರಿಸಿಬಿಟ್ಟನು. ಆದರೂ ಋಚೀಕನು ತನ್ನ ಬೇಡಿಕೆ ಯನ್ನು ಮತ್ತೆ ಅವನ ಮುಂದೊಡ್ಡಿದನು. ಆಗ ಗಾಧಿಯು ಆತನಿಗೆ ನೇರವಾಗಿ ನಿರಾಕರಣೆ ಯನ್ನು ಹೇಳುವ ಬದಲು ಆತನಿಂದ ಕೊಡಲಾಗದಷ್ಟು ಶುಲ್ಕಕ್ಕಾಗಿ ಕೇಳಿದನು. ಗಾಧಿಯು ತನಗೆ ಕಪ್ಪು ಕಿವಿಗಳುಳ್ಳ ಹಾಗೂ ವಾಯುವೇಗವುಳ್ಳ ಬೆಳ್ಳನೆಯ ಒಂದು ಸಾವಿರ ಕುದುರೆ ಗಳನ್ನು ಕನ್ಯಾಶುಲ್ಕವೆಂದು ತೆರಲು ಹೇಳಿದನು. ಋಚೀಕನು ವರುಣನನ್ನು ಪ್ರಸನ್ನ ಗೊಳಿಸಿಕೊಂಡು ಗಾಧಿಗೆ ಬೇಕಿದ್ದ ಒಂದು ಸಾವಿರ ಕುದುರೆಗಳನ್ನು ಪಡೆದನು. ಕನ್ಯಾ ಶುಲ್ಕವಾಗಿ ಅವುಗಳನ್ನು ಗಾಧಿಗೆ ಕೊಟ್ಟನು, ಗಾಧಿ ನಿರುತ್ತರನಾದನು.

ತತಃ ಸ ವಿಸ್ಮಿತೋ ರಾಜಾ ಗಾಧಿಃ ಶಾಪಭಯೇನ ಚ ।
ದದೌ ತಾಂ ಸಮಲಂಕೃತ್ಯ ಕನ್ಯಾಂ ಭೃಗುಸುತಾಯ ವೈ ॥ ೧೯ ॥

ಹೀಗಾಗಿ ವಿಸ್ಮಿತನಾದ ಗಾಧಿರಾಜನು (ಋಚೀಕನ) ಶಾಪದ ಭಯದಿಂದಾಗಿ ಕನ್ಯೆಯನ್ನು ಅಲಂಕೃತಳನ್ನಾಗಿ ಮಾಡಿ ಅವಳನ್ನು (ಭಾರ್ಗವ) ಋಚೀಕನಿಗೆ ದಾನವಾಗಿಕೊಟ್ಟನು.

+ ಈ ಶಾಪವನ್ನು ಪ್ರತ್ಯಕ್ಷವಾಗಿ ಉಚ್ಚರಿಸಲಾಗಿಲ್ಲ. ಶಾಪದ ಹೆದರಿಕೆಯನ್ನು ವ್ಯಕ್ತ ಪಡಿಸಲಾಗಿದೆ. ಶಾಪದ ಸ್ವರೂಪ ಹಾಗೂ ಪರಿಣಾಮಗಳು ಅರ್ಥವಾಗುವಂತಿಲ್ಲ.

## ೧೨೧. ವಸಿಷ್ಠ > ಸೌದಾಸ

**ಅನುಶಾಸನ/೬**

ಭೀಷ್ಮನು ಯುಧಿಷ್ಠಿರನಿಗೆ ದೈವ ಹಾಗೂ ಮಾನವನ ಯತ್ನಗಳನ್ನು ಕುರಿತು ಹೇಳು ತ್ತಿರುವಾಗ ಈ ಶಾಪವನ್ನು ಕುರಿತಾದ ಉಲ್ಲೇಖ ಮಾತ್ರ ಬರುತ್ತದೆ. ಸೌದಾಸನು ವಸಿಷ್ಠನಿಗೆ ತಪ್ಪಿ ನರಮಾಂಸವನ್ನು ಸೇವಿಸಲು ಕೊಟ್ಟನು. ಆದರಿಂದಾಗಿ ವಸಿಷ್ಠನಿಗೆ ಕೋಪ ಬಂದಿತು. ಹೀಗಾಗಿ ಅವನು ಶಾಪವಿತ್ತನು. ಈ ಕಾರಣವನ್ನು ಹೇಳಿದವನು ವಾಲ್ಮೀಕಿ. ಇಲ್ಲಿ ಶಾಪದ ಕಾರಣಗಳನ್ನು ನೀಡಲಾಗಿಲ್ಲ.

> ಅಶ್ವಮೇಧಾದಿಭಿರ್ಯಜ್ಞೈಃ ಸತ್ಕೃತಃ ಕೋಸಲಾಧಿಪಃ ।
> ಮಹರ್ಷಿಶಾಪಾತ್ ಸೌದಾಸಃ ಪುರುಷಾದತ್ವಮಾಗತಃ ॥ ೩೨ ॥

ಕೋಸಲಾಧಿಪನಾದ ಸೌದಾಸನು ಅಶ್ವಮೇಧದಂತಹ ಯಜ್ಞವನ್ನು ಕೈಕೊಂಡು ಗೌರವ, ಮಾನ್ಯತೆಗಳನ್ನು ಪಡೆದಿದ್ದನು. ಆದರೆ ವಸಿಷ್ಠ ಮಹರ್ಷಿಯ ಶಾಪದಿಂದಾಗಿ ಅವನಿಗೆ ನರಮಾಂಸಭಕ್ಷಕನಾದ ರಾಕ್ಷಸನ ಅವಸ್ಥೆ ಬಂದಿತು.

**ಆಶ್ವಮೇಧಿಕ/೫೬**

ಗೌತಮನ ಮಡದಿ ಅಹಲ್ಯೆಯು ಉತ್ತಂಕನೆಂಬ ಶಿಷ್ಯನಿಗೆ ಸೌದಾಸ ದೊರೆಯ ಪಟ್ಟದರಸಿಯ ಓಲೆಗಳನ್ನು ಗುರುದಕ್ಷಿಣೆಯಾಗಿ ತನಗೆ ತಂದೊಪ್ಪಿಸಲು ಹೇಳಿದಳು. ಉತ್ತಂಕನು ಅವುಗಳಿಗಾಗಿ ಹೋದುದು ತಿಳಿದುಬರುತ್ತಲೇ ಗೌತಮನು ತನ್ನ ಮಡದಿಗೆ ಹೀಗೆಂದನು—

> ......ನ ತೇ ಸಮ್ಯಗಿದಂ ಕೃತಮ್ ।
> ಶಪ್ತಃ ಸ ಪಾರ್ಥಿವೋ ನೂನಂ ಬ್ರಾಹ್ಮಣಂ ತಂ ವಧಿಷ್ಯತಿ ॥ ೩೩ ॥

'ನೀನು ಹೀಗೆ ಮಾಡಿದುದು ಸರಿಯಲ್ಲ. ಸೌದಾಸನಿಗೆ ಶಾಪ ಸಿಗುತ್ತಲೂ (ಅವನು ರಕ್ಕಸನಾಗಿರುವನು) ಹೀಗಾಗಿ ಅವನು ಆ ಬ್ರಾಹ್ಮಣನನ್ನು (ಉತ್ತಂಕನನ್ನು) ಖಂಡಿತ ವಾಗಿಯೂ ಕೊಂದುಬಿಡುವನು.'

**ಆಶ್ವಮೇಧಿಕ/೫೮**

ಸೌದಾಸನು ಉತ್ತಂಕನ ಬಳಿ ತನ್ನ ಶಾಪವನ್ನು ಕುರಿತು ಈ ರೀತಿಯಾಗಿ ಹೇಳಿ ದ್ದಾನೆ—

> ಸೋಽಹಂ ದ್ವಿಜೇಭ್ಯಃ ಪ್ರಣತೋ ವಿಪ್ರಾದ್ ದೋಷಮವಾಪ್ತವಾನ್ ।
> ಗತಿಮನ್ಯಾಂ ನ ಪಶ್ಯಾಮಿ...... ॥ ೬ ॥

'ನಾನು ಯಾವಾಗಲೂ ಬ್ರಾಹ್ಮಣರೆದುರು ನತಮಸ್ತಕನಾಗಿರುತ್ತಿದ್ದೆ. ಇಷ್ಟಾಗಿಯೂ ಒಬ್ಬ ಬ್ರಾಹ್ಮಣನ ಶಾಪದಿಂದಾಗಿ ನನಗೀ ಅವಸ್ಥೆ ಬಂದೊದಗಿತು. ಇದರಿಂದ ಬಿಡುಗಡೆ ಹೊಂದುವ ಯಾವುದೇ ದಾರಿ ನನಗೆ ಕಾಣುತ್ತಿಲ್ಲ.'

ವಾಲ್ಮೀಕಿರಾಮಾಯಣದಲ್ಲಿ ಈ ಶಾಪ ಹಾಗೂ ಸೌದಾಸನು ವಸಿಷ್ಠನಿಗಿತ್ತ ಮರು ಶಾಪಗಳು ವಿಸ್ತಾರದಿಂದ ಬಂದಿವೆ.

ನೋಡಿ : ವಾಲ್ಮೀಕಿರಾಮಾಯಣ : ಶಾಪ ಮತ್ತು ವರ, ಶಾಪ : ೫೭–೫೮.

## ೧೨೨. ಶಂಕರ > ಸುರಭಿ

**ಅನುಶಾಸನ/೧೭**

ಉಪಮನ್ಯುವು ಶ್ರೀಕೃಷ್ಣನಿಗೆ ಹೇಳಿದ ೧೦೦೮ ಹೆಸರುಗಳ ಶಿವಸ್ತುತಿಯಲ್ಲಿ ಒಂದೆಡೆ ಶಂಕರನ ಹೆಸರು 'ಸುರಭ್ಯುತ್ತರಣ' ಎಂಬುದಾಗಿ ಬರುತ್ತದೆ.

ಚಂದನೀ ಪದ್ಮನಾಲಾಗ್ರಃ ಸುರಭ್ಯುತ್ತರಣೋ ನರಃ ॥ ೧೩೭ ॥

ಸುರಭಿಗೆ ಶಾಪ ಸಿಕ್ಕಿದ್ದರಿಂದ ಅವಳು ಸ್ವರ್ಗದಿಂದ ಕೆಳಗಿಳಿದು ಬಂದಳು—ಎಂದು ಇಲ್ಲಿ ಸೂಚಿತವಾಗುತ್ತದೆ. ಶಾಪಕ್ಕೆ ಕಾರಣ ಮಾತ್ರ ತಿಳಿದುಬಾರದು. ಅವಳು ಕೆಳಗಿಳಿದು ಬರಲು ಶಾಪ ಕಾರಣ.

+ ಬರಿ ಒಂದು ಉಲ್ಲೇಖ ಮಾತ್ರ.

## ೧೨೩. ಮುನಿ > ವಾಲ್ಮೀಕಿ

**ಅನುಶಾಸನ/೧೮**

ಮೊದಲ ಸಂದರ್ಭ : ನೋಡಿ : ಶಾಪ—ಇಂದ್ರ > ಅಸಿತದೇವಲ.

ವೈಶಂಪಾಯನ ಜನಮೇಜಯನಿಗೆ ವಾಲ್ಮೀಕಿಯ ಅನುಭವವನ್ನು ಕುರಿತು ಹೇಳುತ್ತಲಿದ್ದಾನೆ. ವಾಲ್ಮೀಕಿಯು ಯುಧಿಷ್ಠಿರನಿಗೆ ಹೀಗೆಂದನು—

ವಿವಾದೇ ನಾಗ್ನಿಮುನಿಭಿರ್ಬ್ರಹ್ಮಘ್ನೋ ವೈ ಭವಾನಿತಿ ॥ ೧೮ ॥
ಉಕ್ತಃ ಕ್ಷಣೇನ ಚಾವಿಷ್ಟಸ್ತೇನಾಧರ್ಮೇಣ ಭಾರತ ।
ಸೋಽಹಮೀಶಾನಮನಘಮಮೋಘಂ ಶರಣಂ ಗತಃ ॥ ೯ ॥

"ಒಂದು ಸಲ ಅಗ್ನಿಹೋತ್ರಿಗಳಾದ ಬ್ರಾಹ್ಮಣರೊಂದಿಗೆ ನನ್ನ ವಾದ ಸಾಗಿತ್ತು. ಆಗ ಅವರು 'ನೀನು ಬ್ರಹ್ಮಹತ್ಯೆಯನ್ನು ಮಾಡುವವನು' ಎಂದು ನನ್ನ ಮೇಲೆ ಕೋಪಿಸಿಕೊಂಡು ಶಾಪವನ್ನಿತ್ತರು ಅವರು ಈ ಶಾಪವನ್ನು ಉಚ್ಚರಿಸುತ್ತಲೇ ನನ್ನ ಮೇಲೆ ಅಧರ್ಮದ ಪರಿಣಾಮ ಉಂಟಾಯಿತು. ಹೀಗಾಗಿ ನಿಷ್ಪಾಪಿಯಾದ ನಾನು ಸಾಮರ್ಥ್ಯವಂತನಾದ ಶಂಕರನಿಗೆ ಶರಣುಹೋದೆನು."

+ 'ಬ್ರಹ್ಮಘ್ನೋ ವೈ ಭವಾನಿತಿ!' ಎಂಬ ಹೇಳಿಕೆಯ ಅರ್ಥವನ್ನು ವರ್ತಮಾನ ಕಾಲವನ್ನನುಸರಿಸಿ ನೋಡಿದರೆ 'ಬ್ರಹ್ಮಘ್ನ'ವು ಒಂದು ಬೈಗುಳ ಎನ್ನಿಸುತ್ತದೆ, ಶಾಪವಲ್ಲ. ಭವಿಷ್ಯತ್ ಕಾಲವೆಂದಾದರೆ ಮಾತ್ರ ಅದು ಶಾಪವೆನ್ನಿಸಲು ಸಾಧ್ಯ.

## ೧೨೪. ಇಂದ್ರ > ಅಸಿತ ದೇವಲ

**ಅನುಶಾಸನ/೧೮**

ಯುಧಿಷ್ಠಿರನು ಶಂಕರನ ಬಗೆಬಗೆಯ ಹೆಸರುಗಳನ್ನೆಲ್ಲ ಅರಿತುಕೊಳ್ಳಬಯಸಿದನು. ಭೀಷ್ಮನು ಅವುಗಳನ್ನು ಅವನಿಗೆ ಅರ್ಥ ಹಾಗೂ ವಿವರಣೆಗಳೊಂದಿಗೆ ಹೇಳಿದನು. ಶ್ರೇಷ್ಠರಾದ ಋಷಿಗಳೂ ಕೂಡ ಶಿವನಾಮದ ಹೆಗ್ಗಳಿಕೆಯನ್ನು ಮನಗಾಣಿಸುವಲ್ಲಿ ತಮ್ಮತಮ್ಮ ಅನುಭವಗಳನ್ನು ಹೇಳಿದ್ದಾರೆ. ವ್ಯಾಸರೂ ಕೂಡ ಪುತ್ರಪ್ರಾಪ್ತಿಗಾಗಿ ಮಂತ್ರಪಠಣವನ್ನು ಕೈಕೊಂಡಿದ್ದಾಗಿ ಹೇಳಿದರು. ತನ್ನ ಬಯಕೆಯನ್ನು ಈಡೇರಿಸಿಕೊಳ್ಳಲು ಅವನಿಗೂ ಮಂತ್ರಗಳನ್ನು ಪಠಿಸುವಂತೆ ಹೇಳಿದ್ದಾರೆ. ಅಸಿತ ದೇವಲನು ಹೀಗೆಂದನು—

೧೨ಸಿತೋ ದೇವಲಶ್ಚೈವ ಪ್ರಾಹ ಪಾಂಡುಸುತಂ ನೃಪಮ್ ॥ ೧೭ ॥
ಶಾಪಾಚ್ಛಕ್ರಸ್ಯ ಕೌಂತೇಯ ವಿಭೋ ಧರ್ಮೋಽನಶತ್ ತದಾ ॥ ೧೮ ॥

'ಎಲೈ ಕೌಂತೇಯನೇ! ಹಿಂದಕ್ಕೆ, ಇಂದ್ರನ ಶಾಪದಿಂದಾಗಿ ನನ್ನ ಧರ್ಮವು ಹಾಳಾಯಿತು. ಆಗ ಶಂಕರನ ದಯೆಯಿಂದ ನನಗೆ ಧರ್ಮ, ಯಶ ಹಾಗೂ ದೀರ್ಘಾಯುಗಳು ದೊರೆತವು.'

+ ಶಾಪದ ಕಾರಣ ಹಾಗೂ ಸ್ವರೂಪಗಳು ಸ್ಪಷ್ಟವಾಗಿಲ್ಲ. ಅಧರ್ಮವು ಶಾಪದ ಫಲವಾಗಿದೆ.

## ೧೨೫. ವಸಿಷ್ಠ > ಗೃತ್ಸಮದ

**ಅನುಶಾಸನ/೧೮**

ಮೊದಲ ಸಂದರ್ಭ : ನೋಡಿ : ಶಾಪ—ಇಂದ್ರ > ಅಸಿತದೇವಲ.

ಶಂಕರನ ಕೃಪಾಪ್ರಸಾದದಿಂದಾಗಿ ಗೃತ್ಸಮದನಿಗೆ ಅಜರತ್ವ ಹಾಗೂ ಅಮರತ್ವಗಳು ಪ್ರಾಪ್ತವಾಗಿದ್ದವು. ಇದನ್ನು ಕುರಿತು ಯುಧಿಷ್ಠಿರನಿಗೆ ಹೇಳುವಾಗ ವಸಿಷ್ಠನಿಂದ ಅವನಿಗೆ ಸಿಕ್ಕ ಶಾಪವನ್ನು ಕುರಿತು ಮೊದಲಿಗೆ ಹೇಳಲಾಗಿದೆ.

ಇಂದ್ರನು ಆರಂಭಿಸಿದ ಸಾವಿರ ವರ್ಷಗಳ ಯಜ್ಞಸತ್ರಕ್ಕೆ ಅವನು ಬಂದಾಗ ಸಾಮಗಾನ ನಡೆದಿತ್ತು. ಗೃತ್ಸಮದನು ಸಾಮಗಾನದ ಪಠಣವನ್ನು ನಡೆಸಿದ್ದನು. ಅವುಗಳ ಉಚ್ಚಾರಗಳು ತಪ್ಪಾಗಿಯೂ, ಅಯೋಗ್ಯವೂ ಆಗಿದ್ದವು. ಅದನ್ನು ಕೇಳಿದ ವಸಿಷ್ಠನು ಅವನಿಗೆ ಹೀಗೆಂದನು—

ರಥಂತರೇ ದ್ವಿಜಶ್ರೇಷ್ಠ ನ ಸಮ್ಯಗಿತಿ ವರ್ತತೇ ॥ ೨೧ ॥
ಸಮೀಕ್ಷಸ್ವ ಪುನರ್ಬುದ್ಧ್ಯಾ ಪಾಪಂ ತ್ಯಕ್ತ್ವಾ ದ್ವಿಜೋತ್ತಮ ।
ಅಯಜ್ಞವಾಹಿನಂ ಪಾಪಮಕಾರ್ಷೀಸ್ತ್ವಂ ಸುದುರ್ಮತೇ ॥ ೨೨ ॥
ಏವಮುಕ್ತ್ವಾ ಮಹಾಕ್ರೋಧಃ ಪ್ರಾಹ ಶಂಭುಂ ಪುನರ್ವಚಃ ।
ಪ್ರಜ್ಞಯಾ ರಹಿತೋ ದುಃಖೀ ನಿತ್ಯಭೀತೋ ವನೇಚರಃ ॥ ೨೩ ॥
ದಶವರ್ಷಸಹಸ್ರಾಣಿ ದಶಾಷ್ಟೌ ಚ ಶತಾನಿ ಚ ।
ನಷ್ಟಪಾನೀಯಪವನೇ ಮೃಗೈರನ್ಯೈಶ್ಚ ವರ್ಜಿತೇ ॥ ೨೪ ॥
ಅಯಜ್ಞೀಯದ್ರುಮೇ ದೇಶೇ ರುರುಸಿಂಹನಿಷೇವಿತೇ ।
ಭವಿತಾ ತ್ವಂ ಮೃಗಃ ಕ್ರೂರೋ ಮಹಾದುಃಖಸಮನ್ವಿತಃ ॥ ೨೫ ॥
ತಸ್ಯ ವಾಕ್ಯಸ್ಯ ನಿಧನೇ ಪಾರ್ಥ ಜಾತೋ ಹ್ಯಹಂ ಮೃಗಃ ॥ ೨೬ ॥

'ಎಲೈ ದ್ವಿಜೋತ್ತಮನೇ! ಈ ರಥಂತರ ಸಾಮಪಠಣವು ತಪ್ಪು ರೀತಿಯಿಂದ ಸಾಗಿದೆ. ಎಲೈ ಬ್ರಾಹ್ಮಣನೇ, ದುರಭಿಮಾನವನ್ನು ತೊರೆದು ಬುದ್ಧಿಪೂರ್ವಕವಾಗಿ ಆಲೋಚಿಸು. ಎಲೈ ದುರ್ಮತಿಯೇ! ಯಜ್ಞಕ್ಕೆ ಸರಿಯಿಲ್ಲದ ಅನುಚಿತವಾದ ಪಾಠವು ನಿನ್ನಿಂದ ಉಚ್ಚರಿಸಲ್ಪಡುತ್ತಿದೆ.' ಇಷ್ಟನ್ನು ನುಡಿದು ವಸಿಷ್ಠ ಬಲು ಕೋಪಗೊಂಡನು. ಮತ್ತೆ ಅವನ ಬಾಯಿಂದ (ಮುಂದಿನ ಶಾಪೋದ್ಗಾರ) ಹೊರಟಿತು : 'ಯಾವ ನಾಡಿನಲ್ಲಿ ಹವೆ, ನೀರುಗಳ ಕೊರತೆ ಇದೆಯೋ, ಎಲ್ಲಿ ಯಾವುದೇ ಬಗೆಯ ಪ್ರಾಣಿಗಳಿಲ್ಲವೋ,

ಒದಲು ಬರಿ ಚಿಗರೆ ಮತ್ತು ಸಿಂಹಗಳು ಮಾತ್ರ ಇವಯೋ, ಅಂತಹ ಯಜ್ಞಕ್ಕೆ ನಿರುವ ಯುಕ್ತವಾದ, ಮರಗಳಿಲ್ಲದ, ಭಯಂಕರವಾದ ಹಾಗೂ ದುಃಖಕರವಾದ ಅವಸ್ಥೆಯಲ್ಲಿ ಹತ್ತುಸಾವಿರ ವರ್ಷಗಳ ಕಾಲ ಪಶುವಾಗಿ ಕೊಳೆಯುತ್ತ ಬೀಳುವೆ.'

ಈ ವಾಕ್ಯವನ್ನು ಉಚ್ಚರಿಸಿಯಾಗುತ್ತಲೇ ಗೃತ್ಸಮದನು ಪಶುವಾದನು.

ಶಂಕರನ ವರದಾನದಿಂದಾಗಿ ಅವನಿಗೆ ಶಾಪಮುಕ್ತಿ ದೊರೆಯಿತು.

## ೧೨೬. ದೇವಶರ್ಮ > ವಿಪುಲ **ಅನುಶಾಸನ/೪೦**

ಬ್ರಹ್ಮದೇವನು ಹೆಣ್ಣನ್ನು ಹೇಗೆ ಮತ್ತು ಯಾವ ಉದ್ದೇಶಕ್ಕಾಗಿ ನಿರ್ಮಿಸಿದನೆಂಬುದನ್ನು ಕುರಿತು ವಿವೇಚಿಸುವಾಗ ಭೀಷ್ಮನು ಯುಧಿಷ್ಠಿರನಿಗೆ ವಿಪುಲವ್ಯಾಖ್ಯಾನವನ್ನು ಹೇಳುತ್ತಾನೆ.

ದೇವಶರ್ಮನೆಂಬ ಒಬ್ಬ ಹೆಸರಾದ ಋಷಿಯಿದ್ದನು. ಅವನ ಮಡದಿ ರುಚಿ. ಅವಳು ಬಲುಚೆಲುವೆಯಾಗಿದ್ದಳು. ದೇವತೆಗಳು, ಗಂಧರ್ವರು, ರಾಕ್ಷಸರೆಲ್ಲರೂ ಕೂಡ ಆವಳ ಚೆಲುವಿಗೆ ಮನಸೋತಿದ್ದರು. ಅವರಲ್ಲಿ ಇಂದ್ರ ಎಲ್ಲಕ್ಕೂ ಹೆಚ್ಚು. ಋಷಿಯು ತನ್ನ ಮಡದಿಯ ರಕ್ಷಣೆಗಾಗಿ ಹೆಚ್ಚು ಎಚ್ಚರದಿಂದಿದ್ದನು. ಇಂದ್ರನ ನಡತೆಗೇಡಿತನ ಅವನಿಗೆ ತಿಳಿದಿತ್ತು. ವಿಪುಲ ಆ ಋಷಿಯ ನಂಬುಗೆಯ ಪ್ರಿಯಶಿಷ್ಯನು. ಒಂದು ಸಲ ಯಜ್ಞ ಕರ್ಮಕ್ಕೆಂದು ಋಷಿಯು ಪರವೂರಿಗೆ ಹೋಗಬೇಕಾಯಿತು. ಆಗ ತನ್ನ ಮನದನ್ನೆಯನ್ನು ಕಾಪಾಡುವ—ಅದರಲ್ಲೂ ಹಲವು ಬಗೆಯ ರೂಪಗಳನ್ನು ತಳೆದು ಹೆಣ್ಣುಗಳನ್ನು ಮೋಸ ಗೊಳಿಸುವ ಇಂದ್ರನಿಂದ ಅವಳನ್ನು ಸರಿಯಾಗಿ ಕಾಪಾಡುವ—ಹೆಚ್ಚಿನ ಹೊಣೆಯನ್ನು ವಿಪುಲನಿಗೆ ಒಪ್ಪಿಸಿದನು. ಅವನು ಅದನ್ನು ಒಪ್ಪಿಕೊಂಡನು.

ಸಾಮಾನ್ಯಳಾದ ಸ್ತ್ರೀಯನ್ನು ರಕ್ಷಿಸುವುದಕ್ಕಿಂತಲೂ ಇದು ಗುರುತರವಾದ ಹೊಣೆ ಯಾಗಿತ್ತು. ಗುರುಪತ್ನಿಯ ಅಸಾಮಾನ್ಯವಾದ ರೂಪರಾಶಿ ಹಾಗೂ ಇಂದ್ರನ ಕಪಟ ವೇಷಧಾರಿತ್ವಗಳನ್ನು ಗಮನಕ್ಕೆ ತಂದುಕೊಂಡರೆ ಗುರುವು ತನ್ನ ಮೇಲೆ ಹೊರಿಸಿದ ಈ ಹೊಣೆಯನ್ನು ಯಶಸ್ವಿಯಾಗಿ ಪಾರುಗಾಣಿಸುವುದು ಹೇಗೆಂಬ ಚಿಂತೆ ವಿಪುಲನನ್ನು ಕಾಡಹತ್ತಿತು. ಇಂದ್ರನೆಂದರೆ ಯಜ್ಞದಲ್ಲಿಯ ಹವಿರ್ದ್ರವ್ಯದ ಮೇಲೆ ನೆಗೆದುಬೀಳುವ ಕೀಳುನಾಯಿಯಂತೆ ಇರುವವನಾದ್ದರಿಂದ ಹೆಚ್ಚಿನ ಎಚ್ಚರಿಕೆಯಿಂದಿರಲು ಗುರುವೇ ಅವನಿಗೆ ಹೇಳಿದ್ದನು. ಹೀಗಾಗಿ ತನ್ನ ಯೋಗಬಲದಿಂದ ಗುರುಪತ್ನಿಯ ದೇಹವನ್ನು ಹೊಕ್ಕು ಅವಳನ್ನು ಕಾಪಾಡಬೇಕೆಂದು ಅವನು ಯೋಚಿಸಿದನು. ಏಕೆಂದರೆ—

> ಯದ್ಯುಚ್ಛಿಷ್ಟಾಮಿಮಾಂ ಪತ್ನೀಮದ್ಯ ಪಶ್ಯತಿ ಮೇ ಗುರುಃ ॥ ೪೭ ॥
> ಶಪ್ಸ್ಯತ್ಯಸಂಶಯಂ ಕೋಪಾದ್ ದಿವ್ಯಜ್ಞಾನೋ ಮಹಾತಪಾಃ ॥ ೪೮ ॥

'ತನ್ನ ಮಡದಿಯು ಪರಪುರುಷನಿಂದ—ಇಂದ್ರನಿಂದ—ಭ್ರಷ್ಟಳಾದುದನ್ನು ನನ್ನ ಗುರುವು ಕಂಡನಾದರೆ ಅವನು ತನ್ನ ದಿವ್ಯಜ್ಞಾನದಿಂದ ಅದನ್ನರಿತು ಆ ಮಹಾತಪಸ್ವಿಯು ನನ್ನನ್ನು ಶಪಿಸುವನೆಂಬಲ್ಲಿ ಸಂದೇಹವಿಲ್ಲ' ಎಂಬ ಹೆದರಿಕೆ ಅವನಲ್ಲಿ ಹುಟ್ಟಿಕೊಂಡಿತ್ತು. ಹೀಗಾಗಿ ಅವನು ಗುರುಪತ್ನಿಗೆ ತಿಳಿಯದಂತೆ ಆವಳ ದೇಹವನ್ನು ಹೊಕ್ಕು ಅವಳನ್ನು ಕಾಪಾಡಿದನು.

+ ಶಾಪವನ್ನು ಉಚ್ಚರಿಸಲಾಗಿಲ್ಲ. ಶಾಪದ ಹೆದರಿಕೆಯನ್ನು ವ್ಯಕ್ತಪಡಿಸಲಾಗಿದೆ, ಅಷ್ಟೆ.

ಅನುಶಾಸನ/೪೩

ಈ ರೀತಿಯಾಗಿ ವಿಪುಲನು ತನ್ನ ಗುರುಪತ್ನಿಯನ್ನು ಕಾಪಾಡಿದನು. ತಾನು ಅವಳ ದೇಹವನ್ನು ಯೋಗಬಲದಿಂದ ಹೊಕ್ಕುದನ್ನು ಮಾತ್ರ ಗುರುವಿಗೆ ಹೇಳಹೋಗಲಿಲ್ಲ. ದೇವಶರ್ಮನಿಗಾದರೋ ಈ ಸಂಗತಿ ತಿಳಿದುಬಿಟ್ಟಿತು. ನಿಜ ಹೇಳಬೇಕಾದರೆ ವಿಪುಲನಿಗೂ ಕೀಳುಯೋನಿಯಲ್ಲಿ ಒಬ್ಬ ಪಾಪಾಚರಣೆಯಂತೆ ಹುಟ್ಟು ಬರಬಹುದಿತ್ತು. ಆದರೆ ಗುರುವು ತನ್ನ ಶಿಷ್ಯನ ಅಪ್ಪಟತನವನ್ನು ಅರಿತಿದ್ದನಾದ್ದರಿಂದ ಅವನಿಗೆ ಹೀಗೆಂದನು—

ಯದಿ ತ್ವಹಂ ತ್ವಾಂ ದುರ್ವೃತ್ತಮದ್ರಾಕ್ಷಂ ದ್ವಿಜಸತ್ತಮ ।
ಶಪೇಯಂ ತ್ವಾಮಹಂ ಕ್ರೋಧಾನ್ನ ಮೇಽತ್ರಾಸ್ತಿ ವಿಚಾರಣಾ ॥ ೧೪ ॥
ಸಜ್ಜಂತಿ ಪುರುಷೇ ನಾರ್ಯಃ ಪುಂಸಾಂ ಸೋಽರ್ಥಶ್ಚ ಪುಷ್ಕಲಃ ।
ಅನ್ಯಥಾ ರಕ್ಷಿತಃ ಶಾಪೋಽಭವಿಷ್ಯತ್ ತೇ ಮತಿಶ್ಚ ಮೇ ॥ ೧೫ ॥

ಸ್ತ್ರೀಯರು ಗಂಡುಗಳಲ್ಲಿ ಆಸಕ್ತರಾಗುತ್ತಿರುತ್ತಾರೆ—ಎಂಬುದನ್ನು ಅರಿತು ಗಂಡುಗಳು ಕೂಡ ಅವರಿಗಾಗಿ ಆಸೆಪಡುತ್ತಾರೆ. ಆದರೆ ನಿನ್ನ ಬಗೆಗೆ ಮಾತ್ರ ಅಂಥದೇನೂ ನಡೆದಿಲ್ಲ. ನೀನು ನನ್ನ ಮಡದಿಯ ದೇಹವನ್ನು ಯೋಗಬಲದಿಂದ ಹೊಕ್ಕುದು ಕೇವಲ ಅವಳನ್ನು ಕಾಪಾಡಲೆಂದು. ನಿನ್ನ ಉದ್ದೇಶ ಇನ್ನೇನಾದರೂ ಆಗಿದ್ದರೆ ನಾನು ನಿನ್ನನ್ನು ಶಪಿಸದಿರುತ್ತಿರಲಿಲ್ಲ.

+ ನೀಡಲಾಗದ ಶರತ್ತಿನ ಶಾಪವಿದು.

## ೧೨೭. ವಿಪುಲ > ಇಂದ್ರ

ಅನುಶಾಸನ/೪೧

ಮೊದಲ ಸಂದರ್ಭ : ನೋಡಿ : ಶಾಪ—ದೇವಶರ್ಮ > ವಿಪುಲ.

ದೇವಶರ್ಮನು ಯಜ್ಞಕರ್ಮಕ್ಕಾಗಿ ತನ್ನ ಲಾವಣ್ಯವತಿಯಾದ ಮಡದಿ ರುಚಿಯನ್ನು ಬಿಟ್ಟು ದೂರಕ್ಕೆ ಹೋದುದು ಇಂದ್ರನಿಗೆ ಪಥ್ಯಕರವೇ ಆಯಿತು. ಅವನು ಇಂಥ ಒಂದು ಅವಕಾಶಕ್ಕಾಗಿ ಹೊಂಚುಹಾಕಿದವನೇ. ಅವನು ಬಲು ಅಂದವಾದ ರೂಪವನ್ನು ತೊಟ್ಟನು. ರುಚಿಯನ್ನು ಬಂದು ಕಂಡನು. ತನ್ನ ಕಾಮವಾಸನೆಯನ್ನು ಪೂರ್ತಿಗೊಳಿಸೆಂದು ನಾಚಿಕೆಗೆಟ್ಟು ಅವಳನ್ನು ಕೇಳಿದನು. ಅವಳು ಅವನು ಇಂದ್ರನೆಂಬುದನ್ನರಿತು ಅವನನ್ನು ಬರಮಾಡಿಕೊಳ್ಳಲು ತವಕಪಟ್ಟಳು. ಆದರೆ ವಿಪುಲನು ತನ್ನ ಯೋಗಬಲದಿಂದ ಅವಳ ಮೈಯಲ್ಲಿ ಹೊಕ್ಕ ಕಾರಣ ಅವಳ ಚಲನವಲನಗಳೇ ಸ್ಥಗಿತಗೊಂಡುಬಿಟ್ಟವು. ಅವಯವಗಳೆಲ್ಲ ನಿಶ್ಚಲವಾಗಿದ್ದವು, ಇಂದ್ರನು ತನ್ನ ಸೂಕ್ಷ್ಮವಾದ ನೋಟದಿಂದ ವಿಪುಲನು ಅವಳ ಮೈಯಲ್ಲಿ ಹೊಕ್ಕದ್ದನ್ನು ಅರಿತನು. ಅವನಿಗೆ ನಾಚಿಕೆ ಎನ್ನಿಸಿತು. ಅಲ್ಲದೆ,

ವ್ಯಾವೇಪತ ಸುಸಂತ್ರಸ್ತಃ ಶಾಪಭೀತಸ್ತದಾ ವಿಭೋ ॥ ೧೯ ॥

ಅವನು ತುಂಬ ಹೆದರಿ ಕಂಗಾಲಾದನು. ಮುನಿಯ—ವಿಪುಲನ—ಶಾಪದ ಹೆದರಿಕೆಯಿಂದಾಗಿ ಗಡಗಡನೆ ನಡುಗಿಹೋದನು. ಆಗ ವಿಪುಲನು ತನ್ನ ಗುರುಪತ್ನಿಯ ದೇಹದಿಂದ ಹೊರಬಂದು ಹೀಗೆಂದನು—

ಅಜಿತೇಂದ್ರಿಯ ದುರ್ಬುದ್ಧೇ ಪಾಪಾತ್ಮಕ ಪುರಂದರ ।
ನ ಚಿರಂ ಪೂಜಯಿಷ್ಯಂತಿ ದೇವಾಸ್ತ್ವಾಂ ಮಾನುಷಾಸ್ತಥಾ ॥ ೨೦ ॥

'ಎಲೋ ಪಾಪಬುದ್ಧಿಯ ಪುರಂದರನೇ ! ನೀನು ಇಂದ್ರಿಯಗಳ ಗುಲಾಮನಾಗಿರುವೆ (ನಿನ್ನೀ ಅವಸ್ಥೆ ಹೀಗೆಯೇ ಉಳಿದುಕೊಂಡರೆ) ದೇವತೆಗಳು ಹಾಗೂ ಮಾನವರು ಹೆಚ್ಚು ಕಾಲ ನಿನ್ನನ್ನು ಪೂಜ್ಯನೆಂದು ಮನ್ನಿಸರು.

ಗೌತಮನ ಶಾಪದಿಂದಾಗಿ ನಿನ್ನ ಮೈಗೆ ಸಾವಿರ ಭಗಗಳು ಉಂಟಾದುದನ್ನು ಮರೆತೆಯಾ ?' ಎಂದು ಅವನನ್ನು ಹೀಯಾಳಿಸಿ ಮತ್ತೆ ಹೀಗೂ ಅಂದನು—

ನಾಹಂ ತ್ವಾಮದ್ಯ ಮೂಢಾತ್ಮನ್ ದಹೇಯಂ ಹಿ ಸ್ವತೇಜಸಾ ।
ಕೃಪಾಯಮಾನಸ್ತು ನ ತೇ ದಗ್ಧುಮಿಚ್ಛಾಮಿ ವಾಸವ ॥ ೨೩ ॥
ನ ಚ ಘೋರತಮೋ ಧೀಮಾನ್ ಗುರುರ್ಮೇ ಪಾಪಚೇತಸಮ್ ।
ದೃಷ್ಟ್ವಾ ತ್ವಾಂ ನಿರ್ದಹೇದದ್ಯ ಕ್ರೋಧದೀಪ್ತೇನ ಚಕ್ಷುಷಾ ॥ ೨೪ ॥

'(ಈ ಹೆಣ್ಣನ್ನು ಕಾಪಾಡುವ ಹೊಣೆಯನ್ನು ಹೊತ್ತಿದ್ದೇನೆ, ಆದ್ದರಿಂದ ನೀನು ಬಂದ ಹಾಗೆಯೇ ಹೊರಟುಹೋಗು.) ಎಲೈ ತಿಳಿಗೇಡಿಯೇ ! ನಾನು ನನ್ನ ತೇಜಸ್ಸಿನಿಂದ ನಿನ್ನನ್ನು ಸುಟ್ಟುಬೂದಿಯನ್ನಾಗಿ ಮಾಡಬಲ್ಲೆ. ಆದರೆ ಕೇವಲ ನನ್ನ ದಯಾರ್ದ್ರಬುದ್ಧಿಯಿಂದಾಗಿ ಹಾಗೆ ಮಾಡೆನು. ನನ್ನ ಗುರುಗಳು ಬಲುಬುದ್ಧಿವಂತರು. ಅವರ ಕೋಪ ಕೆರಳಿತೆಂದರೆ ಅವರು ತಮ್ಮ ಕಣ್ಣುನೋಟಮಾತ್ರದಿಂದಲೇ ನಿನ್ನನ್ನು ಸುಟ್ಟು ಬೂದಿಯನ್ನಾಗಿ ಮಾಡಿಯಾರು (ಎಂಬುದನ್ನು ತಿಳಿದುಕೋ).

## ೧೨೮.* ಮಾನವ ದಂಪತಿಗಳ ಆಣೆಗಳು ಅನುಶಾಸನ/೪೨

ಮೊದಲ ಸಂದರ್ಭ : ನೋಡಿ : ಶಾಪ—ದೇವಶರ್ಮ > ವಿಪುಲ.

ವಿಪುಲನು ತನ್ನ ಗುರುವಿನ ಅಪ್ಪಣೆಯಂತೆ ಗುರುಪತ್ನಿಗಾಗಿ ತನ್ನ ತಪಸ್ಸಾಮರ್ಥ್ಯದಿಂದ ಅಲೌಕಿಕವಾದ ಸುಗಂಧದ ದಿವ್ಯವಾದ ಹೂವುಗಳನ್ನು ದೊರಕಿಸಿದನು. ಅವುಗಳನ್ನು ಕಲೆಹಾಕುವಾಗ ಅವನಿಗೆ ಮಾನವದಂಪತಿಗಳ ಒಂದು ಜೊತೆ ಹಾಗೂ ಜೂಜಾಡುವ ಆರು ಜನ ಗಂಡಸರು ಕಂಡರು. ಆ ದಂಪತಿಗಳ ಆಟದ ಮುನ್ನಡೆ ಒಂದೇ ಬಗೆಯದಾಗಿರಲಿಲ್ಲ. ಹೀಗಾಗಿ ಅವರೆಲ್ಲರಲ್ಲಿ ವಾದಕ್ಕಿಟ್ಟುಕೊಂಡಿತ್ತು. ಅವರಿಬ್ಬರೂ ಆಣೆಯಿಟ್ಟು ಹೇಳುವ ಹೊತ್ತಿಗೆಂದರೆ ಅವರಿಗೆ ವಿಪುಲನು ಕಂಡನು. ಅವನಿಗೆ ಅವರಿಬ್ಬರೂ ಹೀಗೆಂದರು—

ಆವಯೋರನೃತಂ ಪ್ರಾಹ ಯಸ್ತಸ್ಯಾಭೂದ್ ದ್ವಿಜಸ್ಯ ವೈ ।
ವಿಪುಲಸ್ಯ ಪರೇ ಲೋಕೇ ಯಾ ಗತಿಃ ಸಾ ಭವೇದಿತಿ ॥ ೨೦ ॥

'ನಮ್ಮಲ್ಲಿಯ ಯಾರಾದರೂ ಸುಳ್ಳಾಡಿದರೆ ಪರಲೋಕದಲ್ಲಿ ಈ ಬ್ರಾಹ್ಮಣನಾದ ವಿಪುಲನಂತಹ ಅವಸ್ಥೆ ಅವರಿಗೂ ಬಾರದಿರದು.'

ಈ ಮಾತು ಕೇಳಿ ವಿಪುಲ ಬಲುದುಃಖಿತನಾದನು. ತಾನು ಆಚರಿಸಿದ ಕಠೋರವಾದ ತಪಸ್ಸು ವ್ಯರ್ಥವಾಗಿ ಹಾಳಾಗುವುದೆಂದೆನ್ನಿಸಿತು.

\+ ಇವು ಆಣೆಗಳೇ ಸರಿ.

ತಯೋರ್ವಿಸ್ಪರ್ಧತೋರೇವಂ ಶಪಥೋಽಯಮಭೂತ್ ತದಾ ॥ ೨೦ ॥

ಎಂಬುದಾಗಿ ಸ್ಪುಟವಾಗಿ ಉಲ್ಲೇಖವಿದೆ. ಆದರೆ,

ಸಂಪ್ರದಧ್ಯೌ ತಥಾ ರಾಜನ್ನಗ್ನಾವಗ್ನಿರಿವಾಹಿತಃ ।
ದಹ್ಯಮಾನೇನ ಮನಸಾ ಶಾಪಂ ಶ್ರುತ್ವಾ ತಥಾವಿಧಮ್ ॥ ೨೯ ॥

(ಹುಟ್ಟಿನಿಂದಲೇ ಯಾವುದೇ ಬಗೆಯ ಅಧರ್ಮಕೃತ್ಯವನ್ನಾಗಲಿ ಇಲ್ಲವೆ ಪಾಪಕೃತ್ಯವನ್ನು ಮಾಡಿರದವನಾದ) ವಿಪುಲನ ಮನದ ಅವಸ್ಥೆ ಆ ಶಾಪವನ್ನು ಕೇಳಿ ಅಗ್ನಿಗೆ ಅಗ್ನಿಯನ್ನೇ ಆಹುತಿಯಾಗಿ ನೀಡಿದಾಗ ಅದು ಭುಗಿಲ್ಲೆಂದು ಎದ್ದೇಳುವಂತಾಯಿತು.

+ ವಾಸ್ತವದಲ್ಲಿ ಅದೊಂದು ಆಣೆಯಿದ್ದೂ ವಿಪುಲನಿಗೆ ಮಾತ್ರ ಅದೊಂದು ಶಾಪದಂತೆ ಕಂಡಿತು.

## ೧೨೯. ಚ್ಯವನ (ಭಾರ್ಗವ) > ಕುಶಿಕ ಅನುಶಾಸನ/೫೩

ಯುಧಿಷ್ಠಿರನ ಮನದಲ್ಲಿ ಜಮದಗ್ನಿಯ ಮಗನಾದ ಪರಶುರಾಮನ ಬಗೆಗೆ ತುಂಬ ಕುತೂಹಲವಿತ್ತು. ಬ್ರಹ್ಮರ್ಷಿಯ ಕುಲದಲ್ಲಿ ಹುಟ್ಟಿಯೂ ಅವನಲ್ಲಿ ಕ್ಷಾತ್ರಮನೋಧರ್ಮ ಬಂದುದು ಹೇಗೆ ? ಅಲ್ಲದೆ ಕುಶಿಕನ ಕ್ಷಾತ್ರಕುಲದಲ್ಲಿ ಹುಟ್ಟಿದ ವಿಶ್ವಾಮಿತ್ರನಲ್ಲಿ ಬ್ರಾಹ್ಮಣ್ಯದ ಬಗೆಗೆ ಹೆಚ್ಚಿನ ಆಕರ್ಷಣೆ ಬಂದುದು ಹೇಗೆ ? ಯುಧಿಷ್ಠಿರನು ಈ ಬಗೆಗೆ ಭೀಷ್ಮನನ್ನು ಕೇಳಿದನು. ಭೀಷ್ಮನು ಅವನಿಗೆ ಚ್ಯವನ (ಭಾರ್ಗವ) ಹಾಗೂ ಕುಶಿಕ ಇವರ ಪ್ರಾಚೀನವಾದ ಚರಿತ್ರೆಯನ್ನು ಹೇಳಿದನು.

ಮುಂದೆ ತನ್ನ ವಂಶದಲ್ಲಿ ವರ್ಣಸಂಕರ ನಡೆಯಲಿದೆ ಎಂಬುದನ್ನು ಚ್ಯವನನು ಕಂಡುಕೊಂಡಿದ್ದನು. ಹೀಗಾಗಿ ಅದನ್ನು ತಪ್ಪಿಸಲೆಂದು ಅವನು ಕುಶಿಕನ ಕುಲವನ್ನೇ ನಾಶಪಡಿಸುವ ಯೋಜನೆಯೊಂದನ್ನು ಸಿದ್ಧಪಡಿಸಿದನು. ಅವನು ಕುಶಿಕ ರಾಜನ ಬಳಿಗೆ ಹೋದನು. ತಾನು ಅವನ ಬಳಿಯಲ್ಲಿ ವಾಸವಾಗಿರಲು ಬಯಸುತ್ತಿರುವುದಾಗಿ ರಾಜನಿಗೆ ಹೇಳಿದನು. ಅತಿಥಿಗಳ ಸೇವೆ ಮಾಡುವುದು ತನ್ನ ರಾಜಧರ್ಮವೇ ಆಗಿದೆಯೆಂದು ಕೌಶಿಕನು ಮನ್ನಿಸುವವನಾಗಿದ್ದನು. ಹೀಗಾಗಿ ಅವನು ಹಾಗೂ ಅವನ ಮಡದಿಯು ಚ್ಯವನನನ್ನು ಸರಿಯಾಗಿ ಸೇವೆಗೈದರು. ಇಷ್ಟೇ ಅಲ್ಲದೆ, ಅವನನ್ನು ಸೇವೆಗೈಯುವ ವ್ರತವನ್ನೇ ಸ್ವೀಕರಿಸಿದರು. ಹೀಗಿರುತ್ತ ಕುಶಿಕನು ಆ ಮುನಿಗೆ ತನ್ನ ರಾಜ್ಯವನ್ನೇ ಕೊಟ್ಟುಬಿಡುವುದಾಗಿ ಹೇಳಿದನು. ಆದರೆ ಅವನು ಅದನ್ನು ಪಡೆಯಲು ಒಪ್ಪಲಿಲ್ಲ. ಅಲ್ಲದೆ ರಾಜನು ತನ್ನನ್ನು ಸೇವೆಗೈಯಬೇಕೆಂದಷ್ಟೇ ಹೇಳಿದನು. ಮುನಿಯ ನಿರೀಕ್ಷೆ ಎಂದರೆ ಸೇವೆಗೈಯುವಾಗ ರಾಜನ ಕೈಯಿಂದ ತಪ್ಪಾಗುತ್ತಲೇ ಅವನನ್ನು ಶಪಿಸಿ ಅವನ ಕುಲವನ್ನೇ ಮಣ್ಣುಗೂಡಿಸುವುದು. ರಾಜರಾಣಿಯರು ಬಲು ಮನಗೊಟ್ಟು ಮುನಿಯ ಸೇವೆಯನ್ನು ಮಾಡಿದರು.

ಕುಶಿಕನನ್ನು ಪರೀಕ್ಷಿಸಲೆಂದು ಚ್ಯವನನು ಅವನಿಗೂ, ಅವನ ಮಡದಿಗೂ ಬಲು ದೈಹಿಕ ಹಿಂಸೆಯನ್ನು ನೀಡಿದನು. ಅವರನ್ನು ಹೊಡೆದು, ಬಡಿದು ಮಾಡಿದನು. ಅವರ ಸೇವೆಯಲ್ಲಿ ಯಾವುದಾದರೂ ತಪ್ಪುಸಿಗಲೆಂದು ಹಲವು ಬಗೆಯಾಗಿ ಅವರನ್ನು ಪೀಡಿಸಿದನು.

ಇಷ್ಟಾಗಿಯೂ ಚ್ಯವನನಿಗೆ ಶಾಪವನ್ನೀಯುವ ಒಂದೇ ಒಂದು ಅವಕಾಶವೂ ಸಿಗಲಿಲ್ಲ. ಕೊನೆಗೆ ಅವನು ಸಂತುಷ್ಟನಾಗಿ ಶಾಪದ ಬದಲು ವರವನ್ನಿತ್ತನು. ಶಾಪವನ್ನೀಯಲು ತನಗೆ ಅನುಕೂಲವಾಗಲೆಂದು ಚ್ಯವನನು ಎರಡು ಸನ್ನಿವೇಶಗಳನ್ನು ಹುಟ್ಟುಹಾಕಲು ಯತ್ನಿಸಿ ಸೋತನು.

ಚ್ಯವನನು ಇಪ್ಪತ್ತೊಂದು ದಿನಗಳ ತನ್ನ ದೀರ್ಘವಾದ ನಿದ್ರೆಯಿಂದ ತಿಳಿದೆದ್ದು ತನ್ನ ಸ್ನಾನಕ್ಕಾಗಿ ವ್ಯವಸ್ಥೆಯನ್ನು ಮಾಡುವಂತೆ ರಾಜನಿಗೆ ಹೇಳಿದನು. ಆ ರೀತಿಯಾಗಿ ರಾಜನು ಚೊಕ್ಕಟವಾದ ವ್ಯವಸ್ಥೆಯನ್ನು ಮಾಡಿದನು. ಊಟಕ್ಕಾಗಿಯೂ ಎಲ್ಲ ಸಿದ್ಧತೆಗಳನ್ನು ಮಾಡಿಸಿದನು. ಎಲ್ಲಿಯೂ ಯಾವುದೇ ಕೊಂಕಿಗೆ ಅವಕಾಶವಿರಲಿಲ್ಲ.

ಗೃಹಸ್ಥಾನಾಂ ಚ ಯದ್ ಭೋಜ್ಯಂ ಯಚ್ಚಾಪಿ ವನವಾಸಿನಾಮ್ ।
ಸರ್ವಮಾಹಾರಯಾಮಾಸ ರಾಜಾ ಶಾಪಭಯಾತ್ ತತಃ ॥ ೨೦ ॥

ಕೌಶಿಕನು ಗೃಹಸ್ಥಧರ್ಮಿಗಳಿಗೆ ಹಾಗೂ ವನವಾಸಿಗಳಿಗೆ ಪ್ರಿಯವೆನ್ನಿಸಬಹುದಾದ ಎಲ್ಲ ಬಗೆಯ ಊಟದ ಪದಾರ್ಥಗಳನ್ನು ಋಷಿಯ ಹೆದರಿಕೆಯಿಂದಾಗಿ ತರಿಸಿದನು. ಚ್ಯವನನು ಅದಾವುದನ್ನೂ ಸ್ವೀಕರಿಸದೆ ಎಲ್ಲವನ್ನೂ ಸುಟ್ಟುಬಿಟ್ಟನು. ಅದರಿಂದಾಗಿ ಯಾದರೂ ಕುಶಿಕ ಸಿಟ್ಟಿಗೆದ್ದಾನೆಂದು ಬಗೆದಿದ್ದನು. ಆದರೆ ಹಾಗಾಗಲಿಲ್ಲ.

+ ಪ್ರತ್ಯಕ್ಷದಲ್ಲಿ ಶಾಪವನ್ನೀಯಲಾಗಿಲ್ಲ. ಶಾಪದ ಹೆದರಿಕೆಯಷ್ಟೇ ವ್ಯಕ್ತಗೊಂಡಿದೆ.

**ಅನುಶಾಸನ/೫೫**

ಚ್ಯವನನು ಕುಶಿಕ ಹಾಗೂ ಆತನ ಮಡದಿಯ ಸೇವೆಯಿಂದ ಸಂತುಷ್ಟನಾಗಿ ಅವರಿಗೆ ವರವನ್ನು ಕೇಳಿರೆಂದನು. ಆಗ ಕುಶಿಕನು ಆತನ ನಡತೆಯ ಬಗೆಗೆ ಕೇಳಿದನು. ಅದಕ್ಕೆ ಚ್ಯವನನು ಹೀಗೆಂದನು—

ಯದಾ ತ್ವಯಾ ಸಭಾರ್ಯೇಣ ಸಂಸುಪ್ತೋ ನ ಪ್ರಬೋಧಿತಃ ।
ಅಹಂ ತದೈವ ತೇ ಪ್ರೀತೋ ಮನಸಾ ರಾಜಸತ್ತಮ ॥ ೧೭ ॥
ಉತ್ಥಾಯ ಚಾಸ್ಮಿ ನಿಷ್ಕ್ರಾಂತೋ ಯದಿ ಮಾಂ ತ್ವಂ ಮಹೀಪತೇ ।
ಪೃಚ್ಛೇಃ ಕ್ವ ಯಾಸ್ಯಸೀತ್ಯೇವಂ ಶಪೇಯಂ ತ್ವಾಮಿತಿ ಪ್ರಭೋ ॥ ೧೮ ॥

ನಾನು ಬಲುಗಾಢವಾದ ನಿದ್ರೆಯಲ್ಲಿರುವಾಗ ನೀನಾಗಲಿ, ನಿನ್ನ ಮಡದಿಯಾಗಲಿ ನನ್ನನ್ನು ಎಚ್ಚರಿಸಲಿಲ್ಲ. ಆಗಲೇ ನಾನು ನಿಮ್ಮ ಮೇಲೆ ಪ್ರಸನ್ನನಾಗಿದ್ದೆ. ಎಲೈ ರಾಜನೇ! ಅದೇ ರೀತಿಯಾಗಿ ನಾನು ನಿದ್ರೆತಿಳಿದೆದ್ದವನೇ (ಒಮ್ಮೆಲೆ) ಹೊರಟು ಹೋದೆ. ನೀನು 'ಎಲ್ಲಿಗೆ ಹೊರಟಿರಿ ?' ಎಂದು ನನ್ನನ್ನು ಕೇಳಬೇಕೆಂದು ಹಾಗೆ ಮಾಡಿದೆ. ಹಾಗಾಗಿದ್ದರೆ ನಾನು ನಿನ್ನನ್ನು ಶಪಿಸಬಹುದಿತ್ತು. ಆದರೆ ನಿಮ್ಮೀರ್ವರಿಂದಲೂ ಅಂತಹ ದೇನೂ ನಡೆಯಲಿಲ್ಲ.

+ ಪ್ರತ್ಯಕ್ಷದಲ್ಲಿ ನೀಡಿರದ ಶರತ್ತಿನ ಶಾಪವಿದು. ಶಾಪಕ್ಕೆ ಕಾರಣಗಳು ಸಿಗದ್ದರಿಂದ ಶಾಪವನ್ನೀಯುವ ಪ್ರಸಂಗವೇ ಬರಲಿಲ್ಲ.

ಶಾಪವನ್ನೀಯುವ ಯೋಜನಾಬದ್ಧವಾದ ಯತ್ನ, ಆದರೂ ಅಸಫಲವಾದದ್ದು. ಬಹಳಷ್ಟುಮಟ್ಟಿಗೆ ಈ ಬಗೆಯ ಶಾಪ ಇದೊಂದೇ.

## ೧೩೦. ಚ್ಯವನ ಭಾರ್ಗವ > ನಾಗರಿಕ ಅನುಶಾಸನ/೫೩

ಮೊದಲ ಸಂದರ್ಭ : ನೋಡಿ · ಶಾಪ—ಚ್ಯವನ ಭಾರ್ಗವ > ಕುಶಿಕ.

ಚ್ಯವನನು ಕುಶಿಕ ಹಾಗೂ ಅವನ ಮಡದಿಗೆ ಯುದ್ಧಸಾಮಗ್ರಿಯಿಂದ ತುಂಬಿದ ರಥ ವನ್ನು ಪ್ರಜೆಗಳ ಕಣ್ಣೆದುರಿನಲ್ಲೇ ಎಳೆಯಲು ಹಚ್ಚಿದನು. ಅವನು ತಾನು ರಥದಲ್ಲಿ ಕುಳಿತು ಅಂಕುಶದಿಂದ ಅವರಿಬ್ಬರನ್ನೂ ತಿವಿಯುತ್ತಿದ್ದನು. ಅವರಿಬ್ಬರ ದೇಹಗಳು ನೆತ್ತರು ಸುರಿಸಿದವು. ಮೈಗಳು ದಣಿದಿದ್ದವು, ಕೈಕಾಲುಗಳು ನಡುಗುತ್ತಿದ್ದವು. ರಥವನ್ನೆಳೆಯು ವುದು ಅಸಾಧ್ಯವೆನ್ನಿಸಿತ್ತು. ಇಷ್ಟಾಗಿಯೂ ಆ ಗಂಡಹೆಂಡತಿಯರು ತುಟಿ ಪಿಟ್ಟೆನ್ನದೆ ನಿಷ್ಠೆಯಿಂದ ಚ್ಯವನನನ್ನು ಸೇವೆಗೈಯುತ್ತಿದ್ದರು. ಅವರ ಬವಣೆಯನ್ನು ಕಂಡು ಪ್ರಜೆ ಗಳೆಲ್ಲ ತುಂಬ ಹಳಹಳಿಸಿದರು. ಆದರೆ,

> ಅಭಿಶಾಪಭಯತ್ರಸ್ತೋ ನ ಚ ಕಿಂಚಿದುವಾಚ ಹ ॥ ೪೫ ॥

ಋಷಿಯ ಶಾಪದ ಹೆದರಿಕೆಯಿಂದಾಗಿ ಯಾರೂ ಏನನ್ನೂ ಅನ್ನುವಂತಿರಲಿಲ್ಲ.

+ ಪ್ರತ್ಯಕ್ಷದಲ್ಲಿ ಶಾಪವನ್ನು ಉಚ್ಚರಿಸಲಾಗಿಲ್ಲ. ಅದು ಬಂದೀತೆಂಬ ಹೆದರಿಕೆಯನ್ನು ಮಾತ್ರ ತೋರ್ಪಡಿಸಿಕೊಳ್ಳಲಾಗಿದೆ.

## ೧೩೧. ಉದ್ದಾಲಕ > ನಚಿಕೇತ ಅನುಶಾಸನ/೭೧

ಯುಧಿಷ್ಠಿರನು ಭೀಷ್ಮನಿಂದ ಗೋದಾನದ ಫಲವನ್ನು ಅರಿತುಕೊಳ್ಳಲು ಬಯಸಿದನು. ಆಗ ಭೀಷ್ಮನು ಅವನಿಗೆ ನಚಿಕೇತನ ಕಥೆಯನ್ನು ಹೇಳಿದನು.

ನಚಿಕೇತನು ಉದ್ದಾಲಕ ಮುನಿಯ ಮಗನು. ಒಂದು ಸಲ ಮುನಿಯು ಹೊಳೆಯಿಂದ ಸ್ನಾನಮಾಡಿ ಬರುವ ಮುನ್ನ ವೇದಪಠನದ ತರುವಾಯ ಬೇಕಾಗುವ ಸಮಿಧೆ, ದರ್ಭೆ ಮೊದಲಾದ ಪೂಜಾಸಾಮಗ್ರಿಗಳನ್ನು ಹೊಳೆ ದಂಡೆಯಲ್ಲಿಯೇ ಮರೆತು ಮನೆಗೆ ಬಂದನು. ಅವನು ಅವೆಲ್ಲವುಗಳನ್ನು ತರಲು ತನ್ನ ಮಗನಿಗೆ ಹೇಳಿದನು. ನಚಿಕೇತ ಹೊಳೆ ದಂಡೆಗೆ ಹೋದನು. ಅಷ್ಟರಲ್ಲಿ ಅವೆಲ್ಲ ಹೊಳೆಯಲ್ಲಿ ಹರಿದುಹೋಗುತ್ತಿರುವುದನ್ನು ಕಂಡನು. ಅವನು ಬಂದು ತಂದೆಗೆ ಅದನ್ನರುಹಿದನು—

> ಕ್ಷುತ್ಪಿಪಾಸಾಶ್ರಮಾವಿಷ್ಟೋ ಮುನಿರುದ್ದಾಲಕಿಸ್ತದಾ ।
> ಯಮಂ ಪಶ್ಯೇತಿ ತಂ ಪುತ್ರಮಶಪತ್ ಸ ಮಹಾತಪಾಃ ॥ ೭ ॥

ಹೀಗಾಗಿ ಹಸಿವು, ನೀರಡಿಕೆಗಳಿಂದ ವ್ಯಾಕುಲವಾದ ಶ್ರಾಂತ ಮುನಿ ಉದ್ದಾಲಕನು ತನ್ನ ಮಗನಿಗೆ 'ಯಮನಲ್ಲಿಗೆ ಹೊರಟುಹೋಗು' ಎಂದು ಶಾಪವನ್ನಿತ್ತನು.

ನಚಿಕೇತನು ತನ್ನ ತಂದೆಯ ಮಾತು ಕೇಳಿ 'ನನ್ನ ಮೇಲೆ ದಯೆ ತೋರಿ'ರೆಂದು ಅನ್ನುತ್ತಿರುವಾಗಲೇ ಅವನ ಪ್ರಾಣ ಹೊರಟುಹೋಯಿತು.

ನಚಿಕೇತನ ದೃಷ್ಟಿಯಲ್ಲಿ ತಂದೆಯ ಶಾಪವು ಅವನಿಗೆ ಒಂದು ವರದಂತೆಯೇ ಆಗಿತ್ತು. ಯಮಲೋಕದಿಂದ ಮರಳಿ ಬಂದವನೇ ಅವನು ತನ್ನ ತಂದೆಗೆ ಹೀಗೆಂದನು—

> ಶಾಪೋ ಹ್ಯಯಂ ಭವತೋಽನುಗ್ರಹಾಯ ಪ್ರಾಪ್ತೋ ಮಯಾ
> ಯತ್ರ ದೃಷ್ಟೋ ಯಮೋ ವೈ ।

ದಾನವ್ಯುಷ್ಟಿಂ ತತ್ರ ದೃಷ್ಟ್ವಾ ಮಹಾತ್ಮನ್ ನಿಃಸಂದಿಗ್ಧಾನ್
ದಾನಧರ್ಮಾಂಶ್ಚರಿಷ್ಯೇ ॥ ೪೪ ॥

'ನಿಮ್ಮ ಶಾಪ ನನಗೆ ಉಪಕಾರಕವೇ ಆಯಿತು. ಆದರಿಂದಾಗಿ ನಾನು ಯಮನನ್ನು ಕಂಡುಬಂದೆ. ಅಲ್ಲಿ ನಾನು ದಾನದ ಫಲಗಳನ್ನು ಕಂಡೆ. ಇನ್ನು ಮೇಲೆ ಆ ಬಗೆಯಾಗಿ ದಾನಧರ್ಮಗಳನ್ನು ಕೈಕೊಳ್ಳಬಲ್ಲೆ (ಆ ಬಗೆಯ ಫಲಗಳನ್ನು ಪಡೆಯಬಲ್ಲೆ).'

## ೧೩೨. ಉಮಾ > ದೇವ ಅನುಶಾಸನ/೮೪

ಯುಧಿಷ್ಠಿರನು ಭೀಷ್ಮನಿಗೆ 'ಸುವರ್ಣ' ಎಂದರೇನು, ಅದರ ಹುಟ್ಟು ಯಾವಾಗ, ಎಲ್ಲಾಯಿತು ; ಎಲ್ಲ ದಾನಗಳಲ್ಲಿ 'ಸುವರ್ಣದಾನ'ವೇ ಶ್ರೇಷ್ಠವಾದುದೆಂದೇಕೆ ಪರಿಗಣಿಸಲ್ಪಡುತ್ತದೆ ? ಎಂಬೆಲ್ಲ ಪ್ರಶ್ನೆಗಳನ್ನು ಕೇಳಿದನು. ಅದಕ್ಕೆ ಭೀಷ್ಮನು ಅವನಿಗೆ ತನ್ನ ತಂದೆಯ ಶ್ರಾದ್ಧದ ಹೊತ್ತಿನ ಅನುಭವ ಹಾಗೂ ಪರಶುರಾಮನ ಅನುಭವವನ್ನು ಹೇಳಿದನು. ಋಷಿಗಳು ಪರಶುರಾಮನಿಗೆ ಸುವರ್ಣವು ದೇವತೆಗೆ ಸಮನಾಗಿದ್ದುದು ಎಂದು ಅದರ ಹೆಗ್ಗಳಿಕೆಯನ್ನು ಬಣ್ಣಿಸಿದನು. ಈ ಸಂದರ್ಭದಲ್ಲಿ ಅವನು ಶಿವ-ಪಾರ್ವತಿಯರ ವೈವಾಹಿಕ ಜೀವನದ ಒಂದು ಘಟನೆಯನ್ನು ಅರುಹಿದನು.

ಶಂಕರ-ಪಾರ್ವತಿಯ ಮದುವೆ ನಡೆದದ್ದು ಹಿಮಾಲಯದ ಮೇಲೆ. ಅವರ ಮಿಲನವೆಂದರೆ ಎರಡು ದಿವ್ಯವಾದ ತೇಜಸ್ಸುಗಳ ಮಿಲನ. ಅವರ ಮಗು ತೇಜಸ್ವಿಯಾಗಲಿದೆ ಎಂಬ ಬಗೆಗೆ ದೇವತೆಗಳಿಗೆ ಚಿಂತೆಗಿಟ್ಟುಕೊಂಡಿತು. ಈ ಮಗು ಮೂರೂ ಲೋಕಗಳಲ್ಲಿ ತನ್ನ ತೇಜಸ್ಸಿನಿಂದ ಹೊಳೆಯತೊಡಗಿತೆಂದರೆ ಎಲ್ಲಿಯೂ ಏನೂ ಉಳಿದುಕೊಳ್ಳದೆಂದು ಅವರು ಹೆದರಿದರು. ಹೀಗಾಗಿ ಅವರು ಶಿವನಿಗೆ ಶರಣುಹೋದರು. ಅವನಿಂದ ವರವನ್ನು ಕೇಳಿದರು. ಅವನು ದೇವತೆಗಳಿಗೆ ವರವನ್ನು ಕೇಳಿಕೊಂಡನು. ಅವರು, 'ದೇವಿಗೆ ಮಗುವಾಗದಿರಲಿ' ಎಂದು ವರವನ್ನು ಕೇಳಿದರು. ಶಂಕರ ಒಪ್ಪಿಕೊಂಡನು. ಹೀಗಾಗಿ ಪಾರ್ವತಿ ತುಂಬ ಕೆರಳಿ ಕಿಡಿಕಿಡಿಯಾದಳು. ಅವಳು ದೇವತೆಗಳಿಗೆ ಹೀಗೆಂದಳು—

ಯಸ್ಮಾದಪತ್ಯಕಾಮೋ ವೈ ಭರ್ತಾ ಮೇ ವಿನಿವರ್ತಿತಃ ।
ತಸ್ಮಾತ್ ಸರ್ವೇ ಸುರಾ ಯೂಯಮನಪತ್ಯಾ ಭವಿಷ್ಯಥ ॥ ೭೪ ॥
ಪ್ರಜೋಚ್ಛೇದೋ ಮಮ ಕೃತೋ ಯಸ್ಮಾದ್ ಯುಷ್ಮಾಭಿರದ್ಯ ವೈ ।
ತಸ್ಮಾತ್ ಪ್ರಜಾ ವಃ ಖಗಮಾಃ ಸರ್ವೇಷಾಂ ನ ಭವಿಷ್ಯತಿ ॥ ೭೫ ॥
ಪಾವಕಸ್ತು ನ ತತ್ರಾಸೀಚ್ಛಾಪಕಾಲೇ ಭೃಗೂದ್ವಹ ।
ದೇವಾ ದೇವಾಸ್ತಥಾ ಶಾಪಾದನಪತ್ಯಾಸ್ತತೋಽಭವನ್ ॥ ೭೬ ॥

'ನೀವೆಲ್ಲರೂ ಮಗುವನ್ನು ಪಡೆಯಬಯಸಿದ ನನ್ನ ಗಂಡನನ್ನು (ವಿಚಿತ್ರವಾದ ವರವನ್ನು ಕೇಳಿ) ಪರಾವೃತ್ತನನ್ನಾಗಿ ಮಾಡಿರುವಿರಿ. ಆದುದರಿಂದ ನೀವೆಲ್ಲ ದೇವತೆಗಳು ಮಕ್ಕಳಿಲ್ಲದವರಾಗುವಿರಿ. ಬಾನಲ್ಲಿ ವಿಹರಿಸುವ ದೇವತೆಗಳೇ ! ನೀವೆಲ್ಲ ಸೇರಿ ನನ್ನ ವಂಶವನ್ನು ಕಡಿದುಹಾಕಿರುವಿರಿ. ಹೀಗಾಗಿ ನಿಮಗೂ ಮಕ್ಕಳಾಗವು.' ಉಮೆಯು ಈ ಶಾಪವನ್ನು ಉಚ್ಚರಿಸುವಾಗ ಅಗ್ನಿ ಅಲ್ಲಿರಲಿಲ್ಲ. ಆದ್ದರಿಂದ ಈ ಶಾಪ ಅವನನ್ನು ತಟ್ಟಲಿಲ್ಲ. ಉಳಿದ ದೇವದೇವತೆಗಳೆಲ್ಲರೂ ಸಂತಾನಹೀನರಾದರು.

ಶಂಕರನು ತನ್ನ ತೇಜಸ್ಸನ್ನು ತಡೆಹಿಡಿದಿಟ್ಟರೂ ಅದರ ಕೆಲ ಅಂಶವು ಸ್ಖಲನಗೊಂಡು ಅಗ್ನಿಗೆ ಬಿದ್ದಿತು. ಎರಡೂ ತೇಜಸ್ಸುಗಳ ಮಿಲನದಿಂದಾಗಿ ಹೆಚ್ಚು ಶಕ್ತಿಶಾಲಿಯಾದ ತೇಜಸ್ಸು ಉದಯಿಸಿತು.

**ಅನುಶಾಸನ/೮೫**

ತಾರಕಾಸುರನು ಬ್ರಹ್ಮದೇವನಿಂದ ವರವನ್ನು ಪಡೆದಿದ್ದನು. ಅವನು ದೇವತೆಗಳಿಗೆ ಕಾಟವನ್ನು ಕೊಡಲಾರಂಭಿಸಿದನು. ಹೀಗಾಗಿ ದೇವತೆಗಳೆಲ್ಲ ಕೂಡಿ ತಮ್ಮನ್ನು ಅವನ ಕಾಟದಿಂದ ಪಾರುಮಾಡಬೇಕೆಂದು ಬ್ರಹ್ಮದೇವನಿಗೆ ಮೊರೆಹೊಕ್ಕರು. ಆ ಶಾಪದ ಉಲ್ಲೇಖ ಹೀಗಿದೆ—

ದೇವಾಶ್ಚ ಶಪ್ತಾ ರುದ್ರಾಣ್ಯಾ ಪ್ರಜೋಚ್ಛೇದೇ ಪುರಾಕೃತೇ ।
ನ ಭವಿಷ್ಯತಿ ವೋಽಪತ್ಯಮಿತಿ ಸರ್ವೇ ಜಗತ್ಪತೇ ॥ ೭ ॥

ಎಲೈ ಜಗನ್ನಾಥನೇ! ಹಿಂದಕ್ಕೆ ನಾವು ಉಮೆಯ ಸಂತಾನಪ್ರಾಪ್ತಿಗೆ ಅಡ್ಡಿಯನ್ನು ಉಂಟುಮಾಡಿದ್ದರಿಂದ ಅವಳು ನಾವೆಲ್ಲ ಸಂತಾನಹೀನರಾಗುವೆವೆಂದು ಶಾಪವನ್ನು ಇತ್ತಿರುವಳು.

ಹುತಾಶನೋ ನ ತತ್ರಾಸೀಚ್ಛಾಪಕಾಲೇ ಸುರೋತ್ತಮಾಃ ।
ನ ಉತ್ಪಾದಯಿತಾಪತ್ಯಂ ವಧಾಯ ತ್ರಿದಶದ್ವಿಷಾಮ್ ॥ ೮ ॥

'ಶಾಪವನ್ನೀಯುವ ಹೊತ್ತಿಗೆ ಅಗ್ನಿಯು ಅಲ್ಲಿಲ್ಲದ ಕಾರಣ (ಈ ಶಾಪವು ಅವನಿಗೆ ತಟ್ಟಲಿಲ್ಲ. ಹೀಗಾಗಿ) ದೇವತೆಗಳನ್ನು ದ್ವೇಷಿಸುವವರಾದ ದೈತ್ಯರ ಸಂಹಾರಕ್ಕಾಗಿ ಅವನೇ ಮಕ್ಕಳನ್ನು ಹುಟ್ಟಿಸಬಲ್ಲನು.'

ಅಗ್ನಿಗೆ ಶಾಪ ಸಿಕ್ಕದಿರುವ ಇನ್ನೊಂದು ಉಲ್ಲೇಖ ಹೀಗಿದೆ—

ಸ ತು ನಾಪಾಪ ತಂ ಶಾಪಂ ನಷ್ಟಃ ಸ ಹುತಭುಕ್ ತದಾ ॥ ೧೩ ॥

ಆ ಹೊತ್ತಿಗೆ ಅಗ್ನಿಯು (ಅಲ್ಲಿ) ಕಾಣದ್ದರಿಂದ ಆ ಶಾಪ ಅವನನ್ನು ತಟ್ಟಲಿಲ್ಲ. ಅವನ ಮಗನೇ ದೇವತೆಗಳ ಹಗೆಯನ್ನು ಪ್ರಭಾವಿಯಾಗಿ ನಾಶಪಡಿಸಬಲ್ಲನು. ಏಕೆಂದರೆ—

ನ ಹಿ ತೇಜಸ್ವಿನಾಂ ಶಾಪಾಸ್ತೇಜಃಸು ಪ್ರಭವಂತಿ ವೈ ॥ ೧೫ ॥

(ಶಂಕರನ ತೇಜಸ್ಸು ಬಿದ್ದುದರಿಂದ ಎರಡೂ ತೇಜಸ್ಸುಗಳು ಕೂಡಿಕೊಂಡವು.) ತೇಜಸ್ವಿಗಳ ಶಾಪವು ಅದಕ್ಕೂ (ಹೆಚ್ಚಿನ) ಬೇರೆ ತೇಜಸ್ಸಿನೆದುರು ಪ್ರಭಾವಿಯೆನ್ನಿಸದು. ಉಮೆಯು ದೇವತೆಗಳಿಗಿತ್ತ ಶಾಪದ ಇನ್ನೊಂದು ಉಲ್ಲೇಖವು ಮುಂದಿನಂತಿದೆ—

ಶಪ್ತಾನಾಂ ನೋ ಮಹಾದೇವ್ಯಾ ನಾನ್ಯದಸ್ತಿ ಪರಾಯಣಮ್ ।
ಅನ್ಯತ್ರ ಭವತೋ ವೀರ್ಯಂ ತಸ್ಮಾತ್ ತ್ರಾಯಸ್ವ ನಃ ಪ್ರಭೋ ॥ ೫೪ ॥

'ಎಲೈ ಪ್ರಭುವೇ! ಮಹಾದೇವಿಯಾದ ಉಮೆಯು ನಮಗೆಲ್ಲ ಶಾಪವನ್ನಿತ್ತ ಕಾರಣ ನಿಮ್ಮನ್ನುಳಿದು ಬೇರಿನ್ನಾರೂ ನಮಗೆ ಗತಿಯಿಲ್ಲ. ನೀವೇ (ನಮ್ಮನ್ನು ಈ ಸಂಕಟದಿಂದ) ಪಾರುಮಾಡಬಲ್ಲಿರಿ. ಆದ್ದರಿಂದ ನಮ್ಮನ್ನು ದಯವಿಟ್ಟು ಕಾಪಾಡಿ.'

+ ಉಮೆಯು ದೇವತೆಗಳಂತೆಯೇ ಭೂಮಿಗೂ ಶಾಪವನ್ನಿತ್ತಿರುವುದು ವಾಲ್ಮೀಕಿ ರಾಮಾಯಣದಲ್ಲಿ ಕಂಡುಬರುತ್ತದೆ. (ನೋಡಿ : ವಾಲ್ಮೀಕಿರಾಮಾಯಣ, ಬಾಲಕಾಂಡ/೩೬). ಭೂಮಿಗೆ ಶಾಪ ದೊರೆಕಲು ಕಾರಣ ಅದು ಶಂಕರನ (ಸ್ಖಲನಗೊಂಡ) ತೇಜವನ್ನು ಹಿಡಿದಿಟ್ಟುಕೊಂಡುದು. ಮಹಾಭಾರತದಲ್ಲಿ ಭೂಮಿಗೆ ಸಿಕ್ಕ ಈ ಶಾಪದ ಉಲ್ಲೇಖವಿಲ್ಲ.

ನ ಹಿ ತೇ ಪೃಥಿವೀ ದೇವೀ ದ್ಯೌರ್ನ ದಿವಂ ವಿಭೋ || ೮೪/೬೮ ||
ನೇದಂ ಧಾರಯಿತುಂ ಶಕ್ತಾಃ ಸಮಸ್ತಾ ಇತಿ ಮೇ ಮತಿಃ || ೮೪/೬೯ ||

ಇಷ್ಟೇ ಅಲ್ಲದೆ ಶಂಕರನ ತೇಜಸ್ಸನ್ನು ಧರಿಸಲಾಗದವರಲ್ಲಿ ಪೃಥ್ವಿಯ ಉಲ್ಲೇಖವೂ ಇದೆ.

## ೧೩೩. ಅಗ್ನಿ > ಕಪ್ಪೆ

ಅನುಶಾಸನ/೮೫

ಯುಧಿಷ್ಠಿರನ ಕೇಳಿಕೆಯಂತೆ ಭೀಷ್ಮನು ಅವನಿಗೆ ಹೊನ್ನನ್ನು ತಯಾರಿಸುವ ಬಗೆಗೆ ಹೇಳುತ್ತಲಿದ್ದಾನೆ—

ಉಮೆ ದೇವತೆಗಳಿಗೆ ಶಾಪವನ್ನಿತ್ತಾಗ ಅಗ್ನಿ ಅಲ್ಲಿಲ್ಲದ ಕಾರಣ ಶಾಪದ ಬಿಸಿ ಅವನಿಗೆ ತಟ್ಟಲಿಲ್ಲ (ನೋಡಿ : ಶಾಪ–ಉಮೆ > ದೇವ). ಹೀಗಾಗಿ ಅವನ ಮಗನು ದೇವತೆಗಳನ್ನು ಅಸುರರ ಕಾಟದಿಂದ ಕಾಯಬಲ್ಲನೆಂದು ಬ್ರಹ್ಮದೇವನು ಹೇಳಿದನು. ಆಗ ದೇವತೆಗಳು ಅಗ್ನಿಗಾಗಿ ಹುಡುಕಾಡಹತ್ತಿದರು. ಆಗ ಅವನು ನೀರಿನಲ್ಲಿ ಅಡಗಿ ಕುಳಿತಿದ್ದನು. ಹೀಗಾಗಿ ದೇವತೆಗಳಿಗೆ ಅವನು ಕಾಣಲಿಲ್ಲ. ಅಗ್ನಿ ನೀರಲ್ಲಿ ವಾಸಮಾಡಿದ್ದರಿಂದ ಜಲಚರ ಪ್ರಾಣಿಗಳಿಗೆಲ್ಲ ನೀರಿನ ಶಾಖ ತಡೆಯದಂತಾಯಿತು. ಅವುಗಳಲ್ಲಿಯ ಒಂದು ಕಪ್ಪೆ ನೀರ ಹೊರಕ್ಕೆ ಬಂದಿತು. ಅದು ದೇವತೆಗಳಿಗೆ, 'ಅಗ್ನಿಯು ಇಲ್ಲಿ ನೀರಲ್ಲಿ ಅಡಗಿ ಕುಳಿತಿದ್ದಾನೆ. ಹೀಗಾಗಿ ಅವನನ್ನು ಅಲ್ಲಿಯೇ ಭೆಟ್ಟಿಯಾಗಬಹುದು' ಎಂದು ಹೇಳಿತು. ಇಷ್ಟು ನುಡಿದು ಕಪ್ಪೆಯು ಮತ್ತೆ ನೀರಿನೊಳಕ್ಕೆ ಹೋಗುತ್ತಲೇ—

ಹುತಾಶನಸ್ತು ಬುಬುಧೇ ಮಂಡೂಕಸ್ಯ ಚ ಪೈಶುನಮ್ ।
ಸಶಾಪ ಸ ತಮಾಸಾದ್ಯ ನ ರಸಾನ್ ವೇತ್ಸ್ಯಸೀತಿ ವೈ || ೨೮ ||
ತಂ ವೈ ಸಂಯುಜ್ಯ ಶಾಪೇನ ಮಂಡೂಕಂ ತ್ವರಿತೋ ಯಯೌ ।
ಅನ್ಯತ್ರ ವಾಸಾಯ ವಿಭುರ್ನ ಚಾತ್ಮಾನಮದರ್ಶಯತ್ || ೨೯ ||

"ಕಪ್ಪೆಯೇ ದೇವತೆಗಳೆದುರು ತನ್ನ ಚಾಡಿಯನ್ನು ಹೇಳಿದುದು ಅಗ್ನಿಯ ಗಮನಕ್ಕೆ ಬಂದಿತು. ಅವನು ಅದರ ಬಳಿಗೆ ಹೋಗಿ, 'ನಿನಗೆ ರಸದ ಸವಿ ಎಂದಿಗೂ ತಿಳಿಯದು' ಎಂದು ಅದನ್ನು ಶಪಿಸಿ ತಾನು ಬೇರೆಡೆಗೆ ವಾಸವಾಗಿರಲು ಹೋದನು. ಆದರೆ ಅವನು ಅದಾರ ಕಣ್ಣಿಗೂ ಮಾತ್ರ ಬೀಳಲಿಲ್ಲ."

## ೧೩೪. ಅಗ್ನಿ > ಆನೆ

ಅನುಸಾಸನ/೮೫

ಮೊದಲ ಸಂದರ್ಭ : ನೋಡಿ : ಶಾಪ—ಅಗ್ನಿ > ಕಪ್ಪೆ.
ದೇವತೆಗಳು ಅಗ್ನಿಯ ಹುಡುಕುವಿಕೆಯನ್ನು ಮುಂದುವರೆಸಿದ್ದರು. ಒಂದು ಸಲ—

ಅಥ ತಾನ್ ದ್ವಿರದಃ ಕಶ್ಚಿತ್ ಸುರೇಂದ್ರದ್ವಿರದೋಪಮಃ ॥ ೩೪ ॥
ಅಶ್ವತ್ಥಸ್ಥೋಽಗ್ನಿರಿತ್ಯೇವಮಾಹ ದೇವಾನ್ ಭೃಗೂದ್ವಹ ।
ಶಶಾಪ ಜ್ವಲನಃ ಸರ್ವಾನ್ ದ್ವಿರದಾನ್ ಕ್ರೋಧಮೂರ್ಚ್ಛಿತಃ ॥ ೩೫ ॥
ಪ್ರತೀಪಾ ಭವತಾಂ ಜಿಹ್ವಾ ಭವಿತ್ರೀತಿ ಭೃಗೂದ್ವಹ ॥ ೩೬ ॥

'ಅಗ್ನಿಯು ಅರಳೀಯ ಮರದಲ್ಲಿ ಅಡಗಿ ಕುಳಿತಿದ್ದಾನೆ' ಎಂದು ಇಂದ್ರನ ಐರಾವತದೊಂದಿಗೆ ಹೋಲಿಸಬಹುದಾದ ಒಂದು ಆನೆಯು ದೇವತೆಗಳಿಗೆ ಹೇಳಿತು. ಈ ಸಂಗತಿ ಅಗ್ನಿಗೆ ತಿಳಿಯುತ್ತಲೇ ಅವನು ಕುಪಿತನಾಗಿ ಆನೆಗಳೆಲ್ಲವುಗಳಿಗೂ, 'ನಿಮ್ಮ ನಾಲಿಗೆ ತಿರುವುಮುರುವಾಗಲಿ' ಎಂದು ಶಪಿಸಿದನು.

ಅಗ್ನಿಯು ಅರಳೀಯ ಮರದಿಂದ ಬೀಡಾರವನ್ನು ಕಿತ್ತಿ ಬನ್ನಿಮರಕ್ಕೆ ವಾಸವಾಗಿರಲು ಹೋದನು.

## ೧೩೫. ಅಗ್ನಿ > ಶುಕ

**ಅನುಶಾಸನ/೮೫**

ಮೊದಲ ಸಂದರ್ಭ : ನೋಡಿ : ಶಾಪ—ಅಗ್ನಿ > ಕಪ್ಪೆ.

ಅಗ್ನಿಯು ಅರಳೀಯ ಮರದಲ್ಲಿ ಸಿಗದೇಹೋದಕಾರಣ ದೇವತೆಗಳು ತಮ್ಮ ಹುಡುಕುವಿಕೆಯನ್ನು ಮುಂದುವರಿಸಿದರು. ಹೀಗಿರುತ್ತ, ಅಗ್ನಿಯು ಬನ್ನಿಯ ಮರದಲ್ಲಿ ಅಡಗಿಕೊಂಡಿರುವುದನ್ನು ಅವನಿಗೆ ಒಂದು ಗಿಳಿಯು ಹೇಳಿತು. ಈ ಮಾತು ಅಗ್ನಿಗೆ ತಿಳಿದು ಬರುತ್ತಲೇ—

ಶಶಾಪ ಶುಕಮಗ್ನಿಸ್ತು ವಾಗ್ವಿಹೀನೋ ಭವಿಷ್ಯಸಿ ॥ ೪೦ ॥
ಜಿಹ್ವಾಮಾವರ್ತಯಾಮಾಸ ತಸ್ಯಾಪಿ ಹುತಭುಕ್ ತಥಾ ॥ ೪೧ ॥

ಅಗ್ನಿಯು ಅದರ ನಾಲಿಗೆಯನ್ನೂ ಕೂಡ ತಿರುಗುಮುರುಗಾಗಿ ಮಾಡಿಬಿಟ್ಟನು. ಅಲ್ಲದೆ, 'ನೀನು ಮಾತಾಡಲಾರೆ' ಎಂದು ಶಾಪವನ್ನಿತ್ತನು.

## ೧೩೬. ಬ್ರಾಹ್ಮಣ > ನಿಮಿ

**ಅನುಶಾಸನ/೯೧**

ಶ್ರಾದ್ಧವಿಧಿಯನ್ನು ಆರಂಭಿಸಿದವರು ಯಾರು ? ಎಂದಿನಿಂದ ? ಅದರ ವಿಧಿಯೇನು ? ಶ್ರಾದ್ಧವನ್ನು ಮಾಡುವ ಅಧಿಕಾರ ಯಾರಿಗೆ ? ಯುಧಿಷ್ಠಿರನು ಈ ಪ್ರಶ್ನೆಗಳನ್ನು ಭೀಷ್ಮನಿಗೆ ಕೇಳಿದನು. ಭೀಷ್ಮನ ಮಾರುತ್ತರದ ಹೇಳಿಕೆಯಲ್ಲಿ ಈ ಶಾಪದ ಉಲ್ಲೇಖವಿದೆ.

ದತ್ತಾತ್ರಯನು ಬ್ರಹ್ಮದೇವನ ಮೊಮ್ಮಗನು, ಅತ್ರಿಯ ಮಗನು. ಅವನ ಮಗ ನಿಮಿಯು ಒಬ್ಬ ಮಹಾತಪಸ್ವಿಯಾಗಿದ್ದನು. ನಿಮಿಯ ಮಗನಾದ ಶ್ರೀಮಾನ್ ಈತನು ಒಂದು ಸಾವಿರ ವರ್ಷಗಳ ಕಾಲ ಉಗ್ರತಪಸ್ಸನ್ನಾಚರಿಸಿದನು. ಅವನು ತೀರಿಕೊಂಡ ಬಳಿಕ ನಿಮಿಯು ಅವನ ಅಂತ್ಯಕ್ರಿಯೆಗಳನ್ನು ಯಥೋಚಿತವಾಗಿ ಮಾಡಿದನು. ಅವನು ಪುತ್ರಶೋಕದಿಂದ ವ್ಯಾಕುಲನಾಗಿದ್ದನು. ಆದರೂ ಶ್ರಾದ್ಧವನ್ನು ಮಾಡಲು ನಿರ್ಧರಿಸಿದನು. ಬ್ರಾಹ್ಮಣರನ್ನು ಕರೆದು ಸತ್ಕರಿಸಿದನು. ಶ್ರೀಮಾನ್‌ನಿಗೆ ಹಿಡಿಸುವ ಊಟ, ತಿಂಡಿಗಳನ್ನು ಅವರಿಗೆ ನೀಡಿದನು. ಬ್ರಾಹ್ಮಣರ ಪಾದಗಳ ಬಳಿ ದಕ್ಷಿಣ ದಿಕ್ಕಿಗೆ ದರ್ಭೆಯನ್ನು

ಹರಡಿ ಅದರ ಮೇಲೆ ಪಿಂಡವನ್ನು ಇರಿಸಿದನು. ತನ್ನ ಗೋತ್ರದ ಹೆಸರನ್ನು ಉಚ್ಚರಿಸಿದನು.

ಆದರೆ ಇಷ್ಟೆಲ್ಲವನ್ನು ಕೈಕೊಳ್ಳುವಾಗಲೂ ಅವನು ಒಳಗೊಳಗೆ ಹೆದರಿಕೊಂಡಿದ್ದನು. ಹಿಂದಕ್ಕೆ ಮೃತರ ಬಗೆಗೆ ಈ ರೀತಿ ಯಾರೂ ಏನನ್ನೂ ಮಾಡಿರಲಿಲ್ಲವಾದ್ದರಿಂದ ತಾನು ಮಾಡಿದುದು ತಪ್ಪಲ್ಲ ತಾನೆ ? —ಎಂದು ಹೆದರುತ್ತಿದ್ದನು. ತನ್ನ ಕೃತ್ಯದ ಬಗೆಗೆ ಅವನಲ್ಲಿ ಪಶ್ಚಾತ್ತಾಪವೂ ಮೂಡಿತು. ಏಕೆಂದರೆ—

ಕಥಂ ನು ಶಾಪೇನ ನ ಮಾಂ ದಹೇಯುರ್ಬ್ರಾಹ್ಮಣಾ ಇತಿ ॥ ೧೭ ॥

(ತನ್ನೀ ಕೃತ್ಯದಿಂದಾಗಿ ಕೆರಳಿದ) 'ಬ್ರಾಹ್ಮಣರು ನನ್ನನ್ನು ಶಪಿಸಿ ಸುಟ್ಟುಹಾಕಲಿಕ್ಕಿಲ್ಲ ತಾನೆ ?' ಎಂದೆನ್ನಿಸುತ್ತಿತ್ತು.

ಅವನು ಅತ್ರಿಯನ್ನು ಸ್ಮರಿಸುತ್ತಲೇ ಅವನು ಒಂದು ನಿಮಿಯನ್ನು ಸಮಾಧಾನಗೊಳಿಸಿದನು.

+ ಪ್ರತ್ಯಕ್ಷದಲ್ಲಿ ಶಾಪೋಚ್ಚಾರ ಆಗಿಲ್ಲ. ಶಾಪದ ಹೆದರಿಕೆ ವ್ಯಕ್ತಗೊಂಡಿದೆ, ಅಷ್ಟೆ. ಹೀಗಾಗಿ ಶಾಪದ ಸ್ವರೂಪ ತಿಳಿದುಬಾರದು.

## ೧೩೭. ಜಮದಗ್ನಿ > ರೇಣುಕಾ **ಅನುಶಾಸನ/೯೫**

ಛತ್ರ ಹಾಗೂ ಉಪಾನಹ(ಕೊಡೆ ಹಾಗು ಮೆಟ್ಟುಗಳು)ಗಳನ್ನು ದಾನವೆಂದು ಶ್ರಾದ್ಧ ಕ್ರಿಯೆಯ ಕಾಲಕ್ಕಲ್ಲದೆ ವ್ರತ (ಉದ್ಯಾಪನ), ಉತ್ಸವ ಮೊದಲಾದ (ಶುಭ) ಪ್ರಸಂಗಗಳಲ್ಲೂ ಕೊಡುತ್ತಾರೆ. ಇದು ಶುರುವಾದದ್ದು ಯಾವಾಗ, ಹೇಗೆ ?—ಎಂದು ಯುಧಿಷ್ಠಿರನು ಭೀಷ್ಮನನ್ನು ಕೇಳಿದನು. ಆಗ ಭೀಷ್ಮನು ರೇಣುಕೆ–ಜಮದಗ್ನಿಗಳ ಬಾಳಿನಲ್ಲಿ ನಡೆದ ಒಂದು ಘಟನೆಯನ್ನು ಕುರಿತು ಹೇಳಿದನು.

ಒಂದು ಸಲ ಜಮದಗ್ನಿಯು ಬಿಲ್ಲಿನೊಂದಿಗೆ ಆಡುತ್ತಲಿದ್ದನು. ಅವನ ಮಡದಿ ರೇಣುಕೆ ಅವನೆಸೆದ ಬಾಣಗಳನ್ನು ಕಲೆಹಾಕಿ ತಂದುಕೊಡುತ್ತಿದ್ದಳು. ಬಿಸಿಲುಗಾಲವಾದ್ದರಿಂದ ಅವಳ ಕಾಲುಗಳು ಸುಡಹತ್ತಿದವು. ಹೀಗಾಗಿ ಅವಳು ಕೊಂಚ ಹೊತ್ತು ಒಂದು ಮರದ ನೆರಳಿಗೆ ನಿಂತಳು. ಆದರೆ ಗಂಡನಿಗೆ ಬಾಣಗಳನ್ನು ಒಯ್ದು ಕೊಡುವಲ್ಲಿ ತಡವಾದರೆ,

ಸ್ಥಿತಾ ಸಾ ಮುಹೂರ್ತಂ ವೈ ಭರ್ತುಃ ಶಾಪಭಯಾಚ್ಛುಭಾ ॥ ೧೨ ॥

ಗಂಡನು ತನ್ನನ್ನು ಶಪಿಸುವನೆಂಬ ಹೆದರಿಕೆಯಿಂದಾಗಿ ಅವಳು ಕ್ಷಣಕಾಲ ಮಾತ್ರ (ನೆರಳಿಗೆ) ನಿಂತುಕೊಂಡಿದ್ದಳು ಅವಳು ಬರುತ್ತಲೇ ಜಮದಗ್ನಿಯು ತಡವಾದುದಕ್ಕೆ ಕಾರಣವೇನೆಂದು ಅವಳನ್ನು ಕೇಳಲು ಅವಳು ನಿಜವನ್ನೇ ಹೇಳಿದಳು. ಅವಳ ಮಾತುಗಳನ್ನು ಕೇಳಿ ಕಿಡಿಕಿಡಿಯಾಗಿ ಅವನು ಝಳಪಿಸುವ ಸೂರ್ಯನ ಮೇಲೆಯೇ ಬಾಣವನ್ನೆಸೆಯಲು ಉದ್ಯುಕ್ತನಾದನು. ಸೂರ್ಯನು ಬ್ರಾಹ್ಮಣನ ವೇಷದಲ್ಲಿ ಬಂದು ಅವನಿಗೆ ತಿಳಿಹೇಳಿ ಅವನನ್ನು ಸಮಾಧಾನಪಡಿಸಿದನು.

+ ಪ್ರತ್ಯಕ್ಷವಾಗಿ ಶಾಪವನ್ನೀಯಲಾಗಿಲ್ಲ. ಹೀಗಾಗಿ ಅದರ ಸ್ವರೂಪ ಹಾಗೂ ಪರಿಣಾಮಗಳು ಅರ್ಥವಾಗುತ್ತಿಲ್ಲ.

## ೧೩೮. ? > ರಾಕ್ಷಸ

ಅನುಶಾಸನ/೧೨೪

ನಾಮ ಹಾಗೂ ದಾನ ಇವುಗಳಲ್ಲಿ ಹೆಚ್ಚು ಚೆನ್ನಾದುದು ಯಾವುದು ? ಯುಧಿಷ್ಠಿರನು ಈ ಪ್ರಶ್ನೆಯನ್ನು ಭೀಷ್ಮನಿಗೆ ಕೇಳಿದನು. ಭೀಷ್ಮನು ಈ ಸಂದರ್ಭದಲ್ಲಿ ಒಬ್ಬ ಬ್ರಾಹ್ಮಣ ಹಾಗೂ ರಾಕ್ಷಸನ ನಡುವಣ ಸಂಭಾಷಣೆಯ ಬಗೆಗೆ ಹೇಳಿದನು. ಅದರಲ್ಲಿ ಶಾಪದ ಉಲ್ಲೇಖವಿದೆ.

ಒಂದು ಸಲ ಕಾಡಿನಲ್ಲಿ ಒಬ್ಬ ರಾಕ್ಷಸನು ಒಬ್ಬ ಬ್ರಾಹ್ಮಣನನ್ನು ಹಿಡಿದುಕೊಂಡನು. ಅವನು ಬ್ರಾಹ್ಮಣನನ್ನು ತಿಂದುಬಿಡುವ ಯೋಚನೆಯಲ್ಲಿದ್ದನು. ಬ್ರಾಹ್ಮಣನು ಇದನ್ನರಿತನು. ಅವನು ಎಳ್ಳಷ್ಟೂ ಹೆದರಲಿಲ್ಲ. ಅವನು ರಾಕ್ಷಸನೊಂದಿಗೆ ಮಾತಿಗಾರಂಭಿಸಿದನು. ಅವನ ಮಾತುಗಳಿಂದ ರಾಕ್ಷಸ ಸಂತುಷ್ಟನಾದನು. ರಾಕ್ಷಸನು ಅವನಿಗೆ, 'ನನ್ನ ಪ್ರಶ್ನೆಗಳಿಗೆ ಉತ್ತರಗಳನ್ನು ನೀಡಿದೆಯಾದರೆ ನಿನ್ನನ್ನು ಬಿಟ್ಟುಕೊಡುವೆ' ಎಂದನು. ಅವನ ಪ್ರಶ್ನೆ : 'ನಾನು ಬಿಳಿಚಿಕೊಂಡಿರುವುದು ಏಕೆ ? ಅಲ್ಲದೆ ನನಗೆ ದುರ್ಬಲತೆ ಬಂದಿರಲು ಕಾರಣ ಏನು ?' ಬ್ರಾಹ್ಮಣನು ಪ್ರಶ್ನೆಯನ್ನು ಕೇಳಿ ತುಸು ಹೊತ್ತು ಯೋಚಿಸಿದನು. ಆಮೇಲೆ ಹೀಗೆ ಹೇಳಿದನು—

> ನೂನಮಾತ್ಮಕೃತಂ ದೋಷಮಪಶ್ಯನ್ ಕಿಂಚಿದಾತ್ಮನಃ ।
> ಅಕಾರಣೇऽಭಿಶಪ್ತೋऽಸಿ ತೇನಾಸಿ ಹರಿಣಃ ಕೃಶಃ ॥ ೩೧ ॥

(ಬ್ರಾಹ್ಮಣನು ರಾಕ್ಷಸನಿಗೆ ಹೇಳಿದ ಹಲವು ಕಾರಣಗಳಲ್ಲಿ ಒಂದು.) (ನಿನಗೆ) ಸ್ವಂತದ ಯಾವುದೇ ತಪ್ಪು ಕಾಣದಿರುವಾಗಲೂ ಜನ ಸುಮ್ಮನೆ ಶಾಪಗಳನ್ನೀಯುತ್ತಾರೆ. ಅವುಗಳನ್ನು ನೀನು ಸಹಿಸಿಕೊಳ್ಳಬೇಕಾಗಿರುವುದರಿಂದ ನೀನು ಇಷ್ಟೊಂದು ಕೃಶನಾಗಿರುವೆ.

+ ರಾಕ್ಷಸನಿಗೆ ಶಾಪವನ್ನೀಯುವವರಾರು, ಏಕೆ ?—ಎಂಬುದರ ಉಲ್ಲೇಖವಿಲ್ಲ. ಹೀಗಾಗಿ ಶಾಪದ ಸ್ವರೂಪ, ಪರಿಣಾಮಗಳ ಬಗೆಗೆ ಏನೂ ತಿಳಿಯದು. ಬ್ರಾಹ್ಮಣನು ಈ ಶಾಪವನ್ನಿತ್ತಿಲ್ಲ. ಅವನು ಅದನ್ನು ಕುರಿತು ಹೇಳುತ್ತಲಿದ್ದಾನೆ ಅಷ್ಟೆ.

## ೧೩೯. ಬ್ರಾಹ್ಮಣ > ಕಡಲು

ಅನುಶಾಸನ/೧೫೧

ತಮಗೆ ಕೇಡು ಉಂಟಾಗದಿರಲಿ—ಎಂದು ಯಾರನ್ನು ಪೂಜಿಸಬೇಕು, ಯಾರನ್ನು ಅಭಿವಾದಿಸಬೇಕು, ಯಾರೊಂದಿಗೆ ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ಕುರಿತು ಯುಧಿಷ್ಠಿರನು ಭೀಷ್ಮನನ್ನು ಕೇಳುತ್ತಾನೆ. ಅದಕ್ಕೆ ಭೀಷ್ಮನು ಬ್ರಾಹ್ಮಣರನ್ನು ಹೊಗಳಿ ಅವರ ಹಿರಿಮೆ, ಸಾಮರ್ಥ್ಯಗಳು ದೇವತೆಗಳಿಗೂ ಮಿಗಿಲಾದವುಗಳು ಹೇಗೆಂಬುದನ್ನು ಕುರಿತು ಹೇಳಿದನು. ಆಗ ಬ್ರಾಹ್ಮಣರ ಶಾಪದಿಂದಾಗಿ ಕಡಲ ನೀರು ಕುಡಿಯಲು ಹೇಗೆ ಸರಿಯಲ್ಲವೆನ್ನಿಸಿತೆಂಬುದನ್ನು ಕುರಿತೂ ಹೇಳಿದನು.

> ಅದೈವಂ ದೈವತಂ ಕುರ್ಯುರ್ದೈವತಂ ಚಾಪ್ಯದೈವತಮ್ ।
> ಲೋಕಾನನ್ಯಾನ್ ಸೃಜೇಯುಸ್ತೇ ಲೋಕಪಾಲಾಂಶ್ಚ ಕೋಪಿತಾಃ ॥ ೧೬ ॥
> ಅಪೇಯಃ ಸಾಗರೋ ಯೇಷಾಮಪಿ ಶಾಪಾನ್ಮಹಾತ್ಮನಾಮ್ ।
> ಯೇಷಾಂ ಕೋಪಾಗ್ನಿರದ್ಯಾಪಿ ದಂಡಕೇ ನೋಪಶಾಮ್ಯತಿ ॥ ೧೭ ॥

ಬ್ರಾಹ್ಮಣರು ದೇವತ್ವವಿಲ್ಲದವರನ್ನೂ ದೇವತೆಗಳನ್ನಾಗಿ ಮಾಡಬಲ್ಲರು. (ಅವರು ನಿರ್ಧರಿಸಿದರೆ) ದೇವತೆಗಳನ್ನೂ ಅವರವರ ಸ್ಥಾನಗಳಿಂದ ಕಿತ್ತಬಲ್ಲರು. ಅವರು ಕೆರಳಿದ ರೆಂದರೆ ಬೇರೆ (ಬಗೆಯ) ಲೋಕಗಳನ್ನೂ, ಲೋಕಪಾಲರನ್ನೂ ನಿರ್ಮಿಸಬಲ್ಲರು. ಇಂಥ ಮಹಾತ್ಮರ ಶಾಪ(ಸಾಮರ್ಥ್ಯ)ದಿಂದಾಗಿಯೇ ಕಡಲಿನ ನೀರು ಕುಡಿಯಲು ಒಗ್ಗದಂತಾಯಿತು (ಉಪ್ಪುನೀರಾಯಿತು). ಅವರ ಕ್ರೋಧಾಗ್ನಿಯಿಂದಾಗಿಯೇ ದಂಡಕಾರಣ್ಯವೂ ಶಾಂತವಾಗಿಲ್ಲ.

**ಅನುಶಾಸನ/೧೫೩**

ಕಡಲಿಗೆ ಸಿಕ್ಕ ಶಾಪದ ಇನ್ನೊಂದು ಉಲ್ಲೇಖ :

ತಥಾ ಸಮುದ್ರೋ ನೃಪತೇ ಪೂರ್ಣೋ ಮೃಷ್ಟಸ್ಯ ವಾರಿಣಃ ।
ಬ್ರಾಹ್ಮಣೈರಭಿಶಪ್ತಶ್ಚ ಬಭೂವ ಲವಣೋದಕಃ ॥ ೭ ॥

ಮೊದಲು ಕಡಲಿನ ನೀರು ಸಿಹಿಯಾಗಿತ್ತು. ಆದರೆ ಬ್ರಾಹ್ಮಣರ ಶಾಪದಿಂದಾಗಿ ಅದು ಉಪ್ಪಾಯಿತು.

+ ಬ್ರಾಹ್ಮಣರ ಶಾಪದಿಂದಾಗಿ ಕಡಲಿನ ನೀರು ಉಪ್ಪಾದುದೇನೋ ಸರಿಯೇ. ಆದರೆ ಅವರಿಗೆ ಕೋಪ ಬರುವಂತಹ ಅದಾವ ತಪ್ಪು ಕಡಲಿನಿಂದಾಗಿತ್ತು ? ಭಾರ್ಗವನು ದಂಡಕಾರಣ್ಯಕ್ಕೆ ಶಾಪವನ್ನೀಯಲು ಕಾರಣವೆಂದರೆ ಅಲ್ಲಿಯ ದಂಡರಾಜನ ಅಂಕೆಮೀರಿದ ನಡತೆಯೇ ಸರಿ.

ನೋಡಿ : ವಾಲ್ಮೀಕಿರಾಮಾಯಣ : ಶಾಪ ಮತ್ತು ವರ, ಕ್ರ. ೫೯, ೬೦.

## ೧೪೦. ಅಂಗಿರ > ಅಗ್ನಿ

**ಅನುಶಾಸನ/೧೫೩**

ಯುಧಿಷ್ಠಿರನು ಭೀಷ್ಮನನ್ನು ಬ್ರಾಹ್ಮಣರ ಪೂಜೆಯನ್ನು ಯಾಕಾಗಿ ಕೈಕೊಳ್ಳಲಾಗುತ್ತದೆ? ಎಂದು ಕೇಳಿದನು. ಭೀಷ್ಮನು ಅವನಿಗೆ ಹಿಂದಕ್ಕೆ ವಾಯು ಹಾಗೂ ಕಾರ್ತವೀರ್ಯರೆಲ್ಲಾದ ಸಂವಾದವನ್ನು ಕುರಿತು ಹೇಳಿದನು. ಕಾರ್ತವೀರ್ಯ ಅರ್ಜುನನಿಗೆ ಬ್ರಾಹ್ಮಣರ ಹಿರಿಮೆ ಯನ್ನು ಮನಗಾಣಿಸಲೆಂದು ವಾಯುವು ನೀಡಿದ ಪುರಾವೆಗಳಲ್ಲಿ ಈ ಶಾಪದ ಉಲ್ಲೇಖವೂ ಇದೆ—

ಸುವರ್ಣವರ್ಣೋ ನಿರ್ಧೂಮಃ ಸಂಗತೋರ್ಧ್ವಶಿಖಃ ಕವಿಃ ।
ಕ್ರುದ್ಧೇನಾಂಗಿರಸಾ ಶಪ್ತೋ ಗುಣೈರೇತೈರ್ವಿವರ್ಜಿತಃ ॥ ೮ ॥

ಅಗ್ನಿಯ ಬಣ್ಣವು ಹೊನ್ನಿನಂತೆಯೂ, ಹೊಗೆಯಿಲ್ಲದುದೂ ಹಾಗೂ ಜ್ವಾಲೆಗಳು ಮೇಲಮೇಲಕ್ಕೇರುವವಾಗಿಯೂ ನೋಡಿದ ಸಂತಪ್ತನಾದ ಅಂಗಿರನು ಅವನಿಗೆ ಶಾಪವನ್ನಿತ್ತ ಕಾರಣ ಅವನ ಇವೆಲ್ಲ ವೈಶಿಷ್ಟ್ಯಗಳು ಇಲ್ಲದಂತಾದವು.

+ ಇದು ಆ ಶಾಪದ ಉಲ್ಲೇಖವಷ್ಟೇ. ಶಾಪದ ಕಾರಣಗಳನ್ನು ನೀಡಲಾಗಿಲ್ಲ.

## ೧೪೧. ಕಪಿಲ > ಸಾಗರಪುತ್ರರು

**ಅನುಶಾಸನ/೧೫೩**

ಮೊದಲ ಸಂದರ್ಭ : ನೋಡಿ : ಶಾಪ–ಅಂಗಿರ > ಅಗ್ನಿ.

ಮಹತಶ್ಚೂರ್ಣೀಕೃತಾನ್ ಪಶ್ಯ ಯೇ ಹಾಸಂತ ಮಹೋದಧಿಮ್ ।
ಸುವರ್ಣಧಾರಿಣಾ ನಿತ್ಯಮವಶಪ್ತಾ ದ್ವಿಜಾತಿನಾ ॥ ೯ ॥

(ಯಜ್ಞದ ಕುದುರೆಗಳನ್ನು ಹುಡುಕಲೆಂದು) ಸಾಗರಪುತ್ರರು ಕಡಲಿನವರೆಗೆ ಬಂದಿದ್ದರು. ಶ್ರೇಷ್ಠ ವರ್ಣದವನಾದ ಕಪಿಲ(ಬ್ರಾಹ್ಮಣ)ನು (ಸಿಟ್ಟಿಗೆದ್ದು), ಅವರೆಲ್ಲರನ್ನು ಸುಟ್ಟು ಬೂದಿಯನ್ನಾಗಿ ಮಾಡಿಬಿಟ್ಟನೆಂಬುದನ್ನು ನೀನು ಬಲ್ಲೆ.

+ ಇದೊಂದು ಉಲ್ಲೇಖ ಮಾತ್ರವಾಗಿದೆ. ಶಾಪದ ಕಾರಣಗಳನ್ನು ಖಚಿತವಾಗಿ ನೀಡಿಲ್ಲ.

## ೧೪೨. ? > ವಸು ಅನುಶಾಸನ/೧೬೮

ಭೀಷ್ಮನ ದೇಹತ್ಯಾಗದಿಂದಾಗಿ ಅವನ ತಾಯಿ ಗಂಗೆ ಬಲು ದುಃಖಿತಳಾದಳು. ಅವನ ಸದ್ಗುಣಗಳನ್ನು ನೆನೆದು ವಿಲಾಪಿಸಹತ್ತಿದಳು. ಆಗ ಶ್ರೀಕೃಷ್ಣನು ಅವಳನ್ನು ಸಮಾಧಾನಗೊಳಿಸಿದನು. ಅವನ ಮಾತಿನಲ್ಲಿ ವಸುವಿಗೆ ದೊರೆತ ಈ ಶಾಪದ ಬಣ್ಣನೆ ಬರುತ್ತದೆ—

ಗತಃ ಸ ಪರಮಂ ಲೋಕಂ ತವ ಪುತ್ರೋ ನ ಸಂಶಯಃ !
ವಸುರೇಷ ಮಹಾತೇಜಾಃ ಶಾಪದೋಷೇಣ ಶೋಭನೇ ॥ ೩೧ ॥

'ಎಲೈ ಶೋಭನೆಯೇ ! ನಿನ್ನ (ಪ್ರಿಯ) ಮಗನಿಗೆ ಉತ್ತಮ ಗತಿಯು ಪ್ರಾಪ್ತವಾಗಿದೆಯೆಂಬಲ್ಲಿ ಸಂದೇಹವಿಲ್ಲ. ಅವನು ಮಹಾತೇಜಸ್ವಿಯಾದ ವಸುವಾಗಿದ್ದನು. ಕೇವಲ ಶಾಪದೋಷದಿಂದಾಗಿಯೇ ಅವನಿಗೆ ಮಾನವಜನ್ಮ ಪ್ರಾಪ್ತವಾಗಿತ್ತು.'

ವಸುವಿಗೆ ಯಾರು, ಎಲ್ಲಿ, ಯಾವ ಕಾರಣಕ್ಕಾಗಿ ಶಾಪವನ್ನಿತ್ತರೆಂಬುದರ ಉಲ್ಲೇಖ ಇಲ್ಲಿಲ್ಲದಿದ್ದರೂ ಅದನ್ನಿತ್ತವನು ವಸಿಷ್ಠನೇ ಆಗಿರಲು ಸಾಕು. ಅಷ್ಟವಸುಗಳು ಅವನ ಕಾಮಧೇನುವನ್ನು ಕದ್ದಿದ್ದರು (ನೋಡಿ: ಶಾಪ-ವಸಿಷ್ಠ > ಅಷ್ಟವಸುಗಳು). ಗೋರಖಪುರದ ಪ್ರತಿಯ ಹಿಂದಿಯ ಅನುವಾದವು 'ವಸಿಷ್ಠಜೀ ಕೇ ಶಾಪದೋಷಸೇ ಇನ್ಹೇ ಮನುಷ್ಯಯೋನಿ ಮೇ ಆನಾ ಪಡಾ ಥಾ' ಎಂದಾಗಿದೆ.

## ೧೪೩. ಸಂವರ್ತ > ಮರುತ್ತ ಆಶ್ವಮೇಧಿಕ/೭

ತನಗೆ ರಾಜರ್ಷಿಯಾದ ಮರುತ್ತನ ಕಥೆಯನ್ನು ಕೇಳಬೇಕೆಂಬ ಆಸೆಯಾಗಿದೆಯೆಂದು ಯುಧಿಷ್ಠಿರನು ವ್ಯಾಸನೆದುರು ಹೇಳಿದನು. ಆಗ ಅವನು ಈ ಕಥೆಯನ್ನು ಹೇಳಿದನು—

ಮರುತ್ತನು ಇಂದ್ರನಂತೆಯೇ ಬಲು ಬಲಾಢ್ಯನಾದ ರಾಜನಾಗಿದ್ದನು. ಅವರಿಬ್ಬರಲ್ಲಿ ಯಾವಾಗಲೂ ಮೇಲಾಟವಿರುತ್ತಿತ್ತು. ಇಂದ್ರನದು ಮೇಲುಗೈಯಾಗುತ್ತಿರಲಿಲ್ಲ. ಇಂದ್ರನು ಬೃಹಸ್ಪತಿಯನ್ನು ತನ್ನ ಪುರೋಹಿತನನ್ನಾಗಿ ಮಾಡಿಕೊಂಡನು. ಮರ್ತ್ಯರಾದ ಮಾನವರ ಯಜ್ಞಗಳಲ್ಲಿ ಪಾಲ್ಗೊಳ್ಳದಿರುವಂತೆ ಅವನನ್ನು ಕೇಳಿಕೊಂಡನು. ಬೃಹಸ್ಪತಿ ಒಪ್ಪಿಕೊಂಡನು. ಒಂದು ಸಲ ಮರುತ್ತನು ಯಜ್ಞವನ್ನು ಹೂಡಿದನು. ಆದರೆ ಪೌರೋಹಿತ್ಯವನ್ನು ಸ್ವೀಕರಿಸುವಂತೆ ಬೃಹಸ್ಪತಿಯನ್ನು ಬೇಡಿಕೊಂಡನು. ಅವನು ಇಂದ್ರನಿಗಿತ್ತ ಮಾತಿನಂತೆ ಈತನ ಪೌರೋಹಿತ್ಯವನ್ನು ಒಪ್ಪಿಕೊಳ್ಳಲಿಲ್ಲ. ಅವನ ನಿರಾಕರಣೆಯಿಂದಾಗಿ

ಮರುತ್ತನಿಗೆ ಕೆಡಕೆನಿಸಿತು. ನಾರದ ಭೇಟ್ಟಿಯಾಗುತ್ತಲೇ ಮರುತ್ತನು ಅವನೆದುರು ತನ್ನ ಅಳಲನ್ನು ತೋಡಿಕೊಂಡನು. ಆಗ ನಾರದನು ಬೃಹಸ್ಪತಿಯ ತಮ್ಮನಾದ ಸಂವರ್ತನಿಗೆ ಪೌರೋಹಿತ್ಯವನ್ನು ಒಪ್ಪಿಸಲು ಸಲಹೆ ನೀಡಿದನು. ಅವನಿರುವುದು ಎಲ್ಲಿ ಎಂಬುದನ್ನೂ ಹೇಳಿದನು. ಆ ಪ್ರಕಾರವಾಗಿ ಮರುತ್ತನು ಅವನನ್ನು ಕಂಡುಹಿಡಿದು ಅವನಿಗೆ ಪೌರೋಹಿತ್ಯವನ್ನು ಒಪ್ಪಿಕೊಳ್ಳಲು ಕೇಳಿಕೊಂಡನು. ಮೊದಲಿಗೆ ಅವನೂ ಅದನ್ನು ನಿರಾಕರಿಸಿದನು. ಆಗ ಮರುತ್ತನು ಅವನಿಗೆ ಬೃಹಸ್ಪತಿಯು ನಿರಾಕರಿಸಿದ್ದೇಕೆ ?—ಎಂಬುದನ್ನು ವಿವರಿಸಿದನು. ಮತ್ತೆ ಅವನನ್ನು ಬೇಡಿಕೊಂಡನು.

ಆಗ ಸಂವರ್ತನು ಅವನ ಯಜ್ಞಕರ್ಮವನ್ನು ನೆರವೇರಿಸಲು ಶರತ್ತಿನೊಂದಿಗೆ ಒಪ್ಪಿಕೊಂಡನು.

ಸಂವರ್ತ ಉವಾಚ—

ಚಿಕೀರ್ಷಸಿ ಯಥಾ ಕಾಮಂ ಸರ್ವಮೇತತ್ ತ್ವಯಿ ಧ್ರುವಮ್ ।
ಯದಿ ಸರ್ವಾನಭಿಪ್ರಾಯಾನ್ ಕರ್ತಾಸಿ ಮಮ ಪಾರ್ಥಿವ ॥ ೧೯ ॥
ಯಾಜ್ಯಮಾನಂ ಮಯಾ ಹಿ ತ್ವಾಂ ಬೃಹಸ್ಪತಿಪುರಂದರೌ ।
ದ್ವಿಷೇತಾಂ ಸಮಭಿಕ್ರುದ್ಧಾವೇತದೇಕಂ ಸಮರ್ಥಯೇಃ ॥ ೨೦ ॥
ಸ್ಥೈರ್ಯಮತ್ರ ಕಥಂ ಮೇ ಸ್ಯಾತ್ ಸತ್ತ್ವಂ ನಿಃಸಂಶಯಂ ಕುರು ।
ಕುಪಿತಸ್ತ್ವಾಂ ನ ಹೀದಾನೀಂ ಭಸ್ಮ ಕುರ್ಯಾಂ ಸಬಾಂಧವಮ್ ॥ ೨೧ ॥

ಸಂವರ್ತನು ಹೀಗೆಂದನು : 'ಎಲೈ ನೃಪಶ್ರೇಷ್ಠನೇ ! ನೀನು ನನ್ನ ಮಾತಿನಂತೆ ನಡೆದುಕೊಂಡೆಯಾದರೆ ನಿನ್ನ ಮನದ ಬಯಕೆಗಳನ್ನು ಈಡೇರಿಸುವೆ. ನಾನು ನಿನ್ನ ಯಜ್ಞವನ್ನು ಕೈಕೊಂಡೆನಾದರೆ ಇಂದ್ರ ಮತ್ತು ಬೃಹಸ್ಪತಿಗಳು ನನ್ನ ಮೇಲೆ ಕೋಪಿಸಿಕೊಂಡು ನನ್ನನ್ನು ದ್ವೇಷಿಸಹತ್ತುವರು. ಆಗ ನೀನು ನನ್ನ ಬದಿಯನ್ನು ವಹಿಸಿ ನನಗೆ ಬೆಂಬಲ ನೀಡತಕ್ಕದ್ದು. ನಿನ್ನ ಸಹಕಾರ ನನಗೆ ಸಿಕ್ಕೀತೆಂದು ಹೇಗೆ ನಂಬಲಿ ? ನನ್ನ ಸಂದೇಹವನ್ನು ನೀನು ದೂರ ಮಾಡುವುದು ಆವಶ್ಯಕ. ಇಲ್ಲದಿದ್ದರೆ ನಾನು ನಿನ್ನನ್ನು ನಿನ್ನ ಬಂಧುಬಳಗದೊಂದಿಗೆ ಸುಟ್ಟುಹಾಕುವೆನು.'

ಸಂವರ್ತನ ಮಾತಿಗೆ ಮರುತ್ತನು ಮಾರುತ್ತರವಿತ್ತನು.

ಮರುತ್ತ ಉವಾಚ—

ಯಾವತ್ ತಪೇತ್ ಸಹಸ್ರಾಂಶುಸ್ತಿಷ್ಠೇರಂಶ್ಚಾಪಿ ಪರ್ವತಾಃ ।
ತಾವಲ್ಲೋಕಾನ್ನ ಲಭೇಯಂ ತ್ಯಜೇಯಂ ಸಂಗತಂ ಯದಿ ॥ ೨೨ ॥
ಮಾ ಚಾಪಿ ಶುಭಬುದ್ಧಿತ್ವಂ ಲಭೇಯಮಿಹ ಕರ್ಹಿಚಿತ್ ।
ವಿಷಯೈಃ ಸಂಗತಂ ಚಾಸ್ತು ತ್ಯಜೇಯಂ ಸಂಗತಂ ಯದಿ ॥ ೨೩ ॥

'ನಾನು ನಿನ್ನ ಜೊತೆಗಾರಿಕೆಯನ್ನು ತೊರೆದೆನಾದರೆ ಈ ಸೂರ್ಯ ಥಳಥಳಿಸುತ್ತಿರುವವರೆಗೂ, ಈ ಪರ್ವತಗಳು ಸ್ಥಿರವಾಗಿರುವವರೆಗೂ ನನಗೆ ಉತ್ತಮ ಲೋಕ ಪ್ರಾಪ್ತವಾಗಲಾರದು. ನಾನು ನಿನ್ನೊಡನೆ ಸಹಕರಿಸದೆ ಹೋದೆನಾದರೆ ಪ್ರಪಂಚದಲ್ಲಿ ನನಗೆ

ಎಂದಿಗೂ ಶುಭ ಬುದ್ಧಿ ಉಂಟಾಗದೆ ನನ್ನ ಬುದ್ಧಿಯು ಯಾವಾಗಲೂ ವಿಷಯ ಮಗ್ನವಾಗಿದ್ದೀತು.'

+ ಇದು ಶರತ್ತಿನ ಶಾಪ. ಪ್ರತ್ಯಕ್ಷವಾಗಿ ನೀಡಿದ್ದಲ್ಲ.

ಮರುತ್ತನ ಆಶ್ವಾಸನೆಯಲ್ಲಿ ಸತ್ಯಕ್ರಿಯೆಯ ಛಾಯೆಯಿದೆ.

## ೧೪೪. ಸಂವರ್ತ > ಅಗ್ನಿ ಆಶ್ವಮೇಧಿಕ/೯

ಮೊದಲ ಸಂದರ್ಭ : ನೋಡಿ : ಶಾಪ-ಸಂವರ್ತ > ಮರುತ್ತ.

ಮರುತ್ತನು ಸಂವರ್ತನ ನೆರವಿನಿಂದ ಭಗವಾನ್ ಶಂಕರನನ್ನು ಆರಾಧಿಸಿ ಅವನನ್ನು ಪ್ರಸನ್ನ ಗೊಳಿಸಿದನು. ವಿಪುಲವಾದ ದ್ರವ್ಯಪ್ರಾಪ್ತಿ ಆದಬಳಿಕ ಅವನು ಯಜ್ಞವನ್ನು ಆರಂಭಿಸಿ ದನು. ಅವನ ಯಜ್ಞದಿಂದಾಗಿ ಬೃಹಸ್ಪತಿಯು ಅಸ್ವಸ್ಥನಾದನು. ಅವನು ಹೇಗಾದರೂ ಮಾಡಿ ಯಜ್ಞವನ್ನು ಯಶಸ್ವಿಯಾಗದಂತೆ ಮಾಡಲು ಇಂದ್ರನಿಗೆ ಹೇಳಿದನು. ಇಂದ್ರನು ಅಗ್ನಿಯನ್ನು ಕರೆಕಳುಹಿಸಿ ಅವನಿಗೆ ಮರುತ್ತನ ಬಳಿಗೆ ಹೋಗಲು ಹೇಳಿದನು. ಅಗ್ನಿಯು ಮರುತ್ತನಿಗೆ, 'ಬೃಹಸ್ಪತಿಯು ನಿನ್ನ ಯಜ್ಞವನ್ನು ನೆರವೇರಿಸಲು ಬರುವವನಿದ್ದಾನೆ' ಎಂದು ಸಂದೇಶವನ್ನು ನೀಡಿದನು. ಮರುತ್ತನು ಇಂದ್ರನ ಸಂದೇಶವನ್ನು ತಳ್ಳಿಹಾಕಿದನು. ಅಗ್ನಿ ತೋರಿದ ಆಸೆಗೆ ಅವನು ಬಲಿಬೀಳಲಿಲ್ಲ. ಸಂವರ್ತನು ಅಗ್ನಿಗೆ ಹೀಗೆಂದನು—

ಮಾ ಸ್ಮೈವ ತಂ ಪುನರಗಾಃ ಕಥಂಚಿದ್ ಬೃಹಸ್ಪತಿಂ ಪರಿಪಾತುಂ ಮರುತ್ತೇ ।
ಮಾ ತ್ವಾಂ ಧಕ್ಷ್ಯೇ ಚಕ್ಷುಷಾ ದಾರುಣೇನ ಸಂಕ್ರುದ್ಧೋಽಹಂ
ಪಾವಕ ತ್ವಂ ನಿಬೋಧ ॥ ೧೯ ॥

'ಎಲೈ ಅಗ್ನಿಯೇ! ನಾನು ಹೇಳುವುದನ್ನು ಚೆನ್ನಾಗಿ ಗಮನವಿಟ್ಟು ಕೇಳು. ಇನ್ನು ಮುಂದೆ ಬೃಹಸ್ಪತಿಯನ್ನು ಮರುತ್ತನಲ್ಲಿಗೆ ಕರೆತರುವ ತಂಟೆಗೆ ಬರಬೇಡ. ಇಲ್ಲದಿದ್ದರೆ ನನ್ನ ಕಣ್ಣಿನೋಟಮಾತ್ರದಿಂದ ನೀನು ಸುಟ್ಟು ಬೂದಿಯಾಗುವೆ.'

ಅಗ್ನಿಯು ನಡೆದ ಸಂಗತಿಯನ್ನು ಇಂದ್ರನಿಗೆ ಹೇಳಿದನು. ಇಂದ್ರನು ಅವನಿಗೆ ಮರುತ್ತ ನಿಗಾಗಿ ಇನ್ನೊಂದು ಸಂದೇಶವನ್ನು ಒಯ್ಯಲು ಹೇಳಿದನು. ಅಗ್ನಿಯು ಅದನ್ನು ನಿರಾಕರಿಸಿ ಬಿಟ್ಟನು. ಅವನು ಹೀಗೆಂದನು—

ಗಂಧರ್ವರಾಡ್ ಯಾತ್ವಯಂ ತತ್ರ ದೂತೋ ಬಿಭೇಮ್ಯಹಂ
ವಾಸವ ತತ್ರ ಗಂತುಂ ।
ಸಂರಬ್ಧೋ ಮಾಮಬ್ರವೀತ್ ತೀಕ್ಷ್ಣರೋಷಃ ಸಂವರ್ತೋ
ವಾಕ್ಯಂ ಚರಿತಬ್ರಹ್ಮಚರ್ಯಃ ॥ ೨೫ ॥
ಯದ್ಯಾಗಚ್ಛೇಃ ಪುನರೇವಂ ಕಥಂಚಿದ್ ಬೃಹಸ್ಪತಿಂ ಪರಿದಾತುಂ ಮರುತ್ತೇ ।
ದಹೇಯಂ ತ್ವಾಂ ಚಕ್ಷುಷಾ ದಾರುಣೇನ ಸಂಕ್ರುದ್ಧ
ಇತ್ಯೇತದವೈಹಿ ಶಕ್ರ ॥ ೨೬ ॥

''ಎಲೈ ವಾಸವನೇ! (ಬೇಕಿದ್ದರೆ) ಈ ಗಂಧರ್ವನನ್ನು (ಮತ್ತೆ) ದೂತನನ್ನಾಗಿ ಕಳಿಸು. ನಾನು ಅಲ್ಲಿಗೆ ಹೋಗಲು ಹೆದರುತ್ತೇನೆ. ಸಂತಪ್ತನಾದ ಆ ಬ್ರಹ್ಮಚಾರಿ

ಸಂವರ್ತ (ಆ ನಲ) ನನಗೆ ಹೀಗೆಂದನು : 'ಎಲೈ ಪಾವಕನೇ ! ನೀನು ಬೃಹಸ್ಪತಿಯನ್ನು ಮರುತ್ತನ ಬಳಿಗೆ ಕರೆತಂದೆಯಾದರೆ ನಾನು ನನ್ನ ಕಿಡಿಗಣ್ಣಿನಿಂದ ನಿನ್ನನ್ನು ಸುಟ್ಟು ಬೂದಿಮಾಡುವೆ.' ಆದ್ದರಿಂದ ಎಲೈ ಇಂದ್ರನೇ, ಅವನ ಮಾತನ್ನು ನೀನು ಮನಗೊಟ್ಟು ಕೇಳು."

+ ಇದು ಶರತ್ತಿನ ಶಾಪ.

## ೧೪೫. ಉತ್ತಂಕ > ಶ್ರೀಕೃಷ್ಣ ಆಶ್ವಮೇಧಿಕ/೫೩

ವೈಶಂಪಾಯನ ಜನಮೇಜಯರಾಜನಿಗೆ ಶ್ರೀಕೃಷ್ಣ-ಉತ್ತಂಕ ಇವರ ಭೇಟಿಯ ವಾರ್ತೆಯನ್ನು ಹೇಳುತ್ತಲಿದ್ದಾನೆ.

ಶ್ರೀಕೃಷ್ಣನು ಪಾಂಡವರಿಂದ ಬೀಳ್ಕೊಂಡು ದ್ವಾರಕೆಯತ್ತ ಹೊರಟಿದ್ದನು. ದಾರಿಯಲ್ಲಿ ಮರುಗಾಡಿನಲ್ಲಿ ಅವನು ಮುನಿಶ್ರೇಷ್ಠನಾದ ಉತ್ತಂಕನ ದರ್ಶನವನ್ನು ಪಡೆದನು. ಅವನನ್ನು ಅಭಿವಂದಿಸಿ ಕುಶಲೋಪರಿಯನ್ನು ಕೇಳಿದನು. ಉತ್ತಂಕನೂ ಕೂಡ ಶ್ರೀಕೃಷ್ಣನನ್ನು ಸರಿಯಾದ ರೀತಿಯಲ್ಲಿ ಬರಮಾಡಿಕೊಂಡನು. ಕೌರವ-ಪಾಂಡವರ ಕುಶಲಕ್ಕಾಗಿ ಕೇಳಿದನು. ಶ್ರೀಕೃಷ್ಣ ನಡೆದುದನ್ನೆಲ್ಲ ಹೇಳಿದನು. ಅವನು ಕೌರವ-ಪಾಂಡವರಲ್ಲಿ ಸ್ನೇಹವನ್ನು ಹುಟ್ಟಿಸುವನೆಂದು ಆ ಮುನಿಯು ಬಗೆದಿದ್ದನು. ಆದರೆ ಕೌರವರ ಸಂಹಾರದ ಸಂಗತಿಯನ್ನು ಕೇಳಬೇಕಾಯಿತು. ಅದರಿಂದ ಅವನು ಬಲು ಕೆರಳಿದವನೇ ಹೀಗೆಂದನು—

ಯಸ್ಮಾಚ್ಛಕ್ತೇನ ತೇ ಕೃಷ್ಣ ನ ತ್ರಾತಾಃ ಕುರುಪುಂಗವಾಃ ।
ಸಂಬಂಧಿನಃ ಪ್ರಿಯಾಸ್ತಸ್ಮಾಚ್ಛಪ್ಸ್ಯೇಽಹಂ ತ್ವಾಮಸಂಶಯಮ್ ॥ ೨೦ ॥
ನ ಚ ತೇ ಪ್ರಸಭಂ ಯಸ್ಮಾತ್ ತೇ ನಿಗೃಹ್ಯ ನಿವಾರಿತಾಃ ।
ತಸ್ಮಾನ್ಮನ್ಯುಪರೀತಸ್ತ್ವಾಂ ಶಪ್ಸ್ಯಾಮಿ ಮಧುಸೂದನ ॥ ೨೧ ॥
ತ್ವಯಾ ಶಕ್ತೇನ ಹಿ ಸತಾ ಮಿಥ್ಯಾಚಾರೇಣ ಮಾಧವ ।
ತೇ ಪರೀತಾಃ ಕುರುಶ್ರೇಷ್ಠಾ ನಶ್ಯಂತಃ ಸ್ಮ ಹ್ಯುಪೇಕ್ಷಿತಾಃ ॥ ೨೨ ॥

'ಎಲೈ ಕೃಷ್ಣನೇ ! ಕೌರವರೂ (ಕೂಡ) ನಿನ್ನ ಬಳಗದವರೇ. ನಿನ್ನಿಂದ ಸಾಧ್ಯವಿರುವಾಗಲೂ ನೀನು ಅವರನ್ನು ಕಾಪಾಡಲಿಲ್ಲ. ಆದ್ದರಿಂದ ನಾನು ಖಂಡಿತವಾಗಿಯೂ ನಿನ್ನನ್ನು ಶಪಿಸಲಿರುವೆನು. ಎಲೈ ಮಧುಸೂದನನೇ ! ಹೊತ್ತು ಬಂದಿದ್ದರೆ, ಬಲಪ್ರಯೋಗದಿಂದಲಾದರೂ ಏಕಾಗಲೊಲ್ಲದು, ನೀನವರನ್ನು ಯುದ್ಧದಿಂದ ದೂರವಿರಿಸಬಲ್ಲವನಾಗಿದ್ದೆ. ಆದರೆ ನೀನು (ನಿನ್ನ ಕರ್ತವ್ಯವನ್ನು) ಮಾಡಲಿಲ್ಲ. ಹಾಗೆಂದೇ ನನಗೆ ನಿನ್ನ ಮೇಲೆ ಕೋಪ ಬಂದಿದೆ. ಅಂತೆಯೇ, ಎಲೈ ಮಾಧವನೇ ! ನಾನು ನಿನ್ನನ್ನು ಶಪಿಸಲಿರುವೆನು. ಮೈಯಲ್ಲಿ ಕಸುವಿದ್ದೂ ನೀನು ಕಪಟವನ್ನು ಮೊರೆಹೊಕ್ಕೆ. (ನಡೆದ) ಕುಲಶ್ರೇಷ್ಠರ ನಾಶವನ್ನು ಅಲಕ್ಷ್ಯಮಾಡಿದೆ. (ನಿನ್ನ ಈ ನಡತೆ) ತೀರ ದುಃಖದಾಯಕವಾದುದು.'

ಶ್ರೀಕೃಷ್ಣನು ಕೆರಳಿದ ಉತ್ತಂಕನಿಗೆ ಇದ್ದ ಸಂಗತಿಯನ್ನು ಅರ್ಥಮಾಡಿಕೊಳ್ಳುವಂತೆ ಬೇಡಿಕೊಂಡನು. ಅವನು ಹೀಗೆಂದನು—

ಶ್ರುತ್ವಾ ಚ ಮೇ ತದಧ್ಯಾತ್ಮಂ ಮುಂಚೇಥಾಃ ಶಾಪಮದ್ಯ ವೈ ।
ನ ಚ ಮಾಂ ತಪನಾಲ್ಪೇನ ಶಕ್ತೋsಭಿಭವಿತುಂ ಪುಮಾನ್ ॥ ೨೪ ॥
ನ ಚ ತೇ ತಪಸೋ ನಾಶಮಿಚ್ಛಾಮಿ ತಪತಾಂ ವರ ॥ ೨೫ ॥

'ನಾನು ನಿನಗೆ ಅಧ್ಯಾತ್ಮವನ್ನು ಹೇಳಲಿದ್ದೇನೆ. ಅದನ್ನು ಗಮನವಿಟ್ಟು ಆಲಿಸು. ಮತ್ತೆ (ನಿನಗೆ ಅಗತ್ಯ ಕಂಡುಬಂದರೆ) ಇಂದೇ (ಬೇಕಿದ್ದರೆ) ಶಾಪವನ್ನು ಕೊಡು. ಎಲೈ ತಪೋಧನನೇ ! ಕೊಂಚ ತಪಸ್ಸಿನಿಂದಾಗಿ ಯಾರೂ ನನ್ನನ್ನು ತಿರಸ್ಕರಿಸಲಾರರು. ಅಲ್ಲದೆ (ನನ್ನನ್ನು ಶಪಿಸಿ) ನಿನ್ನ ತಪಸ್ಸು ಹಾಳಾಗಲಾರದೆಂದು ನನಗೆ ಅನ್ನಿಸದು.'

ಶ್ರೀಕೃಷ್ಣನ ಮಾತು ಕೇಳಿ ಉತ್ತಂಕನೆಂದನು—

**ಆಶ್ವಮೇಧಿಕ/೫೪**

ಬ್ರೂಹಿ ಕೇಶವ ತತ್ತ್ವೇನ ತ್ವಮಧ್ಯಾತ್ಮಮನಿಂದಿತಮ್ ।
ಶ್ರುತ್ವಾ ಶ್ರೇಯೋsಭಿಧಾಸ್ಯಾಮಿ ಶಾಪಂ ವಾ ತೇ ಜನಾರ್ದನ ॥ ೧ ॥

'ಎಲೈ ಕೇಶವನೇ ! ನೀನು ಅಧ್ಯಾತ್ಮವನ್ನು ಕುರಿತು ಯಥಾರ್ಥವಾಗಿ (ಹೇಳ ಬಯಸಿರುವುದನ್ನು) ಹೇಳು. ಅದನ್ನು ಕೇಳಿದ ತರುವಾಯವೇ ನಿನ್ನನ್ನು ಹರಸುವುದೋ ಇಲ್ಲವೇ ಶಪಿಸುವುದೋ ಎಂಬುದನ್ನು ನಿರ್ಧರಿಸುವೆನು.'

**ಆಶ್ವಮೇಧಿಕ/೫೫**

ಉತ್ತಂಕನು ಶ್ರೀಕೃಷ್ಣನ ಅಧ್ಯಾತ್ಮನಿವೇದನೆಯನ್ನು ಆಲಿಸಿ ಹೀಗೆಂದನು—

ಚಿತ್ತಂ ಚ ಸುಪ್ರಸನ್ನಂ ಮೇ ತದ್ಭಾವಗತಮಚ್ಯುತ ।
ವಿನಿವೃತ್ತಂ ಚ ಮೇ ಶಾಪಾದಿತಿ ವಿದ್ಧಿ ಪರಂತಪ ॥ ೨ ॥

'ಎಲೈ ಅಚ್ಯುತನೇ ! ನಾನೀಗ ಪ್ರಸನ್ನಚಿತ್ತನಾದೆನು. ನಿನ್ನ ಬಗೆಗಿನ ನನ್ನ ಭಕ್ತಿ ತುಂಬಿಬಂದಿದೆ. ಹೀಗಾಗಿ ನಿನ್ನನ್ನು ಶಪಿಸುವ ಯೋಚನೆಯನ್ನು ಕೈಬಿಟ್ಟೆ.'

ಬರಿ ಒಂದು ಉಲ್ಲೇಖವಷ್ಟೆ.

**ಅಶ್ವಮೇಧಿಕ/೫೬**

ಉತ್ತಂಕಃ ಕೇನ ತಪಸಾ ಸಂಯುಕ್ತೋ ವೈ ಮಹಾಮುನಾಃ ।
ಯಃ ಶಾಪಂ ದಾತುಕಾಮೋsಭೂದ್ ವಿಷ್ಣವೇ ಪ್ರಭವಿಷ್ಣವೇ ॥ ೧ ॥

(ಜನಮೇಜಯನು ವೈಶಂಪಾಯನನಿಗೆ ಅಂದನು—ಗುರುವರ್ಯರೇ !) ಶ್ರೀಕೃಷ್ಣ (ಸಂಭವ)ನಿಗೆ ಶಾಪವನ್ನೀಯುವಂತಹ ಅದಾವ ದೊಡ್ಡ ತಪಸ್ಸನ್ನು ಆ ಮಹಾ ಮುನಿಯು ಕೈಕೊಂಡಿದ್ದನು ? ಶ್ರೀಕೃಷ್ಣನನ್ನೇ ಶಪಿಸಲು ಉದ್ಯುಕ್ತನಾಗಬೇಕೆಂದರೆ ?

+ ಇದು ನೀಡಲಾಗದ ಶಾಪ. ಉತ್ತಂಕನು ಶಾಪವನ್ನಿತ್ತಿಲ್ಲ. ಅರೆಬರೆ ಮಾಹಿತಿಯನ್ನು ಆಧರಿಸಿ ಅವನು ಶಾಪವನ್ನೀಯುವವನಿದ್ದನು. ವಾಸ್ತವತೆಯನ್ನು ಅರಿತ ಬಳಿಕ ತನ್ನ ಯೋಚನೆಯನ್ನು ಕೈಬಿಟ್ಟನು.

## ೧೪೬. ವಸು > ಅರ್ಜುನ ಅಶ್ವಮೇಧಿಕ/೮೧

ವೈಶಂಪಾಯನ ಜನಮೇಜಯರಾಜನಿಗೆ ಯುಧಿಷ್ಠಿರನ ಅಶ್ವಮೇಧಯಜ್ಞ, ಅರ್ಜುನನ ಅಶ್ವರಕ್ಷಣೆ ಹಾಗೂ ಅದಕ್ಕಾಗಿ ಹಲವು ಜನ ರಾಜರುಗಳೊಂದಿಗೆ ಕಾಳಗ, ಬಭ್ರುವಾಹನ ನೊಂದಿಗೆ ಯುದ್ಧ ಮೊದಲಾದ ಸಂಗತಿಗಳ ಬಗೆಗೆ ಹೇಳುತ್ತಲಿದ್ದಾನೆ.

ಉಲೂಪಿಯು ಹುರಿದುಂಬಿಸಿದಳೆಂದೇ ಬಭ್ರುವಾಹನನು ಅರ್ಜುನನೊಂದಿಗೆ ಹೋರಾಡಿದನು. ಇಬ್ಬರಿಗೂ ಮರ್ಮಸ್ಥಾನಗಳಲ್ಲಿ ಬಾಣದ ಪೆಟ್ಟು ತಗಲಿದ್ದರಿಂದ ಗಾಯಾಳುಗಳಾಗಿ ಎಚ್ಚರದಪ್ಪಿ ಬಿದ್ದರು. ಅವರು ಅಸುನೀಗಿದರೆಂದು ಅರಿತು ಚಿತ್ರಾಂಗದೆ ಬಲು ದುಃಖಿತಳಾದಳು. ಅವಳು ರಣಾಂಗಣಕ್ಕೆ ಬರುತ್ತಲೇ ಒಂದೆಡೆ ಉಲೂಪಿ ಕಂಡು ಬಂದಳು. ಚಿತ್ರಾಂಗದೆಯು ಅರ್ಜುನನನ್ನು ಜೀವಂತಗೊಳಿಸೆಂದು ಉಲೂಪಿಯನ್ನು ಪರಿಪರಿಯಾಗಿ ಕೇಳಿಕೊಂಡಳು. ಸಾವು ಬರುವವರೆಗೂ ತಾನು ಉಪವಾಸವನ್ನು ಮಾಡು ವುದಾಗಿ ನಿರ್ಧರಿಸಿದಳು. ತುಸು ಹೊತ್ತಿನ ತರುವಾಯ ಬಭ್ರುವಾಹನ ಎಚ್ಚರಗೊಂಡನು. ಅರ್ಜುನ ತನ್ನ ತಂದೆಯೆಂಬುದು ತಿಳಿದು ಬರುತ್ತಲೇ ಬಹಳ ದುಃಖಿತನಾದನು. ಉಲೂಪಿಯು ಅವನಿಗೆ ಒಂದು ಮಣಿಯನ್ನು ಕೊಟ್ಟು, ಅದನ್ನು ಅರ್ಜುನನ ಎದೆಯ ಮೇಲಿಡುವಂತೆ ಹೇಳಿದಳು. ಅವನು ಹಾಗೆ ಮಾಡುತ್ತಲೇ ಅರ್ಜುನ ನಿದ್ರೆತಿಳಿದೆದ್ದವ ನಂತೆ ಎಚ್ಚರಗೊಂಡನು. ರಣಾಂಗಣದಲ್ಲಿ ಹೆಣ್ಣುಗಳನ್ನು ಕಂಡು ಬೆರಗಾದನು. ಇದೆಲ್ಲ ಏನೆಂದು ಉಲೂಪಿಯನ್ನು ಕೇಳಿದನು. ಅಲ್ಲದೆ ಚಿತ್ರಾಂಗದೆಯಾಗಲಿ, ಬಭ್ರುವಾಹನ ನಾಗಲಿ ಅವಳಿಗೆ ಏನಾದರೂ ಅನ್ಯಾಯವನ್ನು ಬಗೆಯಲಿಲ್ಲ ತಾನೆ ?—ಎಂದು ಸಂದೇಹ ವನ್ನೂ ವ್ಯಕ್ತಪಡಿಸಿದನು.

ಉಲೂಪಿಯು 'ನಿಮ್ಮಾರ ತಪ್ಪೂ ಇಲ್ಲ. ನಾನೇ ಅಪರಾಧಿ' ಎಂದು ನುಡಿದು ಅವಳು ಅರ್ಜುನನ ಕಾಲಿಗೆ ಬಿದ್ದಳು. ಕ್ಷಮೆ ಕೋರಿದಳು. ಅರ್ಜುನನು ಶಿಖಂಡಿಯ ಬೆನ್ನ ಹಿಂದೆ ಅಡಗಿಕೊಂಡು ಭೀಷ್ಮನ ಮೇಲೆ ಬಾಣವನ್ನೆಸೆದ ಕಾರಣ ಅಧರ್ಮ ನಡೆಯಿತು. ಅದರ ಪ್ರಾಯಶ್ಚಿತ್ತ ಆದುದು ಅರ್ಜುನನು ಮಗ ಬಭ್ರುವಾಹನನೊಂದಿಗೆ ಕಾಳಗದಲ್ಲಿ ಸೋತದ್ದರಿಂದ. ಇಲ್ಲದಿದ್ದರೆ ಅರ್ಜುನನಿಗೆ ನರಕವಾಸ ತಪ್ಪಿರಲಿಲ್ಲ. ಅದನ್ನು ತಪ್ಪಿಸ ಲೆಂದೇ ಉಲೂಪಿಯು ಇದೆಲ್ಲವನ್ನು ಹೂಡಿದ್ದಳು.

ಒಂದು ಸಲ ಉಲೂಪಿಯು ಗಂಗೆಯ ದಡಕ್ಕೆ ಹೋಗಿದ್ದಳು. ಅಲ್ಲಿ ವಸು ಎಂಬ ದೇವತೆಗಳು ಮಾತನಾಡಿಕೊಳ್ಳುತ್ತಿದ್ದರು. ಭೀಷ್ಮನು ಅರ್ಜುನನೊಂದಿಗೆ ಯುದ್ಧವನ್ನು ಮಾಡಿರದಿದ್ದಾಗಲೂ ಅರ್ಜುನ ಅವನನ್ನು (ಅಧರ್ಮದಿಂದ) ಕೊಂದನೆಂಬ ಸಂಗತಿ ಅವರಿಗೆ ಹಿಡಿಸಿರಲಿಲ್ಲ. ಅವರು ಹೀಗೆಂದರು—

> ತದನೇನಾನುಷಂಗೇಣ ವಯಮದ್ಯ ಧನಂಜಯಮ್ ॥ ೧೪ ॥
> ಶಾಪೇನ ಯೋಜಯಾಮೇತಿ ತಥಾಸ್ತ್ವಿತಿ ಚ ಸಾಽಬ್ರವೀತ್ ॥ ೧೫ ॥

'ಈ ಅಪರಾಧಕ್ಕಾಗಿ ನಾವು ಅರ್ಜುನನಿಗೆ ಶಾಪವನ್ನೀಯಬಯಸುತ್ತೇವೆ.' ಈ ಮಾತನ್ನು ಕೇಳಿ ಗಂಗೆ, 'ಹೀಗಾಗುವುದೇ ಸರಿ' ಎಂದಳು.

ಉಲೂಪಿಯು ಈ ಮಾತುಗಳನ್ನು ಕೇಳಿದ್ದಳು. ಇದರಿಂದಾಗಿ ಅವಳು, ಅವಳ ತಂದೆ ನಾಗರಾಜ ಬಲುದುಃಖಿತರಾಗಿದ್ದರು. ಅವರು ವಸುಗಳನ್ನು ಸಂತುಷ್ಟಪಡಿಸಲು ಯತ್ನಿಸಿದರು. ಅವನ ಮಾತು ಕೇಳಿ ವಸುಗಳೆಂದರು—

ಪುತ್ರಸ್ತಸ್ಯ ಮಹಾಭಾಗ ಮಣಿಪೂರೇಶ್ವರೋ ಯುವಾ ॥ ೧೭ ॥
ಸ ಏನಂ ರಣಮಧ್ಯಸ್ಥಃ ಶರೈಃ ಪಾತಯಿತಾ ಭುವಿ ।
ಏವಂ ಕೃತೇ ಸ ನಾಗೇಂದ್ರ ಮುಕ್ತಶಾಪೋ ಭವಿಷ್ಯತಿ ॥ ೧೮ ॥
ತಚ್ಛ್ರುತ್ವಾ ತ್ವಂ ಮಯಾ ತಸ್ಮಾಚ್ಛಾಪಾದಸಿ ವಿಮೋಕ್ಷಿತಃ ॥ ೧೯ ॥

'ಎಲೈ ಮಹಾರಾಯ ನಾಗೇಂದ್ರನೇ! ಮಣಿಪೂರದ ಯುವಕ ದೊರೆಯಾದ ಬಭ್ರುವಾಹನನು ಅರ್ಜುನನ ಮಗನು. ಅವನ ಕೈಯಿಂದ ಅರ್ಜುನನ ಮೇಲೆ ಬಾಣಗಳ ಮಳೆಗರೆದು ಅರ್ಜುನ ರಣಭೂಮಿಯ ಮೇಲೆ ಬಿದ್ದಾಗಲೇ ಅವನಿಗೆ ಶಾಪದಿಂದ ಬಿಡುಗಡೆ ದೊರೆಕಲಿದೆ.'

ನನ್ನ ತಂದೆಯಿಂದ ಈ ವಾರ್ತೆಯನ್ನು ಕೇಳಿ ನಾನು ನಿನ್ನನ್ನು (ಈ ರೀತಿಯಾಗಿ) ಶಾಪಮುಕ್ತನನ್ನಾಗಿ ಮಾಡಿದೆನು.

ವಸುಗಳು ಅರ್ಜುನನಿಗೆ ಶಾಪವನ್ನೀಯಬೇಕು ಎಂದುಕೊಂಡಿದ್ದರಾದರೂ ಅದನ್ನಿತ್ತುದು ಖಚಿತಗೊಂಡಿಲ್ಲ. ಉಲೂಪಿಯು ವಿವರಣೆಯು ತರುವಾಯವೇ ಶಾಪದ ಸ್ವರೂಪದ ಮೇಲೆ ಬೆಳಕು ಬೀಳುತ್ತದೆ. ಅರ್ಜುನನ ಶಾಪಮುಕ್ತಿ ಆಯಿತೆಂದರೆ ಅವನಿಗೆ ಶಾಪ ಸಿಕ್ಕಿದುದು ನಿಜ. ಗಂಗೆ ಶಾಪವನ್ನೀಯಲು ತನ್ನ ಒಪ್ಪಿಗೆಯನ್ನಿತ್ತುದೂ ನಿಜ. ಭೀಷ್ಮ ಹಾಗೂ ವಸುಗಳು ಗಂಗೆಯ ಮಕ್ಕಳಾದುದರಿಂದ ಅವಳ ಒಪ್ಪಿಗೆ ಮುಖ್ಯ. ಅರ್ಜುನನಿಗೆ ಶಾಪವಿದ್ದು ಅದರಿಂದ ಬಿಡುಗಡೆಯನ್ನು ಕೇಳುವವನು ಮಾತ್ರ ನಾಗರಾಜ.

ಈ ಶಾಪಮುಕ್ತಿಯು ಯಾಚಿತ ಉಃಶಾಪದಂತಿದೆ.

## ೧೪೭. ಜಮದಗ್ನಿಯ ಪಿತೃಗಳು > ಕ್ರೋಧ (ಧರ್ಮ)

**ಆಶ್ವಮೇಧಿಕ/೯೨**

ಜನಮೇಜಯರಾಜನ ಕೋರಿಕೆಯ ಮೇರೆಗೆ ವೈಶಂಪಾಯನನು ಅವನಿಗೆ ಅಗಸ್ತ್ಯನ ಯಜ್ಞ ಹಾಗೂ ನಕುಲನ ಹುಟ್ಟಿನ ಕಥೆಯನ್ನು ಹೇಳಿದನು.

ಒಂದು ಸಲ ಜಮದಗ್ನಿಯು ತನ್ನ ಪಿತೃಗಳ ಶ್ರಾದ್ಧವನ್ನು ಮಾಡುವವನಿದ್ದನು. ತನ್ನ ಹೋಮಧೇನುವನ್ನು ಹಿಂಡಿ ಹಾಲನ್ನು ಶುದ್ಧಗೊಳಿಸಿ ಒಂದು ಪಕ್ಕಕ್ಕೆ ಸರಿಯಾಗಿ ಇರಿಸಿದ್ದನು. ಅವನನ್ನು ಪರೀಕ್ಷಿಸಲೆಂದು ಧರ್ಮವು ಕ್ರೋಧದ ರೂಪಧರಿಸಿ ಮನೆಯನ್ನು ಹೊಕ್ಕು ಆ ಹಾಲನ್ನು ದೂಷಿತಗೊಳಿಸಿತು. ಜಮದಗ್ನಿಯು ಇದೆಲ್ಲವನ್ನು ಕಂಡು ಕೂಡ ತುಂಬ ಶಾಂತನಾಗಿಯೇ ಇದ್ದನು, ಕ್ರೋಧಕ್ಕೆ ಬಲು ಅಚ್ಚರಿಯೆನ್ನಿಸಿತು. ಹಾಲು ದೂಷಿತವಾಗುತ್ತಲೇ ಜಮದಗ್ನಿ ಸಿಟ್ಟಿಗೇಳುವನೆಂದು ಅದು ಬಗೆದಿತ್ತು. ಅದು ಬ್ರಾಹ್ಮಣನ ರೂಪವನ್ನು ಹೊತ್ತು ಜಮದಗ್ನಿಯನ್ನು ಭೆಟ್ಟಿಯಾಗಿ ಹೀಗೆಂದಿತು : 'ನೀನು ಪಿತೃಗಳಿಗೆಂದು ಕಾದಿರಿಸಿದ ಹಾಲನ್ನು ನಾನು ದೂಷಿತಗೊಳಿಸಿಯೂ ನೀನು ಇಷ್ಟೊಂದು

ಶಾಂತನಾಗಿರುವುದು ಹೇಗೆ? ನಿನಗೆ ಸಿಟ್ಟು ಬರದಿರಲು ಕಾರಣವೇನು?' ಜಮದಗ್ನಿ ಹೀಗೆಂದು ಉತ್ತರಿಸಿದನು 'ಆ ಹಾಲು ಪಿತೃಗಳಿಗಾಗಿ ಇತ್ತು ಅವರನ್ನೇ ಕೇಳು'

ಇತ್ಯುಕ್ತೋ ಜಾತಸಂತ್ರಾಸಸ್ತತ್ರೈವಾಂತರಧೀಯತ ।
ಪಿತೃಣಾಮಭಿಷಂಗಾಚ್ಚ ನಕುಲತ್ವಮುಪಾಗತಃ ॥ ೪೯ ॥
ಸ ತಾನ್ ಪ್ರಸಾದಯಾಮಾಸಂ ಶಾಪಸ್ಯಾಂತೋ ಭವೇದಿತಿ ।
ತೈಶ್ಚಾಪ್ಯುಕ್ತಃ ಕ್ಷಿಪನ್ ಧರ್ಮಂ ಶಾಪಸ್ಯಾಂತಮವಾಪ್ಸ್ಯಸಿ ॥ ೫೦ ॥

ಜಮದಗ್ನಿಯ ಈ ಮಾತನ್ನು ಕೇಳಿ ಕ್ರೋಧವು ಹೆದರಿಕೊಂಡಿತು ಪಿತೃಗಳ ಶಾಪದಿಂದಾಗಿ ಅದಕ್ಕೆ ಮುಂಗಲಿಯ ಹುಟ್ಟು ಬಂದಿತು ಹೀಗಾಗಿ ಅದು ಶಾಪಮುಕ್ತಿಗೆಂದು (ಜಮದಗ್ನಿಯ) ಪಿತೃಗಳನ್ನು ಪ್ರಸನ್ನಗೊಳಿಸಿತು 'ಶಾಪಮುಕ್ತಿ ಬೇಕಿದ್ದರೆ ನೀನು ಯುಧಿಷ್ಠಿರನ ಮೇಲೆ ತಪ್ಪುಹೊರಿಸು' ಎಂದರು

ಉಂಛವೃತ್ತಿಯಿಂದ ಜೀವಿಸುವ ಒಬ್ಬ ಬ್ರಾಹ್ಮಣನು ಒಂದು ಸೇರು ಜವೆಗೋದಿಯನ್ನು ದಾನವಾಗಿ ಕೊಟ್ಟರೆ ನಿನ್ನ ಈ ಅಶ್ವಮೇಧಯಜ್ಞಕಿಂತಲೂ ಹೆಚ್ಚು ಶ್ರೇಷ್ಠವಾದುದು —ಎಂದು ಯುಧಿಷ್ಠಿರನಿಗೆ ಹೇಳಿ ಆ ಮುಂಗಲಿಯು ತನ್ನ ಶಾಪದಿಂದ ಬಿಡುಗಡೆ ಹೊಂದಿತು

+ ಮುಂಗಲಿಯು ಶಾಪಮುಕ್ತಿಯ ಉಪಾಯಕ್ಕಾಗಿ ಕೇಳಿದ್ದರಿಂದ ಇದು ಯಾಚಿತ ಉಃಶಾಪ

# ತಪ್ಪು—ಸರಿ*

| ಪುಟ | ಸಾಲು | ತಪ್ಪು | ಸರಿ |
|---|---|---|---|
| 18 | 8 | 'ಭಾರತ'ದ ಒಲೆ | 'ಭಾರತ'ದ ಬದಿ |
| 18 | 14 | ಜನಮೇಜಯ ಮಹರ್ಷಿಗೆ | ಜನಮೇಜಯನಿಗೆ |
| 24 | 14 | ಅದು | ಅವನು |
| 40 | 29 | ಘತಗಳ್ಳಿಯ | ಘಡಗಳ್ಳಿಯ |
| 42 | 4 | ಅರುಣೆಯ | ಅರುಣನ |
| 42 | 15 | ಪೌಪ್ಯ | ಪೌಷ್ಯ |
| 45 | 17-19 | ತನ್ನ ತಾಯಿಯ ಅವಸರದ ಸ್ವಭಾವ ಹಾಗೂ ತನ್ನಲ್ಲಿಯ ಈರ್ಷೆಯಿಂದಾಗಿ ಅರುಣನು ಮಾಗದ ತತ್ತಿಗಳನ್ನು ಒಡೆದುಹಾಕಿದ ಕಾರಣ ಅವನು... | ತನ್ನ ತಾಯಿಯು ಅವಸರದ ಸ್ವಭಾವ ಹಾಗೂ ತನ್ನಲ್ಲಿಯ ಈರ್ಷೆಯಿಂದಾಗಿ ಮಾಗದ ತತ್ತಿಗಳನ್ನು ಒಡೆದುಹಾಕಿದ ಕಾರಣ ಅರುಣನು .. |
| 54 | 1 | ಮಗನು ತಂದೆಯ... | ತಂದೆಯು ಮಗನ... |
| 54 | 7 | (ಈ ಸಾಲಿನ 'ತಂದೆಯ ಸಾವಿನ ಗುಟ್ಟನ್ನು...' ವಾಕ್ಯದಿಂದ ಹೊಸ ಪ್ಯಾರಾ ಪ್ರಾರಂಭವಾಗಬೇಕು.) | |
| 58 | ಕಡೆಯ ನಾಲು | ತೀರಿಸಿದ್ದರಿಂದ | ಪೀಡಿಸಿದ್ದರಿಂದ |
| 65 | 13 | ಅವರ ಬಾಯಲ್ಲಿ | ಅವಳ ಬಾಯಲ್ಲಿ |
| 67 | 29 | ಸರ್ವಾನಾಖ್ಯಾನ ಪಶ್ಯಮಾನ್ ॥ | ಸರ್ವಾನಾಖ್ಯಾನ ಪಂಚಮಾನ್ ॥ |
| 67 | 30 | ಯಜ್ಞೀ ಧರ್ಮತಃ । | ಯಜ್ಞೇಷು ಧರ್ಮತಃ । |
| 69 | 3 | ಸುಷೇಪ | ಸುಷೇಣ |
| 75 | 6 | ದೇಷದ | ದೇಹದ |
| 87 | 17 | ಸೂರ್ದು | ಸೂರ್ಯ |
| 95 | 22-23 | ಕಾಮರಮಸ್ಯಾಹಮನ ವಾಪ್ತಕಾರಸೋ | ಕಾಮರಸಸ್ಯಾಹಮನ ವಾಪ್ತಕಾಮರಸೋ |
| 96 | 3 | ಸತಃ | ಶತಃ |
| 102 | 31 | ರಾಜನ್ನದೃಶ್ಯತೇ | ರಾಜನ್ನ ದೃಶ್ಯಚ |
| 104 | 6, 16 | ಮೌಲಸ/೭, ಮೌಲಸ/೮ | ಮೌಸಲ/೭, ಮೌಸಲ/೮ |
| 107 | 6 | ಅಲ್ದೇಽಪರಾಧೇಽಪಿ | ಅಲ್ಪೇಽಪರಾಧೇಪಿ |
| 109 | 12 | ಚೈವ ಹಿ । | ಚೈವ ಹ । |
| 110 | 23 | ನೀತಿಯಿಂದಲೂ | ರೀತಿಯಿಂದಲೂ |

*ಈ ಗ್ರಂಥದ ಮುದ್ರಣ-ಕರಡುಗಳನ್ನು ತಿದ್ದುವಲ್ಲಿ ಕಣ್ತಪ್ಪಿನಿಂದ ಉಳಿದುಹೋಗಿರುವ ಮುದ್ರಣ-ದೋಷಗಳಿಗಾಗಿ ವಿಷಾದಿಸುತ್ತೇವೆ ಈ ತಪ್ಪುಗಳಲ್ಲಿ ಪ್ರಮುಖವಾದವನ್ನು ಇಲ್ಲಿ ಪಟ್ಟಿ ಮಾಡಲಾಗಿದ್ದು, ಸಹೃದಯ ಓದುಗರು ಇವುಗಳನ್ನು ತಿದ್ದಿಕೊಂಡು ಗ್ರಂಥದ ಅಧ್ಯಯನ ಮಾಡಬೇಕೆಂದು ಮನವಿ.

—ಪ್ರಕಾಶಕರು

| ಪುಟ | ಸಾಲು | ತಪ್ಪು | ಸರಿ |
|---|---|---|---|
| 110 | 25 | ಶಪ್ಸ್ಯತೇ ರುಷಾ ॥ | ಶಪ್ಸ್ಯತೇ ರುಂಷಾ ॥ |
| 110 | 28-29 | ಮೈತ್ರೇಯಿಃಯನ್ನು .. ಮೈತ್ರೇಯಿಯು | ಮೈತ್ರೇಯನನ್ನು ಮೈತ್ರೇಯನು |
| 110 | ಕಡೇ ಸಾಲು | ಮೈತ್ರೇಯಿ | ಮೈತ್ರೇಯನು |
| 112 | | (ಪುಟದ ಕಡೆಯ ಮೂರು ಸಾಲುಗಳನ್ನು ಬಿಟ್ಟು ಓದುವುದು.) | |
| 120 | 30 | ಸಹಸ್ರಪಾತ್ | ಸಹಸ್ರಪಾತ |
| 121 | 20 | ರುರೂರ್ನಾಮ | ರುರುರ್ನಾಮ |
| 122 | 23 | ಧೀಮಂತಃ | ಧೀಮಂತಃ |
| 123 | 15 | ಸಿಃಸ್ನೇಹಾ...ಅಸಂಪ್ರಾಪ್ತ... | ನಿಃಸ್ನೇಹಾ...ಅಸಂಪ್ರಾಪ್ತ... |
| 138 | 4 | ಬಸಿನಾದಳು. | ಬಸಿರಾದಳು. |
| 138 | 32 | ಶಂತನೋಃ | ಶಾಂತನೋಃ |
| 139 | 17 | ಅಲ್ಪೇಽಪರಾಧೇ | ಅಲ್ಪೇಽಪರಾಧೇ |
| 142 | 6 | ಸರ್ವಕರ್ಮಣಾ ॥ | ಸ್ವಕರ್ಮಣಾ ॥ |
| 142 | 20 | ಭಾರತಿ ॥ | ಭಾರತ ॥ |
| 144 | 28 | ವರ್ಹಗಳು | ವರ್ಷಗಳು |
| 146 | 29 | ಸಂಜೀರಿನೀವಿದ್ಯೆಯನ್ನು | ಸಂಜೀವಿನೀ ವಿದ್ಯೆಯನ್ನು |
| 147 | 5 | ಕಶ್ಮಿನ್ಮೋಹಾತ್ | ಕಶ್ಚಿನ್ಮೋಹಾತ್ |
| 149 | 30 | ಏನೆಂಬುದನ್ನು | ಏನೆಂದನೆಂಬುದನ್ನು |
| 150 | 3 | ಪಿತಾ | ಪಿತಾ |
| 150 | 19 | ಪ್ರತಿಲೋಮಚರೇಪು ಚ । | ಪ್ರತಿಲೋಮಚರೇಷು ಚ । |
| 150 | 20 | ಈ ಒಂದು ಸಾಲಿಗೆ ಬದಲಾಗಿ ಎರಡು ಸಾಲುಗಳು ಹೀಗೆ ಬರಬೇಕು | ಪಿಶಿತಾಶಿಷು ಚಾಂತ್ಯೇಷು ಮೂಢ ರಾಜಾ ಭವಿಷ್ಯಸಿ ॥ ೧೪ ॥ ಗುರುದಾನ ಪ್ರಸಕ್ತೇಷು ತಿರ್ಯಗ್ಯೋನಿಗತೇಷು ಚ । |
| 157 | 12 | ಕಲ್ಮಾಜಪಾದ | ಕಲ್ಮಾಷಪಾದ |
| 158 | 22 | ಪಾರಯಾಪೂಸ | ಪಾರಯಾಮಾಸ |
| 159 | 11 | ವ್ರಣಯಕೇಳಿಯಲ್ಲಿ | ಪ್ರಣಯಕೇಳಿಯಲ್ಲಿ |
| 160 | 4 | ಶಭಾ | ಶುಭಾ |
| 162 | 3 | ನಂಕ್ರುದ್ಧೋ | ನಂಕೃದ್ಧೋ |
| 162 | 27 | ಮಾನವರ್ಚಿತಃ | ಮಾನವರ್ಜಿತಃ |
| 169 | 2 | ದುಃಖತಯಾ | ದುಃಖಿತಯಾ |
| 181 | 29 | ವಹತ್ | ವಹನ್ |
| 181 | 31 | ವಿಮಾನಾಗ್ರ್ಯಾನ್ | ವಿಮಾನಾಗ್ರ್ಯಾತ್ |
| 196 | 26 | ಮಂತುಮದಾತ್ | ಮಂತ್ರಮದಾತ್ |
| 199 | 25 | ಅಭಿಶಾಪಾಚ್ಚ | ಅಭಿಶಾಪಾಚ್ಚ |
| 201 | 26 | ಪೌರಾಣಸ್ಯ | ಪೌರಾಣಸ್ಯ |
| 203 | 18 | ಜಿಹ್ಮಾಂ ಚರಸಿ ಭಾಮಿನೀ । | ಜಿಹ್ಮಂ ಚರಸಿ ಭಾವಿನೀ । |
| 207 | 18 | ನರ್ವಾನನುಜ್ಞಾಸ್ತ್ವಯಾ | ಸರ್ವಾನನುಜ್ಞಾತಸ್ತ್ವಯಾ |
| 208 | 3 | ಶನತ್ತನ್ನು | ಶರತ್ತನ್ನು |
| 209 | 1 | ಕೃಚನಿಶ್ಚಯಃ । | ತೃಚನಿಶ್ಚಯಃ । |

| ಪುಟ | ಸಾಲು | ತಪ್ಪು | ಸರಿ |
|---|---|---|---|
| 216 | 12 | ಫಲು | ಫಲಂ |
| 222 | 29 | ಶಪೇದ್ದಿ | ಶಪೇದ್ಧಿ |
| 227 | 21 | ವಾಸುದೇವ | ವಸುದೇವ |
| 232 | 9 | ॥ ೨೨ ॥—(ಶ್ಲೋಕದ ಈ ಸಂಖ್ಯೆಯನ್ನು ತೆಗೆದುಹಾಕಿ, ಮುಂದಿನ ಈ ಸಾಲನ್ನು ಸೇರಿಸಿಕೊಳ್ಳಬೇಕು : ತಸ್ಮಾತ್ ಸ್ವಯೋನಿಮಾಪನ್ನಃ ಶ್ವೈವ ತ್ವಂ ಹಿ ಭವಿಷ್ಯಸಿ ॥ ೨೨ ॥ | |
| 235 | 1 | ವುರಾತನವ್ | ಪುರಾತನಮ್ |
| 237 | 18 | ಯಸ್ಮಾದ್ | ಯಸ್ಮಾತ್ |
| 239 | | 13ನೆಯ ಸಾಲಿನ ನಂತರ ಈ ಕೆಳಗಿನದನ್ನು ಸೇರಿಸಿಕೊಂಡು ಓದಿ : 'ಎಲೈ ರಾಘವನೇ ! ಅಂದಿನಿಂದ ಗೌತಮನ ತಪೋಬಲದಿಂದಾಗಿ ಇಂದ್ರನಿಗೆ ಮೇಷವೃಷಣಗಳು ದೊರೆತವು.' († ನೋಡಿ : 'ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ', ಪು. 111–12) | |
| 244 | 8 | ...ಆದರೆ ವಸಿಷ್ಠನ ಮಕ್ಕಳಿಗೆ | ...ಆದರೆ ವಶಿಷ್ಠನ ಮಕ್ಕಳು |
| 252 | 17 | ಸೇಸೆಯಿಂದ | ಸೇವೆಯಿಂದ |
| 254 | 15 | ಎರಚು | ಎರಡು |
| 255 | 2 | ತೇಲಸ್ಸುಗಳ | ತೇಜಸ್ಸುಗಳ |
| 255 | 20 | ಹುತಭುತ್ ತದಾ ॥ | ಹುತಭುಶ್ ತದಾ ॥ |
| 256 | 22 | ವೇತ್ಕ್ಯಸೀತಿ ವೈ ॥ | ವೇಚ್ಸ್ಯಸೀತಿ ವೈ ॥ |
| 258 | 24 | ಸಾ ಮುಹೂರ್ತಂ | ಸಾ ತು ಮುಹೂರ್ತಂ |
| 262 | 28 | ಕರ್ಹಿಚಿತ್ | ಕರ್ಹಚಿತ್ |
| 263 | 15 | ಪರಿಪಾತುಂ | ಪರಿಪಾತುಂ |
| 264 | 21 | ಹ್ಯುಪೇಕ್ಷಿತಾಃ ॥ | ಹ್ಯಪೇಕ್ಷಿತಾಃ ॥ |
| 265 | 7 | ...ಹಾಳಾಗಲಾರದೆಂದು ನನಗೆ ಅನ್ನಿಸದು.' | ...ಹಾಳಾಗಬಾರದೆಂದು ನನಗೆ ಅನ್ನಿಸುವದು.' |
| 265 | 18 | ವಿನಿವೈತ್ತಂ | ವಿನಿವೃತ್ತಂ |
| 267 | 19 | ಶಾವವಿದ್ದು | ಶಾಪವಿದ್ದು |

**ವಿರೂಪಾಕ್ಷ ಕುಲಕರ್ಣಿ**—ಭಾರತ ಸರ್ಕಾರದ ಸಂರಕ್ಷಣ ಉತ್ಪಾದನಾ ಇಲಾಖೆಯಲ್ಲಿ ಇಪ್ಪತ್ತೆಂಟು ವರ್ಷ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿ, 1990ರಲ್ಲಿ ಸ್ವ-ಇಚ್ಛೆಯಿಂದ ನಿವೃತ್ತಿ ಪಡೆದ ನಂತರ ಪುಣೆಯಲ್ಲಿ ನೆಲಸಿದ್ದಾರೆ.



ಪುಣೆಯ 'ಮರಾಠಿ–ಕನ್ನಡ ಸ್ನೇಹವರ್ಧನ ಕೇಂದ್ರ'ದ ಸಂಸ್ಥಾಪಕ ವಿಶ್ವಸ್ಥರಲ್ಲೊಬ್ಬರಾದ ಕುಲಕರ್ಣಿಯವರು ಅನೇಕ ಕನ್ನಡ ಹಾಗೂ ಮರಾಠಿ ಕೃತಿಗಳನ್ನೂ, ಅನುವಾದಗಳನ್ನೂ ನೀಡಿ ಮರಾಠಿ–ಕನ್ನಡಗಳ ನಡುವಣ ಸೃಜನಶೀಲ ಸಾರಸ್ವತ ಸೇತುವೆಯಾಗಿದ್ದಾರೆ.

'ಕಾರಂತರ ಕಾದಂಬರಿಗಳು—ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ', 'ಪು. ಲ. ದೇಶಪಾಂಡೆ: ವ್ಯಕ್ತಿ ಮತ್ತು ವಾಙ್ಮಯ' ಗ್ರಂಥಗಳ ಸಂಪಾದಕರು, ಅನುವಾದಕರು. ಇವರು ಕನ್ನಡಕ್ಕೆ ಅನುವಾದಿಸಿರುವ 'ಅಂಬೇಡಕರವಾದ: ತತ್ವ ಮತ್ತು ವ್ಯವಹಾರ' ಈಚೆಗೆ ಪ್ರಕಟವಾಗಿದೆಯಲ್ಲದೆ, ಆರೇಳು ಮರಾಠಿ ಪುಸ್ತಕಗಳ ಕನ್ನಡ ಅನುವಾದಗಳು ಪ್ರಕಾಶನಕ್ಕೆ ಸಿದ್ಧವಾಗುತ್ತಿವೆ.

ಶ್ರೀಯುತರೊಂದಿಗೆ ತಮ್ಮನ್ನೂ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುವ ಪತ್ನಿ ಶ್ರೀಮತಿ ಉಮಾ ಕುಲಕರ್ಣಿ ಸುಮಾರು ಹದಿನೈದು ಕಾದಂಬರಿಗಳು ಮತ್ತು ಹಲವಾರು ಸಣ್ಣ ಕಥೆಗಳನ್ನು ಮರಾಠಿಯಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ.

# ಕೆಲವು ಉತ್ತಮ ಗ್ರಂಥಗಳು

ವಚನ ಭಾರತ (ಸರಳ ಗದ್ಯ–ಸಚಿತ್ರ)—ಎ. ಆರ್. ಕೃಷ್ಣಶಾಸ್ತ್ರೀ ... ... ರೂ. ೭೫ ೦೦
ವಚನ ರಾಮಾಯಣ (ಸರಳ ಗದ್ಯ)—ತ. ಸು. ಶಾಮರಾಯ ... ... ೭೫ ೦೦
ಜನಪ್ರಿಯ ಭಾಗವತ (ಸರಳ ಗದ್ಯ)— ಶ್ರೀನಿವಾಸ ಉಡುಪ ... ... ೭೫ ೦೦
ತುಳಸೀದಾಸರ ರಾಮಚರಿತಮಾನಸ (ಅನು : ಮ. ಸು. ಕೃಷ್ಣಮೂರ್ತಿ) ... ೯೫ ೦೦
ಸದ್ಗುರು ತ್ಯಾಗರಾಜರು : ಜೀವನ–ಸಾಧನೆ–ಕೊಡುಗೆ—ವಿ. ಎಸ್. ಸಂಪತ್ಕುಮಾರಾಚಾರ್ಯ ೪೦ ೦೦
ಶ್ರೀ ತ್ಯಾಗರಾಜ ಕೃತಿಮಂಜರಿ—ವಿ. ಎಸ್. ಸಂಪತ್ಕುಮಾರಾಚಾರ್ಯ (ಸಂಪೂರ್ಣ ಕೀರ್ತನೆಗಳು :
ಸಾಹಿತ್ಯ–ಭಾವಾರ್ಥ–ಟಿಪ್ಪಣಿ ಸಹಿತ) ಸಂಪುಟ ೧ : ರೂ. ೭೫ ; ಸಂಪುಟ ೨ : ೯೫ ೦೦
ಶ್ರೀ ಶಿವಾರ್ಪಣಂ (ಶಿವಸ್ತೋತ್ರಗಳ ಸಂಗ್ರಹ ಮತ್ತು ಯಜ್ಞತತ್ತ್ವ)
—ಸಂ : ತ. ರಾ. ಸು., ಬಸವಾನಿ ರಾಮಶರ್ಮಾ, ಜಿ. ಎಚ್. ಕೃಷ್ಣಮೂರ್ತಿ ... ೭೫ ೦೦
ಜ್ಯೋತಿಷ್ಯ ಸಾರ ಸಂಗ್ರಹ—ಎಂ. ರಾಮಸ್ವಾಮಿ ... ... ೫೨ ೦೦
ನಾಡೋಜ ಪಂಪ—ಮುಳಿಯ ತಿಮ್ಮಪ್ಪಯ್ಯ ... ... ... ೯೫ ೦೦
ಕನ್ನಡ ಸಾಹಿತ್ಯ ಚರಿತ್ರೆ (ಒಂಬತ್ತನೆಯ ಪರಿಷ್ಕೃತ ಸಂಸ್ಕರಣ)—ರಂ. ಶ್ರೀ. ಮುಗಳಿ ... ೭೫ ೦೦
ರಾಘವಾಂಕ ವಿರಚಿತ ಹರಿಶ್ಚಂದ್ರ ಕಾವ್ಯಂ—ಸಂ : ಎನ್. ಬಸವಾರಾಧ್ಯ; ಪಂಡಿತ ಎಸ್. ಬಸಪ್ಪ ೫೫ ೦೦
ದೇವಲಾಪುರದ ನಂಜುಂಡ ವಿರಚಿತ ಕೃತಿಗಳು—ಸಂ : ಎನ್. ಬಸವಾರಾಧ್ಯ ... ೫೦ ೦೦
ದೇವರ ದಾಸಿಮಯ್ಯನ ಷಟ್ಪದಿಗಳು—ಸಂ : ಕೆ. ಶಿವರಾಮ ಐತಾಳ ... ... ೧೫ ೦೦
ಲೋಕಾಭಿರಾಮ–80 (ಅಂಕಣ ಬರಹಗಳು)—ಕು. ಶಿ. ಹರಿದಾಸ ಭಟ್ಟ ... ೩೫ ೦೦
ಸಂಗತಿ (ಮೂವತ್ತೈದು ಚಿಂತನ ಪ್ರಬಂಧಗಳು)—ಹಾ. ಮಾ. ನಾಯಕ... ... ೨೦ ೦೦
ಸೂಲಂಗಿ (ಮೂವತ್ತು ಚಿಂತನಗಳು)—ಹಾ. ಮಾ. ನಾಯಕ ... ... ೨೦ ೦೦
ಸಂಪಣ (ಚಿಂತನ ಪ್ರಬಂಧಗಳು)—ಹಾ. ಮಾ. ನಾಯಕ ... ... ೨೦ ೦೦
ಸಂಪ್ರತಿ ('ಪ್ರಜಾವಾಣಿ' ಅಂಕಣ ಬರಹಗಳು)—ಹಾ. ಮಾ. ನಾಯಕ. ಸಂ. ೧ : ೯೫ ; ಸಂ. ೨ : ೧೧೦ ೦೦
ಮಾನ (ಹಾ. ಮಾ. ನಾಯಕ ಅಭಿನಂಧನ ಗ್ರಂಥ)
—ಸಂ : ಎಸ್. ಎಲ್. ಭೈರಪ್ಪ : ಜಿ. ಆರ್. ಲಕ್ಷ್ಮಣರಾವ್ ; ಪ್ರಧಾನ ಗುರುದತ್ತ ೨೨೫ ೦೦
ಸಾಹಿತ್ಯ, ಸೃಜನಶೀಲತೆ ಮತ್ತು ನಾನು—ಯಶವಂತ ಚಿತ್ತಾಲ ... ... ೨೦ ೦೦
ಛಂದೋಗತಿ : ಛಂದಸ್ತತ್ತ್ವಗಳ ಹಾಗು ಗತಿಭೇದಗಳ ವಿವೇಚನೆ ಮತ್ತು ವಿವೃತಿ
—ಸೇಡಿಯಾಪು ಕೃಷ್ಣಭಟ್ಟ ... ... ... ೭೫ ೦೦
ಕನ್ನಡ ಮಧ್ಯಮ ವ್ಯಾಕರಣ—ತೀ. ನಂ. ಶ್ರೀಕಂಠಯ್ಯ ... ... ೩೦ ೦೦
ನಮ್ಮ ಗಾದೆಗಳು—ರಾಮೇಗೌಡ ... ... ... ... ೩೫ ೦೦
ಬಸವಣ್ಣನವರ ವಚನಗಳು—ಸಂ : ಎಲ್. ಬಸವರಾಜು ... ... ೩೫ ೦೦
ಸರ್ವಜ್ಞನ ವಚನಗಳು—ಸಂ : ಎಲ್. ಬಸವರಾಜು ... ... ... ೪೫ ೦೦
ಅಲ್ಲಮನ ವಚನಗಳು—ಸಂ : ಎಲ್. ಬಸವರಾಜು ... ... ... ೪೫ ೦೦
ಅಕ್ಕನ ವಚನಗಳು—ಸಂ : ಎಲ್. ಬಸವರಾಜು ... ... ... ೪೫ ೦೦
ದೇವರ ದಾಸಿಮಯ್ಯನ ವಚನಗಳು—ಸಂ : ಎಲ್. ಬಸವರಾಜು ... ... ೪೫ ೦೦
ಹವ್ಯಕ–ಇಂಗ್ಲಿಷ್ ನಿಘಂಟು—ಎಂ. ಮರಿಯಪ್ಪ ಭಟ್ಟ ... ... ೧೦೦ ೦೦
ನವನೀತ : ಪ್ರೊಫೆಸರ್ ವಿ. ಎಂ. ಇನಾಂದಾರ್ ಅಭಿನಂದನ—ಸಂ : ಎಂ. ರಾಜಗೋಪಾಲಾಚಾರ್ಯ ೧೦೦ ೦೦
ಕಟ್ಟೀಮನಿ : ಬದುಕು–ಬರಹ—ಸಂ : ದೇಜಗೌ ; ಸಿ.ಪಿ ಕೆ. ... ... ೧೦೫ ೦೦
ದರ್ಶನದೀಪ್ತಿ (ಸಾಹಿತ್ಯ ಮತ್ತು ದಾರ್ಶನಿಕ ಪ್ರಬಂಧಗಳು)—ಜಗದಂಬಾ ಮಲ್ಲೇದೇವರು ೧೮ ೦೦
ಕನ್ನಡ ಭಾಷಾಶಾಸ್ತ್ರ (ಪರಿಷ್ಕೃತ ಸಂಸ್ಕರಣ) ... ... ಅಚ್ಚಿನಲ್ಲಿ
ಸುಲಭ ಇಂಗ್ಲಿಷ್ (ಪರಿಷ್ಕೃತ, ವಿಸ್ತೃತ ಸಂಸ್ಕರಣ)—ಎಲ್. ಎಸ್. ಶೇಷಗಿರಿರಾವ್ ... ೫೫ ೦೦

---

**ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು ೫೭೦ ೦೦೧**